|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೩



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಪಂಡಿತ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1946

॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೩



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಪಂಡಿತ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1946

# ಮುನ್ನುಡಿ

ಸಕಲ ಪ್ರಾಣಿವರ್ಗದಲ್ಲಿ ಜ್ಞಾನಪ್ರಧಾನನಾದ ಮಾನವನು ಐಹಿಕಾಮುಷ್ಮಿಕಗಳ ಸೌಖ್ಯವನ್ನು ಅನಾಯಾಸವಾಗಿ ಪಡೆಯಬಹುದೆಂದು ಸಕಲ ಗ್ರಂಥಗಳೂ ಹೇಳುತ್ತಿವೆ. ಸಕಲರಿಗೂ ತಿಳಿದ ವಿಷಯವೂ ಆಗಿದೆ. ಆದರೆ ಮಾನವನು ಸುಖಿ ಎಂದು ಹೇಳುವುದು ಕೇವಲ ಔಪಚಾರಿಕವೇ ಹೊರತು ವಾಸ್ತವಿಕವಲ್ಲ. ಮೊದಲು ಸುಖವೆಂದು ತೋರಿ, ಅನಂತರ ದುಃಖಾತ್ಮನಾಪರಿಣತವಾಗುವುದನ್ನೇ ಮನುಷ್ಯರು ಮೊದಲು ಅದೇ ಸುಖವೆಂದು ಭ್ರಾಂತಿಗೊಳ್ಳುವರು. ಅಲ್ಲದೆ ಜನಸಾಮಾನ್ಯಕ್ಕೆ ಅಸಹ್ಯಕರವಾಗಿ ಕಾಣುವ ಕೆಲವು ಕ್ರಿಯೆಗಳು, ಕೆಲವರಿಗೆ ಸುಖಸಾಧಕಗಳಾಗಿ ತೋರಿಬರುವುವು. ಕಾಳಿದಾಸಮಹಾಕವಿಯು ಒಬ್ಬ ಕಣ್ವ ಋಷಿಯ ಶಿಷ್ಯನ ಬಾಯಿಂದ "ಪಟ್ಟಣಿಗನ ಜೀವನವು ಅವನಿಗೆ ಎಷ್ಟೇ ಶುಚಿರುಚಿಯಾಗಿ ಕಂಡುಬಂದರೂ, ಋಷಿವರ್ಗದಲ್ಲಿರುವ ನಮಗೆ ಅದು ಕೇವಲ ದುಃಖಮಯವಾದದ್ದೆಂದೇ ತೋರುವುದು, ಎಂಬುದನ್ನು "ಅಭ್ಯಕ್ತಮಿವಸ್ನಾತಃ ಶುಚಿರಶುಚಿಮಿವ ಪ್ರಬುದ್ಧ ಇವಸುಪ್ತಂ" ಎಂಬ ಶ್ಲೋಕದಿಂದ ಹೇಳಿಸಿರುವನು. ಹಾಗೆಯೇ ಅರಣ್ಯಜೀವನವನ್ನೂ ಕವಿಯು ರಾಜನ ಮಾತಿನಿಂದ "ವ್ಯಾಪಾರರೋಧಿ ಮದನಸ್ಯ" ಎಂಬುದಾಗಿ ಅನ್ನಿಸಿ ರಾಜನಿಗೆ ಋಷಿಜೀವನದಲ್ಲಿ ಅಸ್ವಾರಸ್ಯವನ್ನು ಪ್ರಕಾಶಪಡಿಸಿರುವನು. ಇದನ್ನು ನೋಡಿದರೆ ಮನುಷ್ಯಸಾಮಾನ್ಯಕ್ಕಿರುವ ಒಂದೇ ಒಂದು ಐಹಿಕಸುಖವಾವುದೆಂಬುದನ್ನು ನಿರ್ಧರಿಸಲು ಸಾಧ್ಯವೇ ಇಲ್ಲ. ಅದೂ ಅಲ್ಲದೆ ಒಬ್ಬನಿಗೆ ಸುಖವೆಂದು ತೋರಿಬರುವ ಸನ್ನಿವೇಶವು ಮತ್ತೊಬ್ಬನಿಗೆ ದುಃಖಕರವಾಗಿರುವುದೂ ಉಂಟು. ಇದನ್ನೆಲ್ಲಾ ಯೋಚಿಸಿಯೇ ಶ್ರೀಮಚ್ಛಂಕರಾಚಾರ್ಯರು "ಮಾಯಾಮಯಮಿದಮಖಿಲಂ ಹಿತ್ವಾ ಬ್ರಹ್ಮಪದಂ ತ್ವಂ ಪ್ರವಿಶ ವಿದಿತ್ವಾ" ಎಂದು ನಮಗೆ ತೋರುವ ಸಕಲ ಭೋಗಗಳೂ ಮಾಯಾಪ್ರಚುರವಾದವುಗಳೆಂದು ಸಾರಿದರು.

ಇಂತಹ ಸುಖಭೋಗಗಳಿಗಾಗಿ ದೇವತೆಗಳೂ ಆಸೆಪಟ್ಟರು ಎಂಬ ವಿಷಯವು ಪುರಾಣೇತಿಹಾಸಗಳಲ್ಲಿ ವಿಸ್ತಾರವಾಗಿ ಬರುತ್ತದೆ. ಪಾರ್ವತಿಯು ಪರಶಿವನನ್ನು ವರಿಸಲು ತಪಸ್ಸುಮಾಡಿದುದು, ಅನಂತರ ಪರಶಿವನ ವಿರಹಕ್ಕಾಗಿ ಪಾರ್ವತಿಯು ವ್ಯಥೆಪಟ್ಟುದು, ಸ್ತ್ರೀವ್ಯಾಮೋಹದಲ್ಲಿ ಸಿಕ್ಕಿದ ಶಂಕರನು ಮನೋನ್ಮನಿಯನ್ನು

ಅಪೇಕ್ಷಿಸಿದುದು, ಇವೆಲ್ಲವೂ ದೇವತಾಶ್ರೇಷ್ಠರಿಂದ ಆಚರಿಸಲ್ಪಟ್ಟುದು ನಿಜವೇ? ಎಂಬ ಸಂಶಯವು ವಾಚಕರೆಲ್ಲರಿಗೂ ಬರಬಹುದು. ಅದರ ಒಳತತ್ತ್ವವಿಷ್ಟೆ. ಕಲಿಯುಗದ ಜನರು ಸದಾ ಸಂಸಾರದ ಬಂಧನಕ್ಕೆ ಸಿಕ್ಕಿ, ಅಲ್ಲಿ ಕಂಡುಬರುವ ಸುಖದುಃಖಗಳೇ ನಿಜವಾದವುಗಳೆಂದು ಭಾವಿಸುವರು. ಅಷ್ಟರಲ್ಲಿಯೇ ಅವರ ಮನಸ್ಸು ನಿಲ್ಲುವುದಾದರೆ ವಿಚಾರಕ್ಕೇ ಅವಕಾಶವು ದೊರೆಯದಂತಾಗಿ, ದೈವ ಭಕ್ತಿಯೇ ನಿರ್ಮೂಲವಾದೀತು ಎಂದು ಯೋಚಿಸಿ, ದೇವತೆಗಳಿಗೂ ಸಂಸಾರದ ಬಂಧನಗಳನ್ನು ಕಲ್ಪಿಸಿ, ಅವುಗಳೆಲ್ಲಾ ಜನರಿಗೆ ಬುದ್ಧಿಗಲಿಸುವ ಲೀಲೆಗಳೆಂದು ಹೆಸರಿಟ್ಟು ಕಥೆಯನ್ನು ಬೆಳಸಿದರು. ಹಾಗೆ ವಿವರಿಸುವಾಗ ಸಮಯಬಂದೆಡೆಯಲ್ಲೆಲ್ಲಾ ಸಾಂಸಾರಿಕಕ್ಲೇಶಗಳನ್ನೂ, ತತ್ಪರಿಹಾರಮಾರ್ಗಗಳನ್ನೂ ಆಡದೆ ಬಿಡುವುದಿಲ್ಲ. ಭ್ರಾಂತಿಯಿಂದ ಹೊಂದಿದ ಸಕಲ ಕಾರ್ಯಗಳೂ ದುಃಖದಲ್ಲಿ ಪರಿಣಾಮಗೊಳ್ಳುವುವು ಎಂಬುದನ್ನು ಅಲ್ಲಲ್ಲಿ ಸೂಚಿಸಿಬಿಡುವರು. ಸಂಸಾರಚಕ್ರಕ್ಕೆ ಸಿಕ್ಕಿ ನುರುಗಿದವರಿಗೆ ವೈರಾಗ್ಯವು ಸುಲಭವಾಗಿ ಹುಟ್ಟಿ, ಅದರಿಂದ ರಾಗದ್ವೇಷಾದಿಗಳು ತೊಲಗಿ, ತನ್ಮೂಲಕ ಶಾಶ್ವತವಾದ ಮುಕ್ತಿಯು ದೊರಕುವುದೆಂಬುದನ್ನು ತಿಳಿಸುವುದೇ ಇತಿಹಾಸನಿರ್ಮಾಣಕರ ಅಭಿಪ್ರಾಯ. ಈಶ್ವರನ ಸಂಸಾರಚಿತ್ರವನ್ನು ನಾವು ಇಲ್ಲಿ ವಿಮರ್ಶಿಸುವುದಾದರೆ ಸಾಮಾನ್ಯ ಸಂಸಾರಿಗಳ ತಾಪತ್ರಯವೂ ಅಲ್ಲಿ ಕಾಣುತ್ತದೆ. ವೈರಾಗ್ಯಶಿಖಾಮಣಿಗಳ ವೈರಾಗ್ಯವೂ, ಯೋಗಿಗಳ ಮನೋದಾರ್ಢ್ಯವೂ, ರಾಜನ ಪ್ರಭುತ್ವವೂ, ಭಕ್ತರಿಗೆ ವರಪ್ರದಾತೃತ್ವವೂ, ಭಕ್ತಪರೀಕ್ಷಕತನವೂ ಏಕದಾ ಶಂಕರನಲ್ಲಿ ಕಾಣುವಂತಿರುವುದು. ವಾಚಕರು, ದೇವರು ಸಂಸಾರ ಚಕ್ರದಲ್ಲಿ ಮುಳುಗಿರುವನೆಂದು ತಿಳಿಯುವುದಕ್ಕಿಂತಲೂ, ಜಗತ್ತೇ ದೇವರಾಗಿರುವುದು ಎಂದು ತಿಳಿಯುವುದು ಒಳ್ಳೆಯದು. ಪುರಾಣನಿರ್ಮಾತೃಗಳ ದೃಷ್ಟಿಯೆಲ್ಲಾ ಹೀಗೆಯೇ ಇರುವುದೆಂದು ಭಾವಿಸಬೇಕು. ತತ್ತ್ವಮಾರ್ಗದಲ್ಲಿ ಮುಂದುವರಿದಿರುವ ಮತಾಚಾರ್ಯರು ಹೇಗೆ ಪರಬ್ರಹ್ಮವಸ್ತುವಿಗೆ ನಿರ್ಗುಣತ್ವಾದಿಧರ್ಮಗಳನ್ನು ಉಪಪಾದನೆ ಮಾಡುವರೋ, ಭಕ್ತಿಮಾರ್ಗಗಾಮಿಗಳು ಹಾಗೆ ತ್ರಿಮೂರ್ತಿಗಳಿಗೆ ಸಂಸಾರಿಧರ್ಮವನ್ನು ಕಟ್ಟುವರು. ಭಕ್ತಿಯ ಮೂಲಕವೂ ಭಗವತ್ಸಾನ್ನಿಧ್ಯವನ್ನು ಪಡೆಯುವುದು ಒಂದು ದಾರಿಯೆಂದೇ ನಮ್ಮ ಪ್ರಾಚೀನರ ಅಭಿಪ್ರಾಯ. ಸಾಂಸಾರಿಕ ಕ್ಲೇಶನಿವಾರಣೆಗಾಗಿ ಕಾವ್ಯವ್ರತಾದಿಗಳನ್ನು ವಿವರಿಸುವ ಪುರಾಣಕರ್ತೃಗಳ ಆಶಯವು, ಯಾವುದಾದರೊಂದು ಉದ್ದೇಶದಿಂದಲಾದರೂ ದೈವವಿಷಯಕವಾದ ಜ್ಞಾನವು ಮಾನವವರ್ಗದಲ್ಲಿ ಮೂಡಿಸಬೇಕೆಂಬುದೇ. ಈ ಶಿವರಹಸ್ಯದ ಒಂದು

ವೈಶಿಷ್ಟ್ಯವೆಂದರೆ, ಅನೇಕ ಉಪನಿಷದ್ವಾಕ್ಯಗಳನ್ನೇ ಸುಲಭವಾದ ಕಾವ್ಯಶೈಲಿಯಲ್ಲಿ ತಂದು ಜನತೆಯ ಮುಂದಿಡುವುದು. ದೂರ್ವಾಸಕೃತ ಶಕ್ತಿಮಹಿಮ್ನಃ ಸ್ತುತಿ ಯೆಂಬುದು ಈ ಭಾಗದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯದಲ್ಲಿ ದೊರೆಯುವುದು. ಅದರಲ್ಲಿ ಶಕ್ತಿದೇವತೆಯ ಮಹಿಮೆಯೂ, ಶ್ರೀಚಕ್ರದ ಸಂಕ್ಷೇಪ ವಿವರಣೆಯೂ ವರ್ಣಿತವಾಗಿದೆ. ಅದರಲ್ಲಿ ಪದಲಾಲಿತ್ಯ, ಅರ್ಥಗಾಂಭೀರ್ಯ ಇವುಗಳನ್ನು ನಾವು ನೋಡುವಂತಿರುವುದು. ವಿಪ್ರವೇಷಧಾರಿಯಾದ ಶಂಕರನು ದೇವಿಗೆ ಉಪದೇಶಿಸುವ ಪ್ರಕರಣವು ಮೂರನೆಯ ಅಧ್ಯಾಯದಲ್ಲಿ ಬಹಳವಾಗಿ ಭಕ್ತಿಪ್ರಚೋದಕವೆನಿಸು ವುದು. ಮಧ್ಯೇ ಮಧ್ಯೇ ಶಿವಗಣಗಳಿಂದ ಹೇಳಲ್ಪಡುವ ಶಿವಸ್ತುತಿಗಳಂತೂ ಮನಮೋಹಕಗಳಾಗಿವೆ. ಇಂತಹ ಅನೇಕ ವಿಷಯಗಳನ್ನೊಳಗೊಂಡ ಶಿವರಹಸ್ಯ ಗ್ರಂಥದ ದ್ವಿತೀಯಾಂಶವು ಈ ಒಂದೇ ಭಾಗದಲ್ಲಿ ಸಮಾಪ್ತಿಹೊಂದಿದೆ.

ಪ್ರಜೆಗಳಿಗೆ ಜ್ಞಾನವೃದ್ಧಿಯಾಗುವಂತೆ ಮಾಡುವ ಕಾರ್ಯವು ರಾಜಧರ್ಮ ದಲ್ಲಿ ಬಹು ಮುಖ್ಯವಾದುದೆಂದು ತಿಳಿದು, ಪ್ರಾಚೀನ ಗ್ರಂಥಗಳ ಜೀರ್ಣೋದ್ಧಾರದ ಮೂಲಕ ಜ್ಞಾನವಾಹಿನಿಯನ್ನು ಮುಂದುವರಿಸುತ್ತಿರುವ ನಮ್ಮ ಶ್ರೀಮನ್ಮಹಾರಾಜ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.,** ಮಹಾಪ್ರಭುಗಳವರು ಇದೇ ರೀತಿ ನಮ್ಮ ಪ್ರಾಚೀನ ಕಲೆಗಳಿಗೆ ಪ್ರೋತ್ಸಾಹವನ್ನೀಯುತ್ತಾ, ಪುತ್ರಪೌತ್ರಾದಿ ನಿಖಿಲ ಸಂಪತ್ತುಗಳೊಡನೆ ಚಿರಾಯು ಷ್ಮಂತರಾಗಿ ಪ್ರಜಾವರ್ಗವನ್ನು ಪರಿಪಾಲಿಸುತ್ತಾ ಮುಂದುವರಿಸಲಿ ಎಂದು ನಿರಂತರವಾಗಿ ಜಗದೀಶ್ವರನನ್ನು ಪ್ರಾರ್ಥಿಸುತ್ತೇನೆ.

ವ್ಯಯನಾಮ ಸಂವತ್ಸರದ
ಮಾರ್ಗಶೀರ್ಷ ಶು॥ ದ್ವಿತೀಯಾ
ಸೋಮವಾರ
25—11—1946.

ಇತಿ ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.



# ಶ್ರೀ ಶಿವರಹಸ್ಯ ದ್ವಿತೀಯಾಂಶದಲ್ಲಿನ ಮೂವತ್ತು ಅಧ್ಯಾಯಗಳ ವಿಷಯಾನುಕ್ರಮಣಿಕೆ

## ಐದನೆಯ ಅಧ್ಯಾಯ



## ಆರನೆಯ ಅಧ್ಯಾಯ



## ಏಳನೆಯ ಅಧ್ಯಾಯ



## ಎಂಟನೆಯ ಅಧ್ಯಾಯ



## ಒಂಬತ್ತನೆಯ ಅಧ್ಯಾಯ



## ಹತ್ತನೆಯ ಅಧ್ಯಾಯ

## ಹನ್ನೊಂದನೆಯ ಅಧ್ಯಾಯ



## ಹನ್ನೆರಡನೆಯ ಅಧ್ಯಾಯ



## ಹದಿಮೂರನೆಯ ಅಧ್ಯಾಯ



## ಹದಿನಾಲ್ಕನೆಯ ಅಧ್ಯಾಯ



## ಹದಿನೈದನೆಯ ಅಧ್ಯಾಯ



## ಹದಿನಾರನೆಯ ಅಧ್ಯಾಯ

### ಹದಿನೇಳನೆಯ ಅಧ್ಯಾಯ



### ಹದಿನೆಂಟನೆಯ ಅಧ್ಯಾಯ



### ಹತ್ತೊಂಬತ್ತನೆಯ ಅಧ್ಯಾಯ



### ಇಪ್ಪತ್ತನೆಯ ಅಧ್ಯಾಯ



### ಇಪ್ಪತ್ತೊಂದನೆಯ ಅಧ್ಯಾಯ



### ಇಪ್ಪತ್ತೆರಡನೆಯ ಅಧ್ಯಾಯ



### ಇಪ್ಪತ್ತುಮೂರನೆಯ ಅಧ್ಯಾಯ

## ಮೂವತ್ತನೆಯ ಅಧ್ಯಾಯ





|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಪ್ರಥಮೋಽಧ್ಯಾಯಃ

### ಸ್ಕಂದವಾಕ್ಯಂ



**ಅಗಜಾನನಪಾಥೋಜವಿಕಾಸನದಿವಾಕರಮ್ ।**
**ವಿಘ್ನಾದ್ರಿಕುಲಿಶಂ ಶ್ರೀಮದ್ಗಣೇಶಂ ತಂ ನಮಾಮ್ಯಹಂ ॥೧॥**

|| ಸೂತ ಉವಾಚ ||

**ಪುನಃ ಪ್ರಣಮ್ಯ ಮುನಯೋ ಜೈಗೀಷವ್ಯೋ ಮಹಾಮುನಿಃ ।**
**ಸ ಭಕ್ತ್ಯಾ ತಾರಕಾರಾತಿಂ ಪುರಾರಾತಿಕಥಾಃ ಶುಭಾಃ ॥೨॥**

---

ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಮೊದಲನೆಯ ಅಧ್ಯಾಯ

ಪಾರ್ವತೀದೇವಿಯ ಮುಖವೆಂಬ ಕಮಲವನ್ನು ಸೂರ್ಯನಂತೆ ವಿಕಾಸಗೊಳಿಸುವವನೂ, ವಿಘ್ನಗಳೆಂಬ ಪರ್ವತಗಳನ್ನು ಹೊಡೆದೋಡಿಸುವುದರಲ್ಲಿ ವಜ್ರಾಯುಧದಂತೆ ಸಾಮರ್ಥ್ಯವುಳ್ಳವನೂ, ತೇಜಸ್ವಿಯೂ ಆದ ಗಣಪತಿಗೆ ನಾನು ನಮಸ್ಕರಿಸುವೆನು. ಎಂದು ಸೂತಮಹರ್ಷಿಗಳು ಗಣಪತಿಯನ್ನು ಪ್ರಾರ್ಥಿಸಿ, ವಾಜಶ್ರವಸಾದಿಗಳನ್ನು ಕುರಿತು, ||೧||

ಎಲೈ ಮುನಿಗಳಿರಾ ; ಮೂರು ಲೋಕಗಳನ್ನೂ ತನ್ನ ತಪಃಶಕ್ತಿಯಿಂದಲೂ ಜ್ಞಾನದಿಂದಲೂ ತುಚ್ಛವೆಂದು ಭಾವಿಸಿರುವ ಜೈಗೀಷವ್ಯಮಹಾಮುನಿಯು, ಪುನಃ ಭಕ್ತಿಯಿಂದ ಕುಮಾರಸ್ವಾಮಿಗೆ ನಮಸ್ಕರಿಸಿ, ವಿನಯದಿಂದ ಆ ಷಣ್ಮುಖಸ್ವಾಮಿಯನ್ನು ಕುರಿತು, ತ್ರಿಪುರಾಸುರ ಧ್ವಂಸಕನಾದ ಪರಮೇಶ್ವರನ ಶುಭಕರವಾದ ಕಥೆಗಳನ್ನು ತಿಳಿಯಲಪೇಕ್ಷೆಯುಳ್ಳವನಾಗಿ ಪ್ರಶ್ನೆಮಾಡಿದನು, ಎಂದು ಮುಂದಿನ ಕಥಾಭಾಗವನ್ನು ವಿವರಿಸಲಾರಂಭಿಸಿದರು. ||೨||

ಪಪ್ರಚ್ಛ ವಿನಯೋಪೇತಸ್ತುಚ್ಛೀಕೃತಜಗತ್ತ್ರಯಃ ।
ಸ್ವಚ್ಛಾಚ್ಛಮಾನಸೋತ್ಫುಲ್ಲಪ್ರಹೃಷ್ಟವದನಾಂಬುಜಃ ॥೩॥

ಧೃತತ್ರಿಪುಂಡ್ರಭೂತ್ಯೈವ ಸ ಬಾಹ್ಯಧವಲಾಂತರಃ ।
ರುದ್ರಾಕ್ಷಾಮಲಕೋಟೀರಶ್ಯಾಂಭವಾಗ್ರೇಸರಸ್ತದಾ ॥೪॥

ಗಣೇಷು ದೇವಸಂಘೇಷು ಮುನಿವ್ರಾತೇಷು ಸತ್ತಮಾಃ ।
ಪಂಚಾಸ್ಯಹೃದಯಾನಂದಂ ಷಡಾಸ್ಯಂ ಪ್ರೇಕ್ಷ್ಯ ಭಕ್ತಿತಃ ।
ಪ್ರಾಹ ಶೂರಾರಿಮಾಶಾಸ್ಯ ಧ್ಯಾನಪೂತಹೃದಂತರಃ ॥೫॥

॥ ಜೈಗೀಷವ್ಯ ಉವಾಚ ॥

ಸರ್ವಜ್ಞ ಹೃದಯಾನಂದ ಗೌರೀಚುಂಬಿತಮೂರ್ಧಜ ।
ತಾರಕಾಂತಕ ಷಡ್ವಕ್ತ್ರ ತಾರಿಣೇ ಭಕ್ತಕಾರಿಣೇ ॥೬॥

---

ಆ ಜೈಗೀಷವ್ಯಮಹಾಮುನಿಯು ಅತ್ಯಂತ ಪರಿಶುದ್ಧವಾದ ಮನಸ್ಸಿನಿಂದ ತನ್ನ ಸಂತೋಷವನ್ನು ಹೊರಸೂಸುತ್ತಿರುವ ಮುಖಕಮಲದಿಂದ ಕೂಡಿದ್ದನು. ತಾನು ಧರಿಸಿರುವ ಶುಭ್ರವಾದ ತ್ರಿಪುಂಡ್ರಗಳ ಕಾಂತಿಯಿಂದಲೇ ಬಾಹ್ಯ (ಹೊರಗಡೆ) ಮತ್ತು ಅಭ್ಯಂತರ (ಅಂತಃಕರಣ) ಇವುಗಳಲ್ಲಿ ಪರಮ ಪರಿಶುದ್ಧನೆಂದು ತೋರುತ್ತಿದ್ದನು. ಪವಿತ್ರವಾದ ರುದ್ರಾಕ್ಷಿಮಾಲೆಯನ್ನು ಧರಿಸಿ ಈಶ್ವರಭಕ್ತರಲ್ಲಿ ಅಗ್ರವರ್ತಿಯೆನಿಸಿದ್ದನು. ॥೩-೪॥

ಮತ್ತು ಜೈಗೀಷವ್ಯಮುನಿಯು, ರುದ್ರನ ಗಣಗಳಲ್ಲಿಯೂ, ದೇವತೆಗಳ ಸಮೂಹದಲ್ಲಿಯೂ, ಮತ್ತು ಮುನಿಗಳ ಗುಂಪಿನಲ್ಲಿಯೂ, ಅತ್ಯಂತ ಶ್ರೇಷ್ಠನೆನಿಸಿದ್ದವನು. ಪರಮೇಶ್ವರನನ್ನು ಅನವರತವೂ ಧ್ಯಾನಮಾಡುವುದರಿಂದ ಪರಿಶುದ್ಧವಾದ ಮನಸ್ಸುಳ್ಳ ಆ ಮಹಾಮುನಿಯು, ಪರಮೇಶ್ವರನ ಮನಸ್ಸಿಗೆ ಸಂತೋಷವನ್ನುಂಟುಮಾಡುವ ಷಣ್ಮುಖಸ್ವಾಮಿಯನ್ನು ನೋಡಿ ಭಕ್ತಿಯಿಂದ ಮುಂದೆ ಹೇಳುವಂತೆ ಪ್ರಾರ್ಥಿಸಿದನು. ॥೫॥

ಎಲೈ ಸ್ವಾಮಿಯೇ ; ನೀನು ಸರ್ವಜ್ಞನು, ನಿನ್ನನ್ನಾರಾಧಿಸುವ ಭಕ್ತರ ಮನಸ್ಸಿಗೆ ಆನಂದವನ್ನುಂಟುಮಾಡುವೆ. (ಅಥವಾ) ಸರ್ವಜ್ಞನಾದ ಪರಮೇಶ್ವರನ ಮನಸ್ಸನ್ನು ಸದಾ ನಿನ್ನ ಲೀಲೆಯಿಂದ ವಿನೋದಗೊಳಿಸುವೆ. ಗಿರಿರಾಜ

ಸರ್ವಜ್ಞಾನನಿಧೇ ತುಭ್ಯಂ ನಮಸ್ಸರ್ವಜ್ಞಮೂರ್ತಯೇ ।
ಸರ್ವಥಾಜಿತ್ಕುಮಾರಾಯ ಕುಮಾರಾಯ ಮಹಾತ್ಮನೇ ॥೭॥

ತ್ವತ್ಷಡಾನನಪಾಥೋಜನಿಷ್ಯಂದಾಮೃತಸಪ್ರಭಾಃ ।
ಕಥಾಸ್ಸುಧಾಸಮಧುರಿಮಾಃ ಶಂಭೋಃ ಶಾಂಭವ ಏವ ತಾಃ ॥೮॥

ಶೃಣ್ವತೋ ಮೇ ಮನಸ್ತೃಪ್ತಮತೀವ ಶಿವನಂದನ ।
ಗಣೇಶ್ವರಾಶ್ಚ ದೇವಾಶ್ಚ ಮುನಯೋಽಪಿ ವಿಶೇಷತಃ ॥೯॥

---

ಪುತ್ರಿಯಾದ ನಿನ್ನ ತಾಯಿಯು ನಿನ್ನಲ್ಲಿರುವ ಪ್ರೀತಿಯಿಂದ, ಸೊಂಪಾದ ನಿನ್ನ ತಲೆಯ ಕೂದಲುಗಳನ್ನು ಅಪ್ಪಿಕೊಂಡು ಶಿರಸ್ಸನ್ನು ಆಘ್ರಾಣಿಸಿರುವಳು. ಎಲೈ ತಾರಕಾಸುರನನ್ನು ಧ್ವಂಸಮಾಡಿದ ಷಣ್ಮುಖಸ್ವಾಮಿಯೇ, ಸಕಲ ಜಗನ್ನಿಯಾಮಕನಾದ ನೀನು, ನಿನ್ನ ಭಕ್ತರನ್ನು ಉದ್ಧಾರಮಾಡುವೆ; ಸರ್ವಜ್ಞಾನಗಳಿಗೂ ಆಶ್ರಯನಾಗಿರುವೆ. ನೀನೇ ಸರ್ವಜ್ಞಮೂರ್ತಿಯು. ಸರ್ವಥಾ ನೀನು ಇತರರಿಂದ ಅಜೇಯವಾದ ಕುಮಾರಭಾವವುಳ್ಳವನು. ಮಹಾಮಹಿಮನಾದ ಎಲೈ ಕುಮಾರಸ್ವಾಮಿಯೇ; ನಿನಗೆ ನಮಸ್ಕರಿಸುವೆನು. ಮತ್ತು ಸಕಲ ಪ್ರಪಂಚವನ್ನೂ ಜಯಿಸಿರುವ ಪರಮೇಶ್ವರನ ಪುತ್ರನೂ, ಮಹಾಮಹಿಮನೂ ಆದ ತಾರಕಾರಾತಿಯೇ, ನಿನಗೆ ವಂದನೆ. ॥೬-೭॥

ಎಲೈ ಶಿವನ ಕುಮಾರನಾದ ಸ್ಕಂದನೇ; ನಿನ್ನ ಆರುಮುಖಗಳೆಂಬ ಕಮಲಗಳಿಂದ ಹೊರಡುವ ಅಮೃತಸಮಾನವಾದ, ಪರಮೇಶ್ವರನ ಕಥೆಗಳು ಅಮೃತಕ್ಕೆ ಸಮಾನವಾದ ಮಾಧುರ್ಯದಿಂದ ಕೂಡಿರುವುವು. (ಅಂದರೆ ನಿನ್ನ ಮುಖಕಮಲದಿಂದ ಬರುವ ಪರಮೇಶ್ವರನ ಕಥೆಗಳು ಅಮೃತಪ್ರಾಯವಾಗಿರುವುವು.) ಈ ಕಥೆಗಳನ್ನು ಕೇಳುತ್ತಿದ್ದರೆ ನನ್ನ ಮನಸ್ಸಿಗೆ ನಿರತಿಶಯವಾದ ತೃಪ್ತಿಯುಂಟಾಗುವುದು. ॥೮॥

ಗಣಗಳಿಗಧಿಪತಿಗಳೂ, ದೇವತೆಗಳೂ, ಮತ್ತೂ ವಿಶೇಷವಾಗಿ ಮುನಿಗಳೂ ಸಹ ಮುಕ್ಕಣ್ಣನಾದ ಪರಮೇಶ್ವರನ ಮಂಗಳಕರವಾದ ಚರಿತ್ರೆಯನ್ನು ಕೇಳಲು ಯೋಗ್ಯರು, ಮತ್ತು ಸತ್ಪಾತ್ರರು. ಆದರೆ ಅಜ್ಞಾನಿಗಳಾದ ನಾವು ಇಂತಹ ಪರಮೇಶ್ವರನ ಕಥೆಯನ್ನು ಕೇಳಲು ಅಷ್ಟು ಸಮರ್ಥರಲ್ಲ. ॥೯॥

ತ್ರಿಣೇತ್ರಸುಚರಿತ್ರಾಣಾಂ ಪಾತ್ರಂ ಪಯುಮುತಂದ್ರಿತಾಃ ।
ಕಾ ಶ್ಚಯಾಶ್ರಾವಿ ದೇವ್ಯಾಶ್ಚ ವದನಾಂಬುಜನಿಃಸೃತಾಃ ॥೧೦॥

ಅನರ್ಗಲಾಮೃತಝರೀಭರಸಾರೋಪಮಾಃ ಕಥಾಃ ।
ದೇವ್ಯೈ ದೇವೇನ ಕಥಿತಾ ರಹಸ್ಯಾ ರಹಸಿ ಪ್ರಭೋ ॥೧೧॥

ಪುಣ್ಯೇ ಶಿವರಹಸ್ಯೇಽದ್ಯ ಗೋಪ್ಯಾದ್ಗೋಪ್ಯತರಾಶ್ರಯಾಃ ।
ತದೇವಾಖ್ಯಾಹಿ ಷಡ್ವಕ್ತ್ರ ಪಂಚವಕ್ತ್ರಾದ್ಯಥಾ ಶ್ರುತಾಃ ॥೧೨॥

ತಾ ಮಮ ಪ್ರೀತಯೇ ಶಂಭೋರಾಜ್ಞಯಾ ವದ ಷಣ್ಮುಖ ।
ತ್ವತ್ಸಮೋ ನ ರಹಸ್ಯಜ್ಞೋ ಗೌರೀಹೃದಯನಂದನ ॥೧೩॥

ಧೂರ್ಜಟಿಪ್ರೇಮಸದನಶಿವಮೂರ್ತಿಕೃಪಾಸ್ಪದ ॥೧೪॥

---

ಎಲೈ ಸ್ವಾಮಿಯೇ ; ಪಾರ್ವತೀದೇವಿಗೋಸ್ಕರ ಪರಮೇಶ್ವರನು ಗುಟ್ಟಾಗಿ, (ತಡೆಯಿಲ್ಲದೆ) ಅಮೃತಪ್ರವಾಹದಂತಿರುವ, ಸಾರವೂ ಅತ್ಯಂತ ರಹಸ್ಯವೂ ಆದ ಕಥೆಗಳನ್ನು ಹೇಳಿರುವನು. ಅದನ್ನು ನೀನು ನಿನ್ನ ತಾಯಿಯಾದ ಗೌರೀದೇವಿಯ ಮುಖಕಮಲದಿಂದ ತಿಳಿದಿರುವೆ. ||೧೦-೧೧||

ಅಂತಹ ಪುಣ್ಯಕರವಾದ ಶಿವರಹಸ್ಯದಲ್ಲಿ ಅತ್ಯಂತ ರಹಸ್ಯವಾಗಿರುವ ಕಥೆಗಳನ್ನು, ನನಗೆ ತಿಳಿಸು. ಪಾರ್ವತೀದೇವಿಗೆ ಐದು ಮುಖವುಳ್ಳ ಮಹೇಶ್ವರನು ಎಲ್ಲವನ್ನೂ ರಹಸ್ಯವಾಗಿ ಹೇಳಿರುವನು. ನೀನು ಅದೆಲ್ಲವನ್ನೂ ತಿಳಿದಿರುವೆ. ಎಲೈ ಷಣ್ಮುಖನೆ, ಈ ಶಿವರಹಸ್ಯದ ಕಥೆಗಳನ್ನು ಪರಮೇಶ್ವರನ ಆಜ್ಞಾನುಸಾರ ನನಗೆ ಅತ್ಯಂತ ತೃಪ್ತಿಯಾಗುವಂತೆ ವಿವರಿಸು. ಎಲೈ ಗೌರೀ ಹೃದಯೋಲ್ಲಾಸಕನೇ, ಶಿವರಹಸ್ಯವನ್ನು ತಿಳಿದವರಲ್ಲಿ ನಿನಗೆ ಸಮಾನರಾದವರು ಮತ್ತಾರಿರುವರು ? ||೧೩||

ಸ್ವಾಮಿಯೇ, ನೀನು ಪರಶಿವನಿಗೆ ತುಂಬಾ ಪ್ರೀತಿಪುತ್ರನು ಮತ್ತು ಶಂಕರನ ಸಂಪೂರ್ಣಾನುಗ್ರಹಕ್ಕೆ ಪಾತ್ರನು. ಪ್ರಭುವೆ, ಪುಣ್ಯಕರವೂ, ಅತಿರಹಸ್ಯವೂ ಆಗಿರುವ ಶಿವರಹಸ್ಯದ ಕಥೆಗಳನ್ನು ನನಗೆ ದಯೆಯಿಂದ ತಿಳಿಸು ಎಂದು ಜೈಗೀಷವ್ಯಮುನಿಯು ಕುಮಾರಸ್ವಾಮಿಯನ್ನು ಮತ್ತೆ ಮತ್ತೆ ಪ್ರಾರ್ಥಿಸಿದನು. ||೧೪||

॥ ಸೂತ ಉವಾಚ ॥

ತದ್ವಾಗಮೃತಧಾರಾಭಿಸ್ಸಂಪ್ಲಾವಿತಹೃದಂತರಃ ।
ಗುಹಾಹಿತಂ ಮಹಾಶೈವರತ್ನಸಂಪುಟಮುತ್ತಮಂ ॥೧೫॥

ಉದ್ಘಾಟ್ಯ ದರ್ಶಯಾಞ್ಚಕ್ರೇ ಮುನಯೇ ಭಾವಿತಾತ್ಮನೇ ॥೧೬॥

॥ ಸ್ಕಂದ ಉವಾಚ ॥

[1]ಜಾನಾಮಿ ಶಶ್ವದ್ಗಣನಾಥಪಾದಂ ಪ್ರಫುಲ್ಲರಕ್ತಾಂಬುಜಪಂಕಜೋಪಮಂ ।
ವಿಘ್ನೇಭಸಂಘೋತ್ತಮಮೌಲಿಭೇದನೇ ಮೃಗೇಂದ್ರಹಸ್ತೋತ್ಥನಖಪ್ರಭಂ ಮುನೇ ॥೧೭॥

ತ್ವಾದೃಕ್ಷಾ ಮುನಯೋ ನ ಸಂತಿ ಭುವನೇ ತ್ರ್ಯಕ್ಷಾಂಘ್ರಿಪದ್ಮಾರ್ಚಕಾಃ ।
ಪೂತಾಃ ಪೂತತರಾ ಭಗಾಕ್ಷಿಹರಣಾಪಾರಾರ್ಥಸಾರಾದರಾಃ ।
ಧೀರೋದಾರಕಥಾರಸೇಷು ಸರಸಾಸ್ಸಾರಸ್ಯಹಂಸಾ ಇವ ।
ಶ್ರೀವಿಶ್ವೇಶ್ವರಭಕ್ತಿಪುಣ್ಯಸುರಸಾನೋದ್ಯೈಕಭಾರಾಂತರಾಃ ॥೧೮॥

ಆ ಜೈಗೀಷವ್ಯಮುನಿಯ ಮಾತುಗಳೆಂಬ ಅಮೃತಧಾರೆಗಳಿಂದ ಚೆನ್ನಾಗಿ ತೊಳೆಯಲ್ಪಟ್ಟ ಹೃದಯದ ಮಧ್ಯಭಾಗವುಳ್ಳ (ಅಂದರೆ ಪ್ರಸನ್ನನಾದ) ಷಣ್ಮುಖ ಸ್ವಾಮಿಯು ಗುಹನೆನಿಸಿದ ತನ್ನಲ್ಲಿ ಅಡಗಿ, ಶಿವನ ಕಥೆಗಳೆಂಬ ರತ್ನಗಳಿಗೆ ಶ್ರೇಷ್ಠವಾದ ರತ್ನಸಂಪುಟದಂತಿರುವ ಶಿವರಹಸ್ಯವನ್ನು ಒಡೆದು, ಪರಿಶುದ್ಧವಾದ ಅಂತಃಕರಣವುಳ್ಳ ಆ ಜೈಗೀಷವ್ಯಮುನಿಗೆ ಪ್ರದರ್ಶಿಸಲಾರಂಭಿಸಿದನು ಎಂದು ಸೂತರು ವಾಜಶ್ರವಸಾದಿಗಳಿಗೆ ವಿವರಿಸಲಾರಂಭಿಸಿದರು. ॥೧೫-೧೬॥

ಜೈಗೀಷವ್ಯಮುನಿಯೇ, ಚೆನ್ನಾಗಿ ಅರಳಿದ ಕೆಂದಾವರೆಯಂತೆ ಕಾಂತಿಯುಕ್ತವೂ, ವಿಘ್ನಗಳೆಂಬ ದೊಡ್ಡ ಆನೆಯ ಹಿಂಡಿಗೆ ಗಂಡಸ್ಥಲವನ್ನು ಭೇದಿಸುವುದರಲ್ಲಿ ಮೃಗರಾಜನಾದ ಸಿಂಹದ ಪಂಜದ ಉಗುರಿನಂತಿರುವವನೂ, ಕೆಂಪಾದ ಕಾಂತಿಯಿಂದ ರಂಜಿಸುವವನೂ ಆದ ಗಣಗಳಿಗೆ ಅಧಿಪತಿಯಾದ ವಿಘ್ನೇಶ್ವರನ ಪಾದವನ್ನು ಬಾರಿಬಾರಿಗೂ ಸ್ಮರಿಸುವೆನು. ಎಂದು ಸ್ಕಂದನು ಮೊದಲು, ಗಣಪತಿಯನ್ನು ಧ್ಯಾನಿಸಿದನು. ॥೧೭॥

ಎಲೈ ಜೈಗೀಷವ್ಯಮುನಿಯೇ, ಪರಮೇಶ್ವರನ ಪಾದಕಮಲವನ್ನು ಸದಾ ಸೇವೆಮಾಡುತ್ತಾ ಅತ್ಯಂತ ಪರಿಶುದ್ಧರಾಗಿ ಐಶ್ವರ್ಯದಲ್ಲಿ ಅಭಿರುಚಿಯಿಲ್ಲದೆ,

1 "ನಮಾಮಿ" ಎಂದಿರುವುದುಚಿತ.

ಕಿಂ ವಕ್ತವ್ಯಮತೋಽಪ್ಯಪಾರಮಹಿಮೋ ನಾನ್ಯೋ ಹಿ ವಿಶ್ವೇಶ್ವರೋ ।
ವಿಶ್ವಸ್ತೇಷು ಚ ಭಾವುಕೇಷು ಭಗವಾನಾಧಿವ್ಯಥಾಂ ಸಂಹರೇತ್
ವ್ಯರ್ಥಾಯಾಸಕರೈರಪಾರವಿವಿಧೈಃ ಕಿಂ ಧರ್ಮಜಾಲೈರ್ಮುನೇ ।
ಶ್ರೋತವ್ಯೋ ಹಿ ಸದಾಶಿವಃ ಶಿವತರೋ ಭಕ್ತೈಕಮೋಕ್ಷಪ್ರದಃ ॥೧೯॥

ಶ್ರೀಚಂದ್ರಚೂಡಚರಣಾರ್ಚನಜಾತಪುಣ್ಯೈಃ
ತುಂಗೈರತುಂಗವಿಭವಾ ಅಪಿ ಯೇ ಮನುಷ್ಯಾಃ ।

---

ಕೇವಲ ಭಗಾಕ್ಷಿಹರನಾದ ಪರಶಿವನ ಅಪಾರಮಹಿಮೆಗಳಲ್ಲಿ ಆಸಕ್ತರಾಗಿರುವವರೂ, ಧೀರ ಮತ್ತು ಉದಾರವಾದ ಶಿವಕಥಾರಸಗಳಲ್ಲಿಯೇ ಅಭಿರುಚಿಯುಳ್ಳವರಾಗಿ, ಕಮಲಸರೋವರದಲ್ಲಿರುವ ಹಂಸಗಳಂತೆ ಯಾವಾಗಲೂ ಸಾರವಾದ ಅಂಶಗಳನ್ನೇ ಸಂಗ್ರಹಮಾಡುತ್ತಾ, ಅನವರತವೂ ಶ್ರೀವಿಶ್ವೇಶ್ವರನ ಭಕ್ತಿಯೆಂಬ ಪುಣ್ಯರಸದಿಂದ ಉಂಟಾಗಿರುವ ಆನಂದದಲ್ಲಿಯೇ ಮಗ್ನರಾಗಿರುವ ನಿನ್ನಂತಹ ಮುನಿವರ್ಯರು ಲೋಕದಲ್ಲಿ ಎಲ್ಲಿಯೂ ದೊರೆಯಲಾರರು. ॥೧೮॥

ಮುನಿಯೇ, ನಿನಗೆ ಇದಕ್ಕಿಂತ ಏನು ಹೇಳಲಿ, ಉಮಾಪತಿಯಾದ ಪರಮೇಶ್ವರನಿಗಿಂತ ಶ್ರೇಷ್ಠನೆನಿಸಿ ಜಗದೊಡೆಯನಾಗಿರುವ ದೇವನಾರೂ ಇಲ್ಲ. ಈ ಸ್ವಾಮಿಯು ತನ್ನನ್ನು ನಂಬಿ ಯಾವಾಗಲೂ ಭಕ್ತಿಯಿಂದ ತನ್ನನ್ನೇ ಧ್ಯಾನ ಮಾಡುವವರ ಮನೋವ್ಯಥೆಯನ್ನೆಲ್ಲಾ ಬಿಡದೇ ನಾಶಮಾಡುವನು. ಮುನಿಯೇ ! ಕೇವಲ ಆಯಾಸಕರಗಳೂ, ನಾನಾರೀತಿಯುಳ್ಳವುಗಳೂ ಆದ ಧರ್ಮಸಮೂಹ ವನ್ನು ಯಜ್ಞಯಾಗಾದಿಗಳಾದ ಪಡೆಯಬಹುದು. ಆದರೆ ಪರಶಿವನಲ್ಲಿ ಭಕ್ತಿ ಯನ್ನು ಮಾತ್ರ ಪಡೆಯುವುದು ದುರ್ಲಭ. ಪರಮೇಶ್ವರನ ಭಕ್ತಿ, ಧ್ಯಾನಗಳಿಂದ ಲಭಿಸುವ ಪುಣ್ಯರಾಶಿಯು, ನಿರಾಯಾಸವಾಗಿ ಅನಂತವಾದ ಫಲಗಳನ್ನುಂಟು ಮಾಡುವುವು. ಭಕ್ತಾಗ್ರೇಸರನೇ, ಪರಮೇಶ್ವರನು ಸದಾ ಮಂಗಳಕರನು ಮತ್ತು ಸ್ವತಃ ಮಂಗಳಸ್ವರೂಪನು. ಆದುದರಿಂದ ಭಕ್ತರಿಗೆ ಮೋಕ್ಷವನ್ನುಂಟುಮಾಡುವ ಮಹಾದೇವನ ಕಥೆಗಳನ್ನೇ ಯಾವಾಗಲೂ ಕೇಳಬೇಕು ಮತ್ತು ಧ್ಯಾನಮಾಡ ಬೇಕು. ॥೧೯॥

ಕೊರಳಲ್ಲಿ ರುದ್ರಾಕ್ಷಿಮಾಲೆ, ಹಣೆಯಲ್ಲಿ ಭಸ್ಮತ್ರಿಪುಂಡ್ರ, ಇವುಗಳನ್ನು ಧರಿಸಿ, ತೇಜಸ್ವಿಗಳಾಗಿರುವ ಮಾನವರೂ ಮತ್ತು ಚಂದ್ರಶೇಖರನಾದ ಪರಮೇ

ರುದ್ರಾಕ್ಷಭಸ್ಮಲಲಿತಾಂಗಲಲಾಟಶೋಭಾಃ ।
ತೇ ವೈ ಶಿವಾಶ್ರಯಕಥಾಸು ಚ ದೀಕ್ಷಿತಾ ಹಿ ॥೨೦॥

ಯಥಾ ಚಾಕ್ಷಿಚಕ್ಷುಶ್ಯ್ರನಾಪಾರಭೂಷಾವಿಶೇಷೇಣ ಗಾಥಾತಿತುಷ್ಟಾ ವಿಶಿಷ್ಟಾ ।
ಸುದೋಷಾಕರಾಸಾರಮೌಲಿಪ್ರಕಾಶೇನ ಕಾಮಾಂಗನಾಮಾಂಗ ಶೋಭಾಶತೇನ ॥೨೧॥

ತದೇವಾದ್ಯ ಹೃದ್ಯಂ ಸುಪದ್ಯಂ ಸುಗದ್ಯಂ ;
ವದಾಮ್ಯದ್ಯ ವೇದಾಂತವೇದ್ಯಂ ಮಹಾರ್ಹ(ರ್ಘ)ಮ್ ।
ಸಮೀಹೇऽಹಮೀಶಾನತೋಷಪ್ರದೇ ।
ಚಾಸ್ತದೋಷೇ ಪ್ರದೋಷೇ ವಿಶೇಷಾಘನಾಶೇ ॥೨೨॥

---

ಶ್ವರನ ಪಾದಕಮಲಗಳನ್ನು ಸೇವಿಸಿ ಅಪಾರವಾದ ಪುಣ್ಯಸಮೂಹಗಳನ್ನು ಪಡೆದವರೂ, ಅತ್ಯಂತ ದರಿದ್ರರಾಗಿದ್ದರೂ ಪರಮೇಶ್ವರನ ಕಥಾಶ್ರವಣಕ್ಕೆ ಯೋಗ್ಯರೆನಿಸುವರು. ಆದ್ದರಿಂದ ಶಿವಕಥಾಶ್ರವಣಕ್ಕೆ ಶಿವಭಕ್ತಿ, ಶಿವಾರಾಧನೆಯು ಲಾಂಛನ ಇವು ಕಾರಣಗಳೇ ಹೊರತು, ಇತರ ಹೊರ ಆಡಂಬರಗಳಲ್ಲ. ॥೨೦॥

ಫಾಲನೇತ್ರ ಮತ್ತು ಸರ್ಪ ಇವೇ ಮೊದಲಾದ ಅಪಾರವಾದ ಅಲಂಕಾರಗಳಿಂದ ಕೂಡಿ ಚಂದ್ರಮೌಲಿಯೆನಿಸಿ ಪ್ರಕಾಶಿಸುತ್ತಿರುವವನೂ, ಮನ್ಮಥನ ಶರೀರದಂತೆ ಸುಂದರವಾದ ಶರೀರವನ್ನು ಧರಿಸಿ, ಎಡಭಾಗದಲ್ಲಿ ಪಾರ್ವತೀ ದೇವಿಯಿಂದ ಕೂಡಿರುವನೂ ಆದ ಪರಮೇಶ್ವರನು ಎಷ್ಟು ಸುಂದರನೋ, ಅಷ್ಟೇ ಶಿವರಹಸ್ಯವೂ ಮನೋಹರವಾಗಿರುವುದು. ॥೨೧॥

ಈ ಶಿವರಹಸ್ಯವು ಪುರಾತನವೂ, ಹೃದಯಂಗಮವೂ ಆಗಿ ಒಳ್ಳೆಯ ಗದ್ಯಪದ್ಯಗಳಿಂದ ಯುಕ್ತವೂ ವೇದಾಂತವೇದ್ಯವೂ ಮತ್ತು ಮಹಾಪೂಜ್ಯವೂ ಆಗಿರುವುದು. ಇಂತಹ ಮಹಿಮೆಯುಳ್ಳ ಶಿವರಹಸ್ಯವನ್ನು, ಪರಮೇಶ್ವರನಿಗೆ ಪ್ರೀತಿಪಾತ್ರವೂ, ದೋಷರಹಿತವೂ, ಸಕಲ ಪಾಪಗಳನ್ನೂ ನಾಶಪಡಿಸುವುದೂ ಆದ ಪ್ರದೋಷಕಾಲದಲ್ಲಿ ಹೇಳುವೆನು. ॥೨೨॥

ಸುದೋಷಾಕರಾಕಾರಮೌಲೀಶಲಿಂಗಾರ್ಚಕೇ ಪ್ರಾಪ್ತಪುಣ್ಯೇ ಸುಭಕ್ತೇ
ವಿರಕ್ತೇ ।
ಸುಮುಕ್ತ್ಯೈ ಕಥಾ ಸಾ ರಸಾಸ್ವಾರಹೀರಾಃ ಕಥಾಶ್ಚಾಕಥಿಷ್ಟಾಃ ಕಥಂಚಿತ್ತ
ದಾನೀಂ ॥೨೩॥

ಶಿವಾಯೈ ಶಿವೇನಾದ್ಯ ತುಷ್ಟೇನ ಪುಷ್ಟ್ಯೈ ।
ಪ್ರಕೃಷ್ಟೋರುಪುಣ್ಯೈಕಲಭ್ಯಾಃ ಪವಿತ್ರಾಃ ।
ತ್ರಿಣೇತ್ರಪ್ರಿಯಾಃ ಪ್ರಾಜ್ಯರಾಜ್ಯಾಭಿರಾಮಾಃ ।
ಪ್ರಮೋದೇಽಪಿ ಮಾನ್ಯಾ ದರಿದ್ರಾದ್ದರಿದ್ರಾಃ ॥೨೪॥

ಶಿವೇ ಕಷ್ಟ[1]ಪುಷ್ಟೇ ಭವೇಽಪಿ ಪ್ರಕೃಷ್ಟಾಃ ।
ತುರಾಷಾಟ್ಪದಾರಣ್ಯತೋತ್ಕೃಷ್ಟಭಾಗಾಃ ।

---

ಚಂದ್ರಮೌಳಿಯಾದ ಪರಮೇಶ್ವರನ ಲಿಂಗವನ್ನು ಪೂಜೆಮಾಡುತ್ತಾ, ಪುಣ್ಯಶಾಲಿಯೂ, ಒಳ್ಳೆಯ ಭಕ್ತಾಗ್ರೇಸರನೂ, ವಿರಾಗಿಯೂ ಆದವನಿಗೋಸ್ಕರ, ಪ್ರದೋಷಕಾಲದಲ್ಲಿ ರಸಭರಿತವಾದ ಶಿವರಹಸ್ಯ ಕಥೆಗಳು ಹೇಳಲ್ಪಟ್ಟಿರುವುವು. ಈ ಕಥಾಶ್ರವಣದಿಂದಲೇ ಮಾನವನಿಗೆ ಒಳ್ಳೆಯ ಮುಕ್ತಿಮಾರ್ಗವು ಲಭಿಸುವುದು. ||೨೩||

ಪರಶಿವನು ಮೊದಲು ತನ್ನನ್ನು ಸ್ತೋತ್ರಮಾಡಿದ ಪಾರ್ವತೀದೇವಿಗೆ ತೃಪ್ತಿಯನ್ನುಂಟುಮಾಡುವುದಕ್ಕೋಸ್ಕರ, ಶ್ರೇಷ್ಠವೂ, ಅತಿಶಯವೂ, ಪುಣ್ಯಮಾತ್ರ ದಿಂದ ಹೊಂದಲು ಸಾಧ್ಯವೂ, ಪರಮ ಪರಿಶುದ್ಧವೂ ಆದ ಶಿವರಹಸ್ಯವನ್ನು ಉಪದೇಶಿಸಿದನು. ಆ ರಹಸ್ಯವು ಪರಮೇಶ್ವರಭಕ್ತನಿಗೆ ಪ್ರೀತಿಪಾತ್ರವೂ ಶ್ರೇಷ್ಠವಾದ ರಾಜ್ಯಭೋಗದಂತೆ ಅಭಿರುಚಿಯನ್ನುಂಟುಮಾಡುವುದೂ, ಉತ್ತಮವಾದ ಸದ್ಗತಿಯನ್ನೊದಗಿಸುವುದೂ, ಸಂತೋಷಕರವೆನಿಸಿ ಗೌರವಾಸ್ಪದವೂ, ಮತ್ತು ದಾರಿದ್ರ್ಯವನ್ನು ಹೋಗಲಾಡಿಸುವುದೂ ಆಗಿರುವುದು. ||೨೪||

ಪ್ರಸಿದ್ಧನೂ, ಮದಶಾಲಿಯೂ, ಶ್ರೇಷ್ಠನೂ, ಇತರ ದೇವತೆಗಳಿಗಿಂತಲೂ ಶ್ರೇಷ್ಠತಮನೂ ಆದ ಪರಮೇಶ್ವರನನ್ನು ಪ್ರಯತ್ನಪೂರ್ವಕವಾಗಿ ಸ್ತೋತ್ರ

---

1 (ತುಷ್ಟೇ) ಎಂದಿದ್ದರೆ ಉಚಿತವೆಂದು ತೋರುವುದು.

ವಿನಷ್ಟಾಘಸಂಘಾ ಜನಿಷ್ಠೇ ಕನಿಷ್ಠೇ ।
ಪ್ರಥಿಷ್ಠೇ ಮದಿಷ್ಠೇ ವರಿಷ್ಠೇ ವಿಶಿಷ್ಟೇ ॥೨೫॥

ಶಿವೇ ತುಷ್ಟಿದಾತ್ರ್ಯಾಃ ಕಥಾ ಮೇ ಶೃಣು ತ್ವಂ ।
ವರಂ ಕೋಽಪಿ ರಂಕೋಽಪಿ ಸಂಕೋಚಿತಾಂತಃ ।
ನ ಕೋಪೀಶ್ವರೇ ಭಕ್ತಿಭಾವೈರ್ಯುತಸ್ಸ್ಯಾತ್ ।
ಸ ಏವಾಧುನಾ ಸ್ವರ್ಧುನೀಧನ್ಯಮೌಲೇಃ ॥೨೬॥

ಪದಾಂಭೋಜರಕ್ತೋ ವಿರಕ್ತೋ ಮುನಿಶ್ಚ ।
ವಿನಿರ್ಜಿತ್ಯ ಕಾಮಾದಿಷಡ್ವರ್ಗಮುಗ್ರಂ ।
ತ್ವಮುಗ್ರೋಽಪ್ಯಥಾಗ್ರೇಸರಶ್ಚೋಗ್ರಭಕ್ತಃ ॥೨೭॥

---

ಮಾಡಿದರೆ, ನೀಚವೂ ಅಸಾರವೂ ಆದ ಈ ಸಂಸಾರಸಾಗರದಲ್ಲಿ ಬಿದ್ದು ಮುಳುಗಿ ನರಳುತ್ತಿರುವ ಮಾನವರೂ ಉತ್ಕೃಷ್ಟರೆನಿಸಿಕೊಳ್ಳುವರು. ಸಂಸಾರ ಪಥವನ್ನು ದಾಟಿ ಇಂದ್ರನ ಉದ್ಯಾನವನವಾದ ನಂದನವನ ಮತ್ತು ಸ್ವರ್ಗ ಇವುಗಳಿಗಿಂತಲೂ ಸುಖಮಯವಾದ ಸ್ಥಾನವನ್ನು ಪಡೆದು ಪಾಪರಹಿತರಾಗಿ ಶಿವಸಾಯುಜ್ಯವನ್ನೈದುವರು. ॥೨೫॥

ಜೈಗೀಷವ್ಯನೇ ಕೇಳು, ಈಗ ಪರಮೇಶ್ವರನಿಗೆ ಪ್ರೀತಿಯನ್ನುಂಟು ಮಾಡುವ ಶಿವರಹಸ್ಯಕಥೆಗಳನ್ನು ಹೇಳುವೆನು. ಇದನ್ನು ಕೇಳುವವನು, ಶ್ರೇಷ್ಠನಾದರೂ ಅಥವಾ ನೀಚನಾದರೂ ಮನಸ್ಸು ಸಂಕುಚಿತವಾಗಿದ್ದರೆ ಈಶ್ವರನಲ್ಲಿ ಭಕ್ತಿ ಜನಿಸಲಾರದು. ನಿಸ್ಸಂಕೋಚಚಿತ್ತವುಳ್ಳವನೇ, ಗಂಗಾಧರನಾದ ಪರಮೇಶ್ವರನ ಭಕ್ತನೆನಿಸುವನು. ॥೨೬॥

ಶಿವನ ಪಾದಕಮಲಗಳ ಸೇವೆಯಲ್ಲಿಯೇ ನಿರತನಾಗಿ ವಿರಕ್ತಿಯನ್ನು ಪಡೆದು, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗವನ್ನು ನೀನು ಜಯಿಸಿರುವೆ. ಮತ್ತು ಉಗ್ರವಾದ ತಪಸ್ಸನ್ನಾಚರಿಸಿರುವ ಭಕ್ತಾಗ್ರೇಸರನಾದ ನೀನೇ ಶಿವನ ಭಕ್ತರಲ್ಲಿ ಶ್ರೇಷ್ಠನಾದವನು. ॥೨೭॥

ಲಭೇದೇವ ಭಕ್ತಿಂ ವಿರಕ್ತಿಂ ಚ ಮುಕ್ತಿಂ ।
ತಥಾಂತೇ ಗಣತ್ವಂ ಕಥಾಯಾಂ ರತಶ್ಚೇತ್ ।
ಶಿವಾನುಗ್ರಹಾದೇವ ತೇ ಭಕ್ತಿಭಾವೋ ।
ನ ಕಸ್ಯಾಪಿ ಲೋಕೇಽನುಲೋಕೇ ಕುತಶ್ಚಿತ್ ॥೨೮॥

ಮುನೀಂದ್ರೇ ಗಣೇಂದ್ರೇ ಸುರೇಂದ್ರೇ ಭವಾನ್ವೈ ।
ಲಲಾಮೋಽಪಿ ಭಕ್ತ್ಯಾ ಮಮೈವಾದ್ಯ ತುಲ್ಯಃ ।
ಪ್ರಶಸ್ಯಂ ರಹಸ್ಯಂ ಯತಶ್ಶೈವಸಾರ ।
ಪ್ರದಾನೇಮನೋ ಮೇಽದ್ಯ ಈಷ್ಟೇ ಮುನೀಂದ್ರ ॥೨೯॥

ತವೈವಾದ್ಯ ಹೃಷ್ಟಂ ಪ್ರಕೃಷ್ಟಂ ಪ್ರಥಿಷ್ಟಂ ।
ಮಮಾಪೀಶಭಕ್ತ್ಯಾ ಕೃಪಾತೋಽಷ್ಟಮೂರ್ತೇಃ ॥೩೦॥

---

ಪರಶಿವನ ಕಥಾಶ್ರವಣದಲ್ಲಿ ಆಸಕ್ತನಾದರೆ ಮಾನವನು ಭಕ್ತಿಯನ್ನೂ, ವಿರಕ್ತಿಯನ್ನೂ, ಮುಕ್ತಿಯನ್ನೂ ಪಡೆಯುವನು. ಅನಂತರ ಮೃತನಾದಮೇಲೆ ಶಿವನ ಪರಿವಾರಗಣಗಳಲ್ಲಿ ತಾನೂ ಒಬ್ಬನಾಗಿ ಮೆರೆಯುವನು. ಎಲೈ ಜೈಗೀಷವ್ಯನೆ; ಶಿವನ ಅನುಗ್ರಹದಿಂದಲೇ ನಿನಗೆ, ಯಾವ ಲೋಕದಲ್ಲಿಯೂ ಯಾರಿಂದಲೂ ಹೊಂದಲಸಾಧ್ಯವಾದ ಭಕ್ತಿಭಾವವುಂಟಾಗಿದೆ. ॥೨೮॥

ಅಯ್ಯ ಮುನಿವರ್ಯನಾದ ಜೈಗೀಷವ್ಯನೇ; ನೀನು ಮುನಿಶ್ರೇಷ್ಠರಲ್ಲಿಯೂ, ಗಣಪ್ರಮುಖರಲ್ಲಿಯೂ, ದೇವಶ್ರೇಷ್ಠರಲ್ಲಿಯೂ ತಿಲಕಪ್ರಾಯನೆನಿಸಿ ಭಕ್ತಿಯಲ್ಲಿ ನನಗೆ ಸಮಾನನಾಗಿರುವೆ. ಆದುದರಿಂದ ಓ ಮುನಿವರ್ಯನೇ; ಶ್ರೇಷ್ಠವೂ ರಹಸ್ಯವೂ ಆದ ಶಿವರಹಸ್ಯ ಕಥೆಗಳನ್ನು ನಿನಗೆ ಹೇಳಲು ನನ್ನ ಮನಸ್ಸು ಈಗ ತವಕಗೊಳ್ಳುತ್ತಿದೆ. ॥೨೯॥

ಕೃಪಾಶಾಲಿಯಾಗಿ ಅಷ್ಟಮೂರ್ತಿಯೆನಿಸಿದ ಪರಮೇಶ್ವರನೂ, ನನ್ನಲ್ಲಿರುವ ಈಶ್ವರಭಕ್ತಿಯಿಂದ ನನಗೆ ಕೃಪೆಮಾಡಿ ಅನುಗ್ರಹಿಸಿರುವ ಶಿವಕಥಾರಹಸ್ಯವೆಂಬ ಶ್ರೇಷ್ಠವೂ ಪ್ರಸಿದ್ಧವೂ ಆದ ಪರಮಾತ್ಮನ ಕಥೆಗಳನ್ನು ಸಂತೋಷದಿಂದ ನಿನಗೆ ಹೇಳುವೆನು. ॥೩೦॥

ಶ್ರೀಶೂಲಪಾಣಿಚರಣಾರ್ಚನಜಾತಪುಣ್ಯೈ
ರ್ಯೋಗೀಂದ್ರವೃಂದಸುರವೃಂದಗಣಪುಂಗವಾಶ್ಚ ।
ಏತೇ ದ್ವಿಜಾಃ ಪರಮಕಾರುಣಿಕಸ್ಯ ಶಂಭೋಃ ।
ಪಾದಪ್ರವೀಣಮನಸೋಽಪ್ಯನಸೂಯವಶ್ಚ ॥೩೧॥

ನಿಪಾತಿತಕೃಕಾಟಿಕೇ ಭಗವದಾಸ್ಯಪಂಕೇರುಹೇ ।
ಚಪೇಟವರಘರ್ಷಣೈರ್ವಿಗತದಂತಸಂಘೋಽರ್ಯಮಾ ।
ಸುಸಪ್ತವರಜಿಹ್ವಕೋ ವಿಗತಜಿಹ್ವಭಾಗಾಗ್ರಕೋ ।
ವಿನಾಸಿಕವರಾಮರೀಕಬರವಾಣಿಕಂಜೋದ್ಭವಾ ॥೩೨॥

ಕ್ಷಯದ್ವೀರಪಾದಾರ್ಚನಾದ್ವೀರಭದ್ರೋ ।
ಮಹಾರೌದ್ರರೌದ್ರೈರ್ವೃತೋಽಪ್ಯುಗ್ರವೇಗೈಃ ।
ಅನುಗ್ರೋಽಧುನಾ ಶಂಭುವಾರ್ತಾರಸಜ್ಞ ।
ಶ್ಚಕಾಸ್ತೀಶಪಾದಾಂಬುಜಧ್ಯಾನಲಗ್ನಃ ॥೩೩॥

---

ತ್ರಿಶೂಲಪಾಣಿಯಾದ ಪರಮೇಶ್ವರನ ಪಾದಸೇವೆಯಿಂದುಂಟಾಗಿರುವ ಪುಣ್ಯಗಳಿಂದ, ಮುನಿಗಳೂ, ದೇವಗಣಗಳೂ, ಶಿವಗಣಶ್ರೇಷ್ಠರೂ ಮತ್ತು ಈ ಬ್ರಾಹ್ಮಣರೂ ಸಹ ಪರಮಕರುಣಾಶ್ರಯನಾದ ಶಂಭುವಿನ ಪಾದಭಜನೆಯಲ್ಲಿಯೇ ನಿರತರಾಗಿ ಅಸೂಯೆಯಿಲ್ಲದೇ ಭಕ್ತಿಭರಿತರಾಗಿ ಇಲ್ಲಿರುವರು. ॥೩೧॥

ಕಮಲದಲ್ಲಿ ಹುಟ್ಟಿದ ಬ್ರಹ್ಮನ ಮುಖಕಮಲವನ್ನು ಕತ್ತರಿಸಿದವನೂ, ಮೇರೆಯನ್ನು ಮೀರಿ ತನ್ನ ಲೋಕವನ್ನು ಪ್ರವೇಶಮಾಡಿದ ಸೂರ್ಯನಿಗೆ ದಕ್ಷಬ್ರಹ್ಮನ ಯಾಗದಲ್ಲಿ ಚಪೇಟಪ್ರಹಾರಮಾಡಿ ದಂತಭಂಗಮಾಡಿದವನೂ, ದಕ್ಷಯಜ್ಞದಲ್ಲಿ ಸಪ್ತಜಿಹ್ವನೆನಿಸಿದ್ದ ಅಗ್ನಿಪುರುಷನನ್ನು ಜಿಹ್ವೆಯೇ ಇಲ್ಲದಂತೆ ಮಾಡಿದವನೂ, ತನ್ನ ಪತ್ನಿಯಾದ ಪಾರ್ವತೀದೇವಿಗೆ ಶ್ರೇಷ್ಠತೆಯುನ್ನುಂಟು ಮಾಡುವುದಕ್ಕೋಸ್ಕರ ಇತರ ದೇವತಾಸ್ತ್ರೀಯರಾದ ಸರಸ್ವತೀ, ಲಕ್ಷ್ಮೀ ಇವರುಗಳ ಮೂಗಿನ ಸೌಂದರ್ಯವನ್ನು (ಶ್ರೇಷ್ಠತೆಯನ್ನು) ಕಡಿಮೆಮಾಡಿದವನೂ ಆದ ಪರಮೇಶ್ವರನನ್ನು ನಮಸ್ಕರಿಸುವೆನು. ॥೩೨॥

ಪ್ರತಿಭಟಿಸುವವರನ್ನು (ಸಕಲ ಪಾಪಗಳನ್ನೂ) ನಾಶಮಾಡುವ ವೀರನಾದ, ಪರಮೇಶ್ವರನ ಪಾದಸೇವಕನಾದ ವೀರಭದ್ರನು, ಹಿಂದೆ ಬಹು ಉಗ್ರವಾದ

ಶ್ರೀಶೈಲಾದಿರನುದ್ಧತೋಽಯಮಧುನಾ ಯಶ್ಚೋದ್ಧತೋ ಬಾಲಕಂ ।
ಲೀಲಾಕ್ಲಿಪ್ತಸಪರ್ಯಯಾ ಪುರಭಿದೋ ಲಿಂಗೇ ಚ ತುಂಗೇ ಪುರಾ ।
ಉತ್ಥಾಯ ಪ್ರಕಟೋರುಘಾತಚರಣಪ್ರಾಂತೇನ ಶಂಭೋಸ್ತದಾ ।
ಯಃ ಕಾಲಂ ವಿಜಿಗಾಯ ಹುಙ್ಕೃತಿಪರಸ್ಸೋಽಯಂ ಕಥಾಯಾಂ ರತಃ॥೩೪॥

ವಿಹಂಗಮಾತಂಗಕುರಂಗವಾಹಾಸ್ತುರಂಗಮೋತ್ತುಂಗಪತಂಗಸೋಮಾಃ ।
ಘನಾಂಗವಾಹಸ್ಯ ಚರಿತ್ರಸಾರಕಥಾರಸೇ ತರ್ಷತರೋರುಹರ್ಷಾಃ ॥೩೫॥

ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಸ್ಕಂದವಾಕ್ಯಂ ನಾಮ ಪ್ರಥಮೋಽಧ್ಯಾಯಃ

---

ವೇಗದಿಂದ, ನೋಡಲು ಅತಿ ಭಯಂಕರನಾಗಿ ತೋರುತ್ತಿದ್ದನು. ಈಗ ಅದೇ ವೀರಭದ್ರನೇ ಶಿವಕಥಾರಸಮಾಧುರ್ಯವನ್ನು ತಿಳಿದು ಈಗ ತನ್ನ ಉಗ್ರತೆಯನ್ನು ತೊರೆದು, ಯಾವಾಗಲೂ ಈಶ್ವರನ ಪಾದಕಮಲದಲ್ಲಿಯೇ ಧ್ಯಾನಮಗ್ನನಾಗಿ ಪ್ರಕಾಶಿಸುತ್ತಿರುವನು. ||೩೩||

ಹಿಂದೆ ಶಿಲಾದನ ಪುತ್ರನಾದ ನಂದಿಯು, ತಂದೆಯ ಅಪ್ಪಣೆಯಂತೆ ತನ್ನ ಅಲ್ಪಾಯುಸ್ಸಿನ ಮೃತ್ಯುನಿವಾರಣೆಗಾಗಿ ಪರಮೇಶ್ವರನನ್ನು ಕುರಿತು ನಿಯಮದಿಂದ ಧ್ಯಾನಪೂಜಾದಿಗಳನ್ನು ಶ್ರೀಶೈಲಕ್ಷೇತ್ರದಲ್ಲಿ ಮಾಡಿ, ಆ ಪರಮೇಶ್ವರನ ಉನ್ನತ ವಾದ ಲಿಂಗವನ್ನು ಸಂತೋಷದಿಂದ ಪೂಜೆಮಾಡುತ್ತಿದ್ದಾಗ, ಯಮನು (ಕಾಲನು) ಬಂದು ಅವನ ನಿಯಮದಂತೆ ನಂದಿಯನ್ನು ಎಳೆಯಲು ಪ್ರಯತ್ನಿಸಿದನು. ಕೊನೆಗೆ ಬಲಾತ್ಕಾರದಿಂದ ಘಾಸಿಪಡಿಸಲು ಶಿವಪೂಜಾವಿಧಿಯಿಂದ ಸಂತುಷ್ಟನಾದ ಪರಮೇಶ್ವರನು, ತನ್ನ ಭಕ್ತನನ್ನುದ್ಧಾರಮಾಡಲು ಪ್ರತ್ಯಕ್ಷನಾಗಿ ಯಮನನ್ನು ನಿಗ್ರಹಿಸಿ ನಂದಿಯನ್ನು ಚಿರಂಜೀವಿಯಾಗೆಂದು ಹರಸಿದನು. ಮೃತ್ಯುಂಜಯನೆನಿಸಿದ ಆ ಪರಮೇಶ್ವರನ ಬೆಂಬಲದಿಂದ, ಈ ಬಾಲನಂದಿಯೂ ಮೃತ್ಯುಂಜಯನೆನಿಸಿದವನಾಗಿ ಹುಂಕಾರದಿಂದ ಯಮನನ್ನು ಜಯಿಸಿದನು. ಇಂತಹ ನಂದೀಶ್ವರನೂ ಈ ಶಿವಕಥಾರಹಸ್ಯದಲ್ಲಿ ತತ್ಪರನಾಗಿ ಶಿವನನ್ನೇ ಅನವರತವೂ ಭಜಿಸುತ್ತಾ ಇಲ್ಲಿ ಕುಳಿತಿರುವನು. ||೩೪||

ಪಕ್ಷಿ, ಆನೆ, ಜಿಂಕೆ, ಕುದುರೆ, ಇವೇ ವಾಹನವಾಗಿ ಉಳ್ಳವರೂ ಸೂರ್ಯಚಂದ್ರರೇ ಮೊದಲಾದ ಎಲ್ಲರೂ ಪರಮಶೂರನಾಗಿರುವ ನಂದಿವಾಹನನಾದ

ಪರಶಿವನ ಕಥಾಸಾರವನ್ನು ಕೇಳುವುದರಲ್ಲಿ ಅತ್ಯಂತ ಸಂತೋಷಗೊಂಡು ಆಲೈಸು ತ್ತಿರುವರು. ಇಂತಹಪರಿಗಾಗಿ ಈಗ ನಾನು ಈ ಶಿವರಹಸ್ಯವನ್ನು ವಿವರಿಸುವವ ನಾಗುವೆನು. ||೩೫||

ಇಲ್ಲಿಗೆ ಶ್ರೀಶಿವರಹಸ್ಯದ ಎರಡನೆಯ ಅಂಶದಲ್ಲಿ ಕುಮಾರಸ್ವಾಮಿಯ ವಾಕ್ಯವೆಂಬ ಮೊದಲನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ದ್ವಿತೀಯೋಽಧ್ಯಾಯಃ

—∘∘※∘∘—

|| ಸ್ಕಂದ ಉವಾಚ ||

**ಶ್ರೀಕೈಲಾಸೇ ಪುರಾ ವಿಪ್ರ ಜೈಗೀಷವ್ಯ ಮಹಾಮತೇ ।**
**ತಪಶ್ಚಚಾರ ಸಾ ದೇವೀ ನಿಯತಂ ನಿಯತಾಶನಾ ॥೧॥**

**ಅಕಾಮಾಪಿ ಶಿವಾ ತತ್ರ ಕಿಞ್ಚಿತ್ಕಾಮಂ ಹೃದಿ ಸ್ಮರತ್(?) ।**
**ಕಾಮಾಂಗನಾಶನಪದಂ ಹೃದಿ ಧ್ಯಾಯತ್ಸಪರ್ಯಯಾ ॥೨॥**

**ವರ್ಷಾಯುತಂ ತಪಶ್ಚಕ್ರೇ ಕೈಲಾಸೇ ಪರಮೇಶ್ವರೀ ।**
**ತಪಸ್ತತಾಪ ಪರಮಂ ಯದಸಾಧ್ಯಂ ತಪಸ್ವಿಭಿಃ ॥೩॥**

---

### ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಎರಡನೆಯ ಅಧ್ಯಾಯ

ಅಯ್ಯ ಮಹಾಬುದ್ಧಿಶಾಲಿಯಾದ ಜೈಗೀಷವ್ಯಮುನಿಯೇ, ಹಿಂದೆ ಒಂದು ಸಾರಿ ಮಂಗಳಕರವಾದ ಕೈಲಾಸಪರ್ವತದಲ್ಲಿ ಪಾರ್ವತೀದೇವಿಯು, ಮಿತಾಹಾರವನ್ನು ಸೇವಿಸುತ್ತಾ ನಿಯಮದಿಂದ ತಪಸ್ಸುಮಾಡಿದಳು. ಆ ತಪೋವರ್ಣನೆಯನ್ನು ನಿನಗೆ ತಿಳಿಸುವೆನು. ಕೇಳು. ಎಂದು ಸ್ಕಂದಸ್ವಾಮಿಯು ಜೈಗೀಷವ್ಯನನ್ನು ಕುರಿತು ಮುಂದಿನ ವಿಷಯವನ್ನು ವಿವರಿಸಲಾರಂಭಿಸಿದನು. ||೧||

ಪಾರ್ವತೀದೇವಿಗೆ ತಪಸ್ಸನ್ನಾಚರಿಸಲು ಯಾವ ಫಲಾಪೇಕ್ಷೆಯೂ ಇರಲಿಲ್ಲ. ಆದರೂ ಹೃದಯದಲ್ಲಿ ಏನನ್ನೋ ಸ್ಮರಿಸುತ್ತಿರುವಂತೆ ತೋರುತ್ತಾ, ಮನ್ಮಥನನ್ನು ನಾಶಪಡಿಸಿದ ಪರಮೇಶ್ವರನ ಪಾದಕಮಲಗಳನ್ನು ಭಕ್ತಿಯಿಂದ ಮನಸ್ಸಿನಲ್ಲಿ ಧ್ಯಾನಮಾಡುತ್ತಾ, ಹತ್ತುಸಾವಿರವರ್ಷಗಳವರೆವಿಗೆ ಕೈಲಾಸಪರ್ವತದಲ್ಲಿ ದೊಡ್ಡ

ಕ್ವ ಸಾ ಮೃಣಾಲತನ್ವಂಗೀ ಕ್ವ ಚೋಗ್ರಂ ತಾದೃಶಂ ತಪಃ ।
ಕಠೋರವರ್ಷ್ಮಸಂಸಾಧ್ಯಂ ಮಹೋಜ್ಞಾ ಚೇತಸೋ ಧೃತಿಃ ॥೪॥

ಧಾರಾಧಾರಾಸು ವರ್ಷಾಸು ಮಹಾವಾತವತೀಷ್ವಲಂ ।
ಶಿಲಾಸು ಸಾವಕಾಶಾಸು ಸಾ ಬಹ್ವೀರನಯನ್ನಿಶಾಃ ॥೫॥

ನಿಶಾಕರಕರಾಸಾರಪಾನಪೀನಹೃದಂತರಾ ।
ಶ್ರುತ್ವಾ ಸಿಂಹರವಂ ಘೋರಂ ದೃಷ್ಟ್ವಾ ವಿದ್ಯುಚ್ಚಮತ್ಕೃತೀಃ ॥೬॥

---

ತಪಸ್ಸನ್ನಾಚರಿಸಿದಳು. ಆ ತಪಸ್ಸು ಇತರ ಯಾವ ತಪಸ್ವಿಗಳಿಗೂ ಅಸಾಧ್ಯವಾಗುವಂತಹ ರೀತಿಯಲ್ಲಿ ನಿಯಮದಿಂದ ಉತ್ಕೃಷ್ಟವೂ ಘೋರವೂ ಆಗಿತ್ತು. ॥೨-೩॥

ಎಲೈ ಜೈಗೀಷವ್ಯನೇ, ತಾವರೆಯ ದಂಟಿನಂತೆ ಮೃದುವಾದ ಶರೀರವುಳ್ಳ ಕೃಶಾಂಗಿಯಾದ ಪಾರ್ವತೀದೇವಿಯು, ಕಠಿನತರವಾಗಿರುವ ಮನುಷ್ಯರಿಂದ ಮಾಡಲು ಸಾಧ್ಯವಲ್ಲದ ಅತ್ಯಂತ ಉಗ್ರವಾದ ತಪಸ್ಸನ್ನು ಆಚರಿಸಿದಳು. ಇದಕ್ಕೆ ಕೇವಲ ದೇವಿಯ ತೇಜಸ್ಸಿನಿಂದ ಉಂಟಾದ ಮನಸ್ಸಿನ ದೃಢತೆಯು ಕಾರಣವೇ ಹೊರತು, ಇತರ ಶರೀರಮಾರ್ದವಕಾಠಿನ್ಯಾದಿಗಳು ಕಾರಣವಲ್ಲವೆಂದು ತಿಳಿಯಬೇಕು. ॥೪॥

ಪರಮೇಶ್ವರಿಯು ಮೇಘರಾಜಿಗಳಿಂದಲೂ ಬಿರುಗಾಳಿಗಳಿಂದಲೂ ವ್ಯಾಪ್ತವಾಗಿರುವ ಮಹಾಭಯಂಕರವಾದ ಮಳೆಗಾಲಗಳಲ್ಲಿ, ನಿರಾವರಣವಾದ ಕಲ್ಲುಬಂಡೆಗಳ ಮೇಲೆಯೇ ಕುಳಿತುಕೊಂಡು ತಪಸ್ಸನ್ನಾಚರಿಸಿದಳು. ಹಾಗೆಯೇ ಅನೇಕ ರಾತ್ರಿಗಳನ್ನು ಅಲ್ಲಿ ಕಳೆದಳು. ಅಂದರೆ ಮಳೆಗಾಲವು ತಪಸ್ಸುಮಾಡಲು ಭಯಂಕರವಾದ ಕಾಲವರೂ ಅದನ್ನು ಗಣಿಸದೆ ಬಹುಕಾಲ ತಪಸ್ಸುಮಾಡಿದಳು. ॥೫॥

ಚಂದ್ರಕಿರಣಸಾರವನ್ನು ಪಾನಮಾಡುವುದರಿಂದಲೇ ಇವಳ ಹೃದಯವು ಪರಿಪೂರ್ಣವಾಗುತ್ತಿದ್ದಿತು. ಬೇರೆ ಯಾವ ಆಹಾರಗಳನ್ನೂ ದೇವಿಯು ಸ್ವೀಕರಿಸುತ್ತಿರಲಿಲ್ಲ. ಮಳೆಗಾಲದ ರಾತ್ರಿಗಳು ಭಯಂಕರವಾದವುಗಳು. ಅಂತಹ ರಾತ್ರಿಯಲ್ಲಿ ಸಿಂಹವೇ ಮೊದಲಾದ ಕ್ರೂರಮೃಗಗಳ ಗರ್ಜನೆಯೂ, ಮಿಂಚು ಮತ್ತು ಸಿಡಿಲು ಇವುಗಳ ಆರ್ಭಟವೂ, ಧಾರಾಕಾರವಾದ ವೃಷ್ಟಿಯೂ, ಎಂತಹವರನ್ನೂ ಭಯಪಡಿಪುವು. ಆದರೆ ಜಗದಂಬಿಕೆಯಾದ ಪರಮೇಶ್ವರಿಯು ಇವಾವುದಕ್ಕೂ ಸ್ವಲ್ಪವೂ ಎದೆಗೆಡದೆ ಧೈರ್ಯದಿಂದಲೇ ತಪಸ್ಸುಮಾಡುತ್ತಿದ್ದಳು. ॥೬॥

ಆಸಾರಶೀಕರೈಃ ಕ್ಲಿನ್ನಾ ನ ಚಕಂಪೇ ಮನಾಕ್ಚ ಸಾ।
ತಟಿತ್ಸ್ಫುರಂತೀ ತ್ವಸಕೃತ್ತಮಿಸ್ರಾಸು ತಪೋವನೇ ॥೭॥

ಯಾತಾಯಾತಂ ಕರೋತೀವ ದ್ರಷ್ಟುಂ ತತ್ತಪಸಸ್ಸ್ಥಿತಿಂ।
ತಪರ್ತುರೇವ ಸಾಕ್ಷಾತ್ಸಾ ಕೌಮಾರೀ [1]ಕೌತುಕಾತ್ಕಿಲ ॥೮॥

ಪಂಚಾಗ್ನೀನ್ಪರಿಧಾಯಾತ್ರ ತಪಸ್ಯಂತೀ ತಪೋವನೇ।
ನ ಮನಾಗಪಿ ಹೇಮಂತೇ ಜ್ವಾಲಮಾಲಾವಿವರ್ಜಿತಾ ॥೯॥

ಕುಶಾಗ್ರತೋಯಮಪಿ ಸಾ ಸ್ವೀಚಕ್ರೇ ತಾಪತಾಪಿತಾ।
ಗ್ರೀಷ್ಮೇ ಪ್ರಚಂಡಕಿರಣೈಶ್ಚಂಡಭಾನೋಃ ಪ್ರಚಂಡಿತಾ ॥೧೦॥

---

ದೇವಿಯ ತಪೋವನದಲ್ಲಿ, ಪರಮೇಶ್ವರಿಯು ಮಾಡುತ್ತಿರುವ ತಪಸ್ಸಿನ ರೀತಿಯನ್ನು ನೋಡಬೇಕೆಂಬ ಅಪೇಕ್ಷೆಯಿಂದಲೋ ಎಂಬಂತೆ ಆ ಮಳೆಗಾಲದ ರಾತ್ರಿಗಳಲ್ಲಿ ಮಿಂಚುಗಳು ಬಾರಿಬಾರಿಗೂ ಹೊಳೆಯುತ್ತಾ ಹತ್ತಿರಕ್ಕೆ ಹೋಗಿ ಬರುವಂತೆ ಕಾಣುತ್ತಿದ್ದವು. ॥೭॥

ತಪೋವನದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ತಪಸ್ಸನ್ನು ಮಾಡುತ್ತಿರುವ ದೇವಿಯನ್ನು ನೋಡಿದರೆ, ಸಾಕ್ಷಾದ್ಗ್ರೀಷ್ಮರ್ತುವೇ ಏನಾದರೂ ಕುಮಾರೀರೂಪವನ್ನು ಧರಿಸಿ ಕೌತುಕದಿಂದ ತಪಸ್ಸುಮಾಡುತ್ತಿರುವುದೋ ಎಂಬಂತೆ ತೋರುತ್ತಿದ್ದಿತು. ಪಾರ್ವತೀದೇವಿಯು ಹೇಮಂತಋತುವಿನಲ್ಲಿ ಎಷ್ಟೇ ಅಧಿಕವಾದ ಚಳಿ ಕಂಡುಬಂದರೂ, ತದ್ಬಾಧಾನಿವಾರಣೆಗಾಗಿ ಬೆಂಕಿಯ ಜ್ವಾಲೆ ಮೊದಲಾದುವನ್ನು ಎಂದೂ ಉಪಯೋಗಿಸಲಿಲ್ಲ. ನೆಟ್ಟದೃಷ್ಟಿಯಿಂದ ಯಾವ ವಿಕಾರವನ್ನೂ ಹೊಂದದೇ ಒಂದೇ ಸಮನಾಗಿ ತಪಸ್ಸನ್ನಾಚರಿಸಿದಳು. ॥೮-೯॥

ಭಯಂಕರವಾದ ಗ್ರೀಷ್ಮಋತುವಿನಲ್ಲಿ ಪ್ರಚಂಡಕಿರಣನಾದ ಸೂರ್ಯನು ತನ್ನ ಬಿಸಿಲಿನ ಪರಾಕಾಷ್ಠತೆಯನ್ನು ಪ್ರಕಟಿಸುತ್ತಾ ಸಂತಾಪಕರನಾಗಿದ್ದರೂ, ಗಿರಿಜಾದೇವಿಯು ಆ ಸೂರ್ಯನ ತಾಪಕ್ಕೊಳಗಾಗಿ ಬಾಯಾರಿಕೆಯಿಂದ ದರ್ಭೆಯ ಅಗ್ರದ ಮೇಲಿನ ನೀರಿನಷ್ಟು ಪ್ರಮಾಣವನ್ನಾದರೂ ಜಲಪಾನಮಾಡಲಿಲ್ಲ. ಅಂದರೆ ಹಸಿವು ಬಾಯಾರಿಕೆ ಮೊದಲಾದ ಕಾಯಿಕವಾದ ಇಚ್ಛೆಗೆ ಮನಗೊಡದೇ, ಕೈಗೊಂಡಿರುವ ತಪಃಕಾರ್ಯದಲ್ಲಿಯೇ ಮಗ್ನಳಾಗಿದ್ದಳು. ॥೧೦॥

---

1 ಕೈತವಾತ್ಕಿಲ ಎಂಬ ಪಾಠಾಂತರವಿದೆ.

ರೋಮಾಂಚಕಂಚುಕವತೀ ವೇಪಮಾನತನುಚ್ಛದಾ ।
ಪರ್ಯುಕ್ಷಿಪತ್ಕ್ಷ[1]ಮಾಕ್ಷಾಮಾ ಸರಸೀನಳಿನೀವ ಸಾ ॥೧೧॥

ನಿಶೀಥಿನೀಷು ಶಿಶಿರೇ ಸಾರಸಕ್ರೌಂಚಸದ್ರವೈಃ ।
ಪತಂತೀ ಸರಸಾಸಾರಮುದ್ಯತಾ ಧೃತಿತರ್ಪಿತಾ ॥೧೨॥

ಮನಸ್ವಿನಾಮಪಿ ಮನೋರಾಜ್ಯಂ ಸಂಸೃಜತೀ ಮಧೌ ।
ತದೋಷ್ಠಪಲ್ಲವಾದ್ರಾಗೋ ಜಹ್ರೇ ಮಾಕಂದಪಲ್ಲವೈಃ ॥೧೩॥

---

ಗಿರಿಜೆಯು ಹಿಮಂತಋತುವಿನಲ್ಲಿ ಕಮಲಸರೋವರದಲ್ಲಿ ನಿಂತು, ಆ ಕಾಲದ ಚಳಿಯಿಂದ ಉಂಟಾಗುವ ರೋಮಾಂಚವೆಂಬ ಕಂಚುಕವನ್ನೇ ಧರಿಸಿದವಳಾಗಿ, ಸರೋವರಮಧ್ಯದಲ್ಲಿರುವ ತಾವರೆಯಂತೆ ನಡುಗುತ್ತಿದ್ದಳು. ಹೀಗೆ ಅನೇಕ ದಿವಸಗಳು ಹಾಗೆಯೇ ಸರೋವರದಲ್ಲಿ ನಿಂತು ದೃಢವಾದ ಮನಸ್ಸಿನಿಂದ ತಪಸ್ಸನ್ನಾಚರಿಸಿದಳು. ॥೧೧॥

ಶಿಶಿರಋತುವಿನ ರಾತ್ರಿಕಾಲಗಳಲ್ಲಿ ಸಾರಸಪಕ್ಷಿಗಳೂ, ಮತ್ತು ಕ್ರೌಂಚಪಕ್ಷಿಗಳೂ ಧ್ವನಿಮಾಡುತ್ತಿರಲು ಆ ಧ್ವನಿಗಳಿಂದ ವಿಕಾರಹೊಂದದೆ ಆ ಸರೋವರದ ತೀರದಲ್ಲಿಯೇ ಕುಳಿತು ತಪಸ್ಸನ್ನಾಚರಿಸಿದಳು. ಮನೋವಿಕಾರವನ್ನುಂಟುಮಾಡುವ ಸಾಧನಗಳು ಅನೇಕವಿದ್ದಾಗ್ಯೂ, ಅವುಗಳಾವುದರ ಕಡೆಗೂ ಮನಸ್ಸುಗೊಡದೆ ಧೈರ್ಯದಿಂದಲೇ ತನ್ನ ಕಾರ್ಯವನ್ನು ಮುಂದುವರಿಸಿದಳು. ॥೧೨॥

ವಸಂತಋತುವಿನಲ್ಲಿ ಜಿತೇಂದ್ರಿಯರಿಗೂ ಅಚ್ಚರಿಯನ್ನುಂಟುಮಾಡುವಂತೆ ತಪಸ್ಸನ್ನಾಚರಿಸುತ್ತಿರುವ ಈ ಗಿರಿಜಾದೇವಿಯ, ಚಿಗುರಿನಂತಿರುವ ತುಟಿಗಳ ರಾಗವನ್ನು ಮಾವಿನ ಚಿಗುರುಗಳು ಅಪಹರಿಸಿದವು. ಅಂದರೆ ದೇವಿಯ ತುಟಿಯ ಕಾಂತಿಯು ಆಗತಾನೇ ಚಿಗುರಿರುವ ಎಳೆಯಮಾವಿನಚಿಗುರುಗಳಂತೆ ಉತ್ತಮವಾಗಿ ಕಾಣುತ್ತಿದ್ದಿತು. ॥೧೩॥

---

1 ಕ್ಷಪಾಕ್ಷಾಮಾ, ಇತಿಪಾಠಃ

ವಸಂತೇ ಸಂಚರಂತೀ ಸಾ ವನೇ ಬಾಲಾಚಲಂ ಮನಃ ।
ಚಕ್ರೇ ತಪಸ್ಯಪಿ ಶ್ರುತ್ವಾ ಕೋಕಿಲಾಕಾಕಲೀರವಂ ॥೧೪॥

ಬಂಧುಜೀವೇಽಧರರುಚಿಂ ಕಲಹಂಸೇ ಕಲಾಗತೀಃ ।
ನಿಕ್ಷೇಪಮಿವ ಸಾ ಕ್ಷಿಪ್ತ್ವಾ ಶರದ್ಯಾಸೀತ್ತಪೋರತಾ ॥೧೫॥

ಶಾಣೇನ ಮಣಿವಲ್ಲೀಢಾ ಕೃಶಾ ಪ್ರಾಪ್ಯಾಪ್ಯನರ್ಘ್ಯತಾಂ ।
ತಥಾಪಿ ತಪಸಾ ಕ್ಷಾಮಾ ದಿದೀಪೇಽಗ್ನಿ ಶಿಖಾ ಇವ ॥೧೬॥

ಸದಾನಂದಘನಾ ಶಂಭುಪಾದಾಬ್ಜೋನ್ನಿದ್ರಮಾನಸಾ ।
ನಿದ್ರಾತಂದ್ರಾದಿರಹಿತಾ ಹ್ಯಾರ್ದ್ರೀಕೃತಹೃದಂತರಾ ॥೧೭॥

---

ವಸಂತಋತುವಿನಲ್ಲಿ ದೇವಿಯು ಸಂಚರಿಸುತ್ತಿರುವಾಗ ತಪೋವನದಲ್ಲಿ ಕೋಗಿಲೆಗಳ ಅವ್ಯಕ್ತಮಧುರವಾದ ಇಂಚರವನ್ನು ಕೇಳುವಳು. ಆದರೂ ತನ್ನ ಮನಸ್ಸನ್ನು ಸ್ವಲ್ಪವೂ ಚಂಚಲವಾಗಗೊಡದೇ ತಪಸ್ಸಿನಲ್ಲಿಯೇ ನಿರತಳಾಗಿದ್ದಳು. ||೧೪||

ದೇವಿಯು ತನ್ನ ಅಧರ (ಕೆಳದುಟಿ) ಕಾಂತಿಯನ್ನು ಬಂಧೂಕಪುಷ್ಪದಲ್ಲಿಯೂ, ಮಂದಗಮನವನ್ನು ಕಲಹಂಸಗಳಲ್ಲಿಯೂ ನ್ಯಾಸವಾಗಿರಿಸಿ, ಶರದೃತುವಿನಲ್ಲಿ ತಪೋನಿರತಳಾಗಿರುತ್ತಿದ್ದಳು. ಅಂದರೆ ಶರದೃತುವಿನಲ್ಲಿ ದಾಸವಾಳದ ಪುಷ್ಪಗಳೂ, ಹಂಸಗಳೂ ವಿಶೇಷವಾಗಿ ವಿಕಸಿತವಾಗಿಯೂ ವಿಲಾಸಯುಕ್ತವಾಗಿಯೂ ಇರುತ್ತಿದ್ದುವು. ಅವುಗಳ ಸಾಮ್ಯವು ದೇವಿಯ ಅಂಗಗಳಲ್ಲಿ ಕಾಣುತ್ತಿದ್ದಿತು. ||೧೫||

ಸಾಣೆಹಿಡಿದ ರತ್ನವು ತಾನು ಸಣ್ಣಗಾದರೂ ಹೊಳಪನ್ನು ಪಡೆದು ಪ್ರಕಾಶಿಸುವಂತೆ, ತಪಸ್ಸಿನಿಂದ ಕೃಶಳಾಗಿರುವ ದೇವಿಯು ಅಗ್ನಿಜ್ವಾಲೆಯಂತೆ ತೇಜಸ್ಸಿನಿಂದ ಶೋಭಿಸುತ್ತಿದ್ದಳು. ||೧೬||

ಗಿರಿಜೆಯು ಯಾವಾಗಲೂ ಆನಂದಪರಿಪೂರ್ಣಳಾಗಿ, ಶಂಭುವಿನ ಪಾದಕಮಲಗಳಲ್ಲಿಯೇ ನೆಟ್ಟಮನಸ್ಸುಳ್ಳವಳಾಗಿದ್ದಳು. ನಿದ್ರಾ ಮತ್ತು ಆಲಸ್ಯ ಇವುಗಳನ್ನು ತೊರೆದು ಸದಾಶಿವಧ್ಯಾನದಲ್ಲಿಯೇ ಮನಸ್ಸನ್ನು ನೆಲೆಗೊಳಿಸಿದ್ದಳು. ||೧೭||

ಶಿವಧ್ಯಾನಸುಧಾಧಾರಾನಿಷ್ಯಂದಾಽಮೃತಶೀಕರೈಃ ।
ಕುರ್ವನ್ನೃತ್ತಂ ಸ್ವಮಾತ್ಮಾನಂ ಸುವಿಸ್ತೃತಮಥಾಽಕರೋತ್ ॥೧೮॥

ಪರಿಮುಚ್ಯಾಂಗರಾಗಾದಿಭೂಷಣಾದಿಲಸತ್ತನುಃ ।
ಅಪರ್ಣಾಽಪಿ ಸದಾ ಪರ್ಣವಾಸಸಾ ಸರ್ವದಾ ಶಿವಾ ॥೧೯॥

ವಲಕ್ಷಭೂತ್ಯಾ ವಿಲಸದ್ಗಾತ್ರಾಚ್ಛಚ್ಛವಿಸೋಮಜಿತ್ ।
ಪ್ರಚಂಡಸೂರ್ಯಕಿರಣಾವೃತಾತ್ಯಚ್ಛಶರದ್ಘನಾ ॥೨೦॥

ತ್ರಿಪುಂಡ್ರಮಂಡಿತೋತ್ಫುಲ್ಲಸುರಕ್ತವನಜಾನನಾ ।
ತಿಲಕೋದ್ಭಾಸಿವಕ್ತ್ರಶ್ರೀವಿರಾಜಿತಜಗತ್ತ್ರಯಾ ॥೨೧॥

---

ದೇವಿಯು ಹೀಗೆ ಶಿವಧ್ಯಾನವೆಂಬ ಅಮೃತಧಾರಾಪ್ರವಾಹದಿಂದುಂಟಾದ ಅಮೃತಕಣಗಳಿಂದ ತನ್ನ ಜೀವನವನ್ನೆಲ್ಲಾ ಆನಂದಗೊಳಿಸುತ್ತಾ, ತನ್ನ ಸ್ವಭಾವವನ್ನು ಎಲ್ಲಕಡೆಯಲ್ಲಿಯೂ ಹರಡುವಂತೆ ಮಾಡಿದಳು. ॥೧೮॥

ಶಿವೆಯು ಅಂಗರಾಗಗಳನ್ನೂ ಮತ್ತು ಆಭರಣಗಳನ್ನೂ ಧರಿಸದೇ ಬಿಟ್ಟಿದ್ದರೂ, ನೈಜವಾದ ಶರೀರಕಾಂತಿಯಿಂದಲೇ ಅವುಗಳನ್ನು ಪ್ರದರ್ಶಿಸುತ್ತಿದ್ದಳು. ಅಪರ್ಣಾ ಎಂಬ ಹೆಸರುಳ್ಳವಳಾದರೂ ತಪಸ್ಸುಮಾಡುವಾಗ ಸಪರ್ಣಳಾಗಿಯೇ ಅಂದರೆ ಎಲೆಗಳನ್ನು ಧರಿಸಿಕೊಂಡೇ ಇರುತ್ತಿದ್ದಳು. ಅಂದರೆ ಎಲೆಗಳೇ ಇವಳಿಗೆ ಬಟ್ಟೆಗಳಾಗಿದ್ದವು. ॥೧೯॥

ಶುಭ್ರವಾದ ವಿಭೂತಿಯನ್ನು ಶರೀರದಲ್ಲಿ ಲೇಪನಮಾಡಿಕೊಂಡಿರುವುದರಿಂದಲೂ, ಸ್ವತಃ ಶುಭ್ರವಾದ ದೇಹಕಾಂತಿಯುಳ್ಳವಳಾದುದರಿಂದಲೂ, ರಾತ್ರಿಯಲ್ಲಿ ದೇವಿಯ ಶರೀರಕಾಂತಿಯು ಧಾವಳ್ಯದಿಂದ ಚಂದ್ರನನ್ನು ಜಯಿಸಿದ್ದಿತು. ಗ್ರೀಷ್ಮಋತುವಿನಲ್ಲಿ ಪ್ರಚಂಡ ಕಿರಣವುಳ್ಳ ಸೂರ್ಯನ ತಾಪಕ್ಕೊಳಗಾಗಿದ್ದಾಗ, ದೇವಿಯ ದೇಹಕಾಂತಿಯು ಶರತ್ಕಾಲದ ಮೇಘದಂತೆ ರಂಜಿಸುತ್ತಿದ್ದಿತು. ॥೨೦॥

ದೇವಿಯು ಅರಳಿದ ತಾವರೆಯಂತಿರುವ ಕೆಂಪಾದ ಮುಖದಲ್ಲಿ, ತ್ರಿಪುಂಡ್ರಗಳನ್ನು ಧರಿಸಿದ್ದಳು. ಅದರ ಮಧ್ಯದಲ್ಲಿ ತಿಲಕವನ್ನು ಧರಿಸಿ ಆ ತಿಲಕದ ಕಾಂತಿಯಿಂದ ಮೂರುಲೋಕವೂ ಹೊಳೆಯುವಂತೆ ಮಾಡುತ್ತಿದ್ದಳು. ॥೨೧॥

ಮಹಾರತ್ನಮಣಿವ್ರಾತಲಲತ್ಸರವಲಂಬಿನಾ ।
ಕಂಠೇನ ಧೃತರುದ್ರಾಕ್ಷಮಾಲಾಲಾಲಿತವಿಗ್ರಹಾ ॥೨೨॥

ಐಣೇಯಬ್ರುಸಿಕೋದ್ಭಾಸಿಭೂತಲಾಧರಸತ್ಪ್ರಭಾ ।
ಭಸ್ಮಾಸನಸ್ಥಾ ವರದಾ ಭರ್ತ್ಸಯಂತ್ಯೇನಸಾಂ ಗಣಂ ॥೨೩॥

ವಿದ್ಯುಲ್ಲತೇವ ಘನಗಾ ಕೈಲಾಸನಗಮೂರ್ಧಗಾ ।
ಸ್ವರ್ಧುನೀಂ ಪುಣ್ಯಸಲಿಲಾಂ ಪಾವಯಂತೀವ ಗಾಹನೈಃ ॥೨೪॥

ಸ್ವಸಂಹನನಸೌಂದರ್ಯರಸಪ್ಲಾವಿತದಿಕ್ತತಿಃ ।
ಮಾಲೂರವನಮಧ್ಯಸ್ಥಾಂ ತನ್ಮೂಲಸ್ಥಂಡಿಲೇ ರತಾ ॥೨೫॥

---

ಅಮೂಲ್ಯವಾದ ರತ್ನಹಾರಗಳಿಂದ ರಂಜಿಸುವ ದೇವಿಯ ಕಂಠವು ಅಂದು, ರುದ್ರಾಕ್ಷಿಯ ಮಾಲೆಗಳಿಂದ ಅಲಂಕರಿಸಲ್ಪಟ್ಟಿದ್ದಿತು. ಆದರಿಂದಲೂ ಶರೀರ ಶೋಭೆಯು ಅತಿಶಯವಾಗಿತ್ತೆಂದೇ ಹೇಳಬಹುದು. ||೨೨||

ಜಿಂಕೆಯ ಚರ್ಮವನ್ನು ಭೂಮಿಯಮೇಲೆ ಹಾಸಿ ಅದರಮೇಲೆ ಭಸ್ಮಾಸನವನ್ನು ಹಾಕಿಕೊಂಡು ತಪಸ್ಸುಮಾಡುತ್ತಿರುವ ದೇವಿಯನ್ನು ನೋಡಿದರೆ, ಪಾಪಗಳ ಸಮೂಹವನ್ನೆಲ್ಲಾ ತುಳಿದು, ಅದರಮೇಲೆ ಕುಳಿತು ತಪಸ್ಸು ಮಾಡುತ್ತಿರುವಳೋ ಎಂಬಂತೆ ಕಾಣುತ್ತಿದ್ದಳು. ||೨೩||

ವರ್ಷರ್ತುವಿನಲ್ಲಿ ಮೇಘಸಂಬಂಧವಾಗಿರುವ ಮಿಂಚಿನ ಬಳ್ಳಿಯಂತೆ, ಕೈಲಾಸಪರ್ವತದ ಶಿಖರದಲ್ಲಿ ಸಂಚರಿಸುತ್ತಾ, ತಪೋನಿಷ್ಠಳಾಗಿರುವ ಪಾರ್ವತೀ ದೇವಿಯು, ತನ್ನ ತಪೋನಿಯಮಕ್ಕೋಸ್ಕರ ದೇವಗಂಗಾ ನದಿಯಲ್ಲಿ ಸ್ನಾನ ಮಾಡುತ್ತಿದ್ದಳು. ಇದರಿಂದ ಮಹಾ ಪವಿತ್ರಳಾದ ದೇವಗಂಗೆಯೂ ಇವಳಿಂದ ಪವಿತ್ರತಮಳಾಗುವಳೋ ಎನ್ನುವಂತೆ ತೋರುತ್ತಿದ್ದಿತು. ||೨೪||

ಗಿರಿಜೆಯು ತನ್ನ ಶರೀರಸೌಂದರ್ಯಪ್ರವಾಹದಿಂದ ದಿಕ್ತಟಗಳೆಲ್ಲವನ್ನೂ ಕೊಚ್ಚಿಹೋಗುವಂತೆ ಮಾಡುತ್ತಿದ್ದಳು. ಹಾಗೆ ಬಿಲ್ವವೃಕ್ಷವನದ ಮಧ್ಯಪ್ರದೇಶದಲ್ಲಿ ಜಪಯೋಗ್ಯವಾದ ಪೀಠದಲ್ಲಿ ಕುಳಿತು ತಪೋನಿರತಳಾಗಿದ್ದಳು. ||೨೫||

ರುದ್ರಾವೃತ್ತಿರಸಾಪಾರತತ್ಪದಾರ್ಥವಿಶೋಧಿನೀ ।
ಪಂಚಾಸ್ಯಧ್ಯಾನನಿರ್ಧೂತರಭಸಾ ಮಹಸಾ ತತಾ ॥೧೬॥

ಪಂಚಾಕ್ಷರಾದರಾ ತಸ್ಥಾವೇಕಪಾದೇನ ಸಾ ಶಿವಾ ।
ಸ್ಥಾಣುವನ್ನಿಶ್ಚಲತರಾ ಸ್ಥಾಣುನ್ಯಸ್ತಹೃದಂತರಾ ॥೧೭॥

ಪ್ರಪಂಚಪಂಚೀಕರಣಸ್ಥಾಣುವನ್ನಗಜಾ ತದಾ ।
ಪನ್ನಗಾಶನವಾಹಾದ್ಯೈಃ ಪದ್ಮಜಾದ್ಯೈಶ್ಚ ವಿಸ್ಮಿತೈಃ ॥೧೮॥

ತಪೋಮೂರ್ತಿರಿಯಂ ದೇವೀ ಹ್ಯಮೂರ್ತಿರಪಿ ಶಂಕರೀ ।
ಅಲಕ್ಷ್ಯಲಕ್ಷ್ಯೀಕರಣೇ ತ್ರ್ಯಕ್ಷಮಕ್ಷವಿದೂರಗಂ ॥೧೯॥

---

ಅಂಬಿಕೆಯು ಯಾವಾಗಲೂ ರುದ್ರಾಧ್ಯಾಯವನ್ನೇ ಆವೃತ್ತಿಮಾಡುತ್ತಾ ಅದರ ಅರ್ಥವನ್ನೇ ಅನುಸಂಧಾನಮಾಡುತ್ತಾ ಅದರಿಂದುಂಟಾಗುವ ಅಪಾರವಾದ ಭಕ್ತಿರಸದಲ್ಲಿ ಮಗ್ನಳಾಗುತ್ತಿದ್ದಳು. ಮತ್ತು ಪಂಚಮುಖನಾದ ಮಹೇಶ್ವರನ ಧ್ಯಾನದಿಂದ ಪಾಪರಹಿತಳಾಗಿ ದಿವ್ಯವಾದ ತೇಜಸ್ಸಿನಿಂದ ಕೂಡಿ ತಪಶ್ಚರ್ಯೆಯಲ್ಲಿ ನಿರತಳಾಗಿದ್ದಳು. ॥೧೬॥

ಶಿವೆಯು ಒಂದೇಕಾಲಿನಲ್ಲಿ ಸ್ಥಾಣುವಂತೆ (ಮೋಟುಮರದಂತೆ) ನಿಶ್ಚಲಳಾಗಿ ನಿಂತುಕೊಂಡು ಶಿವಪಂಚಾಕ್ಷರಮಂತ್ರದಲ್ಲಿಯೇ ಆದರವುಳ್ಳವಳಾಗಿದ್ದು, ಸ್ಥಾಣುವೆನಿಸಿದ ಪರಶಿವನಲ್ಲಿ ತನ್ನ ಮನಸ್ಸನ್ನು ನೆಲೆಗೊಳಿಸಿ ತಪಸ್ಸುಮಾಡುತ್ತಿದ್ದಳು. ॥೧೭॥

ತಪೋನಿಯಮದಿಂದ ಕೂಡಿರುವ ಪರ್ವತರಾಜಪುತ್ರಿಯನ್ನು ನೋಡಿ ಗರುಡವಾಹನನಾದ ಮಹಾವಿಷ್ಣುವೂ, ಕಮಲಸಂಭವನಾದ ಬ್ರಹ್ಮನೂ, ಇತರ ದೇವತೆಗಳೂ ಪಂಚಭೂತಗಳ ಪಂಚೀಕರಣದಿಂದ ಜಗತ್ತನ್ನು ರಚಿಸುವ ಸ್ಥಾಣುವೆನಿಸಿದ ಪರಶಿವನಂತೆಯೇ ಇರುವಳೆಂದು ಆಶ್ಚರ್ಯದಿಂದ ನೋಡುತ್ತಿದ್ದರು. ॥೧೮॥

ಅಲ್ಲದೇ ತಪೋಮೂರ್ತಿಯಾದ ಈ ದೇವಿಯು ಸ್ವಯಂಮೂರ್ತಿರಹಿತಳಾದರೂ, ಇಂದ್ರಿಯಗಳಿಗೆ ಅಗೋಚರನಾದ ಮುಕ್ಕಣ್ಣನನ್ನು (ಪರಮೇಶ್ವರನನ್ನು)

ನಾಸಾಕೋಟಿಂ ಕಟಾಕ್ಷೇಣ ಲಕ್ಷಯಂತೀ ಪರಾ ಶಿವಾ ।
ಅಪಕ್ಷ್ಮನೇತ್ರಾವರಣಕೃತಾಂಬುಜವಿಲೋಚನಾ ॥೩೦॥

ನಿದ್ರಾದರಿದ್ರನಯನಾ ಶಿವಧ್ಯಾನಪರಾಯಣಾ ।
ತತ್ಪ್ರಕಾಶಮಹಾವರ್ಷ್ಮಭಾಭಿರ್ಭಾತ್ಯೇವ ಶೈಲರಾಟ್ ॥೩೧॥

ನಿನಾಯ ಯಾಮಿನೀನಾಥಧ್ಯಾನೇನೈವಾಥ ಯಾಮಿನೀಃ ।
ತಾಮೇವಂ ತಪಸಾಂ ರಾಶಿಮಾಶಾದೂರಹೃದಂತರಾ ॥೩೨॥

ಚಿತ್ಕಲಾನಂದಕಲಿಕಾ ತಪೋರಂಜಿತವೇಷಭೂಃ ।
ತಾಂ ಮೃಗೇಂದ್ರಾ ಅಪಿ ವನೇ ಸೇವಂತಿ ಪರಮಾದರೈಃ ॥೩೩॥

---

ಗೋಚರಮಾಡಿಕೊಳ್ಳಬೇಕೆಂಬ ಅಪೇಕ್ಷೆಯಿಂದ ತಪಸ್ಸನ್ನಾಚರಿಸಿದಳು. ಆಗ ತನ್ನ ಕಟಾಕ್ಷವನ್ನು ಮೂಗಿನ ತುದಿಭಾಗದಲ್ಲಿಟ್ಟು, ರೆಪ್ಪೆಹೊಡೆಯದೇ, ನಿಶ್ಚಲವಾದ ರೀತಿಯಲ್ಲಿ ತನ್ನ ಕಮಲಲೋಚನದಿಂದ ನೋಡುತ್ತಿರುವಂತೆ ತೋರುತ್ತಿದ್ದಳು. ||೨೯-೩೦||

ರಾತ್ರಿಯಲ್ಲಿ ಯಾವಾಗಲೂ ನಿದ್ರೆಯನ್ನೇ ಮಾಡದೇ ಸದಾ ಶಿವಧ್ಯಾನಪರಾಯಣಳಾಗಿ ತಪೋನಿಷ್ಠಳಾಗಿದ್ದ ಗಿರಿಜಾದೇವಿಯ ದೇಹಕಾಂತಿಯಿಂದ, ಆ ಪರ್ವತವೂ ಅದರ ಅನೇಕ ಕಲ್ಲುಬಂಡೆಗಳೂ ಸಹ ಕಾಂತಿಯುಕ್ತವಾಗಿ ಹೊಳೆಯುತ್ತಿದ್ದುವು. ||೩೧||

ಹೀಗೆ ತಪಸ್ಸನ್ನು ಮಾಡುತ್ತಿರುವಾಗಲೇ ಅನೇಕ ರಾತ್ರಿಗಳು ಕಳೆದು ಹೋದುವು. ನಿಷ್ಕಾಮಳಾಗಿ ಈ ರೀತಿ ತಪೋರಾಶಿಯಲ್ಲಿ ಮುಳುಗಿರುವ ಗೌರಿಯಲ್ಲಿ ಚಿತ್ಕಲಾ ಮತ್ತು ಆನಂದಮಯತೆ ಇವೂ ಸಹ ಅಡಗಿದವೋ ಎಂಬಂತೆ ತೋರುತ್ತಿದ್ದಿತು. ದೇವಿಯ ತಪೋವನದಲ್ಲಿ ವಾಸಮಾಡುವ ಸಿಂಹಗಳೂ ಬಹಳ ಸೌಮ್ಯಭಾವದಿಂದ ತಮ್ಮ ಕ್ರೌರ್ಯವನ್ನು ಬಿಟ್ಟು, ಜನಸಮೂಹವು ರಾಜನನ್ನು ಸುತ್ತಲೂ ನಿಂತು ಉಪಚರಿಸುವಂತೆ ಸೇವೆಮಾಡುತ್ತಿದ್ದವು. ||೩೨-೩೩||

ಪರಿತಃ ಪರಿಸೇವಂತಿ ರಾಜಾನಂ ಜನತಾ ಇವ ।
ಸ್ವಪಿಂಛೈಶ್ಛಾದಯಂತ್ಯೇನಾಂ ಮಯೂರಾಸ್ಸೋಮಶೇಖರಾಂ ॥೩೪॥

ವೀಜಯಂತ್ಯೇವ ಹಂಸಾಸ್ತಾಂ ಸ್ವಕಪಕ್ಷೋತ್ಥವಾಯುಭಿಃ ।
ಚಮರಾಶ್ಚಮರೀಪುಚ್ಛೈರ್ದೋರ್ಧೂಯಂತಿ ಸದಾ ಶಿವಾಂ ॥೩೫॥

ಮೃಗಾಃ ಪಶ್ಯಂತ್ಯನಿಮಿಷೈರ್ಲೋಚನೈರ್ಹರಿಣೇಕ್ಷಣಾಂ ।
ವಾಯುರಾಯಾಸಿತಾಂ ದೇವೀಂ ಮತ್ವಾ ಚ ಪರಿಸೇವತೇ ॥೩೬॥

ಕದಂಬಬಂಧುರಸುಮಗಂಧಬಂಧೈಕಶೀತಲಃ ।
ಕೈಲಾಸಮೌಲಿಸಂಚಾರಮೇಘವೃಂದಾ ಇವೋತ್ತಮಾಃ ॥೩೭॥

ವಸಂತಸೂರ್ಯಕಿರಣಸಂತಪ್ತಾಂ ಜಗದಂಬಿಕಾಂ ।
ಸಿಂಧುರಾಸ್ಸುಂದರತರಾಸ್ಸ್ವಶುಂಡಾಪುಷ್ಕರೋತ್ಥಿತೈಃ ॥೩೮॥

---

ನವಿಲುಗಳು ತಮ್ಮ ಗರಿಗಳಿಂದ ಚಂದ್ರಶೇಖರನರ್ಧಾಂಗಿಯನ್ನು ಅಲಂಕರಿಸುವಂತೆ, ಗರಿಗಳನ್ನು ಅಗಲಿಸಿ ದೇವಿಯ ಸಮೀಪದಲ್ಲಿ ನಿಂತಿರುವುವು. ಚಮರೀ ಮೃಗಗಳಾದರೋ ತಮ್ಮ ಬಾಲಗಳೆಂಬ ಚಾಮರಗಳಿಂದ ಯಾವಾಗಲೂ ಅಂಬಿಕೆಯನ್ನು ಸೇವಿಸುತ್ತಿರುವುವು. ॥೩೪-೩೫॥

ಜಿಂಕೆಗಳು ತಮ್ಮಂತೆಯೇ ಚಂಚಲವಾದ ಕಣ್ಣುಗಳುಳ್ಳ ಪರ್ವತರಾಜಕುಮಾರಿಯನ್ನು ಎವೆಯಿಕ್ಕದೆ ನೋಡುತ್ತಿರುವುವು. ವಾಯುವೂ ಸಹ, ತಪಸ್ಸು ಮಾಡುವುದರಿಂದ ದೇವಿಯು ಆಯಾಸಗೊಂಡಿರುವಳೆಂದು ತಿಳಿದು ತಂಪಾದ ಗಾಳಿಯಿಂದ ದೇವಿಯ ಮನಸ್ಸಿಗೆ ಸಂತೋಷವುಂಟಾಗುವಂತೆ ಸೇವೆಮಾಡುತ್ತಿರುವುದು. ॥೩೬॥

ವಾಯುವು ನೀಪವೃಕ್ಷದ ಮನೋಹರವಾದ ಹೂವಿನ ಸುವಾಸನೆಯಿಂದ ಕೂಡಿ ತಂಪಾಗಿ, ವಸಂತಋತುವಿನಲ್ಲಿ ಸೂರ್ಯನ ತೀವ್ರವಾದ ಕಿರಣಜ್ವಾಲೆಯಿಂದ ಸಂತಾಪಗೊಂಡಿರುವ ಜಗದಂಬಿಕೆಯನ್ನು ಕೈಲಾಸಪರ್ವತದ ಶಿಖರಪ್ರದೇಶದಲ್ಲಿ ಸಂಚರಿಸುವ ಶ್ರೇಷ್ಠವಾದ ಮೇಘಪಂಕ್ತಿಗಳಂತೆ ಸೇವಿಸುತ್ತಿರುವುದು. ॥೩೭॥

ಸುಂದರವಾದ ಆನೆಗಳು ತಮ್ಮ ಸೊಂಡಲಿನ ಅಗ್ರಭಾಗದಿಂದ ನೀರನ್ನು ತೆಗೆದುಕೊಂಡು, ಬಿಸಿಲಿನ ತಾಪದಿಂದ ಬಳಲಿರುವ ಮಹೇಶ್ವರಿಯನ್ನು ಜಲಕಣಗಳಿಂದ ಚುಮುಕಿಸಿ ದೇವಿಯನ್ನು ಉಪಚರಿಸುವುವು. ॥೩೮॥

ಜಲಾಸಾರ್ದ್ರೈಃ ಸೇಚಯಂತಿ ತಪ್ತಗಾತ್ರಾಂ ಮಹೇಶ್ವರೀಂ ।
ಸ್ವಚ್ಛಾಚ್ಛಧಾಮಸುಭಗಸ್ತಾರಾನಾಥೋಽಪಿ ಸ್ವೈಃ ಕರೈಃ ॥೩೯॥

ಸಾಯಯತ್ಯನಿಶಂ ದೇವೀಗಾತ್ರಂ ಪೂಯೇತ ಮಾಮಿತಿ ।
ತಿಲಕಾಸ್ತಿಲಕಾಯಂತೇ ತದಂಬಾಯಾಸ್ತಪೋವನಂ ॥೪೦॥

ರಕ್ತಾಶೋಕಭರಾ ದೇವೀ ಶೋಕವೃಂದಂ ಹರಂತಿ ತೇ ।
ಪ್ರಫುಲ್ಲಶೇಖರಾಸಾರಪುನ್ನಾಗಾ ನಗಮೂರ್ಧನಿ ॥೪೧॥

ಪುನ್ನಾಗಾ ಇವ ಶೋಭಂತೇ ಚಂದನಾನಂದಿತಾನನಾಃ ।
ಸರ್ಜಾ ಜರ್ಝರಪತ್ರೈಶ್ಚಾಪ್ಯರ್ಜುನಾಸ್ತರ್ಜಯಂತ್ಯಪಿ ॥೪೨॥

---

ಸ್ವಚ್ಛಕಾಂತಿಯಿಂದ ಸುಂದರನಾಗಿ ತಾರಾನಾಥನೆನಿಸಿದ ಚಂದ್ರನೂ, ತನ್ನ ತಂಪಾದ ಕಿರಣಗಳಿಂದ, ತಪಸ್ಸಿಗಾಗಿ ಬಳಲಿರುವ ದೇವಿಯ ಶರೀರವನ್ನು ಸಂತಾಪ ರಹಿತವನ್ನಾಗಿ ಮಾಡುತ್ತಿದ್ದನು. ಮತ್ತು ಈ ನನ್ನ ಸೇವೆಯಿಂದ ಸಂತೋಷ ಗೊಂಡು ಜಗದಂಬಿಕೆಯು ನನ್ನನ್ನು ಪವಿತ್ರನನ್ನಾಗಿ ಮಾಡಲಿ, ಎಂದು ಕಿರಣವನ್ನು ಅವಳ ಮೇಲೆ ಪ್ರಸಾರಮಾಡುತ್ತಿದ್ದನು. ॥೩೯॥

ಜಗದಂಬಿಕೆಯು ತಪಸ್ಸುಮಾಡುತ್ತಿರುವ ತಪೋವನದಲ್ಲಿ ಬೆಳೆದಿರುವ ತಿಲಕವೃಕ್ಷಗಳು, ದೇವಿಗೆ ತಿಲಕಪ್ರಾಯವಾಗಿರುವುವೋ ಎಂಬಂತೆ ತೋರುತ್ತಿದ್ದುವು. ॥೪೦॥

ಕೆಂಪು ಅಶೋಕವೃಕ್ಷಗಳು ತಮ್ಮ ಮನೋಹರವಾದ ಚಿಗುರುಗಳಿಂದ ದೇವಿಯ ಶೋಕಸಮೂಹವನ್ನೆಲ್ಲಾ ಹೋಗಲಾಡಿಸಲು ನೆಳಲನ್ನುಂಟುಮಾಡು ತ್ತಿದ್ದುವು. ಕೈಲಾಸಪರ್ವತದ ಶಿಖರ ಪ್ರದೇಶದಲ್ಲಿ ಚೆನ್ನಾಗಿ ಬೆಳೆದು, ವಿಕಸಿತವಾದ ಪುಷ್ಪಗಳಿಂದ ಕೂಡಿರುವ ಪುನ್ನಾಗ ವೃಕ್ಷಗಳು ಪುನ್ನಾಗಗಳಂತೆ (ಮದ್ದಾನೆಗಳಂತೆ) ಚಂದನ ವೃಕ್ಷಗಳ ಸಹವಾಸದಿಂದ ಸುಂದರವಾಗಿ ಕಾಣುತ್ತಿದ್ದವು. ॥೪೧॥

ಸರ್ಜವೃಕ್ಷಗಳೂ, ಅರ್ಜುನವೃಕ್ಷಗಳೂ ಶಬ್ದಮಾಡುವ ತಮ್ಮ ಎಲೆಗಳಿಂದ ದೇವಿಯ ತಪಸ್ಸಿಗೆ ವಿಘ್ನವನ್ನುಂಟುಮಾಡುತ್ತಿರುವ ಪ್ರಾಣಿಗಳನ್ನು ಹೆದರಿಸುತ್ತಾ ಬಿಸಿಲನ್ನು ಎಲೆಗಳಿಂದ ನಿವಾರಣೆಮಾಡುತ್ತಾ, ದೇವಿಗೆ ಬಿಸಿಲಿನ ತಾಪವುಂಟಾಗ ದಂತೆ ನೋಡಿಕೊಳ್ಳುತ್ತಿದ್ದುವು. ॥೪೨॥

ದೇವ್ಯಾಸ್ತಪೋವಿಘ್ನಕರಾನ್ಸ್ವಕರೈರ್ವಾರಿತಾತಪಾಃ ।
ತಾಲಾಸ್ಸ್ವಪತ್ರವಾಯೂತ್ಥಚಲನೈರ್ಘರ್ಘರಾರವಾಃ ॥೪೩॥

ಕುಂದವಲ್ಲ್ಯೋ ಮುದಂ ದೇವ್ಯೈ ದಧುರ್ಮಂದಾರಗಂಧಿತಾಃ ।
ವಾತಯುಕ್ತೈರ್ಮರಂದೈಶ್ಚ ಪೂಜಯಂತ್ಯೇವ ತಾಂ ಶಿವಾಂ ॥೪೪॥

ಸಾಲಾಃ ಪ್ರಾಲೇಯಭೂಕನ್ಯಾಮಾಲೋಕಂತ ಇವ ಸ್ಥಿತಾಃ ।
ತಮಾಲಸ್ತಬಕೈರಚ್ಛಪುಷ್ಪಭಾರನತಾನನೈಃ ॥೪೫॥

ನಮಂತ ಇವ ತಾಂ ದೇವೀಂ ಪರಿತಸ್ಥುರ್ಮುದಾ ತದಾ ।
ಕದಂಬಾ ಜಗದಂಬಾಂ ತಾಂ ಪುಷ್ಪಲೋಲಂಬಭಾಸುರಾಃ ॥೪೬॥

ಲಂಬೋದರಪ್ರಸೂಂ ದೇವೀಮಾಲಿಂಗಂತ ಇವ ಸ್ಥಿತಾಃ ।
ದಾಡಿಮೀಕಾಂತಿಸರ್ವಸ್ವಂ ಮಯಿ ದತ್ವೇತಿ ಹರ್ಷಿತಾಃ ॥೪೭॥

---

ತಾಲೆಯ ಮರಗಳು ತಮ್ಮ ಎಲೆಗಳ ಬೀಸುವಿಕೆಯಿಂದುಂಟಾದ ವಾಯುವಿನಿಂದ ಘರ್ಘರಶಬ್ದಮಾಡುತ್ತಾ ಮಹೇಶ್ವರಿಗೆ ಗಾಳಿಯನ್ನು ಬೀಸುತ್ತಿದ್ದುವು.॥೪೩॥

ಕುಂದಪುಷ್ಪದ ಬಳ್ಳಿಗಳು ಮಂದಾರ ಪುಷ್ಪದ ಸುವಾಸನೆಯಿಂದ ಕೂಡಿ ಗಾಳಿಯಿಂದ ಯುಕ್ತವಾದ ಮಕರಂದಗಳಿಂದ, ಶಿವನ ಅರ್ಧಾಂಗಿಯಾದ ಪರಮೇಶ್ವರಿಯನ್ನು ಪೂಜಿಸುತ್ತಿದ್ದುವು. ॥೪೪॥

ಸಾಲವೃಕ್ಷಗಳು ಹಿಮವಂತನ ಕುಮಾರಿಯಾದ ದೇವಿಯನ್ನು ನೋಡುತ್ತಿರುವುವೋ ಎಂಬಂತೆ ಎತ್ತರವಾಗಿ ಬೆಳೆದು ನಿಂತಿದ್ದುವು. ಹೊಂಗೆಯ ಮರಗಳೂ ಹೂಗೊಂಚಲುಗಳ ಭಾರದಿಂದ ತಲೆಬಗ್ಗಿ ನಮಸ್ಕಾರ ಮಾಡುತ್ತಿರುವುವೋ ಎಂಬಂತೆ ದೇವಿಯ ಸುತ್ತಲೂ ಗುಂಪಾಗಿ ಕಾಣುತ್ತಿದ್ದುವು. ॥೪೫॥

ಕದಂಬ ವೃಕ್ಷಗಳು ಹೂಗೊಂಚಲುಗಳಿಂದ ಪ್ರಕಾಶಿಸುತ್ತಾ, ಲಂಬೋದರ ಸಂಜ್ಞಕನಾದ ಗಣಪತಿಯ ತಾಯಿಯೂ, ಜಗದಂಬೆಯೂ ಆದ ಗಿರಿಜೆಯನ್ನು ಭಕ್ತಿಯಿಂದ ಆಲಿಂಗಿಸುತ್ತಿವೆಯೋ ಎಂಬಂತೆ ತಮ್ಮ ಪುಷ್ಪಸ್ತಬಕಗಳೊಡನೆ ಬಗ್ಗಿ ಸೇವೆಸಲ್ಲಿಸುತ್ತಿದ್ದುವು. ॥೪೬॥

ಪದ್ಮಪತ್ರಾಕ್ಷಿಯಾದ ಈ ದೇವಿಯು ತನಗೆ ದಾಳಿಂಬೆಹೂವಿನ ಕಾಂತಿಯನ್ನು ದಯಪಾಲಿಸಿರುವಳೆಂಬ ಕೃತಜ್ಞತೆಯಿಂದ, ಅರಗಿನ ರಸವು ದೇವಿಯ ಪಾದಮೂಲ

ಇಯಂ ಪದ್ಮಪಲಾಶಾಕ್ಷೀ ಇತಿ ತೇ ನ್ಯಾಸತತ್ಪರಾಃ ।
ಲಕ್ತಕಾಃ ಪ್ರಪದೇ ಕಾಂತಿರ್ದೇವ್ಯಾ ನ್ಯಸ್ತಾ ಹಿ ನೋ ಇತಿ ॥೪೮॥

ಧೃತ್ವಾ ತಸ್ಯೈ ಪುನರ್ದಾತುಂ ಪ್ರವೃತ್ತಾ ಇವ ತೇ ಸ್ಥಿತಾಃ ।
ಬಿಂಬವಲ್ಯಸ್ತಯಾ ದೇವ್ಯಾ ದತ್ತಾಧರಸುರಾಂಗಕಾಃ ॥೪೯॥

ಸೇವಂತಿ ಚ ಮಹಾದೇವೀಂ ಪರಿತಃ ಪ್ರಸೃತಾಸ್ತದಾ ।
ಪಾಟಲಾಸ್ಸ್ವಸುಮಾಪಾರಗಂಧಮೋದುರಮೂರ್ತಯಃ ॥೫೦॥

ತನ್ನಖೋತ್ಥಾಮಲಾರಕ್ತಕಾಂತಿಗರ್ಭಾ ಇವ ಸ್ಥಿತಾಃ ।
ಮಾಲೂರಾಸ್ಸ್ವಸುಮೋದ್ಭೂತಜಿತೈಣಮದಸೌರಭಾಃ ॥೫೧॥

---

ದಲ್ಲಿ ನಿಂತು ಸೇವೆಮಾಡುತ್ತಿದೆಯೋ ಎಂಬಂತೆ ದೇವಿಯ ಚರಣಾಗ್ರದಲ್ಲಿ ಲಾಕ್ಷಾರಸವು ಹೊಳೆಯುತ್ತಿದ್ದಿತು. ||೪೭-೪೮||

ಮತ್ತು ಅರಗಿನ ಮರಗಳು ತಮ್ಮಲ್ಲಿ ನ್ಯಾಸವಾಗಿಟ್ಟಿದ್ದ ಕಾಂತಿಯನ್ನು ತಾವು ಧರಿಸಿದ್ದು ಈಗ ಮತ್ತೆ ಗಿರಿಜಾದೇವಿಗೆ ಕೊಡಲುದ್ಯುಕ್ತವಾಗಿವೆಯೋ ಎಂಬಂತೆ ಸಮೀಪದಲ್ಲಿ ರಂಜಿಸುತ್ತಿದ್ದುವು. ತೊಂಡೇಹಣ್ಣಿನ ಬಳ್ಳಿಗಳು ತಮ್ಮ ಫಲಗಳಿಗೆ ದೇವಿಯು ತನ್ನ ಅಧರಾಮೃತದ ಕಾಂತಿಯನ್ನು ಕರುಣಿಸಿ, ಲೋಕದಲ್ಲಿ ಸುಂದರಾಂಗಿಯರ ಅಧರಗಳಿಗೆ ದೃಷ್ಟಾಂತಹೊಂದುವಂತೆ ಮಾಡಿದಳೆಂಬ ಸಂತೋಷದಿಂದ ಮಹಾದೇವಿಯನ್ನು ಸುತ್ತಲೂ ಹರಡಿಕೊಂಡು ಸೇವಿಸುತ್ತಿದ್ದವು. ||೪೯||

ಪಾದರೀ ಹೂವುಗಳು ತಮ್ಮ ಅಪಾರವಾದ ಸೌಗಂಧ್ಯದಿಂದ ಎಲ್ಲಾ ಕಡೆಯಲ್ಲಿಯೂ ವ್ಯಾಪ್ತವಾಗಿ, ಗಿರಿಜಾದೇವಿಯ ಉಗುರುಗಳಿಂದ ಪ್ರಸರಿಸಿರುವ ಪರಿಶುದ್ಧವಾದ ಕೆಂಪುಬಣ್ಣದ ಕಾಂತಿಯಿಂದ ಕೂಡಿರುವುವೋ ಎಂಬಂತೆ ತೋರುತ್ತಿದ್ದವು. ||೫೦||

ಬಿಲ್ವವೃಕ್ಷಗಳು ತಮ್ಮ ಹೂವಿನ ವಾಸನೆಯಿಂದ ಜಿಂಕೆಗಳ ಮದದ ಸೌಗಂಧ್ಯವನ್ನು ಜಯಿಸಿ, ತಮ್ಮ ಬಿಲ್ವಪತ್ರೆಗಳಿಂದ ಉಮಾದೇವಿಯನ್ನು ಮರೆಮಾಡುತ್ತಾ ಪತ್ರೆಗಳಿಂದ ಪೂಜೆಮಾಡುತ್ತಿರುವಂತೆ ತೋರುತ್ತಿದ್ದುವು. ||೫೧||

ಸ್ವಚ್ಛದೈಶ್ಛಾದಯಂತ್ಯೇವ ಪತ್ರೈಃ ಸ್ವೈಶ್ಛಾದಯಂತ್ಯುಮಾಂ ।
ನೀಪಾ ಮಾಪತಿವದ್ದೇವೀಂ ಸೇವಂತಿ ಪರಿತೋ ವೃತಾಃ ॥೫೨॥

ಲಿಕುಚಾಃ ಕುಚಸೌಂದರ್ಯೇ ತಸ್ಯಾ ನೋ ವಿಜಿತಾ ಇತಿ ।
ಆನಮ್ರಫಲಶಾಖಾಗ್ರೈರ್ವಿನಮ್ರಾ ಇವ ತೇ ಸ್ಥಿತಾಃ ॥೫೩॥

ಆಮ್ರಾಸ್ಸ್ವಸೌರಭದಲದ್ದಿಶಾಂ ಸ್ತ್ರೋತ್ರೈರ್ಮಹೇಶ್ವರೀಂ ।
ದೇವೀಪಾಣಿತಲಾಕಾರಪಲ್ಲವಾಲಂಬಿಶೇಖರಾಃ ॥೫೪॥

ದೇವ್ಯಾಃ ಪಿಶಂಗಿತಜಟಾಭಾರಶೇಖರವತ್ಸ್ಥಿತಾಃ ।
ಚಂಪಕಾಶ್ಚಂಪಕೋದ್ದಾಮಕಲಿಕಾಕಾರನಾಸಿಕಾಂ ॥೫೫॥

---

ನೀಪವೃಕ್ಷಗಳು ಲಕ್ಷ್ಮೀಪತಿಯಾದ ನಾರಾಯಣನನ್ನು ಸೇವೆಮಾಡುವಂತೆ ದೇವಿಯ ಸುತ್ತಲೂ ವ್ಯಾಪಿಸಿದ್ದವು. ॥೫೨॥

ಲಿಕುಚಫಲಗಳು (ಹೆರಳೆಹಣ್ಣು) ಮಹಾದೇವಿಯ ಕುಚಸೌಂದರ್ಯದಿಂದ ನಾವು ಸೋಲಿಸಲ್ಪಟ್ಟೆವು ಎಂದು ನಾಚಿ, ಎಲೆ, ಕೊಂಬೆ ಮೊದಲಾದವುಗಳೊಡನೆ ವಿನಯದಿಂದ ಬಗ್ಗಿ ನಿಂತಿವೆಯೋ ಎನ್ನುವಂತೆ ಫಲಭಾರದಿಂದ ನಮ್ರವಾಗಿ ನಿಂತಿದ್ದವು. ॥೫೩॥

ಮಾವಿನಮರಗಳು ತಮ್ಮ ಪುಷ್ಪಸೌರಭದಿಂದ ಎಲ್ಲಾ ದಿಕ್ಕುಗಳನ್ನೂ ಭೇದಿಸುತ್ತಿರುವುವೋ ಎಂಬಂತೆಯೂ, ಪಾರ್ವತೀದೇವಿಯ ಅಂಗೈಯಿನ ಆಕಾರವಾದ (ಕೆಂಪಾದ) ಪಲ್ಲವಗಳನ್ನು ತಲೆಗಳಲ್ಲಿ ಮುಡಿದಿರುವುವೋ ಎಂಬಂತೆಯೂ ಕೆಂಪು ಚಿಗುರುಗಳಿಂದ ರಾರಾಜಿಸುತ್ತಿದ್ದವು. ॥೫೪॥

ಹೊಂಬಣ್ಣವಾದ ಜಟಾಸಮೂಹದಂತೆ ಪುಷ್ಪಗಳನ್ನೊಳಗೊಂಡ ಸಂಪಿಗೆಯ ವೃಕ್ಷಗಳು ತಮ್ಮ ಹೂವಿನ ಎಸಳಿನಂತೆ ಮುದ್ದಾದ ಮೂಗಿನಿಂದ ಕೂಡಿರುವ ಮಹಾದೇವಿಯನ್ನು, ತೊಟ್ಟುಕಳಚಿ ಬೀಳುತ್ತಿರುವ ತಮ್ಮ ಹೂಗಳಿಂದ ಪೂಜೆ ಮಾಡುತ್ತಿರುವುವೋ ಎಂಬಂತೆ, ದೇವಿಯ ತಪೋವನದಲ್ಲಿರುವ ಸಂಪಿಗೆ ಮರಗಳ ಹೂವುಗಳು ಗಾಳಿಯಿಂದ ಕೆಳಗೆ ಉದುರುತ್ತಿದ್ದುವು. ॥೫೫॥

ದೇವೀಂ ವೃಂತವಿಲೂನೈಶ್ಚ ಪೂಜಯಂತಿ ಸುಮೈಃ ಸ್ವಕೈಃ ।
ವಕುಲಾ ಭೂಧರೋತ್ತುಂಗಕುಲಶೇಖರಕನ್ಯಕಾಂ ॥೫೬॥

ಪವನೈರ್ವಿಗಲತ್ಪುಷ್ಪೈರರ್ಚಾಮರ್ಚಂತಿ ಶಾಖಿನಾ ।
ಶಿರೀಷಾಸ್ಸ್ವಸುಮಾಧಿಕ್ಯದಿವ್ಯಕೋಮಲವಿಗ್ರಹಾಂ ॥೫೭॥

ಸ್ವಪುಷ್ಪೈಶ್ಛಾದಯಂತ್ಯೇನಾಂ ಕರ್ಣಿಕಾರಾಶ್ಚ ಕೇಸರೈಃ।
ಪೂಜಯಂತಿ ಮಹಾದೇವೀಂ ತಥಾ ಕುರಬಕಾ ಅಪಿ ॥೫೮॥

ತಿನಿಶಾ ನಕ್ತಮಾಲಾಶ್ಚ ಸ್ವಪುಷ್ಪೈರ್ಮಾಲಿಕಾಂ ದದುಃ ।
ಜಂಬೂನಿಂಬಾಃ ಕೇತಕಾಶ್ಚ ಪುಷ್ಪಗುಚ್ಛೈಃ ಶಿವಾಂಗಕಂ ॥೫೯॥

ಉತ್ಫುಲ್ಲಕುಸುಮಾಸಾರಪಟವಾಸಪ್ರಭಾಂ ತಥಾ ।
ಮುಕ್ತಾಫಲಸಮಾಕಾರೈರ್ಮಧೂಕಾ ವಿಗಲತ್ಸುಮೈಃ ॥೬೦॥

---

ವಕುಲವೃಕ್ಷಗಳು ಭೂಧರಶ್ರೇಷ್ಠನಾದ ಹಿಮವಂತನ ಕನ್ಯೆಯಾದ ಗಿರಿಜೆಯನ್ನು ಹೂವುಗಳಿಂದ ಪೂಜೆಮಾಡುತ್ತಿರುವುವೋ ಎಂಬಂತೆ ಗಾಳಿಯಿಂದ ತಮ್ಮ ಪುಷ್ಪಗಳನ್ನು ನೆಲಕ್ಕೆ ಉದುರಿಸುತ್ತಿದ್ದುವು. ||೫೬||

(ಶಿರೀಷ) ಬಾಗೆಯ ಮರಗಳು ತಮ್ಮ ಹೂವುಗಳಿಗಿಂತಲೂ ಮೃದುವಾದ ಶರೀರವುಳ್ಳ ಪಾರ್ವತೀದೇವಿಯನ್ನು ಹೂವುಗಳಿಂದ ಮುಚ್ಚಿದ್ದುವು. ಕರ್ಣಿಕಾರ ವೃಕ್ಷಗಳೂ, ಗೋರಂಟೀ ಹೂವುಗಳೂ ತಮ್ಮ ಕೇಸರಗಳಿಂದ ದೇವಿಯನ್ನು ಪೂಜಿಸುತ್ತಿರುವಂತೆ ಕೇಸರಗಳನ್ನು ಉದುರಿಸುತ್ತಿದ್ದುವು. ||೫೭-೫೮||

ಹುಲಿಗೆ ಮತ್ತು ಹೊಂಗೆ ಎಂಬ ವೃಕ್ಷಗಳು ಮಾಲಾಕಾರಗಳಾದ ಪುಷ್ಪಗಳನ್ನು ದೇವಿಗೆ ಸಮರ್ಪಣೆ ಮಾಡುತ್ತಿದ್ದುವು. ನೇರಳೇ, ಬೇವು, ಕೇದಗೀ ಈ ಮರಗಳು ಹೂಗೊಂಚಲುಗಳಿಂದ ಪರಶಿವೆಯ ಅವಯವಗಳನ್ನು ಪೂಜಿಸುತ್ತಿದ್ದವು. ||೫೯||

ಮುತ್ತಿನ ಮಣಿಗಳಿಗೆ ಸಮಾನವಾದ ಆಕಾರವುಳ್ಳ ಹಿಪ್ಪೆಯ ಹೂವುಗಳಿಂದಲೂ, ಇತರ ಅನೇಕ ಪುಷ್ಪಪರಾಗಗಳಿಂದಲೂ ದೇವಿಯ ಶರೀರವು ಮಕರಂದದ ಪಟದಿಂದ ಆಚ್ಛಾದಿತವಾಗಿದ್ದಂತೆ ಇದ್ದಿತು. ಅನೇಕ ಪುಷ್ಪ ಮತ್ತು ಫಲಭರಿತಗ

ವಿಕಿರಂತಿ ಮಹಾದೇವ್ಯಾ ಮೂರ್ಧ್ನಿ ಧನ್ಯಾಸ್ಸ್ವಕೈಃ ಕರೈಃ ।
ಫಲಜಾಲಪ್ರಪತನಪೂಜಾಮಿಷಭರೈಸ್ತದಾ ॥೬೧॥

ಕುರ್ವಂತಿ ತದ್ವನೋದ್ದೇಶೇ ತಿರ್ಯಂಚೋಽಪಿ ಸಹಾಯತಾಂ ।
ಏವಂ ಪರಿಚಯಾತ್ತಸ್ಯಾಃ ಕೈಲಾಸನಗಮೂರ್ಧಗಾಃ ॥೬೨॥

ಮೃಗಾಂಡಜಾಸ್ಸ್ಥಾವರಾಶ್ಚ ಸೇವಂತಿ ಪರಿತಃ ಶಿವಾಂ ।
ನಗಾಗ್ರಮೌಲಿಸಂಘೇಷು ತೇ ವನಸ್ಪತಯೋಽಪಿ ಚ ॥೬೩॥

ಸ್ವಜನುರ್ಧನ್ಯತಾಪ್ರಾಪ್ತ್ಯೈ ದೇವ್ಯಾಸ್ಸೇವಾಪರಾಯಣಾಃ ।
ಕೋಕಿಲಾಕಾಕಲರವೈಶ್ಶ್ರವಣೋದ್ದಾಮಸುಂದರೈಃ ॥೬೪॥

ಕಲಹಂಸಾಲಯಃ ಕೇಕಾರವೈರುತ್ತಮಬರ್ಹಿಣಃ ।
ಸಾರಸಾಃ ಕ್ರೌಂಚನಿವಹಾಃ ರುವಂತಿ ಮಧುರಧ್ವನಿಂ ॥೬೫॥

---

ಳಾದ ವೃಕ್ಷಗಳು ಹೀಗೆ ದೇವಿಯನ್ನು ಸೇವೆಮಾಡುವ ನೆಪದಿಂದ ಹೂವುಗಳನ್ನೂ ಹಣ್ಣುಗಳನ್ನು ದೇವಿಯ ತಲೆಯಮೇಲೆಯೂ ಮುಂಭಾಗದಲ್ಲಿಯೂ ಸಹ ಬೀಳಿಸುತ್ತಿದ್ದವು. ||೬೦-೬೧||

ದೇವಿಯ ಪರಿಚಯದಿಂದ ಆ ತಪೋವನದಲ್ಲಿರುವ ಮೂಕಪ್ರಾಣಿಗಳೂ ಕೈಲಾಸಪರ್ವತದ ಶಿಖರದಲ್ಲಿರುವ ಇತರ ಎಲ್ಲಾ ವಸ್ತುಗಳೂ ಸಹ ದೇವಿಗೆ ಸಹಾಯಮಾಡುತ್ತಿದ್ದವು. ||೬೨||

ಹೀಗೆ ಕೈಲಾಸಪರ್ವತದ ಮೃಗಗಳೂ, ಪಕ್ಷಿಗಳೂ, ಸ್ಥಾವರವಾದ ವೃಕ್ಷವೇ ಮೊದಲಾದವುಗಳೂ, ಪರ್ವತಶಿಖರದಲ್ಲಿರುವ ಪ್ರಸಿದ್ಧವಾದ ವನಸ್ಪತಿಗಳೂ, ಪರಮೇಶ್ವರಿಯನ್ನು ಸದಾ ಉಪಚರಿಸುತ್ತಿದ್ದುವು. ||೬೩||

ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಳ್ಳುವುದಕ್ಕೋಸ್ಕರ ದೇವಿಯ ಸೇವೆಯಲ್ಲಿ ತೊಡಗಿರುವ, ಕೋಗಿಲೆ, ಹಂಸ, ಸಾರಸಪಕ್ಷಿಗಳು, ನವಿಲುಗಳು ಮತ್ತು ಕ್ರೌಂಚಪಕ್ಷಿಗಳೂ ಸಹ ತಮ್ಮ ತಮ್ಮ ಅವ್ಯಕ್ತಮಧುರವಾದ ಧ್ವನಿಯಿಂದ ದೇವಿಯ ಮನಸ್ಸಿಗೆ ಸಂತೋಷವನ್ನುಂಟುಮಾಡುವಂತೆ ಕೂಗುತ್ತಿದ್ದವು. ||೬೪-೬೫||

ಭೃಂಗಾಸ್ತುಂಗರವಾಃ ಪುಷ್ಪಚ್ಛದಭ್ರಮಣಸುಂದರಾಃ ।
ದೇವೀಂ ಸ್ತೋಷ್ಯಂತಿ ಪರಿತಸ್ಸ್ವವಾಗ್ಭಿಸ್ತೇ ವಿನೀತವತ್ ॥೬೬॥

॥ ಸ್ಕಂದ ಉವಾಚ ॥

ಇತ್ಥಂ ಶೈಲವರೇ ಪುರಾ ಗಿರಿಜಯಾ ತಪ್ತಂ ತಪಃ ಪಾವನಂ
ತ್ರ್ಯಕ್ಷಾಕ್ಷೋಭ್ಯಪದಾಂಬುಜಪ್ರವಣಯಾ ಧ್ಯಾನೈಕಧಾರಾರಸೈಃ ।
ವರ್ಷಾಣಾಮಯುತಂ ಶಿರೀಷಕುಸುಮಾಕಾರಾಂಗಸೌಂದರ್ಯಮು
ಪ್ಯುಜ್ಝಿತ್ವೈವ ಶಿವೈಕನಿಷ್ಠಹೃದಯಾ ಕಿಂಚಿದ್ಧೃದಾ ಸಂದಧತ್॥೬೭॥

ಸರ್ವೇಷಾಂ ತಪಸಾಂ ಫಲೋನ್ಮುಖಮಹಾಸಾಮ್ರಾಜ್ಯದಾನಕ್ಷಮಾ
ದಾಕ್ಷಾಯಣ್ಯಪಿ ಧ್ಯಾನಧೂತವಿಷಯಾ ದೇವಂ ಸ್ವಚಿತ್ತೇ ದಧತ್ ।

---

ದುಂಬಿಗಳು ಎತ್ತರ ಧ್ವನಿಯಲ್ಲಿ ಧ್ವನಿಮಾಡುತ್ತಾ ಪುಷ್ಪಗಳ ಮಕರಂದವನ್ನು ಪಾನಮಾಡುವುದಕ್ಕೋಸ್ಕರ ಎಲ್ಲಾ ಹೂವಿನಲ್ಲಿಯೂ ಪ್ರವೇಶಮಾಡುತ್ತಿದ್ದುವು. ಅದನ್ನು ನೋಡಿದರೆ ದೇವಿಯ ಸುತ್ತಲೂ ವಿನಯದಿಂದ ಸ್ತೋತ್ರಮಾಡಿಕೊಂಡು ಪ್ರದಕ್ಷಿಣೆಮಾಡುತ್ತಿರುವುವೋ ಎಂಬಂತೆ ತೋರುತ್ತಿದ್ದಿತು.॥೬೬॥

ಜೈಗೀಷವ್ಯನೇ! ಈರೀತಿ ಗಿರಿಜೆಯು ಶಿರೀಷಕುಸುಮಕ್ಕೆ ಸಮಾನವಾದ ತನ್ನ ದೇಹಸೌಕುಮಾರ್ಯವನ್ನೂ ಗಣನೆಮಾಡದೆ, ಹತ್ತುಸಾವಿರ ವರ್ಷಗಳವರೆವಿಗೆ ಕೇವಲ ಶಿವನಲ್ಲಿಯೇ ನೆಟ್ಟಮನಸ್ಸುಳ್ಳವಳಾಗಿ ತಪಸ್ಸುಮಾಡಿದಳು. ಆಗ ಶಿವಧ್ಯಾನವೇ ಮುಖ್ಯವಾದ ಅಮೃತರಸವೆಂದು ಆಕೆಯು ತಿಳಿದು, ಅದನ್ನು ಪಾನಮಾಡುತ್ತಾ ಈಶ್ವರನ ಅವಿನಶ್ವರವಾದ ಪಾದಕಮಲಧ್ಯಾನದಲ್ಲಿಯೇ, ಲೀನಳಾಗಿದ್ದಳು. ಮನಸ್ಸಿನಲ್ಲಿ ಏನನ್ನೋ ಗೂಢವಾಗಿ ಅಪೇಕ್ಷಿಸುವವಳಂತೆ ಶ್ರೇಷ್ಠವಾದ ಕೈಲಾಸಪರ್ವತದಲ್ಲಿ ವಿಧಿವತ್ತಾಗಿ ಉಗ್ರ ತಪಸ್ಸನ್ನು ಮುಂದುವರಿಸಿದಳು. ॥೬೭॥

ಸಕಲರೀತಿಯಾದ ತಪಸ್ಸುಗಳಿಗೂ, ಆಯಾ ತಪಸ್ಸುಗಳಿಗೆ ಅನುರೂಪವಾದ ಮಹಾಸಾಮ್ರಾಜ್ಯಪದವಿಯೇ ಮೊದಲಾದ ವರಗಳನ್ನು ಸ್ವತಃ ಕೊಡಲು ಸಮರ್ಥಳಾದ ದಾಕ್ಷಾಯಣೀದೇವಿಯೂ, ಹೀಗೆ ಸದಾಶಿವಧ್ಯಾನದಿಂದ ಸಕಲ ವಿಷಯ

**ಲೋಕಾನಾಂ ಪ್ರದಿಶತ್ಯಸಾರತಪಸಾ ಪ್ರಾಪ್ಯಂ ಫಲಂ ಚೇತಸಾ**
**ಸಾ ಸರ್ವೋತ್ತಮದೇವದೇವಜನಿಮಪ್ರಾಪ್ಯಾರ್ಚಯತ್ಕೇವಲಂ ॥೬೮॥**

**ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ದೇವೀತಪೋವರ್ಣನಂ ನಾಮ ದ್ವಿತೀಯೋಽಧ್ಯಾಯಃ**

---

ಸುಖಗಳನ್ನೂ ತೊರೆದು ತಪಸ್ಸುಮಾಡಿದಳೆಂದರೆ, "ಲೋಕದಲ್ಲಿ ಸರ್ವೋತ್ತಮನೆನಿಸಿದವನು ಶಂಕರನೊಬ್ಬನೇ. ಅವನಿಂದಲೇ ತಪಸ್ಸಿನ ಸಕಲ ಫಲಗಳೂ ಈಡೇರುವುವು" ಎಂಬುದನ್ನು ಜನಸಾಮಾನ್ಯಕ್ಕೆ ಉಪದೇಶಿಸುವುದೇ ದೇವಿಯ ಮುಖ್ಯೋದ್ದೇಶವಾಗಿತ್ತು ಎಂದು ಹೇಳಬಹುದು. ||೬೮||

ಇಲ್ಲಿಗೆ ಶ್ರೀಶಿವರಹಸ್ಯದ ಭವಾಖ್ಯವಾದ ಎರಡನೆಯ ಅಂಶದಲ್ಲಿ ದೇವಿಯ ತಪಸ್ಸಿನ ವರ್ಣನೆಯೆಂಬ ಎರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ತೃತೀಯೋಽಧ್ಯಾಯಃ

## ವಿಪ್ರದೇವೀಸಂವಾದಃ

|| ಸ್ಕಂದ ಉವಾಚ ||

**ತಪಸ್ಯಂತ್ಯಾಂ ತಥಾಂಬಾಯಾಂ ಸರ್ವೇಷಾಂ ವಿಸ್ಮಯಾವಹಂ ।**
**ಆಶ್ಚರ್ಯಕಾರಿಭಿರ್ಭೂತೈಸ್ತಥೈವ ಪ್ರಮಥೇಶ್ವರೈಃ ॥೧॥**

**ಮುನೀಶ್ವರೈರ್ದೇವಸಂಘೈರ್ವಿಷ್ಣುಬ್ರಹ್ಮಾದಿಭಿಸ್ಸುರೈಃ ।**
**ಗಂಧರ್ವೈರುರಗೈಸ್ಸಿದ್ಧೈಶ್ಚಾರಣೈರ್ಯಕ್ಷಪೂರುಷೈಃ ॥೨॥**

**ಕಾಲೇ ಬಹುತಿಥೇ ಯಾತೇ ಸಮುಭ್ಯಾಗಾದ್ಯದೃಚ್ಛಯಾ ।**
**ಶಿವೋ ಹಿ ವಿಪ್ರರೂಪೇಣ ತತ್ತಪಸ್ಸಿದ್ಧಿಹೇತವೇ ॥೩॥**

---

### ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಮೂರನೆಯ ಅಧ್ಯಾಯ

ಅಯ್ಯ ಜೈಗಿಷವ್ಯಮಹರ್ಷಿಯೇ, ಹೀಗೆ ದೇವಿಯು ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡುವಂತೆ ಘೋರವಾಗಿ ತಪಸ್ಸನ್ನು ಮಾಡುತ್ತಿರಲು, ಸಕಲಭೂತಗಳೂ, ಪ್ರಮಥಗಣಗಳೂ, ಮುನಿಶ್ರೇಷ್ಠರೂ, ದೇವತೆಗಳ ಸಮೂಹವೂ, ವಿಷ್ಣು, ಬ್ರಹ್ಮ, ಮೊದಲಾದ ದೇವಶ್ರೇಷ್ಠರೂ, ಗಂಧರ್ವರೂ, ನಾಗರೂ, ಸಿದ್ಧಪುರುಷರೂ, ಚಾರಣರೂ, ಯಕ್ಷರೂ, ದೇವಿಯ ತಪಸ್ಸನ್ನು ನೋಡಿ ಆಶ್ಚರ್ಯಮಗ್ನರಾದರು.॥೧-೨॥

ಹೀಗೆಯೇ ಅನೇಕಕಾಲವು ಕಳೆದುಹೋಗಲು, ಆಗ ಪರಶಿವನು ಆ ದೇವಿಯ ತಪಸ್ಸಿದ್ಧಿಗೋಸ್ಕರ ಸ್ವೇಚ್ಛೆಯಿಂದ ವಿಪ್ರವೇಷಧಾರಿಯಾಗಿ ದೇವಿಯು ತಪಸ್ಸುಮಾಡುತ್ತಿದ್ದ ಸ್ಥಳಕ್ಕೆ ತಾನೇ ಬಂದನು. ॥೩॥

ವಯಸಾ ಶತಕೇನಾಪಿ ಕೃಶೋ ಧಮನಿಸಂಮಿತಃ ।
ಪರ್ಣಚ್ಛದಾವೃತತನುರ್ಧೃತಯಷ್ಟಿಕಮಂಡಲುಃ ॥೪॥

ಸಿರಾಭಿರ್ದೃಶ್ಯಮಾನಾಭಿಸ್ಸ್ನಾಯುಚರ್ಮಾಸ್ಥಿಸಂಯುತಃ ।
ಸಿತಶ್ಮಶ್ರುಜಟಾಕೂರ್ಚಬ್ರಹ್ಮಸೂತ್ರೋಪಶೋಭಿತಃ ॥೫॥

ಪರ್ವತಾಗ್ರೇ ಚರನ್ಮಂದಂ ಸ್ಖಲತ್ಪಾದಃ ಪತನ್ನಪಿ ।
ಮಂದಂ ಮಂದಂ ಸಮಾಯಾತಿ ಮಂದಮಾರುತವದ್ದ್ವಿಜಃ ॥೬॥

ಕೈಲಾಸೋಪವನೇ ತತ್ರ ದದರ್ಶಾಯತಲೋಚನಾಂ ।
ಮಾಲೂರವೃಕ್ಷಸಂಘೋತ್ಥಛಾಯಾಯಾಂ ಸ್ಥಂಡಿಲೋಪರಿ ॥೭॥

---

ಬ್ರಾಹ್ಮಣವೇಷಧಾರಿಯಾದ ಪರಶಿವನು ನೂರುವರ್ಷ ವಯಸ್ಸಾಗಿದ್ದವನಂತೆ ಕೃಶನಾಗಿ ನರಗಳು ಕಾಣುವಂತಹ ಶರೀರವುಳ್ಳವನಾಗಿದ್ದನು. ಎಲೆಗಳಿಂದ ಹೆಣೆದು ಮಾಡಿರುವ ಬಟ್ಟೆಯನ್ನುಟ್ಟು ಕೈಯಲ್ಲಿ ಕಮಂಡಲುವನ್ನು ಧರಿಸಿದ್ದನು. ||೪||

ಪರಶಿವನು, ನರಗಳು, ಮಾಂಸಖಂಡಗಳು ಚರ್ಮ, ಮೂಳೆ, ಇವು ಪ್ರತ್ಯೇಕವಾಗಿ ಕಾಣುವಂತೆ, ಕ್ಷೀಣದೇಹಿಯಾಗಿಯೂ, ಬಿಳಿಯಮಿಾಸೆ, ಜಡೆ ಮತ್ತು ಗಡ್ಡ, ಬ್ರಹ್ಮಸೂತ್ರ ಇವುಗಳಿಂದ ಅಲಂಕೃತನಾಗಿಯೂ ಇದ್ದನು. ||೫||

ಹೀಗೆ ವೃದ್ಧಬ್ರಾಹ್ಮಣನ ವೇಷವನ್ನು ಧರಿಸಿದ ಶಿವನು ಕೈಲಾಸಪರ್ವತದಲ್ಲಿ ಮೆಲ್ಲಮೆಲ್ಲಗೆ ಸಂಚಾರಮಾಡುತ್ತಾ, ಪದೇ ಪದೇ ಎಡವಿಬೀಳುತ್ತಾ, ಮಂದಮಾರುತದಂತೆ ನಿಧಾನವಾಗಿ ಚಲಿಸುತ್ತಾ, ದೇವಿಯ ತಪೋವನದ ಕಡೆಗೆ ಬರುತ್ತಿದ್ದನು. ||೬||

ಹೀಗೆ ದ್ವಿಜವೇಷಧಾರಿಯಾದ ಶಿವನು ಮುಂದೆ ಬರುತ್ತಾ, ಕೈಲಾಸಪರ್ವತದ ಉಪವನದಲ್ಲಿ, ಬಿಲ್ವವೃಕ್ಷಗಳ ಸಮೂಹದಿಂದ ಕೂಡಿರುವ ತೋಪಿನ ನೆರಳಿನಲ್ಲಿ ವೇದಿಕೆಯ ಮೇಲೆ ಕುಳಿತು ತಪಸ್ಸು ಮಾಡುತ್ತಿರುವ ವಿಶಾಲನೇತ್ರೆಯಾದ ಪರಮೇಶ್ವರಿಯನ್ನು ನೋಡಿದನು. ||೭||

ಭಸ್ಮಪರ್ಯಂಕಶಯಿತಾಂ ವಿದ್ಯುತ್ಕೋಟಿಶತಪ್ರಭಾಂ ।
ಸೌಂದರ್ಯಧಾರಾಸರ್ವಸ್ವವಿಗ್ರಹಾಮಿವ ಸಂಸ್ಥಿತಾಂ ॥೮॥

ಉತ್ಫುಲ್ಲಾರಕ್ತಕಮಲದಲಪ್ರಾಂತೋರುಲೋಚನಾಂ ।
ಚಾಂಪೇಯಕಲಿಕಾಭೋದ್ಯನ್ನಾಸಾಶೋಭಿತಮೌಕ್ತಿಕಾಂ ॥೯॥

ಸುವೃತ್ತಹಲ್ಲಕಲಸಚ್ಛ್ರವಣದ್ವಯಶೋಭಿತಾಂ ।
ಕಂಜದರ್ಪತಿರಸ್ಕಾರಿಕಂಠಮಂಡಲಶೋಭಿತಾಂ ॥೧೦॥

ಘನಮಂಡಲಸಂಕಾಶಕಚಭಾರವಿರಾಜಿತಾಂ ।
ಪಿಶಂಗಿತಜಟಾಲೀಕವೇಣೀಜಾಲಸುಮೌಲಿಕಾಂ ॥೧೧॥

ಅಷ್ಟಮೀಚಂದ್ರಸಂಕಾಶಭ್ರೂಲತಾಶೋಭಿತಾನನಾಂ ।
ಪಕ್ಷ್ಮಭಿರ್ವಿಜಿತಾಸಾರನಿಬಿಡಾವೃತಲೋಚನಾಂ ॥೧೨॥

---

ಆ ಸಮಯದಲ್ಲಿ ದೇವಿಯು ಭಸ್ಮರೂಪವಾದ ವೇದಿಕೆಯ ಮೇಲೆ ಕುಳಿತಿದ್ದಳು. ನೂರುಕೋಟಿ ಮಿಂಚಿನ ಕಾಂತಿಯಿಂದ ಕೂಡಿದವಳಾಗಿದ್ದಳು. ಸೌಂದರ್ಯ ಸಾರಸರ್ವಸ್ವಕ್ಕೆ ಆಶ್ರಯವಾದ ಮೂರ್ತಿಯೇ ಎದುರಿಗೆ ಬಂದು ನಿಂತು ಕೊಂಡಿರುವುದೋ ಎನ್ನುವಂತೆ ತೋರುತ್ತಿದ್ದಳು. ॥೮॥

ಚೆನ್ನಾಗಿ ಅರಳಿದ ಕೆಂದಾವರೆಯ ದಳಗಳಂತೆ ಕೆಂಪಾದ ಮತ್ತು ವಿಶಾಲವಾದ ಕಣ್ಣುಗಳಿಂದ ಕೂಡಿದ್ದಳು. ಸಂಪಿಗೆಯ ಮೊಗ್ಗಿನಂತಿರುವ ಮೂಗು, ಮೂಗಿನಲ್ಲಿ ಮುತ್ತಿನ ಮೂಗುತಿ ಇವುಗಳಿಂದ ದೇವಿಯು ಶೋಭಿತಳಾಗಿದ್ದಳು. ॥೯॥

ಸುಂದರವಾದ ಕೆಂಪುಕಲ್ಹಾರ ಪುಷ್ಪಗಳಿಂದ ದೇವಿಯ ಕಿವಿಗಳು ಅಲಂಕೃತವಾಗಿದ್ದುವು. ಕಮಲದ ಗರ್ವವನ್ನು ತಿರಸ್ಕಾರ ಮಾಡುತ್ತಿದೆಯೋ ಎಂಬಂತಿರುವ ದುಂಡಾದ ಕುತ್ತಿಗೆಯು ಕಾಂತಿಯಿಂದ ಶೋಭಿಸುತ್ತಿದ್ದಿತು. ॥೧೦॥

ದೇವಿಯ ತಲೆಗೂದಲುಗಳು ಮೇಘಮಂಡಲದಂತೆ ಕಾಂತಿಯಿಂದ ಪ್ರಕಾಶಿಸುತ್ತಿದ್ದುವು. ಜಡೆಯು ಹೊಂಬಣ್ಣದಿಂದ ಯುಕ್ತವಾಗಿ ತಲೆಯ ಹಿಂಭಾಗದಲ್ಲಿ ಮೇಲಕ್ಕೆ ಕಟ್ಟಲ್ಪಟ್ಟಿದ್ದಿತು. ॥೧೧॥

ದೇವಿಯು ಅಷ್ಟಮಿಯ ಚಂದ್ರನಂತೆ ವಕ್ರವಾಗಿರುವ ಲತಾರೂಪವಾದ

ಉದ್ಯಚ್ಛಶಾಂಕಮಧ್ಯಸ್ಥಕಲಂಕರಹಿತಾನನಾಂ ।
ಪೀನವೃತ್ತಮಣಿಪ್ರೋದ್ಯತ್ಕಲಶಾಭಕುಚದ್ವಯಾಂ ॥೧೩॥

ತ್ರಿಪುಂಡ್ರರೇಖಾಭಸ್ಮಾಚ್ಛತಿಲಕದ್ಯೋತಿತಾನನಾಂ ।
ತ್ರಿವಲೀವಲಿಗಂಭೀರಸುಂದರೋದರಸಂವೃತಾಂ ॥೧೪॥

ಸ್ತನಭಾರನತಪ್ರಾಯಕಟಿಮಂಡಲಶೋಭಿತಾಂ ।
ರಂಭಾಸ್ತಂಭಸುವೃತ್ತೋರುದ್ವಯಕಾಂಡಮಹಾಪದಾಂ ॥೧೫॥

ಕಮಠೀಪೃಷ್ಠಸಂಕಾಶಪ್ರಪದಾಲಕ್ತಸತ್ಪದಾಂ ।
ಜಾನುಗುಲ್ಫಸ್ಫಿಗಾಕಾರತತ್ತದ್ವೃತ್ತಾಖಿಲಾಕೃತಿಂ ॥೧೬॥

---

ಹುಬ್ಬಿನ ಆಕಾರದಿಂದ ಅಲಂಕೃತವಾದ ಮುಖವುಳ್ಳವಳಾಗಿದ್ದಳು. ನಿಬಿಡವಾದ ಕೂದಲಿನಿಂದ ಕೂಡಿದ ರೆಪ್ಪೆಗಳಿಂದ ಕಣ್ಣುಗಳು ರಂಜಿಸುತ್ತಿದ್ದುವು. ||೧೨||

ದೇವಿಯ ಮುಖವು ಕಳಂಕರಹಿತವಾದ ಚಂದ್ರನಂತೆ ಶೋಭಿಸುತ್ತಿದ್ದಿತು. ಸ್ತನದ್ವಯಗಳಾದರೋ, ದಪ್ಪವಾಗಿಯೂ, ದುಂಡಾಗಿಯೂ ಇದ್ದು, ಕಲಶಗಳ ಸಾಮ್ಯವನ್ನು ಪಡೆದಿದ್ದವು. ||೧೩||

ಭಸ್ಮತ್ರಿಪುಂಡ್ರಗಳ ಕಾಂತಿಯಿಂದಲೂ, ತಿಲಕದಿಂದಲೂ ಕೂಡಿ ದೇವಿಯ ಮುಖವು ಪ್ರಕಾಶಮಾನವಾಗಿದ್ದಿತು. ತ್ರಿವಲಿಗಳ ಸಮೂಹವು ದೇವಿಯ ಗಂಭೀರವೂ ಸುಂದರವೂ ಆದ ಉದರಕ್ಕೆ ಒಂದು ವಿಶೇಷವಾದ ಕಾಂತಿಯನ್ನುಂಟು ಮಾಡುವಂತೆ ಸೇರಿಕೊಂಡಿದ್ದಿತು. ||೧೪||

ಸ್ತನಗಳ ಭಾರದಿಂದ ಬಗ್ಗಿದಂತಿರುವ ಕಟಿಸಮೂಹದಿಂದ (ಸೊಂಟದಿಂದ) ಸಲ್ಲಕ್ಷಣವತಿಯಾಗಿದ್ದಳು. ಬಾಳೆಯಕಂಬದಂತೆ ದುಂಡಾದ ಎರಡು ತೊಡೆಗಳು ದೇವಿಯನ್ನು ಅಲಂಕರಿಸಿದ್ದುವು. ||೧೫||

ದೇವಿಯು ಹೆಣ್ಣುಆಮೆಯ ಪೃಷ್ಠಭಾಗದಂತೆ (ಬೆನ್ನಿನಂತೆ) ಕಾಂತಿಯುಕ್ತವಾಗಿ ಉಬ್ಬಿಕೊಂಡಿರುವ ಪಾದಾಗ್ರದಲ್ಲಿ, ಲಾಕ್ಷಾರಸವನ್ನು ಧರಿಸಿಕೊಂಡಿದ್ದಳು. ಮೊಳಕಾಲು ಮತ್ತು ಹರಡು ಇವುಗಳು ಆಕೃತಿಗೆ ಅನುಸಾರವಾಗಿ ದುಂಡಾಗಿರುವುದರಿಂದ ನೋಡುವುದಕ್ಕೆ ಸುಂದರವಾಗಿ ಕಾಣುತ್ತಿದ್ದುವು. ||೧೬||

ಮಣಿಸ್ತಂಭೋಪಮಾಕಾರಬಾಹುದ್ವಯನಖಾಂಗುಲಿಂ ।
ಪ್ರವಾಲಲಕ್ತಕಾಸಕ್ತಕುರುವಿಂದಾಭಸನ್ನಖಾಂ ॥೧೭॥

ಪದದ್ವಯಾಲಕ್ತರಕ್ತಕೈಲಾಸಂ ರಕ್ತವರ್ಣಕಾಂ ।
ನಖದೀಧಿತಿಜಾರಕ್ತಪ್ರಭಾಯಿತದಿಗಂತರಾಂ ॥೧೮॥

ಅಪರ್ಣಾಂ ಪರ್ಣಜಾಲೋತ್ಥವಾಸಸಾ ಸಂವೃತಾಂ ತದಾ ।
ಸುಪಾಂಡರಮಹಾಭಸ್ಮಪರಿಶೋಭಿಕಲೇವರಾಂ ॥೧೯॥

ಭೂಷಾವಲಿವಿಹೀನಾಽಪಿ ಶುಶುಭೇ ಸಾಕ್ಷಮಾಲಯಾ ।
ಸ್ಥಿರಾಂ ತಪೋಮೂರ್ತಿಮಿವ ಸ ದೂರಾತ್ಸಮುದೈಕ್ಷತ ॥೨೦॥

---

ದೇವಿಯ ಬಾಹುಗಳೆರಡೂ ಮಣಿಸ್ತಂಭಗಳಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದವು. ಬೆರಳುಗಳೂ, ಉಗುರುಗಳೂ, ಹುತ್ತು ಮತ್ತು ಲಾಕ್ಷಾರಸ ಇವುಗಳಿಂದ ಅಲಂಕೃತವಾಗಿ ಕುರುವಿಂದಪುಷ್ಪದಂತೆ ಕೆಂಪಾದ ಕಾಂತಿಯಿಂದ ಕೂಡಿದ್ದುವು. ॥೧೭॥

ಗಿರಿಜಾಂಬಿಕೆಯು ತನ್ನ ಪಾದಯುಗಳದಲ್ಲಿ ಸಂಬಂಧಿಸಿರುವ ಲಾಕ್ಷಾರಾಗದ ಕೆಂಪುಬಣ್ಣದಿಂದ ತಾನು ತಪಸ್ಸುಮಾಡುತ್ತಿರುವ ಕೈಲಾಸಪರ್ವತವನ್ನೇ ರಕ್ತವರ್ಣವನ್ನಾಗಿ ಮಾಡುವಳೋ ಎಂಬಂತೆ ಕಾಣುತ್ತಿದ್ದಳು. ದೇವಿಯ ಉಗುರುಗಳ ಕಾಂತಿಯಿಂದ ಉಂಟಾದ ರಕ್ತವರ್ಣವು ದಿಗಂತರವೆಲ್ಲವನ್ನೂ ಕಾಂತಿಯುತವನ್ನಾಗಿ ಮಾಡಿದ್ದಿತು. ॥೧೮॥

ಅಪರ್ಣಾ ಎಂಬ ಹೆಸರುಳ್ಳವಳಾದರೂ ಪರ್ಣ (ಎಲೆಗಳ) ಸಮೂಹದಿಂದ ರಚಿತವಾದ ಬಟ್ಟೆಗಳನ್ನು ಧರಿಸಿ, ಬಿಳುಪಾದ ಭಸ್ಮದಿಂದ ತನ್ನ ಶರೀರವನ್ನೆಲ್ಲಾ ದೇವಿಯು ಅಲಂಕರಿಸಿಕೊಂಡಿದ್ದಳು. ॥೧೯॥

ಆಭರಣ ಸಮೂಹವನ್ನು ತ್ಯಜಿಸಿ, ಕೇವಲ ಅಕ್ಷಮಾಲೆಯೊಂದನ್ನೇ ಧರಿಸಿದ್ದರೂ ದೇವಿಯ ಕಾಂತಿಯು ಬೇರೆ ಕುಗ್ಗಿರಲಿಲ್ಲ. ತಪೋಮೂರ್ತಿಯಂತೆ ಸ್ಥಿರಳಾಗಿ ಕುಳಿತಿದ್ದ ನಿಸರ್ಗಸುಂದರಿಯಾದ ಪರಮೇಶ್ವರಿಯನ್ನು ದ್ವಿಜವೇಷಧಾರಿಯಾದ ಪರಶಿವನು ದೂರದಿಂದಲೇ ನೋಡಿದನು. ॥೨೦॥

ದೇವ್ಯಾಪಿ ದೃಷ್ಟೋ ವಿಪ್ರೇಂದ್ರಶ್ಯೈವೋ ಭಸ್ಮವಿಭೂಷಿತಃ ।
ತ್ರಿಪುಂಡ್ರಾವೃತಸತ್ಫಾಲೋ ರುದ್ರಾಕ್ಷಾಂಗದಕಂಕಣಃ ॥೨೧॥

ವದನ್ಹರಹರೇಶೇತಿ ಧೃತಯಷ್ಟಿಸ್ಸ್ಖಲನ್ಪಥಿ ।
ತಾದೃಕ್ಷಂ ತಾಪಸಂ ದೃಷ್ಟ್ವಾ ತಪೋರಾಶಿಮಿವ ಸ್ಥಿತಂ ॥೨೨॥

ಮೂರ್ತಿಮಂತಂ ಹವ್ಯವಾಹಮಿವಾಗತಮುಮಾ ತದಾ ।
ಏಹ್ಯೇಹೀತ್ಯಭ್ಯವೋಚತ್ತಂ ತಾಪಸಂ ವೀತಕಲ್ಮಷಂ ॥೨೩॥

ಸ ಗೌರೀಸಾರವಾಕ್ಯೇನ ಜಾತಹರ್ಷಸ್ತದಂತಿಕಂ ।
ಮಂದಂ ಮಂದಂ ಯಯೌ ವಿಪ್ರಸ್ತದ್ದೇವ್ಯಾಸ್ತಪಸೋ ವನಂ ॥೨೪॥

---

ಗಿರಿಜಾದೇವಿಯೂ ಸಹ, ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನೂ, ಕಂಠದಲ್ಲಿ ರುದ್ರಾಕ್ಷಮಾಲೆಯನ್ನೂ, ಭುಜಗಳಲ್ಲಿ ರುದ್ರಾಕ್ಷಿಗಳಿಂದ ರಚಿತವಾದ ತೋಳುಬಳೆಗಳನ್ನೂ, ಕೈಯಲ್ಲಿ ರುದ್ರಾಕ್ಷಿಯ ಕಂಕಣವನ್ನೂ ಧರಿಸಿ, ಶರೀರಕ್ಕೆಲ್ಲಾ ಭಸ್ಮವನ್ನು ಲೇಪನಮಾಡಿಕೊಂಡಿರುವ ಬ್ರಾಹ್ಮಣ ಶ್ರೇಷ್ಠನನ್ನು ನೋಡಿದಳು. ॥೨೧॥

ಆ ಬ್ರಾಹ್ಮಣನು ಬಾಯಿಯಲ್ಲಿ 'ಹರಹರ' 'ಈಶ' ಎಂಬುದಾಗಿ ಶಿವನಾಮಗಳನ್ನು ಜಪಿಸುತ್ತಿದ್ದನು. ವಾರ್ಧಕ್ಯದ ದೋಷದಿಂದ ಮಾರ್ಗದಲ್ಲಿ ಪದೇಪದೆ ಎಡುವುತ್ತಲೂ ಬೀಳುತ್ತಲೂ ಇದ್ದನು. ಹೀಗೆ ತಡವರಿಸಿಕೊಂಡು ಬರುತ್ತಿರುವ ಬ್ರಾಹ್ಮಣನನ್ನು ನೋಡಿದರೆ ಸಾಕ್ಷಾತ್ತಪಸ್ಸಿನ ಸಮೂಹವೇ ಮೂರ್ತಿಮತ್ತಾಗಿ ಈ ವೃದ್ಧಬ್ರಾಹ್ಮಣನ ವೇಷದಲ್ಲಿ ಬರುತ್ತಿರುವಂತೆ ದೇವಿಗೆ ಕಾಣುತ್ತಿದ್ದಿತು. ॥೨೨॥

ಮಹಾತೇಜಸ್ವಿಯಾಗಿ, ಯಜ್ಞೇಶ್ವರನೇ ಮೂರ್ತಿಮತ್ತಾಗಿ ಬರುತ್ತಿರುವಂತೆ ತೋರುತ್ತಿರುವ ಆ ವೃದ್ಧಬ್ರಾಹ್ಮಣನನ್ನು ನೋಡಿ ಉಮಾದೇವಿಯು, ಆತನು ಪಾಪರಹಿತನಾದ ತಾಪಸಶ್ರೇಷ್ಠನೆಂದು ತಿಳಿದು, ಸ್ವಾಮಿ, ಹೀಗೆ ದಯಮಾಡಿಸಬೇಕು, ಎಂಬುದಾಗಿ ಸ್ವಾಗತಿಸಿದಳು. ॥೨೩॥

ಗೌರಿಯು ಸಾರಭೂತವಾದ ಸುಖಾಗಮನದ ಮಾತನ್ನು ಕೇಳಿ, ಆ ವೃದ್ಧವಿಪ್ರನು ಸಂತೋಷದಿಂದ ದೇವಿಯ ಸಮೀಪಕ್ಕೆ ಬಂದು, ಮೆಲ್ಲಮೆಲ್ಲನೆ ದೇವಿಯಿಂದ ನಿರ್ದಿಷ್ಟವಾದ ದಾರಿಯಲ್ಲಿ ನಡೆಯುತ್ತಾ ದೇವಿಯ ತಪೋವನವನ್ನು ಪ್ರವೇಶಿಸಿದನು. ॥೨೪॥

ದೇವ್ಯಾ ದತ್ತಬ್ರುಸೀಮಧ್ಯಮಧ್ಯತಿಷ್ಠತ್ಕೃತಾಂಜಲಿಃ ।
ಉವಾಚಾಂಬಾನನಂ ವೀಕ್ಷ್ಯ ಸಗದ್ಗದಮುಹೋ ತದಾ ॥೨೫॥

॥ ವಿಪ್ರ ಉವಾಚ ॥

ಕಿಂಚಿನ್ನಜಾನಾಮಿ ಶಿವೇ ವಕ್ತುಂ ಶ್ರೋತುಂ ಕಿಲಾಮಲೇ ।
ಜರಯಾ ಪರಿಪೂರ್ಣಾಂಗಶ್ಶತವರ್ಷಾಯುರಸ್ಮಿ ಹಿ ॥೨೬॥

ಅಸ್ಮಿನ್ಕೈಲಾಸಭೂಭಾಗೇ ಸಂಚರಾಮ್ಯಹಮೇಕಕಃ ।
ತತ್ರ ಶ್ರುತಂ ಶಿವಗಣೈಃ ಕುರುತೇಽಂಬಾ ತಪೋ ದೃಢಂ ॥೨೭॥

ತ್ವದ್ದರ್ಶನಾರ್ಥಂ ದೇವೇಶಿ ಮಂದಂ ಮಂದಂ ಸಮಾಗತಃ ।
ವಿಸ್ಮಯೇನಾಹಮತ್ರಾಗಾಂ ತ್ವತ್ಪಾದಾಂಬುರುಹೇಕ್ಷಣಃ ॥೨೮॥

---

ತನ್ನ ತಪೋವನಕ್ಕೆ ಬಂದ ಬ್ರಾಹ್ಮಣಶ್ರೇಷ್ಠನಿಗೆ, ದೇವಿಯು ಕುಳಿತುಕೊಳ್ಳಲು ಒಂದು ಕೃಷ್ಣಾಜಿನದ ಆಸನವನ್ನು ಕೊಟ್ಟಳು. ಆ ಬ್ರಾಹ್ಮಣನು ಆ ಆಸನದಲ್ಲಿ ಕುಳಿತುಕೊಂಡು, ಅಂಬಿಕೆಯ ಮುಖವನ್ನೇ ನೋಡುತ್ತಾ ಗದ್ಗದವಾದ ಸ್ವರದಿಂದ ದೇವಿಯನ್ನು ಕುರಿತು ಮುಂದೆ ಹೇಳುವಂತೆ ಕೆಲವು ಮಾತುಗಳನ್ನಾಡಿದನು. ||೨೫||

ಮಹೇಶ್ವರಿಯೇ, ನನಗೆ ನೂರು ವರ್ಷ ವಯಸ್ಸಾಗಿದೆ. ಮುಪ್ಪಿನಿಂದ ಸುಕ್ಕಿಹೋದ ಚರ್ಮದಿಂದಲೂ ಶರೀರದ ನಿಶ್ಶಕ್ತಿಯಿಂದಲೂ ಮಾತನಾಡುವುದಕ್ಕಾಗಲಿ, ಆಡಿದಮಾತನ್ನು ಕೇಳುವುದಕ್ಕಾಗಲಿ ಶಕ್ತಿಯಿಲ್ಲದಂತಾಗಿದೆ. ||೨೬||

ದೇವಿಯೇ, ನಾನು ಈ ಕೈಲಾಸಪರ್ವತದ ಪ್ರದೇಶದಲ್ಲಿ ಒಬ್ಬನೇ ಸಂಚಾರ ಮಾಡುತ್ತಿದ್ದೆನು. ಒಂದುದಿನ ಶಿವಗಣಗಳು, ಜಗದಂಬಿಕೆಯಾದ ನೀನು, ಘೋರವಾದ ತಪಸ್ಸನ್ನು ಮಾಡುತ್ತಿರುವೆ ಎಂಬುದನ್ನು ನನಗೆ ತಿಳಿಸಿದರು. ||೨೭||

ದೇವಿಯೇ, ಅಂದಿನಿಂದ ನಾನು ನಿನ್ನನ್ನು ನೋಡಬೇಕೆಂಬ ಅಪೇಕ್ಷೆಯಿಂದಲೇ ಇದ್ದೆನು. ಈಗ ನಿನ್ನ ಪಾದಾಂಬುಜ ದರ್ಶನಲಾಲಸನಾಗಿ ಮೆಲ್ಲಮೆಲ್ಲಗೆ ಸಂಚರಿಸುತ್ತಾ, ಕೊನೆಗೆ ಕಷ್ಟಪಟ್ಟು ಕುತೂಹಲದಿಂದ ನಿನ್ನ ಬಳಿಗೆ ಬಂದಿರುವೆನು. ||೨೮||

ತನ್ನಾಪಿ ತಪಸಾ ಕಿಂ ವಾ ಕಾರ್ಯಮಂಭೋರುಹಾನನೇ ।
ಸರ್ವೇಷಾಂ ತಪಸಾಂ ದೇವಿ ತ್ವತ್ಪಾದಾಬ್ಜಂ ತಪಃ ಫಲಂ ॥೨೯॥

ಪ್ರಸೂತೇ ಬ್ರಹ್ಮಸಿಷ್ಣೂನಾಂ ಮುನೀನಾಂ ಭಾವಿತಾತ್ಮನಾಂ ।
ಮುನಿಭಿಶ್ಚ ಗಣೈರ್ದೇವೈಸ್ತಪಸ್ತಪ್ತಂ ಶಿವೇ ಪುರಾ ॥೩೦॥

ತ್ವತ್ಪದಾಂಬುಜಸೇವಾರ್ಥಂ ಶಿವಜ್ಞಾನಾರ್ಥಮಂಬಿಕೇ ।
ತ್ವತ್ಪ್ರಸಾದೇನ ತೇ ಸರ್ವೇ ಜಾತಾ ಲೋಕೇಷು ನಾಯಕಾಃ ॥೩೧॥

ಬ್ರಹ್ಮಾ ಸ್ರಷ್ಟಾಽವನೇ ವಿಷ್ಣುಸ್ಸಂಹೃತೌ ರುದ್ರ ಉತ್ತಮಃ ।
ಕಲ್ಪಿತಾಸ್ತ್ವದ್ದಯಾಪಾತ್ರಾಸ್ತ್ವದಪಾಂಗವಿಲೋಕನಾತ್ ॥೩೨॥

---

ಸಕಲ ತಪಸ್ಸುಗಳಿಗೂ ನಿನ್ನ ಪದಕಮಲವೇ ತಪಃಫಲವಾಗಿರುವಾಗ, ಕಮಲಾನನೆಯಾದ ನೀನು ಹೀಗೆ ತಪಸ್ಸುಮಾಡಲು ಕಾರಣವೇನು? ಯಾವ ಫಲವನ್ನು ಅಪೇಕ್ಷಿಸಿ ಇಷ್ಟು ಉಗ್ರತಪಸ್ಸನ್ನು ಕೈಗೊಂಡಿರುವೆ? ॥೨೯॥

ದೇವಿಯೇ, ನಿನ್ನ ಪಾದಾಂಬುಜ ಸೇವೆಯು ಬ್ರಹ್ಮ, ವಿಷ್ಣುಗಳಿಗೂ, ಸ್ಥಿರಮನಸ್ಸುಳ್ಳ ಮುನಿವರ್ಯರಿಗೂ, ತಪಃಸಿದ್ಧಿಯನ್ನುಂಟುಮಾಡುವುದಾಗಿದೆ!

ಎಲೌ ಶಿವೆಯೇ! ಮುನಿಗಳೂ ದೇವಗಣಗಳೂ ಹಿಂದೆ ನಿನ್ನ ಪಾದಕಮಲವನ್ನು ಸೇವೆಮಾಡುವುದಕ್ಕೂ, ಶುಭಕರವಾದ ಶಿವಜ್ಞಾನವನ್ನು ಹೊಂದುವುದಕ್ಕೂ ಬಹುಕಾಲ ತಪಸ್ಸನ್ನು ಮಾಡಿರುವರು. ॥೩೦॥

ಅಂಬಿಕೆಯೇ! ನಿನ್ನ ಅನುಗ್ರಹದಿಂದಲೇ ಬ್ರಹ್ಮ, ವಿಷ್ಣು, ರುದ್ರ ಮೊದಲಾದ ದೇವಶ್ರೇಷ್ಠರೆಲ್ಲರೂ ಲೋಕನಾಯಕರೆನಿಸಿರುವರು. ನೀನು ನಿನ್ನ ಅಪಾಂಗದೃಷ್ಟಿಯಿಂದ ಒಂದುಬಾರಿ ದಯಾಪೂರ್ವಕವಾಗಿ ಅವರನ್ನು ನೋಡಿದುದರಿಂದಲೇ ಬ್ರಹ್ಮನು ಸೃಷ್ಟಿಕರ್ತನಾಗಿಯೂ, ವಿಷ್ಣುವು ರಕ್ಷಣಾಧಿಕಾರಿಯಾಗಿಯೂ, ರುದ್ರನು ಸಂಹಾರಕಾರ್ಯವನ್ನೆಸಗುವವನಾಗಿಯೂ ಆಗಿ ಮೆರೆಯುತ್ತಿರುವರು. ॥೩೨॥

ಕಿಂ ತವಾಪ್ರಾಪ್ಯಮಸ್ತೀಹ ತಪಸಾ ಕೇವಲೇನ ಹಿ ।
ಕ್ವ ತೇ ತನುಶ್ಶಿರೀಷೋತ್ಥಕುಸುಮಾದಪಿ ಮಾರ್ದವೀ ॥೩೩॥

ತಪಃ ಕ್ವ ನು ಮಹಾದೇವಿ ಸಾಹಸಂ ಪ್ರತಿಭಾತಿ ಮೇ ।
ಕ್ವ ತವಾಂಗೈಕಸೌಂದರ್ಯಂ ಕ್ವ ವಾ ಭಸ್ಮವಿಲೇಪನಂ ॥೩೪॥

ಪಾಟೀರರಸಕರ್ಪೂರಕಸ್ತೂರೀವರಚಂದನೈಃ ।
ಲೇಪಿತಂ ಕುಸುಮಾಮೋದಿಮಣಿಮಾಣಿಕ್ಯಭೂಷಿತಂ ॥೩೫॥

ಭೂಷಣಾನಾಂ ತ್ವದೀಯಾಂಗಂ ಭೂಷಣಂ ಕಿಲ ಶೈಲಜೇ ।
ಶೈಲಜಾತೇತಿ ಕಾಠಿನ್ಯಂ ಹೃದಯೇ ತ್ವನುವರ್ತತೇ ॥೩೬॥

---

ಜಗದಂಬಿಕೆಯೇ, ನಿನಗೆ ಕೇವಲ ತಪಸ್ಸಿನಿಂದ ದೊರೆಯಬೇಕಾದದ್ದೇನಿರುವುದು ? ಸಕಲ ಫಲಗಳೂ ಇಚ್ಛಾಮಾತ್ರದಿಂದಲೇ ಉಂಟಾಗುವಾಗ ತಪಸ್ಸಿನಿಂದ ನೀನು ಪಡೆಯಬೇಕಾದ ಫಲವಾವುದಿರುವುದು ? ಮಂಗಳಾಂಗಿಯೇ, ಶಿರೀಷಪುಷ್ಪಕ್ಕಿಂತಲೂ ಹೆಚ್ಚು ಮೃದುವಾದ ನಿನ್ನ ಶರೀರಸೌಕುಮಾರ್ಯವೆಲ್ಲಿ? ಕಠಿನವಾದ ಕಾಯಕ್ಲೇಶದಿಂದ ಮಾಡಲು ಸಾಧ್ಯವಾಗಿರುವ ಈ ತಪಸ್ಸೆಲ್ಲಿ? ಆದರೆ ನೀನು ತಪವನ್ನಾಚರಿಸುತ್ತಿರುವುದನ್ನು ನೋಡಿದರೆ ಅದು ವ್ಯರ್ಥವಾದ ಸಾಹಸವೆಂದೇ ನನಗೆ ತೋರುವುದು. ದೇವಿಯೇ, ಮನೋಹರವಾದ ನಿನ್ನ ಅವಯವಸೌಂದರ್ಯವೆಲ್ಲಿ ! ಈ ಭಸ್ಮೋದ್ಧಾರಣೆಯೆಲ್ಲಿ ! ಇದು ಬಹಳ ಅನುಚಿತವೆಂದು ನನಗೆ ತೋರುತ್ತಿರುವುದು. ॥೩೩-೩೪॥

ಶ್ರೀಗಂಧರಸ, ಪಚ್ಚಕರ್ಪೂರ, ಕಸ್ತೂರೀ ಮತ್ತು ಶ್ರೇಷ್ಠವಾದ ಚಂದನ ಇವುಗಳಿಂದ ಲೇಪನಮಾಡಲ್ಪಟ್ಟು ಸುಗಂಧಪುಷ್ಪದಿಂದ ಸುವಾಸಿತವಾದ, ಮತ್ತು ರತ್ನಗಳಿಂದ ಅಲಂಕೃತವಾದ ನಿನ್ನ ಈ ಶರೀರವು ಆಭರಣಗಳಿಗೂ ಅಲಂಕಾರವನ್ನುಂಟುಮಾಡುವುದಾಗಿರುವುದು. ಅಷ್ಟಿದ್ದರೂ ನೀನು ತಪಸ್ಸನ್ನಾಚರಿಸುವುದನ್ನು ನೋಡಿದರೆ ಶೈಲರಾಜನ ಪುತ್ರಿಯಾದುದರಿಂದ ನಿನಗೆ ಹೃದಯದಲ್ಲಿ ಈ ತಪೋನುಷ್ಠಾನಮಾಡುವ ಕಾಠಿನ್ಯವು ಅನುವರ್ತಿಸಿಕೊಂಡು ಬಂದಿರುವಂತೆ ತೋರುವುದು. ॥೩೫-೩೬॥

ಹಯ್ಯಂಗವೀನಸದೃಶಂ ತವ ಮಾನಸಮಂಬಿಕೇ ।
ತದದ್ಯ ಕಠಿನಂ ಕಿಂ ನು ತಪಸ್ಯೇವ ಪ್ರವರ್ತತೇ ॥೩೭॥

ತವ ಭರ್ತಾ ಮಹಾದೇವಸ್ಸಾಕ್ಷಾಲ್ಲೋಕೈಕನಾಯಕಃ ।
ತೇನೈವಾನುಮತಾ ಚಾಸಿ ನೋಚೇತ್ತವ ತಪಃಕ್ರಿಯಾ ॥೩೮॥

ಕಾರಣಂ ನೈವ ಜಾನಾಮಿ ತ್ವತ್ತಪಃಕರಣೇ ಶಿವೇ ।
ಫಲಪ್ರದಾನೋನ್ಮುಖೀ ತ್ವಂ ಸರ್ವೇಷಾಂ ತಪಸಾಮಪಿ ॥೩೯॥

ಯದಿ ಶ್ರಾವ್ಯಂ ವದಾಪರ್ಣೇ ನ ಗುಹ್ಯಂ ತೇ ಯತೋಽಂಬಿಕೇ ।
ವದ ಗುಹ್ಯಂ ಕೃಪಾಸಾರವೀಕ್ಷಣೇನ ಧಿಯಾ ಮುದಾ ॥೪೦॥

---

ಅಂಬಿಕೆಯೇ, ಹೊಸ ಹಸುವಿನ ಬೆಣ್ಣೆಯಂತೆ ಮಾರ್ದವವನ್ನು ಹೊಂದಿದ್ದ ನಿನ್ನ ಮನಸ್ಸು ಈಗ ಕಠಿನವಾಗಿ ಉಗ್ರತಪಸ್ಸಿನಲ್ಲಿ ಪ್ರವರ್ತಿಸಲು ಕಾರಣವೇನೋ ನನಗೆ ತಿಳಿಯದು. ॥೩೭॥

ಸಾಕ್ಷಾಲ್ಲೋಕೈಕನಾಯಕನಾದ ಮಹಾದೇವನೇ ನಿನ್ನ ಪತಿಯಾಗಿರುವನು. ಅವನಿಂದಲೂ ನೀನು ಸನ್ಮಾನಿತಳಾಗಿರುವೆ. ಹೀಗಿರುವಾಗ ಅವನಪ್ಪಣೆಯನ್ನು ಪಡೆದು ನೀನು ತಪಸ್ಸುಮಾಡುತ್ತಿರುವೆಯೋ? ಅಥವಾ ಅವನ ಅಪ್ಪಣೆಯಿಲ್ಲದೆ ನೀನು ತಪಸ್ಸುಮಾಡುವುದು ತಾನೆ ಹೇಗಾದೀತು! ॥೩೮॥

ಎಷ್ಟು ಯೋಚನೆಮಾಡಿದರೂ ನಿನ್ನ ತಪಸ್ಸಿಗೆ ಕಾರಣವೇ ನನಗೆ ತೋರುವುದಿಲ್ಲ. ಪಾರ್ವತಿಯೇ, ನೀನೇ ಸಕಲತಪಸ್ಸುಗಳಿಗೂ ಫಲವನ್ನು ಕೊಡಲು ಸರ್ವಸಮರ್ಥಳಾಗಿರುವೆ. ॥೩೯॥

ಅಪರ್ಣೆಯೇ, ನಾನು ಕೇಳುತ್ತಿರುವುದು ಉಚಿತವಾಗಿದ್ದರೆ ಮೇಲಿನ ಪ್ರಶ್ನೆಗಳಿಗೆ ಉತ್ತರವನ್ನು ನನಗೆ ತಿಳಿಸು. ಒಂದುವೇಳೆ ರಹಸ್ಯವಾಗಿದ್ದರೂ ನಿನ್ನ ಕೃಪಾಸಾರರೂಪವಾದ ಕಟಾಕ್ಷದೃಷ್ಟಿಯಿಂದ ನನ್ನನ್ನು ಅನುಗ್ರಹಿಸಿ, ಸಂತೋಷವಾದ ಮನಸ್ಸಿನಿಂದ ನನಗೆ ಅದನ್ನು ತಿಳಿಸು ಎಂದು ವೃದ್ಧಬ್ರಾಹ್ಮಣವೇಷಧಾರಿಯಾದ ಪರಶಿವನು ಪಾರ್ವತಿಯನ್ನು ಪ್ರಶ್ನೆಮಾಡಿದನು. ॥೪೦॥

ತಸ್ಯ ತದ್ವಚನಂ ಶ್ರುತ್ವಾ ಗೌರೀ ಗಿರಿವರಾತ್ಮಜಾ ।
ಪ್ರಾಹ ತಂ ವಿನಯಾನ್ನಮ್ರಂ ವೃದ್ಧಂ ತಾಪಸಮುತ್ತಮಂ ॥೪೧॥

॥ ಶ್ರೀಗೌರ್ಯುವಾಚ ॥

ಕಂಚಿತ್ಕಾಮಂ ಪುರಸ್ಕೃತ್ಯ ತಪೋನಿಷ್ಠಾಸ್ಮ್ಯಹಂ ದ್ವಿಜ ।
ನ ಮೇಽಸ್ತಿ ಕಿಂಚಿತ್ಕರ್ತವ್ಯಂ ಕಾರಣಂ ನಾನ್ಯತೋ ಮಮ ॥೪೨॥

ಅಹಮೇವಾಖಿಲಾರಾಧ್ಯಾ ಸರ್ವೇಷಾಂ ತಪಸಾಂ ಫಲಂ ।
ಪ್ರದಾತುಂ ಮೋಚಿತುಂ ಸರ್ವಾನ್ಪಶೂನಹಮತಂದ್ರಿತಾ ॥೪೩॥

ವಿಶ್ವಾಧಿಕೋ ಮಹಾದೇವಸ್ಸರ್ವೇಷಾಮಧಿನಾಯಕಃ ।
ಸ ಮೇ ಭರ್ತಾ ಸಖಾ ಮಾತಾ ಬಂಧುರ್ಮಮ ಪಿತಾ ಶಿವಃ ॥೪೪॥

---

ಹೀಗೆ ಹೇಳಿದ ವೃದ್ಧತಾಪಸನ ಮಾತನ್ನು ಕೇಳಿ ಹಿಮವತ್ಪುತ್ರಿಯಾದ ಗೌರಿಯು, ವಿನಯದಿಂದ ನಮ್ರಳಾಗಿ ನಿಂತಿರುವ ಆ ವೃದ್ಧಬ್ರಾಹ್ಮಣನನ್ನು ಕುರಿತು, ಇಂತೆಂದಳು. ॥೪೧॥

ಎಲೈ ದ್ವಿಜಶ್ರೇಷ್ಠನೇ! ನಾನು ಏನೋ ಒಂದು ಅಪೇಕ್ಷೆಯನ್ನು ಮನಸ್ಸಿನಲ್ಲಿಟ್ಟುಕೊಂಡು ತಪಸ್ಸುಮಾಡುತ್ತಿರುವೆನು. ನನಗೆ ಈ ತಪಸ್ಸಿನಿಂದ ಬೇಕಾದ ಫಲವಾವುದೂ ಇಲ್ಲ. ಅಲ್ಲದೇ ಈರೀತಿ ನಾನು ತಪಸ್ಸುಮಾಡಲು ಇದಕ್ಕೆ ಪ್ರೇರಕರಾರೂ ನನಗಿಲ್ಲ. ನಾನೇ ಸ್ವತಃ ತಪೋನಿಯಮವನ್ನು ಕೈಗೊಂಡಿರುವೆನು. ॥೪೨॥

ನಾನೇ ಸಕಲರಿಗೂ ಪೂಜ್ಯಳಾಗಿರುವೆನು. ಸಕಲ ತಪಸ್ಸುಗಳಿಗೂ ನಾನೇ ಫಲಸ್ವರೂಪಳಾಗಿರುವೆನು. ಸಕಲ ಪ್ರಾಣಿಗಳನ್ನೂ, ಅಜ್ಞಾನಿಗಳನ್ನೂ ಅವರಿಗೆ ಇಷ್ಟವಾದ ವರಪ್ರದಾನದಿಂದ ಸಂತೋಷಪಡಿಸುವುದಕ್ಕೂ, ಅವರಿಗೆ ಉಂಟಾಗಿರುವ ಬಂಧನದಿಂದ ಪಾರುಮಾಡುವುದಕ್ಕೂ, ನಾನು ಸಮರ್ಥಳಾಗಿರುವೆನು. ॥೪೩॥

ಲೋಕಶ್ರೇಷ್ಠನೂ ಸಕಲದೇವತೆಗಳ ಅಧಿಪತಿಯೂ ಆದ ಮಹಾದೇವನೇ ನನಗೆ ಪತಿಯಾಗಿರುವನು. ನನಗೆ ಆತನೇ ಸ್ನೇಹಿತ, ತಾಯಿ, ತಂದೆ, ಬಂಧು, ಬಳಗ. ಎಲ್ಲವೂ ಪರಶಿವನೇ ಎಂದು ನಾನು ನಂಬಿರುವೆನು. ॥೪೪॥

**ತಸ್ಯ ಶಕ್ತಿರಹಂ ಸಾಕ್ಷಾನ್ಮಯಾ ಮಾಯೀ ಮಹೇಶ್ವರಃ ।**
**ಮಯಾ ಕೃತಮಿದಂ ವಿಶ್ವಂ ಲೋಕಲೋಕೈಸ್ಸಮಾವೃತಂ ॥೪೫॥**

**ಮತ್ತೇಜಸೈವ ಸಸೃಜೇ ಯಥಾಪೂರ್ವಂ ವಿಧಿರ್ಜಗತ್ ।**
**ಮತ್ತೇಜಸೈವ ವಿಷ್ಣುಶ್ಚ ಜಗತ್ಪಾತ್ಯಸುರಾರ್ದನಃ ॥೪೬॥**

**ಮತ್ತೇಜಸೈವ ರುದ್ರೋಽಪಿ ಸಂಹರತ್ಯೇಷ ವೈ ಜಗತ್ ।**
**ಮತ್ತೇಜಸೈವ ದೇವೇಂದ್ರಸ್ತ್ರಿವಿಷ್ಟಪವಿನಿಷ್ಠಿತಃ ॥೪೭॥**

**ಮರುತೋ ಮನವಶ್ಚೈವ ಸೋಮಸೂರ್ಯೌ ಋಷೀಶ್ವರಾಃ ।**
**ತಾರಾಜಾಲಮಿದಂ ಸರ್ವಂ ವಾಯುರಗ್ನಿರ್ಯಮೋಽರ್ಯಮಾ ॥೪೮॥**

**ನಿರ್ಋತಿರ್ವರುಣಶ್ಚೈವ ಕುಬೇರೋ ರುದ್ರ ಏವ ಚ ।**
**ದಿಕ್ಪಾಲಾಃ ಪ್ರಮಥಾಧೀಶಾಃ ಸ್ಕಂದಹೇರಂಬಪೂರ್ವಕಾಃ ॥೪೯॥**

---

ನಾನು ಆ ಮಹಾದೇವನಿಗೆ ಸಾಕ್ಷಾತ್ ಶಕ್ತಿಸ್ವರೂಪಿಣಿಯಾಗಿರುವೆನು. ನನ್ನನ್ನೇ ಮಾಯೆಯೆನ್ನುವರು. ನನ್ನಿಂದಲೇ ಮಹೇಶ್ವರನು ಮಾಯೀ ಎನಿಸಿರುವನು. ಈ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನನ್ನಿಂದಲೇ ರಚಿಸಲ್ಪಡುವುದು. ಶಿವನೇ ನನ್ನ ಸಾಹಚರ್ಯದಿಂದ ಜಗದ್ರೂಪನಾಗಿ ಗೋಚರಿಸುವನು. ||೪೫||

ಹಿಂದೆ ಹೇಳಿದಂತೆ ನನ್ನ ತೇಜಸ್ಸಿನ ಬಲದಿಂದಲೇ ಬ್ರಹ್ಮನು ಪ್ರಜಾಸೃಷ್ಟಿ ಕಾರ್ಯವನ್ನು ಕೈಗೊಂಡಿರುವನು. ವಿಷ್ಣುವೂ ನನ್ನ ತೇಜೋಂಶದಿಂದಲೇ ರಾಕ್ಷಸರನ್ನು ನಾಶಪಡಿಸುತ್ತಾ ಲೋಕರಕ್ಷಣೆ ಮಾಡುತ್ತಿರುವನು. ರುದ್ರನೂ ನನ್ನ ಸಹಾಯದಿಂದಲೇ ಲೋಕದ ಸಂಹಾರಕಾರ್ಯವನ್ನೆಸಗುವನು. ||೪೬||

ನನ್ನ ತೇಜಸ್ಸಿನಿಂದಲೇ ದೇವೇಂದ್ರನು ಸ್ವರ್ಗದಲ್ಲಿ ಅಧಿಪತಿಯಾಗಿ ನೆಲಸಿರುವನು. ಸಪ್ತಮರುತ್ತುಗಳೂ, ಚತುರ್ದಶಮನುಗಳೂ, ಚಂದ್ರಸೂರ್ಯರೂ, ಋಷಿಶ್ರೇಷ್ಠರೂ, ನಕ್ಷತ್ರಸಮೂಹವೂ, ವಾಯು, ಅಗ್ನಿ, ಯಮ, ಅರ್ಯಮಾ, ನಿರ್ಋತಿ, ವರುಣ, ಕುಬೇರ, ರುದ್ರ, ಅಷ್ಟದಿಕ್ಪಾಲಕರೂ, ಪ್ರಮಥಗಣಗಳೂ, ಪ್ರಮಥಗಣಗಳಿಗಧಿಪತಿಗಳಾದ ಸ್ಕಂದ, ಹೇರಂಬ ಇವರೇ ಮೊದಲಾದವರೂ, ದೇವಾಸುರರೂ, ದೈತ್ಯರೂ, ಚಕ್ರವರ್ತಿಗಳೂ, ಸಾಮಂತರಾಜರೂ, ನದಿಗಳೂ, ನದ, ಸಮುದ್ರ, ಬೆಟ್ಟಗಳೂ, ಕಾಡುಗಳೂ, ಭೂಲೋಕ, ಭುವರ್ಲೋಕ, ಸುವರ್ಲೋಕ, ಜನ

ಸರ್ವೇ ಸುರಾಸುರಾ ದೈತ್ಯಾ ರಾಜಾನಃ ಪೃಥಿವೀಭುಜಃ ।
ನದೀನದಸಮುದ್ರಾಶ್ಚ ಗಿರಯೋಽಥ ವನಾನಿ ಚ ॥೫೦॥

ಭೂರಾದಿಸಪ್ತಲೋಕಾಶ್ಚ ಪಾತಾಲಾಸ್ತ್ವಥ ಸಪ್ತ ವೈ ।
ಸರ್ವಂ ಮದ್ವಶಗಂ ವಿಪ್ರ ಚರಾಚರಮಿದಂ ಜಗತ್ ॥೫೧॥

ತಸ್ಯೇಶ್ವರಸ್ಯ ಚಿಚ್ಛಕ್ತಿರಹಮೇವ ಸನಾತನೀ ।
ತಥಾಪಿ ಲೋಕಗುಪ್ತ್ಯರ್ಥಂ ಕಿಂಚಿತ್ಕಾಮಂ ಹೃದಿ ಸ್ಮರನ್ ॥೫೨॥

ತಸ್ಯೇಶ್ವರಪ್ರಸಾದಾರ್ಥಂ ಚರಾಮಿ ಪರಮಂ ತಪಃ ।
ಕಿಂಚಿತ್ಪೃಚ್ಛಾಮಿ ವಿಪ್ರೇಂದ್ರ ಶಾಂಭವಾಗ್ರೇಸರೋ ಹ್ಯಸಿ ॥೫೩॥

ತದ್ವದಾದ್ಯಾನುಪೂರ್ವ್ಯೇಣ ಮಾ ತೇಽಸ್ತ್ವದ್ಯ ವ್ಯತಿಕ್ರಮಃ ।
ತಥ್ಯಂ ಪ್ರಬ್ರೂಹಿ ಮಾ ತಥ್ಯಂ ತೇನ ತುಷ್ಟಾಸ್ಮಿ ಶಾಂಭವ ॥೫೪॥

---

ಲೋಕ, ಮಹರ್ಲೋಕ, ತಪೋಲೋಕ ಮತ್ತು ಸತ್ಯಲೋಕಗಳೆಂಬ, ಏಳು ಊರ್ಧ್ವಲೋಕಗಳೂ ಅತಳ, ವಿತಳ, ಸುತಳ, ತಲಾತಲ, ರಸಾತಳ, ಮಹಾತಳ, ಪಾತಾಳಗಳೆಂಬ ಏಳು ಅಧೋಲೋಕಗಳೂ ಮತ್ತು ಚರಾಚರಾತ್ಮಕವಾದ ಈ ನಿಖಿಲ ಜಗತ್ತೂ ನನ್ನ ಅಧೀನವಾಗಿರುವುವು. ॥೪೭-೪೮-೪೯-೫೦-೫೧॥

ಆ ಪರಮೇಶ್ವರನಲ್ಲಿ ಅನಾದಿಕಾಲಗತವಾಗಿರುವ ಚಿಚ್ಛಕ್ತಿಯೇ ನಾನಾಗಿರುವೆನು. ಹೀಗಿದ್ದರೂ ನಾನು ಲೋಕರಕ್ಷಣೆಗೋಸ್ಕರ ಏನೋ ಒಂದು ಅಭಿಲಾಷೆಯನ್ನು ಮನಸ್ಸಿನಲ್ಲಿಟ್ಟುಕೊಂಡು, ಈಗ ಪರಮೇಶ್ವರನ ಅನುಗ್ರಹಸಂಪಾದನೆ ಮಾಡುವುದಕ್ಕೋಸ್ಕರ, ಹೀಗೆ ನಿಯಮದಿಂದ ತಪಸ್ಸುಮಾಡುತ್ತಿರುವೆನು, ಎಂದು ಗೌರಿಯು, ವೃದ್ಧಬ್ರಾಹ್ಮಣವೇಷಧಾರಿಯಾದ ಪರಮೇಶ್ವರನಿಗೆ ಹೇಳಿ; ॥೫೨॥

ಅಯ್ಯ ವಿಪ್ರೋತ್ತಮನೇ! ನೀನು ಶಂಭುವಿನ ಭಕ್ತರಲ್ಲಿ ಅಗ್ರೇಸರನಂತೆ ಕಾಣುವೆ. ನಾನು ನಿನ್ನಲ್ಲಿ ಕೆಲವು ಪ್ರಶ್ನೆಮಾಡುವೆನು. ಅದಕ್ಕೆ ನೀನು ಸುಳ್ಳನ್ನು ಮಾತ್ರ ಹೇಳದೇ ಸತ್ಯವನ್ನು ತಿಳಿಸಬೇಕು. ಇದರಿಂದ ನಾನು ಸಂತುಷ್ಟಳಾಗುವೆನು. ಏಕೆಂದರೆ, ॥೫೩-೫೪॥

ಸತ್ಯಪ್ರಿಯೋಽಹಂ ವಿಪ್ರರ್ಷೇ ಮಮ ಕೈಲಾಸಸದ್ಮನಿ ।
ನೈವಾಶ್ರಮೋ ಮುನಿಗಣೋ ನೋ ಚಾತ್ರ ಪವನೋಽಪಿ ಚ ॥೩೫॥

ಚಂದ್ರಸೂರ್ಯಕರಾಶ್ಚಾಪಿ ನ ಪ್ರಸರ್ಪಂತಿ ಭೂಧರೇ ।
ವಿಷ್ಣುಬ್ರಹ್ಮಾದಯೋ ದೇವಾಃ ಕೈಲಾಸಸ್ಯಾಸ್ಯ ದರ್ಶನೇ ॥೩೬॥

ಬಹುಕಾಲಂ ತಪಸ್ಯಂತಿ ಪ್ರಸಾದಾರ್ಥಂ ಹಿ ಶೂಲಿನಃ ।
ತವ ಪ್ರವೇಶಃ ಕುತ್ರಾಽಭೂತ್ತನ್ಮೇ ವದ ಮುನೇಽಗತಂ ॥೩೭॥

॥ ಸೂತ ಉವಾಚ ॥

ತದಾ ದೇವ್ಯಾ ವಚಶ್ಶ್ರುತ್ವಾ ವಿಪ್ರವೇಷಧರೋ ಹರಃ ।
ಪ್ರೋವಾಚ ಪ್ರಸಭಂ ದೇವೀಂ ಪರಿವಂಚಕ ಈಶ್ವರಃ ॥೩೮॥

॥ ವಿಪ್ರ ಉವಾಚ ॥

ವಿಪ್ರೋಽಹಂ ಭಾರ್ಗವೋ ದೇವಿ ಹಿಮಾಚಲಕೃತಾಶ್ರಯಃ ।
ತತ್ರಾಽಹಮುವಸಂ ವಿಪ್ರಸ್ತಪಃಸ್ವಾಧ್ಯಾಯಶೀಲವಾನ್ ॥೩೯॥

---

ವಿಪ್ರಶ್ರೇಷ್ಠನೇ, ನಾನು ಯಾವಾಗಲೂ ಸತ್ಯದಲ್ಲಿಯೇ ಪ್ರೀತಿಯುಳ್ಳವಳು. ಪ್ರಕೃತ, ನಾನು ವಾಸಮಾಡುತ್ತಿರುವ ಈ ಕೈಲಾಸದಲ್ಲಿ ಯಾವ ಆಶ್ರಮವೂ ಇಲ್ಲ. ಮತ್ತು ಮುನಿಗಣಗಳೂ, ವಾಯುವೂ, ಚಂದ್ರಸೂರ್ಯರ ಕಿರಣಗಳೂ, ಸಹ ಇಲ್ಲಿ ಪ್ರವೇಶಮಾಡಲು ಸಾಧ್ಯವಿಲ್ಲ. ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳೂ ಈ ಕೈಲಾಸಪರ್ವತದ ದರ್ಶನಕ್ಕೂ, ಪರಮೇಶ್ವರನ ಅನುಗ್ರಹವನ್ನು ಸಂಪಾದಿಸುವುದಕ್ಕೂ ಬಹು ಕಾಲದಿಂದ ತಪಸ್ಸುಮಾಡುತ್ತಿರುವರು. ಹೀಗಿರುವಾಗ ನೀನು ಈ ಕೈಲಾಸಪರ್ವತವನ್ನು ಪ್ರವೇಶಿಸಿದುದು ಹೇಗೆ? ಇದೇ ನನಗಿರುವ ಸಂದೇಹ. ಅದನ್ನು ಮರೆಮಾಜದೆ ತಿಳಿಸು ಎಂದು ದೇವಿಯು ಬ್ರಾಹ್ಮಣನನ್ನು ಪ್ರಶ್ನಿಸಿದಳು. ॥೩೫-೩೬-೩೭॥

ದೇವಿಯು ವಿಪ್ರವೇಷಧಾರಿಯಾದ ಪರಮೇಶ್ವರನನ್ನು ಹೀಗೆ ಪ್ರಶ್ನೆ ಮಾಡಲು, ಆಗ ಪರಶಿವನು ಆಶ್ಚರ್ಯಚಕಿತಳಾಗಿರುವ ದೇವಿಯನ್ನು ವಂಚಿಸುವುದಕ್ಕಾಗಿ, ಕೂಡಲೇ ಮುಂದೆ ಹೇಳುವಂತೆ ಉತ್ತರವಿತ್ತನು. ॥೩೮॥

ಮಹೇಶ್ವರಿಯೇ, ನಾನು ಭಾರ್ಗವನೆಂಬ ಹೆಸರುಳ್ಳ ಬ್ರಾಹ್ಮಣನು. ಹಿಮಾಚಲದಲ್ಲಿಯೇ ಆಶ್ರಯವನ್ನು ಪಡೆದು ತಪಸ್ಸು, ವೇದಾಧ್ಯಯನಾದಿಗಳನ್ನು

ಬಹುಜನ್ಮಶತಾವರ್ತೈಸ್ಸದಾ ಲಿಂಗಾರ್ಚಕಸ್ಯ ಮೇ ।
ನ ಜಹಾತಿ ಸ್ಮೃತಿರ್ನಾತಸ್ತತೋಽಹಂ ಪ್ರವದಾಮಿ ತೇ ॥೬೦॥

ಪ್ರಸಾದಸುಮುಖೋ ದೇವೋ ಮಾಮಭಾಷತ ಚೈಕದಾ ॥೬೧॥

ಅಸ್ಮಿನ್ ಜನ್ಮಶತಾಂತೇ ತ್ವಂ ವಿಪ್ರಃ ಕೈಲಾಸಮೌಲಿಗಃ ।
ತತ್ರೈವ ಭವತೋ ಜನ್ಮ ತತ್ರೈವ ತ್ವಂ ಜರಾಂ ಗತಃ ॥೬೨॥

ಸ್ಥಾಸ್ಯಸೇ ಚಿರಕಾಲೀನಃ ಕೌತುಕಾವಹ ಏವ ಮೇ ।
ನಿತ್ಯಸ್ಸದೈವ ಜರಯಾ ಕ್ಷುತ್ಪಿಪಾಸೇ ನ ಚಾನ್ಯಥಾ ॥೬೩॥

ಸ್ಮೃತಿರ್ಜಹಾತಿ ನ ತ್ವಾಂ ಹಿ ಜರಾಜೀರ್ಣೇಽಪಿ ಚ ತ್ವಯಿ ।
ಇತ್ಥಂ ಪ್ರಸಾದಸುಮುಖೋ ಮಾಮಾಹ ಪರಮೇಶ್ವರಃ ॥೬೪॥

---

ನಡೆಸುತ್ತಾ ಅಲ್ಲಿಯೇ ವಾಸಮಾಡುತ್ತಿದ್ದೆನು. ನನಗೆ ಈಗ ನೂರಾರು ಜನ್ಮಗಳು ಕಳೆದಿವೆ. ಆ ನನ್ನ ಪೂರ್ವಜನ್ಮಗಳೆಲ್ಲದರಲ್ಲಿಯೂ ನಾನು ಸದಾ ಪರಮೇಶ್ವರನ ಲಿಂಗವನ್ನೇ ಪೂಜೆಮಾಡುತ್ತಿದ್ದುದರಿಂದ ಈಗಲೂ ನನಗೆ ಆ ಶಿವಲಿಂಗಾರ್ಚನೆಯು, ಮತ್ತು ಶಿವನಾಮಸ್ಮರಣೆಗಳ ಪ್ರಭಾವದಿಂದ ಜನ್ಮಾಂತರಗಳ ಸ್ಮೃತಿಯು ತಪ್ಪದೆ ಉಂಟಾಗುತ್ತಿರುವುದು. ॥೫೯-೬೦॥

ಹೀಗೆಯೇ ನಾನು ಶಿವಲಿಂಗಾರ್ಚನೆಮಾಡಿಕೊಂಡು ಕಾಲಕಳೆಯುತ್ತಿರುವಾಗ, ಒಂದುಸಲ ಪರಶಿವನು ನನ್ನ ಪೂಜೆಯಿಂದ ಸಂತೋಷಗೊಂಡು, ಅನುಗ್ರಹೋನ್ಮುಖನಾಗಿ, ನನಗೆ ಹೀಗೆ ವರವಿತ್ತನು. ॥೬೧॥

"ಓ ವಿಪ್ರನೇ, ನೀನು ಈ ನಿನ್ನ ನೂರನೆಯ ಜನ್ಮವು ಕಳೆದನಂತರ ಕೈಲಾಸಪರ್ವತದಲ್ಲಿಯೇ ಬ್ರಾಹ್ಮಣನಾಗಿ ಜನಿಸಿ, ಅಲ್ಲಿಯೇ ಸಂಚರಿಸುತ್ತಾ ಅಲ್ಲೇ ಮುಪ್ಪನ್ನು ಪಡೆಯುವೆ ; ॥೬೨॥

ನೀನು ಈ ಕೈಲಾಸಪರ್ವತದಲ್ಲಿಯೇ ನನಗೆ ಯಾವಾಗಲೂ ಸಂತೋಷವನ್ನುಂಟುಮಾಡುತ್ತಾ, ಜರಾಯುಕ್ತನಾಗಿದ್ದರೂ ಹಸಿವು ಬಾಯಾರಿಕೆಗಳಿಗೊಳಗಾಗದೆ, ಬಹುಕಾಲದ ವರೆವಿಗೆ ಇರುವೆ. ಮತ್ತು ನಿನಗೆ ಮುಪ್ಪಿನಲ್ಲಿಯೂ ಸ್ಮರಣಶಕ್ತಿಯು ನಾಶವಾಗದೇ ಹಿಂದಿನಂತೆಯೇ ಇರಲಿ" ಎಂದು ಪ್ರಸನ್ನನಾದ ಪರಮೇಶ್ವರನು ನನಗೆ ಅನುಗ್ರಹಿಸಿರುವನು. ॥೬೩-೬೪॥

ತಸ್ಮಾದ್ವತ್ಸ್ಯೇಽಹ ಕೈಲಾಸೇ ಪ್ರಸಾದೇನ ಮಹೇಶಿತುಃ ।
ತವ ಪ್ರಭಾವಂ ವಿಜ್ಞಾತುಂ ಮಾಮಾಹ ಪರಮೇಶ್ವರಿ ॥೬೫॥

॥ ಸ್ಕಂದ ಉವಾಚ ॥

ಇತಿ ವಿಪ್ರವಚಶ್ಶ್ರುತ್ವಾ ಸಾಶ್ಚರ್ಯಂ ಸಮಭಾಷತ ।
ಮೌಲಿಮಾನ್ದೋಲಯನ್ದೇವೀ ನಾಸಾಗ್ರನ್ಯಸ್ತತರ್ಜನೀ ॥೬೬॥

॥ ಗೌರ್ಯುವಾಚ ॥

ಕದಾಚಿನ್ಮಾಂ ರಹಸ್ಯೇಽಪಿ ನೋಕ್ತವಾನ್ಪರಮೇಶ್ವರಃ ।
ವಿಪ್ರೋಽಸ್ತಿ ತಾಪಸೋ ವೃದ್ಧೋ ಬಹುವರ್ಷಾಯುರುತ್ತಮಃ ॥೬೭॥

ಮಮ ಲಿಂಗಾರ್ಚಕಸ್ಸಾಧುರಸ್ಮಿನ್ಕೈಲಾಸಪರ್ವತೇ ।
ಇತಿ ಸಾ ವಿಸ್ಮಯೇನಾಹ ತತೋ ವಿಪ್ರೋಽಭ್ಯುವಾಚ ತಾಂ ॥೬೮॥

---

ಎಲೌ ದೇವಿಯೇ, ಆ ಪರಮೇಶ್ವರನ ಅನುಗ್ರಹದಿಂದ ನಾನು ಅದೇರೀತಿ ಈ ಕೈಲಾಸಪರ್ವತದಲ್ಲಿ ಈಗ ವಾಸಮಾಡುತ್ತಿರುವೆನು. ಆದರೆ ಈಗ ಪರಮೇಶ್ವರನು ನಿನ್ನ ಪ್ರಭಾವವನ್ನು ತಿಳಿದುಕೊಂಡು ಬರುವಂತೆ ನನಗೆ ಆಜ್ಞಾಪಿಸಿದನು. ಎಂದು ವಿಪ್ರವೇಷಧಾರಿಯಾದ ಪರಮೇಶ್ವರನು ಗಿರಿಜಾದೇವಿಗೆ ತಿಳಿಸಿ ಸುಮ್ಮನಾದನು. ॥೬೫॥

ಬ್ರಾಹ್ಮಣನ ಈ ಮಾತುಗಳನ್ನು ಕೇಳಿ ದೇವಿಯು ಆಶ್ಚರ್ಯದಿಂದ ತಲೆಯನ್ನಲ್ಲಾಡಿಸುತ್ತಾ, ಮೂಗಿನ ತುದಿಯಲ್ಲಿ ತರ್ಜನೀಬೆರಳನ್ನಿಟ್ಟುಕೊಂಡು ಸ್ವಲ್ಪ ಹೊತ್ತು ಹೀಗೆ ಯೋಚಿಸಿದಳು. ॥೬೬॥

ಪರಮೇಶ್ವರನು, ಈ ಕೈಲಾಸಪರ್ವತದಲ್ಲಿ ಶಿವಲಿಂಗವನ್ನು ಸದಾ ಪೂಜಿಸುತ್ತಿರುವ ಶ್ರೇಷ್ಠನಾದ ಇಂತಹ ವೃದ್ಧತಾಪಸನು ಇರುವನೆಂಬುದನ್ನು ರಹಸ್ಯದಲ್ಲಿಯೂ ನನಗೆ ತಿಳಿಸಿಲ್ಲವಲ್ಲಾ! ಎಂಬ ಆಶ್ಚರ್ಯದಿಂದ ದೇವಿಯು ಕೂಡಿರಲು ಆಗ ಬ್ರಾಹ್ಮಣವೇಷಧಾರಿಯಾದ ಪರಮಾತ್ಮನು ಗೌರಿಯನ್ನು ಕುರಿತು ಹೀಗೆಂದನು. ॥೬೭-೬೮॥

॥ ವಿಪ್ರ ಉವಾಚ ॥

ತ್ವತ್ತಃ ಪ್ರಿಯತರಾ ಭಕ್ತಾ ಮಹಾದೇವಸ್ಯ ಶಂಕರಿ ।
ನೈವಾಕಥಿ ಶಿವೇನ ತ್ವಂ ಕಿಂಚಿದ್ವಕ್ಷ್ಯಾಮಿ ತೇ ಹಿತಂ ॥೧೯॥

ಭಕ್ತಿಪ್ರಿಯೋ ಮಹಾದೇವೋ ಭಾವವಶ್ಯೋ ಮಹೇಶ್ವರಃ ।
ಸರ್ವಜ್ಞಾಸಿ ವಿಶೇಷೇಣ ತ್ವಯಿ ವಾಚ್ಯಂ ನ ವಿದ್ಯತೇ ॥೨೦॥

ತಥಾಪಿ ಕಿಂಚಿದ್ವಕ್ಷ್ಯಾಮಿ ಜರಸಾ ಚ ಪರಿಪ್ಲುತಃ ।
ಕಾಯಕ್ಲೇಶಕರೇಣಾಲಂ ತಪಸಾ ಪರಮೇಶ್ವರಿ ॥೨೧॥

ಕಿಂ ಕಾಯಕ್ಲೇಶನಿಚಯೈರ್ಧರ್ಮಾಭಾಸನಿಭೈಶ್ಶಿವೇ ।
ಅರ್ಥವ್ಯಯಾಯಾಸಲಭ್ಯೈಃ ಪತನಾಂತೈರ್ದುರಾಸದೈಃ ॥೨೨॥

---

ಶಂಕರಿಯೇ, ನಿನಗಿಂತಲೂ ಪ್ರೀತಿಪಾತ್ರರಾದ ಭಕ್ತರು ಮಹಾದೇವನಿಗೆ ಬಹಳ ಮಂದಿ ಇರುವರು. ಅದರಿಂದಲೇ ಪರಶಿವನು ರಹಸ್ಯವಾದ ನನ್ನ ವಿಷಯವನ್ನು ನಿನಗೆ ಹೇಳಿಲ್ಲ. ದೇವಿಯೇ, ನಿನಗೆ ಹಿತಕರವಾದ ಎರಡು ಮಾತುಗಳನ್ನಾಡುವೆನು, ಲಾಲಿಸು. ॥೧೯॥

ಮಹಾದೇವಿಯೇ, ಮಹಾದೇವನು ಭಕ್ತಿಯಿಂದ ತನ್ನನ್ನು ಶರಣು ಹೊಕ್ಕವರನ್ನು ಪ್ರೀತಿಸುವನು. ಮಹೇಶ್ವರನು ಅನನ್ಯಭಾವದಿಂದ ತನ್ನನ್ನು ಪೂಜಿಸುವವರಿಗೆ ಅಧೀನನಾಗುವನು. ದೇವಿಯೇ, ನೀನು ಸರ್ವಜ್ಞಳು. ವಿಶೇಷವಾಗಿ ನಿನ್ನ ಮುಂದೆ ನಾನು ಹೇಳಬೇಕಾದದ್ದೇನೂ ಇಲ್ಲ. ॥೨೦॥

ಆದರೂ ಮುಪ್ಪಿನಿಂದ ಜೀರ್ಣನಾದ ನಾನು ನಿನಗೆ ಒಂದೆರಡು ಮಾತುಗಳನ್ನು ತಿಳಿಸುವೆನು. ಪರಮೇಶ್ವರಿಯೇ, ಶರೀರಕ್ಕೆ ತುಂಬಾ ಕ್ಲೇಶವನ್ನುಂಟುಮಾಡುವ ಈ ತಪಸ್ಸನ್ನು ನಿಲ್ಲಿಸು. ॥೨೧॥

ಯೋಗಾಭ್ಯಾಸಗಳೂ, ಯಾಗಾನುಷ್ಠಾನ, ತೀರ್ಥಯಾತ್ರಾ, ಕೃಚ್ಛ್ರ ಚಾಂದ್ರಾಯಣಾದಿ ವ್ರತಾಚರಣೆ, ಅತಿ ಕಷ್ಟದಿಂದ ಧರ್ಮವನ್ನುಂಟುಮಾಡುವ ಇಷ್ಟಪೂರಕ ಯಾಗಗಳು; ಇವೆಲ್ಲವೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣಗಳಿಗೂ, ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸವೆಂಬ ಆಶ್ರಮಗಳ ನಿಯಮಗಳಿಗೂ, ಒಳಪಟ್ಟವುಗಳು. ಇವುಗಳು ಕೇವಲ ಶರೀರಾಯಾಸಗಳಿಂದ

ಯೋಗೈರ್ಯಾಗೈಸ್ತೀರ್ಥಯಾತ್ರಾವ್ರತಕೃಚ್ಛ್ರಾದಿಸಾಧನೈಃ ।
ಇಷ್ಟಾಪೂರ್ತೈಃ ಕಷ್ಟಧರ್ಮೈರ್ವರ್ಣಾಶ್ರಮನಿಬಂಧನೈಃ ॥೨೩॥

ಶ್ರಮೈಕಧಾರಂ ನೋ ಸೌಖ್ಯಂ ಚಿತ್ತಶಾಂತಿರ್ನ ಚೈವ ಹಿ ।
ಅತಿಕಲ್ಮಷಚಿತ್ತಾನಾಂ ಸಂಸಾರಾಸಾರವರ್ತಿನಾಂ ॥೨೪॥

ಜಡಾನಾಮಲ್ಪಸಾರಾಣಾಂ ಕ್ರಮಾನ್ಮುಕ್ತಿಪ್ರದಾ ಹಿ ತೇ ।
ತಸ್ಮಾತ್ತ್ವಯಾ ನ ಸಂಸೇವ್ಯೋ ದಾರುಣೋಽಯಮವಗ್ರಹಃ ॥೨೫॥

ಸಾಕ್ಷಾನ್ಮುಕ್ತಿಪ್ರದಂ ಧರ್ಮಂ ಶಿವಲಿಂಗಾರ್ಚನಂ ಶಿವೇ ।
ತಸ್ಮಿನ್ಸಂಪೂಜಿತೇ ಶಂಭುರ್ನಿತರಾಂ ಪರಿತುಷ್ಯತಿ ॥೨೬॥

---

ಮಾಡಲು ಸಾಧ್ಯವಾದ ಧರ್ಮಾಭಾಸರೂಪವಾದವುಗಳು. ಇವುಗಳನ್ನು ವಿಪರೀತವಾಗಿ ಆಚರಿಸುವುದರಿಂದ, ಸುಕೃತಕ್ಕೆ ಬದಲಾಗಿ ಪಾಪವೇ ಸಂಘಟಿಸುವುದುಂಟು. ಅಲ್ಲದೇ ಅವುಗಳಿಗಾಗಿ ದ್ರವ್ಯವ್ಯಯವನ್ನು ಬಹುವಾಗಿ ಮಾಡಬೇಕು. ಹೀಗೆ ಮಾಡಿದರೂ ಶಾಶ್ವತವಾದ ಮುಕ್ತಿರೂಪವಾದ ಫಲವನ್ನು ಇವು ಕೊಡಲಾರವು. ಆದುದರಿಂದ ಇಂತಹ ತಪಸ್ಸಿನಿಂದ ನೀನು ನಿನ್ನ ಶರೀರವನ್ನು ನೋಯಿಸುವುದು ಚಿತವಲ್ಲ. ||೨೨-೨೩||

ಈ ನಿಯಮಾನುಷ್ಠಾನವು ಕೇವಲ ಶ್ರಮಮಾತ್ರವನ್ನುಂಟುಮಾಡುವುದೇ ವಿನಾ ಆನಂದವೂ, ಮನಶ್ಶಾಂತಿಯೂ ಇವುಗಳಿಂದ ಎಂದಿಗೂ ಉಂಟಾಗಲಾರವು. ಆಸಾರವಾದ ಸಂಸಾರಚಕ್ರದಲ್ಲಿ ಸಿಕ್ಕಿ, ಅತ್ಯಂತ ಕಲ್ಮಷದಿಂದ ಕೂಡಿದ ಮನಸ್ಸುಳ್ಳ ಅಲ್ಪಾಯುಗಳಾದ ಮಂದಮತಿಗಳಿಗೆ ಮಾತ್ರ ಈ ವ್ರತಾದಿಗಳು ಕ್ರಮವಾಗಿ ಮುಕ್ತಿಯನ್ನುಂಟುಮಾಡುತ್ತವೆಯೇ ಹೊರತು ಅವರಿಗೂ ಇವು ಸಾಕ್ಷಾನ್ಮುಕ್ತಿಪ್ರದಗಳಲ್ಲ. ||೨೪-೨೫||

ಆದುದರಿಂದ ಎಲೌ ದೇವಿಯೇ, ಈ ಭಯಂಕರವಾದ ತಪಸ್ಸು ನಿನಗೆ ಉಚಿತವಲ್ಲ ಬಿಡು. ದೇವಿಯೇ, ಸಾಕ್ಷಾತ್ ಪರಮೇಶ್ವರನ ಲಿಂಗಾರ್ಚನೆಯೇ ಮೋಕ್ಷವನ್ನು ಕೊಡುವ ಮುಖ್ಯ ಧರ್ಮವಾಗಿರುವುದು. ಶಿವಲಿಂಗವನ್ನು ಪೂಜೆ ಮಾಡುವುದರಿಂದಲೇ ಶಂಭುವು ತೃಪ್ತನಾಗುವನು. ||೨೬||

ಅಧಿಕಾರಿವಿಭೇದೇನ ಧರ್ಮಾಭಾಸಾಶ್ಶಿವೇನ ಹಿ ।
ಕಲ್ಪಿತಾಶ್ಶ್ರೀಮಹೇಶೇನ ಶ್ರೌತಸ್ಮಾರ್ತಪುರಾಣಕಾಃ ॥೭೭॥

ವಿಪ್ರಾಣಾಂ ಶ್ರೌತಧರ್ಮೋ ಹಿ ಕಥಿತೋಽಸ್ತಿ ಸ್ಮೃತೇರಪಿ ।
ಕ್ಷತ್ರಿಯಾಣಾಂ ವಿಶಾಂ ಚಾಪಿ ಪೌರಾಣಶ್ಶೂದ್ರ ಏವ ಹಿ ॥೭೮॥

ತಾಂತ್ರಿಕೇ ವೈದಿಕಶ್ಚಾಪಿ ನ ನಿಯೋಜ್ಯೋಽಸ್ತಿ ಶಂಕರಿ ।
ಕರ್ಮವಾದಮಿದಂ ಶ್ರೌತಂ ಯಜ್ಞಾಧ್ಯಯನಸತ್ಕ್ರಿಯಾಃ ॥೭೯॥

ಯಜ್ಞೈರಿಷ್ಟ್ವಾ ಮಹಾದೇವಂ ಸ್ಮಾರ್ತೈರಪಿ ಸದಾಶಿವಂ ।
ಶುದ್ಧಸ್ಯ ಕರ್ಮಭಿರ್ದೇವಿ ತತೋ ಭೂಯಾದುಪಾಸನಂ ॥೮೦॥

---

ಆದರೆ ಮೇಲೆ ಹೇಳಿದ ಈ ವ್ರತಾದಿಗಳು ಪ್ರಯೋಜನರಹಿತಗಳೆಂದು ತಿಳಿಯಬೇಡ. ಪರಮೇಶ್ವರನು ಅವುಗಳಿಗೆ ಅಧಿಕಾರಿಗಳನ್ನು ಕ್ರಮವಾಗಿ ವಿಭಾಗ ಮಾಡಿ, ಯಾರು ಯಾವ ಧರ್ಮಗಳಿಗೆ ಯೋಗ್ಯರೋ, ಅವರೇ ಅದನ್ನು ಮಾಡಿದರೆ ಅದು ಧರ್ಮವಾಗಿ ಪರಿಣಮಿಸುವುದೆಂದು ನಿಯಮಮಾಡಿರುವನು. ಶ್ರುತಿ, ಸ್ಮೃತಿ ಮತ್ತು ಪುರಾಣ ಇವುಗಳನ್ನು ನಿರ್ಮಿಸಿ, ತನ್ಮೂಲಕ ಶ್ರೌತಸ್ಮಾರ್ತಪೌರಾಣಿಕವಾದ ನಿಯಮಗಳನ್ನು ಪ್ರಚಾರಮಾಡಿರುವನು. ॥೭೭॥

ಶ್ರೌತಧರ್ಮವು ಅಂದರೆ ಶ್ರುತ್ಯುಕ್ತವಾದ ಧರ್ಮಾಚರಣೆಯು, ವಿಪ್ರನಿಗೆ ವಿಹಿತವಾಗಿದೆ. ಕ್ಷತ್ರಿಯರಿಗೂ ಮತ್ತೂ ವೈಶ್ಯರಿಗೂ ಸ್ಮೃತ್ಯುಕ್ತವಾದ ಧರ್ಮವು ಉಕ್ತವಾಗಿರುವುದು. ಶೂದ್ರನಿಗಾದರೋ ಪುರಾಣೋಕ್ತವಾದ ಧರ್ಮಾಚರಣೆಯೇ ಶ್ರೇಷ್ಠವೆಂದು ನಿಯಮಿಸಲ್ಪಟ್ಟಿರುವುದು. ॥೭೮॥

ವೈದಿಕನಾದವನು ಅಂದರೆ ಶ್ರೌತಧರ್ಮವನ್ನವಲಂಬಿಸಿದವನು ತಾಂತ್ರಿಕವಾದ ಪುರಾಣೋಕ್ತಧರ್ಮವನ್ನು ಆಚರಿಸಬಾರದು. ಶಂಕರಿಯೇ, ಯಜ್ಞ, ಅಧ್ಯಯನ, ಸತ್ಕರ್ಮ ಇವುಗಳೆಲ್ಲವೂ ಶ್ರೌತಕ್ಕೆ ಸಂಬಂಧಪಟ್ಟ ಧರ್ಮಗಳು, ಇದಕ್ಕೆ ಕರ್ಮವಾದವೆಂತಲೂ ಹೆಸರುಂಟು. ॥೭೯॥

ದೇವಿಯೇ, ಮೊದಲು ಶ್ರುತ್ಯುಕ್ತವಾದ ಯಜ್ಞಾಚರಣೆಯಿಂದ ಮಹಾದೇವನನ್ನು ಪೂಜಿಸಿ, ಅನಂತರ ಸ್ಮೃತಿಪ್ರೋಕ್ತವಾದ ಇತರ ಕರ್ಮಾದಿಗಳಿಂದ ಶಂಕರನನ್ನು ತೃಪ್ತಿಪಡಿಸಬೇಕು. ಆಮೇಲೆ ಪರಿಶುದ್ಧವಾದ ಮನಸ್ಸಿನಿಂದ ಪರಮೇಶ್ವರನನ್ನು ಉಪಾಸನೆಮಾಡಬೇಕು. ॥೮೦॥

ಉಪಾಸನಾಯಾಂ ಯೇ ಧರ್ಮಾಸ್ತಾಞ್ಛೃಣು ತ್ವಮಿಹಾಂಬಿಕೇ ।
ಅಗ್ನಿರಿತ್ಯಾದಿಭಿರ್ಮಂತ್ರೈರ್ವಿಭೂತ್ಯುದ್ಧೂಲನಂ ತಥಾ ॥೮೧॥

ತ್ರಿಯಂಬಕೈಶ್ಚ ಗಿರಿಜೇ ಭಸ್ಮನಾಪ್ಯವಕುಂಠನಂ ।
ತ್ರಿಯಾಯುಷೈಸ್ತ್ರ್ಯಂಬಕೈಶ್ಚ ತ್ರಿಪುಂಡ್ರಪರಿಧಾರಣಂ ॥೮೨॥

ತತೋ ರುದ್ರಜಪಶ್ಚೈವ ಪಂಚಾಕ್ಷರಜಪಸ್ತಥಾ ।
ರುದ್ರಾಕ್ಷಧಾರಣಂ ದೇವಿ ಶಿರೋಬಾಹುಗಲಾದಿಷು ॥೮೩॥

ತ್ರಿಪುಂಡ್ರಸ್ಯ ಚ ಯನ್ಮಂತ್ರಂ ತದ್ವೈ ರುದ್ರಾಕ್ಷಧಾರಣೇ ।
ಮಹಾಭಸ್ಮ ಮಹಾದೇವಸ್ಸಂಸಾರಭಯನಾಶಕಃ ॥೮೪॥

ತತೋ ಲಿಂಗಾರ್ಚನಂ ಶ್ರೇಷ್ಠಂ ಬಿಲ್ವಪತ್ರೈರ್ಮಹೇಶ್ವರಿ ।
ಏವಂ ಸತತಯುಕ್ತಸ್ಯ ಶಿವಧ್ಯಾನೇ ಭವೇನ್ಮತಿಃ ॥೮೫॥

---

ಪರಮೇಶ್ವರನ ಉಪಾಸನೆಗೆ ಮುಖ್ಯವಾದ ಧರ್ಮಾಚರಣೆಗಳನ್ನು ಹೇಳುವೆನು ಕೇಳು. 'ಅಗ್ನಿರಿತಿಭಸ್ಮ' ಇತ್ಯಾದಿ ಉಪನಿಷನ್ಮಂತ್ರದಿಂದ ವಿಭೂತಿಯನ್ನು ತೆಗೆದುಕೊಳ್ಳಬೇಕು. 'ತ್ರ್ಯಂಬಕಂ ಯಜಾಮಹೆ' ಎಂಬ ಮಂತ್ರದಿಂದ ಅದನ್ನು ಲೇಪಿಸಿಕೊಳ್ಳಬೇಕು. 'ತ್ರಿಯಾಯುಷಂ' 'ತ್ರ್ಯಂಬಕಂ' ಎಂಬ ಮಂತ್ರಗಳನ್ನು ಉಚ್ಚಾರಣೆಮಾಡುತ್ತಾ ತ್ರಿಪುಂಡ್ರಧಾರಣೆಯನ್ನು ಮಾಡಬೇಕು. ॥೮೧-೮೨॥

ಆಮೇಲೆ ರುದ್ರಾಧ್ಯಾಯಜಪವನ್ನೂ ಶಿವಪಂಚಾಕ್ಷರಜಪವನ್ನೂ ಮಾಡಬೇಕು. ದೇವಿಯೇ, ತಲೆ ಬಾಹುಗಳು ಮತ್ತು ಕುತ್ತಿಗೆ ಈ ಪ್ರದೇಶಗಳಲ್ಲಿ ರುದ್ರಾಕ್ಷವನ್ನು (ಮಾಲೆಯನ್ನು) ಧರಿಸಬೇಕು. ॥೮೩॥

ತ್ರಿಪುಂಡ್ರವನ್ನು ಧಾರಣೆಮಾಡುವಾಗ ಉಚ್ಚರಿಸುವ 'ತ್ರಿಯಾಯುಷಂ' 'ತ್ರ್ಯಂಬಕಂ ಯಜಾಮಹೇ' ಎಂಬ ಮಂತ್ರಗಳೇ ರುದ್ರಾಕ್ಷಮಾಲೆಯನ್ನು ಧಾರಣೆಮಾಡುವ ಸಮಯದಲ್ಲಿಯೂ ಉಚ್ಚರಿಸಲ್ಪಡಬೇಕು. ಭಸ್ಮಧಾರಣೆಯೂ, ಮಹಾದೇವನ ನಾಮಸ್ಮರಣೆಯೂ, ಸಂಸಾರದ ಭಯವನ್ನು ತೊಲಗಿಸಿ ಶಾಂತಿಯನ್ನುಂಟುಮಾಡತಕ್ಕವುಗಳು. ॥೮೪॥

ಹೀಗೆ ತ್ರಿಪುಂಡ್ರಧಾರಣೆ ಮತ್ತು ರುದ್ರಾಕ್ಷಮಾಲಾಧಾರಣೆಯಾದನಂತರ ಬಿಲ್ವಪತ್ರೆಗಳಿಂದ ಭಕ್ತಿಪೂರ್ವಕವಾಗಿ ಶಿವಲಿಂಗಾರ್ಚನೆಯನ್ನು ಮಾಡಬೇಕು.

ಸೂರ್ಯಾತ್ಮನೋ ಮಹೇಶಸ್ಯಾಪ್ಯಮೂರ್ತಸ್ಯಾಪಿ ಶೂಲಿನಃ ।
ತ್ರಿಣೇತ್ರಂ ನೀಲಕಂಠಂ ಚ ಸಾಂಬಂ ಹೃತ್ಸ್ಥಂ ವಿಚಿಂತಯೇತ್ ॥೮೬॥

ತತೋಽಪಿ ಧ್ಯಾನತಶ್ಶಂಭೋರ್ನಿತ್ಯಾನಿತ್ಯವಿವೇಕತಃ ।
ಗುರುಶುಶ್ರೂಷಯಾ ಚೈವ ವೇದಾಂತಾರ್ಥವಿಚಾರತಃ ॥೮೭॥

ಸರ್ವಮಾತ್ಮಮಯಂ ಭಾತಿ ತಸ್ಯೈವಾನುಗ್ರಹಾಚ್ಛಿವೇ ।
ಬ್ರಹ್ಮೈವ ಬ್ರಹ್ಮ ಭವತಿ ನಾನ್ಯದತ್ರಾಸ್ತಿ ಕಿಂಚನ ॥೮೮॥

ಜ್ಞಾನೇನ ಜ್ಞೇಯಮಾಲೋಕ್ಯ ಜ್ಞಾನಂ ತತ್ರ ವಿವರ್ಜಯೇತ್ ।
ಜ್ಞಾನಂ ಜ್ಞೇಯಂ ತಥಾ ಧ್ಯಾತಾ ಧ್ಯೇಯಂ ಧ್ಯಾನಂ ತಥೈವ ಚ ॥೮೯॥

---

ಮಹೇಶ್ವರ ಪ್ರಿಯಳೇ! ಈ ರೀತಿ ಅನವರತವೂ ಆಚರಿಸುವವನು ಶಿವಧ್ಯಾನಕ್ಕೆ ಯೋಗ್ಯವಾದ ಚಿತ್ತವನ್ನು ಹೊಂದುವನು. ॥೮೫॥

ಮಹೇಶ್ವರನು, ಸೂರ್ಯಸ್ವರೂಪನು. ಮತ್ತು ಆತನು ಮೂರ್ತಪದಾರ್ಥವಲ್ಲದಿದ್ದರೂ ಶೂಲಿಯೆನಿಸಿರುವನು. ಇಂತಹ ತ್ರಿಶೂಲಧಾರಿಯೂ, ಮೂರುಕಣ್ಣುಳ್ಳವನೂ, ಕಪ್ಪಾದ ಕುತ್ತಿಗೆಯುಳ್ಳವನೂ, ಆದ ಸಾಂಬನನ್ನು ಮನಸ್ಸಿನಲ್ಲಿಯೇ ಸಗುಣೋಪಾಸನ ವಿಧಿಯಿಂದ ಚಿಂತಿಸಬೇಕು. ॥೮೬॥

ಆಮೇಲೆ ಶಂಭುವಿನ ಧ್ಯಾನಬಲದಿಂದಲೂ, ನಿತ್ಯಾನಿತ್ಯವಸ್ತುವಿವೇಚನೆಯಿಂದಲೂ, ಗುರುಗಳ ಉಪದೇಶದಿಂದಲೂ ವೇದಾಂತಾರ್ಥವನ್ನು ಚೆನ್ನಾಗಿ ಅಭ್ಯಾಸಮಾಡುವಿಕೆಯಿಂದಲೂ, "ಆ ಪರಶಿವನು ಪರಬ್ರಹ್ಮಸ್ವರೂಪನು; ಆತನು ನಿರ್ಗುಣನು; ಲೋಕವೆಲ್ಲಾ ಬ್ರಹ್ಮಮಯವಾದದ್ದು; ಎಲ್ಲವೂ ಪರಮಾತ್ಮ ಸ್ವರೂಪವಾಗಿಯೇ ತೋರುವುದು." ಎಂಬುದನ್ನು ಅರಿಯಬೇಕು. ॥೮೭॥

ಆ ವಿಧವಾದ ಬ್ರಹ್ಮಜ್ಞಾನವುಂಟಾದರೆ, ಉಪಾಸಕನಿಗೆ ಎಲ್ಲಿ ನೋಡಿದರೂ ಪರಬ್ರಹ್ಮನೊಬ್ಬನನ್ನು ಬಿಟ್ಟು ಬೇರೆ ಯಾವ ಪದಾರ್ಥವೂ ಗೋಚರಿಸುವುದೇ ಇಲ್ಲ. ಇದೇ ನಿರ್ಗುಣೋಪಾಸಕನು ಅರಿಯುವ ಬ್ರಹ್ಮತತ್ತ್ವ. ॥೮೮॥

ಆಗ ಉಂಟಾಗಿರುವ ಜ್ಞಾನದಿಂದ, ತಿಳಿಯಬೇಕಾದ ವಸ್ತುವನ್ನು ಅಂದರೆ ಬ್ರಹ್ಮ ಸಾಕ್ಷಾತ್ಕಾರ ಪಡೆದು ಅನಂತರ ಆ ಜ್ಞಾನವನ್ನು ದೂರಮಾಡಬೇಕು. ಜ್ಞಾನವು ಪರಬ್ರಹ್ಮ ಪ್ರಾಪ್ತಿಗೆ ಕಾರಣವಾದುದರಿಂದ ಅದು ಲಭಿಸಿದ ನಂತರ

ಆತ್ಮೈವೇದಂ ಕಿಲ್ಮೈಶಾನಿ ಬ್ರಹ್ಮೈವೇದಂ ಹಿ ನೇತರತ್ ।
ತದಾ ವಿಜ್ಞಾಯತೇ ಜ್ಞಾನಂ ಶಿವಾನುಗ್ರಹತಃ ಪರಂ ॥೯೦॥

ಕಿಂ ವಕ್ತವ್ಯಮುಮಾಸಹಾಯಚರಣಾಂಭೋಜಾರ್ಚನಧ್ಯಾನತೋ ।
ನಾನ್ಯಲ್ಲಿಂಗಸಮರ್ಚನಾರ್ಚಿತಮಹಾಪುಣ್ಯಾಂಬುರಾಶೇಃ ಪರಂ ।
ಸರ್ವಂ ಲಭ್ಯತ ಏವ ಶಂಭುಭಜನಾತ್ಕಿಂ ಕಾರ್ಯಮುದ್ಯೇತರೈಃ ।
ಧರ್ಮಾಭಾಸಪರಂಪರಾಭಿರಗಜೇ ಭೂಯಾಚ್ಛ್ರಮಃ ಕೇವಲಂ ॥೯೧॥

ಯೋ ದೇವಂ ಸುಚಿರಂ ಶಿರೋವ್ರತಪರೋ ಲಿಂಗೇ ಸ್ಥಿರೇ ವಾ ಚರೇ ।
ಬಿಲ್ವೈಃ ಪೂಜಯತಿ ತ್ರಿಕಾಲನಿಯತಂ ತೇನೈವ ತಪ್ತಂ ತಪಃ ॥೯೨॥

---

ಕಾರಣಭೂತವಾದ ಜ್ಞಾನವು ತಾನಾಗಿಯೇ ಹೋಗುವುದು. ಜ್ಞಾನಜ್ಞೇಯಭಾವ, ಧ್ಯಾನಧ್ಯೇಯಭಾವ, ಇವೆಲ್ಲವೂ ಜ್ಞೇಯ ಸಾಧನಾನಂತರದಲ್ಲಿ ವ್ಯರ್ಥವೆನಿಸುವುವು. ॥೮೯॥

ಆತ್ಮಸ್ವರೂಪವು ಕೇವಲ ಪರಬ್ರಹ್ಮಸ್ವರೂಪವೇ ಹೊರತು ಬೇರೆಯಲ್ಲವೆಂದು ತಿಳಿದಮೇಲೆ ಶಿವನ ಅನುಗ್ರಹದಿಂದ ಉತ್ಕೃಷ್ಟವಾದ ಜ್ಞಾನವು ಲಭಿಸುವುದು. ॥೯೦॥

ಎಲೌ ನಗರಾಜ ಪುತ್ರಿಯೇ! ಉಮಾಪತಿಯಾದ ಪರಮೇಶ್ವರನ ಪಾದಾಂಬುಜಧ್ಯಾನ, ಪೂಜಾದಿಗಳು, ಮತ್ತು ಶಿವಲಿಂಗಾರ್ಚನೆಯಿಂದಲೂ, ಅತಿಶಯವಾದ ಪುಣ್ಯವು ಲಭಿಸುವುದು. ಸಕಲವಾದ ಅಭೀಷ್ಟಗಳೂ ಕೇವಲ ಶಂಭು ಭಜನೆಯಿಂದಲೇ ದೊರಕುವಾಗ ಈ ಧರ್ಮಾಭಾಸರೂಪವಾದ ತಪಸ್ಸು, ವ್ರತನಿಯಮಾದಿಗಳೆಲ್ಲವೂ, ಕೇವಲ ಕಾಯಕ್ಲೇಶಕರಗಳೇ ಹೊರತು ಇದರಿಂದ ಬೇರೆ ಪ್ರಯೋಜನವಿಲ್ಲ. ॥೯೧॥

ಮುಖ್ಯವಾದ ವ್ರತವನ್ನು ಆಚರಿಸುತ್ತಾ ಪರಮೇಶ್ವರನನ್ನು ಸ್ಥಿರ ಅಥವ ಚರರೂಪವಾದ ಲಿಂಗದಲ್ಲಿ, ಪ್ರಾತಃ, ಮಧ್ಯಾಹ್ನ, ಮತ್ತು ಸಾಯಂಕಾಲ ಈ ಮೂರು ಕಾಲಗಳಲ್ಲಿಯೂ ನಿಯಮದಿಂದ ಬಿಲ್ವಪತ್ರೆಗಳಿಂದ ಪೂಜಿಸಿದರೆ ಅವನು ಉಗ್ರ ತಪಸ್ಸುಮಾಡಿದಂತೆಯೇ ಆಯಿತೆಂದು ತಿಳಿಯಬೇಕು. ॥೯೨॥

ಕಿಂ ಧರ್ಮಜಾಲೈರ್ನಿಖಿಲೈಶ್ಚ ಯಾಗೈರ್ಯೋಗೈಸ್ತಥಾಷ್ಟಾಂಗಯ
ಮಾಸನಾದ್ಯೈಃ ।
ವ್ರತೈಶ್ಚ ಕೃಚ್ಛ್ರೈರನ್ಯೈರುಮಾಪತಿಪ್ರಿಯಂ ನ ಕಿಂಚಿನ್ನಿಯತೇನ
ಗೌರಿ ॥೯೩॥

ಲಿಂಗಾರ್ಚನಂ ಬಿಲ್ವದಲೈರಪಾರೈ
ಸ್ತ್ರಿಕಾಲಮಿಶಾರ್ಚನತೋ ವಿಮುಕ್ತಿಃ ।
ಲಭೇತ ದೇವಸ್ಯ ಕೃಪಾಕಟಾಕ್ಷತೋ
ಸಾನ್ಯತ್ಪ್ರಿಯಂ ತಸ್ಯ ತ್ರಿಶೂಲಿನೋಽಂಬಿಕೇ ॥೯೪॥

ಇತ್ಯುಕ್ತ್ವಾ ಸ ಜಗಾಮ ವಿಪ್ರತಿಲಕಶ್ಚಾದರ್ಶನಂ ಪಶ್ಯತೋ
ದೇವ್ಯಾಸ್ತತ್ರ ಮಹೇಶ್ವರೇಣ ಕಥಿತಂ ಧರ್ಮೋತ್ತಮಂ ಸಾ ಶಿವಾ ।
ಧ್ಯಾನೇನಾಧಿಜನಿಷ್ಟ ದೇವಮಿತಿ ಸಾ ತದ್ಧ್ಯಾನಹೃಷ್ಟಾಂತರಾ
ನಂದಾಂಭೋಧಿನಿಮಗ್ನಸಾರಹೃದಯಾ ತಂಚಾಷ್ಟಮೂರ್ತಿಂ ಶಿವಾ ॥೯೫॥

---

ಗೌರಿಯೇ, ಸಕಲ ಧರ್ಮಸಮೂಹಗಳೂ, ಯಾಗಗಳೂ ಯಮನಿಯಮ ಮೊದಲಾದ ಅಷ್ಟಾಂಗವುಳ್ಳ ಯೋಗಸಾಧನೆ, ಕೃಚ್ಛ್ರಚಾಂದ್ರಾಯಣಾದಿ ವ್ರತಗಳು, ಇನ್ನೂ ಇತರ ಕರ್ಮಜಾಲಗಳು, ಇವೆಲ್ಲವೂ ಉಮಾಪತಿಯಾದ ಪರಮೇಶ್ವರನಿಗೆ ಅಷ್ಟು ಪ್ರೀತಿಯನ್ನುಂಟು ಮಾಡಲಾರವು. ಕೇವಲ ನಿಯಮದಿಂದ ಮಾಡುವ ಶಿವ ಧ್ಯಾನ, ಲಿಂಗಾರ್ಚನೆಗಳೇ ಶಂಕರನಿಗೆ ವಿಶೇಷ ತೃಪ್ತಿಕರಗಳೆಂದು ತಿಳಿ. ॥೯೩॥

ತ್ರಿಕಾಲಗಳಲ್ಲಿಯೂ ಅಪಾರವಾದ ಬಿಲ್ವಪತ್ರೆಗಳಿಂದ ಶಿವಲಿಂಗವನ್ನು ಪೂಜೆ ಮಾಡಿದವರಿಗೆ ಮುಕ್ತಿಯು ಲಭಿಸುವುದು. ಅಂಬಿಕೆಯೇ! ತ್ರಿಶೂಲಧಾರಿಯಾದ ದೇವದೇವನ ಕೃಪಾಕಟಾಕ್ಷದಿಂದ ಭಕ್ತನು ಇದಕ್ಕಿಂತ ಪ್ರಿಯಕರವಾದ ಫಲದಲ್ಲಿ ಇನ್ನೇನನ್ನು ತಾನೇ ಪಡೆದಾನು? ಹೀಗೆ ತನ್ನ ಭಕ್ತಶಿಖಾಮಣಿಗಳಿಗೆ ಮೋಕ್ಷವನ್ನೇ ಕರುಣಿಸುವ ಮಹಾದೇವನು ಇತರ ಸಕಲ ಅಭೀಷ್ಟಗಳನ್ನೂ ಸಲ್ಲಿಸುವುದರಲ್ಲಿ ಸಂದೇಹವೇ ಇಲ್ಲ. ॥೯೪॥

ಈರೀತಿ ವಿಪ್ರಶ್ರೇಷ್ಠನ ವೇಷವನ್ನು ಧರಿಸಿ ಬಂದಿದ್ದ ಪರಮೇಶ್ವರನು ಶಿವ ಧರ್ಮವನ್ನೆಲ್ಲಾ ತಿಳಿಸಿ, ದೇವಿಯು ನೋಡುತ್ತಿದ್ದಂತೆಯೇ ಮಾಯವಾದನು. ಆಗ ಆ ಗಿರಿಜಾದೇವಿಯು ಶಂಕರನು ಹೇಳಿದುದನ್ನೆಲ್ಲಾ ಅಂದರೆ ದೇವಿಗೆ ಉಪದೇಶ

## ಇತಿ ಶ್ರೀಶಿವರಹಸ್ಯೇ ದ್ವಿತೀಯಾಂಶೇ ವಿಪ್ರದೇವೀಸಂವಾದೋ ನಾಮ ತೃತೀಯೋಽಧ್ಯಾಯಃ

---

ಮಾಡಿದ ಶ್ರೇಷ್ಠವಾದ ಧರ್ಮಸೂಕ್ಷ್ಮಗಳನ್ನೆಲ್ಲಾ ಚೆನ್ನಾಗಿ ಯೋಚಿಸಿ, ತನ್ನ ಆಶ್ರಮಕ್ಕೆ ಬಂದಿದ್ದ ಆ ವೃದ್ಧ ಬ್ರಾಹ್ಮಣನು ಪರಮೇಶ್ವರನೇ ಎಂದು ತಿಳಿದು, ಆ ದೇವನ ಧ್ಯಾನದಿಂದ ಸಂತುಷ್ಟವಾದ ಅಂತರಂಗವುಳ್ಳವಳಾಗಿ, ಆನಂದವೆಂಬ ಸಮುದ್ರದಲ್ಲಿ ಮುಳುಗಿ ದೃಢಮನಸ್ಸಿನಿಂದ ಪದೇಪದೇ ಅಷ್ಟಮೂರ್ತಿಯಾದ ಪರಮೇಶ್ವರನನ್ನೇ ಧ್ಯಾನಮಾಡುತ್ತಿದ್ದಳು. ||೯೫||

ಇಲ್ಲಿಗೆ ಶ್ರೀ ಶಿವರಹಸ್ಯದ ಭವನಾಮಕವಾದ ಎರಡನೆಯ ಅಂಶದಲ್ಲಿ
ವಿಪ್ರವೇಷಧಾರಿಯಾದ ಶಿವ ಮತ್ತು ಪಾರ್ವತೀದೇವೀ ಇವರ ಸಂವಾದವೆಂಬ
ಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಚತುರ್ಥೋಽಧ್ಯಾಯಃ

|| ಜೈಗೀಷವ್ಯ ಉವಾಚ ||

ಸಾ ವಿಪ್ರವಚನಂ ಶ್ರುತ್ವಾ ಸ್ಕಂದ ದೇವೀ ಗಿರೀಂದ್ರಜಾ ।
ಕಿಂ ಚಕಾರ ತದಾ ಶೈಲೇ ತತ್ಸಮಾಚಕ್ಷ್ವ ಕೌತುಕಂ ॥೧॥

ತದಾ ಸ್ಕಂದೋ ಮುದಾ ವಕ್ತುಂ ಗೌರ್ಯಾಶ್ಚರಿತಮುತ್ತಮಂ ।
ಪ್ರಚಕ್ರಮೇ ಗಣೇಂದ್ರಾಣಾಂ ಮುನೀನಾಂ ನಾಕಿನಾಂ ತಥಾ ॥೨॥

---

## ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ನಾಲ್ಕನೆಯ ಅಧ್ಯಾಯ

"ಸ್ಕಂದಸ್ವಾಮಿಯೇ! ಬ್ರಾಹ್ಮಣವೇಷವನ್ನು ಧರಿಸಿ ಬಂದಿದ್ದ ಶಿವನ ಮಾತನ್ನು ಕೇಳಿ, ಕೈಲಾಸಪರ್ವತದಲ್ಲಿ ಹಿಮವತ್ಕನ್ಯೆಯಾದ ಗಿರಿಜಾದೇವಿಯು ಮುಂದೆ ಏನು ಮಾಡಿದಳು? ಅದನ್ನು ತಿಳಿಯಬೇಕೆಂಬ ಕುತೂಹಲವುಳ್ಳವನಾಗಿರುವೆನು. ದಯೆಯಿಟ್ಟು ನನಗೆ ಆ ವಿಷಯಗಳನ್ನು ತಿಳಿಸಬೇಕು" ಎಂದು ಜೈಗೀಷವ್ಯನು ಕುಮಾರಸ್ವಾಮಿಯನ್ನು ಪ್ರಾರ್ಥಿಸಿದನು. ||೧||

ಜೈಗೀಷವ್ಯನ ಪ್ರಾರ್ಥನೆಯನ್ನಂಗೀಕರಿಸಿ ಷಣ್ಮುಖಸ್ವಾಮಿಯು ಸಂತೋಷದಿಂದ ಶಿವಗಣಶ್ರೇಷ್ಠರಿಗೂ ಮತ್ತು ಸ್ವರ್ಗನಿವಾಸಿಗಳಾದ ದೇವತೆಗಳಿಗೂ, ಋಷಿವರ್ಯರಿಗೂ, ಗೌರಿಯ ಉತ್ತಮವಾದ ಮುಂದಿನ ಚರಿತ್ರೆಯನ್ನು ಹೇಳಲುಪಕ್ರಮಿಸಿದನು. ||೨||

॥ ಸ್ಕಂದ ಉವಾಚ ॥

ಧ್ಯಾತ್ವಾ ಪುರಾರಿಮಥ ಸಾ ಸ್ವಹೃತ್ಪದ್ಮೇ ತಥಾಂಬಿಕಾ ।
ತಪೋವನಗತಾ ದೇವೀ ತಸ್ಮಿನ್ಕೈಲಾಸಪರ್ವತೇ ॥೩॥

ಕೋಟಿಭಿರ್ವಿಹಿತಾನೇಕಶಿಖರೈರಿಂದುಸಪ್ರಭೈಃ ।
ಪ್ರಕಾಶಧವಲಚ್ಛಾಯೈರಾಕಾಶಮಿವ ನಿರ್ಮಲೈಃ ॥೪॥

ತತ್ರೈಕಸ್ಮಿಂಶ್ಚ ಶಿಖರೇ ರಮ್ಯತುಙ್ಗಘನಾವೃತೇ ।
ರಾಜತೋತ್ತಮಸರ್ವಸ್ವಧಾರಾರಸವಿಜೃಂಭಿತೇ ॥೫॥

ಸ್ವಹೃದಾ ಚಿಂತಯಾಮಾಸ ಕ್ಷಣಮೇಕಮತಂದ್ರಿತಾ ।
ಮಹಾಮಾಯಾ ಮಹಾಶಕ್ತಿರ್ಯಯಾ ತತಮಿದಂ ಜಗತ್ ॥೬॥

ಯಯಾ ಸೃಜತಿ ಭೂತಾನಿ ದೇವದೇವೋ ಮಹೇಶ್ವರಃ ।
ಸೈವ ಸ್ವಹೃದಯಧ್ಯಾನೈಶ್ಚಿಂತಯತ್ಕ್ಷಣಮಾತ್ರಕಂ ॥೭॥

---

ಜೈಗೀಷವ್ಯಾದಿಗಳೇ, ಕೇಳಿರಿ. ಆ ಬ್ರಾಹ್ಮಣವೇಷಧಾರಿಯಾಗಿ ಬಂದಿದ್ದ ಪರಮೇಶ್ವರನು ಅಂತರ್ಧಾನನಾದಮೇಲೆ, ಅಂಬಿಕಾದೇವಿಯು ತನ್ನ ಹೃದಯಕಮಲದಲ್ಲಿ ತ್ರಿಪುರಾಸುರ ಧ್ವಂಸಕನಾದ ಪರಮೇಶ್ವರನನ್ನೇ ಧ್ಯಾನಮಾಡುತ್ತಾ ಕೈಲಾಸಪರ್ವತದಲ್ಲಿದ್ದ ತನ್ನ ತಪೋವನಕ್ಕೆ ಹೋದಳು. ॥೩॥

ಅಲ್ಲಿ ಚಂದ್ರನಂತೆ ಶುಭ್ರವಾದ ಕಾಂತಿಯಿಂದ ಪ್ರಕಾಶಿಸುವ ಅಗ್ರಭಾಗಗಳಿಂದಲೂ, ಬಿಳುಪಾದ ಪ್ರಕಾಶದಿಂದ, ನಿರ್ಮಲವಾದ ಆಕಾಶದಂತೆ ತೋರುತ್ತಿರುವ ಉನ್ನತವಾದ ಮೇಘಮಾಲೆಗಳಿಂದಲೂ, ಆವರಿಸಲ್ಪಟ್ಟಿರುವ ಕೈಲಾಸಪರ್ವತದ ಶಿಖರದಲ್ಲಿ ಕುಳಿತು, ಒಂದು ಕ್ಷಣಕಾಲ ಮಹಾದೇವಿಯು ಶ್ರದ್ಧೆಯಿಂದ ಮಹೇಶ್ವರನನ್ನು ತನ್ನ ಮನಸ್ಸಿನಲ್ಲಿ ಧ್ಯಾನಮಾಡಿದಳು. ಆ ಕೈಲಾಸಪರ್ವತದ ಶಿಖರನಾದರೋ ಶುದ್ಧ ಬೆಳ್ಳಿಯ ರಸರೂಪವನ್ನು ಹೊಂದಿದ್ದಂತೆ, ಹೊಳೆಯುತ್ತಿದ್ದಿತು. ॥೪-೫॥

ಮಹಾಮಾಯಾ, ಮತ್ತು ಮಹಾಶಕ್ತಿಸ್ವರೂಪಿಣಿಯಾದ ದೇವಿಯು ತನ್ನ ಮಾಯೆಯಿಂದ ಸಕಲ ಪ್ರಪಂಚವನ್ನೂ ವ್ಯಾಪಿಸಿರುವಳು. ದೇವಶ್ರೇಷ್ಠನಾದ ಮಹೇಶ್ವರನೂ, ಮಾಯಾಸ್ವರೂಪಿಣಿಯಾದ ಈ ದೇವಿಯ ಸಹಾಯದಿಂದಲೇ

ತಸ್ಮಿನ್ಗಿರಿವರೋತ್ತುಂಗಶಿಖರೇ ಸಮದೃಶ್ಯತ ।
ರಮ್ಯಂ ಮಣಿತಟಂ ದಿವ್ಯಂ ಯೋಜನಾಯುತಮುತ್ತಮಂ ॥೮॥

ಮಣಿಸೋಪಾನಸಂಯುಕ್ತಂ ತೀರಬಂಧವಿರಾಜಿತಂ ।
ಸ್ಫಾಟಿಕೋತ್ತಮದಿವ್ಯಾಂಬುಪೂರಪೂರಿತಮುತ್ತಮಂ ॥೯॥

ರತ್ನಮತ್ಸ್ಯೈಃ ಕರ್ಕಟೈಶ್ಚ ರತ್ನಕೂರ್ಮೈಸ್ಸಮಾವೃತಂ ।
ಕುರುವಿಂದೋತ್ತಮಲಸತ್ಸಹಸ್ರದಲಪಂಕಜೈಃ ॥೧೦॥

ವಿಕಸದ್ಬಂಧುರಾಮೋದಪರ್ಯಂತಾಮಲಕೇಸರೈಃ ।
ಮರುದುತ್ಥೈಸ್ತತ್ಪರಾಗರಂಜಿತೈಸ್ತೀರ್ಥವಾರಿಭಿಃ ॥೧೧॥

---

ಸಕಲ ಭೂತಗಳನ್ನೂ ಸೃಷ್ಟಿಮಾಡುತ್ತಿರುವನು. ಇಂತಹ ಅಸಾಧಾರಣ ಮಹಿಮೆಯುಳ್ಳ ಮಹಾದೇವಿಯೇ, ಕ್ಷಣಕಾಲ ಕುಳಿತು ಮನಃಪೂರ್ವಕವಾಗಿ ದೇವದೇವನಾದ ಜಗದೀಶ್ವರನನ್ನು ಧ್ಯಾನಮಾಡಲಾರಂಭಿಸಿದಳು. ||೬-೭||

ಉನ್ನತವಾದ ಈ ಕೈಲಾಸಪರ್ವತದ ಶಿಖರದಲ್ಲಿ ಒಂದು ಯೋಜನ ವಿಸ್ತಾರವೂ, ಮನೋಹರವೂ, ಆದ ಒಂದು ದಿವ್ಯ ಸರೋವರವಿದ್ದಿತು. ||೮||

ಆ ಮಣಿಸರೋವರವು ರತ್ನಮಯವಾದ ಸೋಪಾನಗಳಿಂದ ಅಲಂಕೃತವಾಗಿದ್ದಿತು. ಅದರ ತೀರಪ್ರದೇಶಗಳೆಲ್ಲವು ಅತ್ಯಂತ ದೃಢವಾಗಿದ್ದವು. ಇಂತಹ ಸರೋವರದಲ್ಲಿ ಸ್ಫಟಿಕದಂತೆ ಶುಭ್ರವಾದ ದಿವ್ಯ ಜಲರಾಶಿಯು ತುಂಬಿತುಳುಕುತ್ತಿದ್ದಿತು. ||೯||

ರತ್ನಮಯವಾದಂತಿರುವ ಮೀನುಗಳೂ, ಏಡಿಗಳೂ ಮತ್ತು ಮಣಿಮಯವಾದ ಆಮೆಗಳೂ ಆ ಸರೋವರದಲ್ಲಿ ತುಂಬಿದ್ದವು. ಅಲ್ಲದೆ ಸುಂದರವಾದ ಕೊನ್ನಾರಿಗೆಡ್ಡೆಗಳೂ, ಸಹಸ್ರ ದಳಗಳುಳ್ಳ ಕಮಲಗಳೂ, ಅಲ್ಲಿ ಅಸಂಖ್ಯಾತವಾಗಿ ಬೆಳೆದಿದ್ದವು. ||೧೦||

ಆ ಸರೋವರದ ದಡದಲ್ಲಿ ಬೆಳದಿದ್ದ ಹೂಗಿಡಗಳಲ್ಲಿ ಹೂವುಗಳು ಚೆನ್ನಾಗಿ ಅರಳಿ ತಮ್ಮ ಮನೋಹರವಾದ ಸೌಗಂಧ್ಯವನ್ನು ಎಲ್ಲ ಕಡೆಗಳಿಗೂ ಬೀರುತ್ತಿದ್ದವು. ವಾಯುವು ಆ ಹೂವುಗಳ ಮೇಲೆ ಬೀಸುತ್ತಾ ಪುಷ್ಪಗಳ ಕೇಸರಗಳಿಂದ ಉದುರುವ ಪರಾಗಗಳನ್ನು ಹೊತ್ತು ತಂದು ಈ ಸರಸ್ಸಿನ ನೀರಿನಲ್ಲಿ ಹಾಕಿದ್ದರಿಂದ ಆ ನೀರೆಲ್ಲವೂ ಬಣ್ಣ ಬಣ್ಣವಾಗಿ ರಂಜಿಸುತ್ತಿದ್ದಿತು. ||೧೧||

ಮರಾಲೋದಕಸಂಚಾರಿಹರಿತ್ಪತ್ರಾಚ್ಛಕುಕ್ಕುಟೈಃ ।
ಸರಸ್ಯೈಸ್ಸಾರಸಾರಾವಚಕ್ರವಾಕಯುಗೈರ್ವೃತಂ ॥೧೨॥

ತತ್ತೀರೇ ಪರಿತಸ್ಸ್ವಚ್ಛಛಾಯಾಸಂಛನ್ನಮೌಲಿಭಿಃ ।
ವನಸ್ಪತಿವನೈರ್ದೇವ್ಯಾ ತತ್ರ ಸೀಮಾ ಕೃತಾ ಮುದಾ ॥೧೩॥

ತತ್ಪ್ರಾಂತರತ್ನಗರ್ಭೋರೀರುಮಂಟಪಾವಲಿಭಾಸುರಂ ।
ಜ್ವಲತ್ಕುಂಭೋರುವಲಭೀಜಾಲಕಚ್ಛನ್ನತಾಂಬರಂ ॥೧೪॥

ಪ್ರಫುಲ್ಲರತ್ನಮಂದಾರೈ ರತ್ನಪಂಕಜಶೋಭಿತೈಃ ।
ತಿಲಕೈರ್ನಕ್ತಮಾಲೈಶ್ಚ ತಮಾಲೋತ್ತಮಸಾಲಕೈಃ ॥೧೫॥

---

ತಿಳಿಯಾದ ಆ ಸರಸ್ಸಿನ ನೀರಿನಲ್ಲಿ ಹಸುರುಬಣ್ಣದ ರೆಕ್ಕೆಗಳಿಂದ ಕೂಡಿದ ಪರಿಶುದ್ಧವಾಗಿರುವ ನೀರುಕೋಳಿಗಳು ಸಂಚರಿಸುತ್ತಿದ್ದುವು. ಹಂಸಗಳೂ, ಸಾರಸಗಳೂ, ಚಕ್ರವಾಕದಂಪತಿಗಳೂ, ಸಂತೋಷದಿಂದ ಇಂಪಾಗಿ ಧ್ವನಿಮಾಡುತ್ತಾ ಅಲ್ಲಿ ಹಾರಾಡುತ್ತಿದ್ದುವು. ॥೧೨॥

ಅದೇ ಸರೋವರದ ತೀರದಲ್ಲಿ ಸುತ್ತಲೂ ನೆರಳನ್ನುಂಟುಮಾಡುವಂತೆ ಸೊಂಪಾಗಿ ಚಿಗುರಿ ಬೆಳೆದಿರುವ ಅನೇಕ ವೃಕ್ಷಗಳ ಸಮೂಹವಿದ್ದಿತು. ಗಿರಿಜಾದೇವಿಯು ಮನೋಹರವಾದ ಈ ಸ್ಥಳದಲ್ಲಿ ಸಂತೋಷದಿಂದ ಕುಳಿತು ಧ್ಯಾನಿಸತೊಡಗಿದಳು. ॥೧೩॥

ಆ ವನಪ್ರಾಂತದಲ್ಲಿ ರತ್ನಗಳನ್ನೊಳಗೊಂಡ ದೊಡ್ಡ ದೊಡ್ಡ ಮಂಟಪಗಳು ಗುಂಪುಗುಂಪಾಗಿ ಪ್ರಕಾಶಿಸುತ್ತಿದ್ದುವು. ಆ ಮಂಟಪಗಳಲ್ಲಿ ದೀಪದ ಕಂಬಗಳು ಪ್ರಕಾಶಮಾನವಾಗಿ ಉರಿಯುತ್ತಿದ್ದುವು. ದೊಡ್ಡ ಸೂರುಪಟ್ಟಿಗಳ ಸಮೂಹದಿಂದ ಆ ಮಂಟಪಗಳು ಮೇಲ್ಭಾಗದಲ್ಲಿ ಅಂತರಿಕ್ಷವು ಕಾಣದಂತೆ ಮುಚ್ಚಿಕೊಂಡಿದ್ದುವು. ॥೧೪॥

ಆ ವನದಲ್ಲಿ ರತ್ನದಂತೆ ಹೊಳೆಯುವ ಮಂದಾರಪುಷ್ಪಗಳು ಸೊಗಸಾಗಿ ಅರಳಿದ್ದುವು. ದಿವ್ಯಕಮಲಗಳೂ ವಿಕಸಿತವಾಗಿ ತಮ್ಮ ಕಾಂತಿಯನ್ನು ಆ ವನಪ್ರದೇಶಕ್ಕೆಲ್ಲಾ ಬೀರುತ್ತಿದ್ದುವು. ತಿಲಕವೃಕ್ಷ, ಹುಲಿಗಿಲಿಮರ, ಹೊಂಗೇ ಇನ್ನೂ ಉತ್ತಮವಾದ

ಧನ್ವೈರ್ನೀಪೈಶ್ಚ ಪನಸೈರ್ಲಿಕುಚೈರ್ವಕುಲೈರಪಿ ।
ಅಶೋಕೈಃ ಕರ್ಣಿಕಾರೈಶ್ಚ ಕುಟಜೈಶ್ಚ ಕುರಣ್ಟಕೈಃ ॥೧೬॥

ತಗರೈರಗರೈರಾಜದ್ರುಜವೃಕ್ಷೈಶ್ಶಿರೀಷಕೈಃ ।
ತಕ್ಕೋಲಾಂಕೋಲಪುನ್ನಾಗನಾಗಾರ್ಜುನಕಶಿಂಶುಪೈಃ ॥೧೭॥

ಚಂದನೈರ್ನಂದನಾಕಾರೈರ್ನಯನಾನಂದಿಸುಂದರೈಃ ।
ಶ್ರೀಕರಶ್ರೀಪರಿವೃತೈಶ್ಶ್ರೀವೃಕ್ಷೈಃ ಪಾಟಲೈರಪಿ ॥೧೮॥

ಸಂತಾನೈಃ ಪಾರಿಜಾತೈಶ್ಚ ಜಂಬೂಜಾತಿಫಲದ್ರುಮೈಃ ।
ಕೋವಿದಾರೈರ್ದೇವದಾರೈರ್ವಿಭೀತಕಹರೀತಕೈಃ ॥೧೯॥

ವಟೋರುಪಟಲೈಶ್ಚೈವ ಪೂಗನಾರೈಲಸರ್ಜಕೈಃ ।
ಕದಲೀದಲಲೋಲೈಶ್ಚ ಫಲಪುಷ್ಪಾವನಾಮಿಭಿಃ ॥೨೦॥

---

ಸಾಲವೃಕ್ಷಗಳೂ, ಕಗ್ಗಲೀ, ಕದಂಬವೃಕ್ಷಗಳೂ, ಹಲಸು, ಗಜನಿಂಬೆ, ಬಕುಲ, ಅಶೋಕವೃಕ್ಷಗಳೂ, ಬೆಟ್ಟದಾವರೆಗಿಡಗಳೂ (ಕರ್ಣಿಕಾರ), ಗಿರಿಮಲ್ಲಿಗೆ, ಹಸುರು ಗೋರಂಟೀಗಿಡ, ತಗರ, ಅಗರ, ರಾಜವೃಕ್ಷ, ಬಾಗೇಮರ, ತಕ್ಕೋಲ, ಅಂಕೋಲೆ, ಸುರಹೊನ್ನೇ, ನಾಗಸಂಪಿಗೆ, ಅರ್ಜುನವೃಕ್ಷಗಳು (ಮತ್ತೀಮರ), ಶಿಂಶುಪಾವೃಕ್ಷ ಗಳೂ, ಸೊಂಪಾಗಿ ಬೆಳೆದಿದ್ದವು. ॥೧೫-೧೬-೧೭॥

ಮನೋಹರವಾದ ಆಕಾರವಳ್ಳ ಚಂದನವೃಕ್ಷಗಳು ಈ ವನದಲ್ಲಿ ನೋಡಲು ಬಹು ಸುಂದರವಾಗಿ ಬೆಳೆದಿದ್ದವು. ಮಂಗಳಕರವಾದ ಶ್ರೀಗಂಧದ ಮರಗಳೂ ಬಿಲ್ವವೃಕ್ಷಗಳೂ, ಪಾದರೀವೃಕ್ಷಗಳೂ, ಕಲ್ಪವೃಕ್ಷಗಳೂ, ಪಾರಿಜಾತ ವೃಕ್ಷಗಳೂ, ನೇರಲೆ, ಜಾಯಿಕಾಯಿ ಈ ಮರಗಳೂ, ಕೋವಿದಾರ (ಕೆಂಪು ಕಂಚುವಾಳದ) ಗಿಡಗಳೂ, ದೇವದಾರು, ತುರುಬೇ, ಅಳಲೇಕಾಯಿ, ಈ ಮರಗಳೂ, ಉರುಪಟಲ, ಪೂಗ (ಅಡಿಕೆ), ಕಿತ್ತಲೇ, ಏಲಕ್ಕೀ, ಸರ್ಜ ಈ ವೃಕ್ಷಗಳೂ, ಹೂವು ಮತ್ತು ಕಾಯಿ ಗಳಿಂದ ಬಗ್ಗಿ ಗಾಳಿಯಿಂದ ಅಲ್ಲಾಡುತ್ತಿರುವ ಬಾಳೆಯ ಮರಗಳೂ, ಇವೆಲ್ಲವೂ ಆ ವನದಲ್ಲಿ ವಿಶೇಷವಾಗಿ ಬೆಳೆದು ಮನೋಹರವಾಗಿದ್ದುವು. ॥೧೮-೧೯-೨೦॥

ಲವಂಗೈಃ ಕುಶಿಕೈಃ ಫುಲ್ಲಕೃಷ್ಣಾಗರುಮಧೂಕಕೈಃ ।
ಕುಂದವಲ್ಲ್ಯೋ ಮಲ್ಲಿವಲ್ಯೋ ದ್ರಾಕ್ಷೈಲಾವಲ್ಲಿಗುಚ್ಛಕೈಃ ॥೨೧॥

ಶೋಭಿತಾಶ್ಯಾಖಿಶಾಖಾಗ್ರವಿಸ್ತೃತೈರ್ವನಭೂಮಿಷು ।
ತತ್ಫುಲ್ಲಕುಸುಮಾಮೋದಿಶೀತಸುಂದರವಾಯುಭಿಃ ॥೨೨॥

ಕಙ್ಕೇಲಿಕೇಲಿಸಾಲೀಭಿಸ್ತಥಾ ಗಂಧಫಲೀದ್ರುಮೈಃ ।
ಪ್ರತ್ಯಗ್ರಕೇತಕಭರೈರಾಜರಾಜಾದನೈರಪಿ ॥೨೩॥

ಕಾಕಲೀಕೋಕಿಲಾಲಾಪೈಃ ಕಪೋತಶುಕಬರ್ಹಿಣಾಂ ।
ಅತ್ಯಂತಸುಂದರತರಂ ತದ್ವನಂ ಶುಶುಭೇತರಾಂ ॥೨೪॥

---

ಅಲ್ಲದೇ ಲವಂಗವೃಕ್ಷ, ಕುಶಿಕವೃಕ್ಷಗಳೂ, ಚೆನ್ನಾಗಿ ಅರಳಿದ ಹೂವುಗಳಿಂದ ಸುವಾಸನೆಯನ್ನು ಬೀರುತ್ತಿರುವ ಕೃಷ್ಣಾಗರು (ಕರಿಯ ಅಗರು ಚಕ್ಕೆಯುಂಟಾಗುವ ಮರ) ಮತ್ತೂ ಹಿಪ್ಪೇಮರಗಳೂ, ಮಲ್ಲೇ ಮತ್ತು ಮಲ್ಲಿಗೇ ಬಳ್ಳಿಗಳೂ, ಗುಂಪು ಗುಂಪಾದ ಗೊಂಚಲಿನಿಂದ ಕೂಡಿದ ದ್ರಾಕ್ಷೀ ಮತ್ತು ಏಲಕ್ಕೀಬಳ್ಳಿಗಳೂ, ಆ ವನದಲ್ಲಿ ಶೋಭಿಸುತ್ತಿದ್ದುವು. ಆ ವನಭೂಮಿಗಳಲ್ಲಿ ಬೆಳೆದಿರುವ ಮರಗಳು ತಮ್ಮ ಉದ್ದವಾದ ಕೊಂಬೆಗಳಲ್ಲಿ ಚೆನ್ನಾಗಿ ಅರಳಿದ ಹೂವುಗಳಿಂದಲೂ, ಕಾಯಿಗಳಿಂದಲೂ ಆ ಪ್ರದೇಶಕ್ಕೆಲ್ಲಾ ಸೌಗಂಧ್ಯವನ್ನೂ ಸೊಬಗನ್ನೂ ಉಂಟುಮಾಡುತ್ತಿದ್ದವು. ವಾಯುವು ಅರಳಿದ ಹೂವುಗಳ ಪರಾಗಗಳನ್ನೂ, ಸುವಾಸನೆಯನ್ನೂ, ಎಲ್ಲಾ ಕಡೆಯಲ್ಲಿಯೂ ಹರಡುತ್ತಿದ್ದಿತು. ಕಂಕೇಲಿ, ಕೇಲಿ ಮತ್ತು ಸಾಲೀ ಎಂಬ ವೃಕ್ಷಗಳೂ ಪ್ರಿಯಂಗು ವೃಕ್ಷಗಳೂ, ಮೋತೆಗಳ ಭಾರದಿಂದ ಜಗ್ಗಿರುವ ತಾಳೇ ಮರಗಳೂ, ಶ್ರೇಷ್ಠವಾದ ರಾಜರಾಜಾದನ (ಹಾಲೇಗಿಡಗಳೂ) ವೃಕ್ಷಗಳೂ, ಆ ವನದಲ್ಲಿ ಬಹು ಸೊಂಪಾಗಿ ಬೆಳೆದಿದ್ದವು. ಇಂತಹ ಸುಂದರವಾದ ವನದಲ್ಲಿ ಕೋಗಿಲೆ, ಕಪೋತ ಪಕ್ಷಿಗಳೂ, ಗಿಳಿ ಮತ್ತು ನವಿಲುಗಳೂ ತಮ್ಮ ಸೂಕ್ಷ್ಮವಾದ ಧ್ವನಿಗಳಿಂದ ಬಹು ಇಂಪಾಗಿ ಹಾಡುತ್ತಿದ್ದವು. ಅನೇಕ ವೃಕ್ಷವೃಂದಗಳಿಂದಲೂ, ಲತಾಜಾಲದಿಂದಲೂ, ಪುಷ್ಪಗುಚ್ಛಗಳಿಂದಲೂ, ಬಗೆಬಗೆಯ ಪಕ್ಷಿಗಳ ಮನೋಹರವಾದ ಧ್ವನಿಗಳಿಂದಲೂ, ಈ ವನಪ್ರದೇಶವು ಆನಂದಮಯಯುವಾಗಿ ಪ್ರಕಾಶಿಸುತ್ತಿದ್ದಿತು.॥೨೧-೨೨-೨೩-೨೪॥

ರಮ್ಯಾದರ್ಶತಲಾತ್ಯಚ್ಛಸ್ಫಾಟಿಕೋಪಲವೇದಿಭಿಃ ।
ಪ್ರವಾಲಪರಿಕ್ಲೃಪ್ತೋರುಮಂಟಪೇ ರತ್ನಮಂಚಗಾ ॥೨೫॥

ಕಂದಲೂನಂ ವಾತಭುಗ್ನಂ ಪತ್ರಂ ತಚ್ಛದಮಪ್ಯಣು ।
ನಿಷ್ಕಾಸಯತಿ ಸಾ ಗೌರೀ ನಿತ್ಯಂ ತತ್ರ ಸಖೀಗಣೈಃ ॥೨೬॥

ರತ್ನಬಿಲ್ವೋರುಮೂಲೇಷು ಚಂದ್ರಸ್ಫಾಟಿಕಕಲ್ಪಿತಂ ।
ಲಿಂಗಜಾಲಮಹೋತ್ತುಂಗಮೌಲಿಸಂಗತಸೋಮಜೈಃ ॥೨೭॥

ಕಿರಣಸ್ರಾವಿಸುಜಲೈರ್ಬಿಲ್ವೈಃ ಪುಷ್ಪೈಃ ಸುಪೂಜಿತಂ ।
ತತ್ತೀರೇ ಸರಸೋ ದೇವ್ಯಾ ರತ್ನಪ್ರಾಕಾರಮಂಡಿತಂ ॥೨೮॥

---

ಈ ಸುಂದರವಾದ ವನದಲ್ಲಿ ಹವಳದಿಂದ ರಚಿತವಾಗಿರುವ ದೊಡ್ಡ ಮಂಟಪ ವೊಂದಿದ್ದಿತು. ಆ ಮಂಟಪದ ಜಗಲಿಗಳು ಶುಭ್ರವಾದ ಸ್ಫಟಿಕಮಣಿಗಳಿಂದ ನಿರ್ಮಿಸಲ್ಪಟ್ಟಿದ್ದುವು. ನೋಡುವುದಕ್ಕೆ ಕನ್ನಡಿಯಂತಿರುವ ಅದೇ ಮಂಟಪದಲ್ಲಿ ದೇವಿಯು ರತ್ನಮಯವಾದ ಮಂಚದಲ್ಲಿ ಕುಳಿತು ಶೋಭಿಸುತ್ತಿದ್ದಳು. ॥೨೫॥

ಕ್ರಮವಾಗಿ ಗೌರಿಯು ಆ ವನದಲ್ಲಿಯೇ ನೆಲಸಿ ಗೆಡ್ಡೆ ಗೆಣಸುಗಳನ್ನು ಕಿತ್ತು ಉಳಿದ ಅದರ ಕಾಂಡವನ್ನು ಎಸೆದುಬಿಡುವಳು. ಗಾಳಿಯು ಬೇರೆ ಕಡೆಯಿಂದ ತಂದ ಮರದ ಒಣ ಎಲೆಗಳನ್ನು ಅಲ್ಲಿಂದ ತೆಗೆದುಹಾಕುವಳು. ತರಗು ಮುಂತಾದ ಸಣ್ಣಸಣ್ಣ ಕಸದ ಪದಾರ್ಥಗಳನ್ನು ನಿತ್ಯವೂ ತನ್ನ ಸಖಿಯರ ಗುಂಪಿನೊಡನೆ ಸೇರಿ ತೆಗೆದುಹಾಕುತ್ತಾ ಆ ಸ್ಥಳವನ್ನು ಶುದ್ಧಿಗೊಳಿಸುತ್ತಿದ್ದಳು. ॥೨೬॥

ಈ ವನದಲ್ಲಿರುವ ಸರೋವರದ ದಡದಲ್ಲಿ ಅನೇಕ ದೊಡ್ಡ ದೊಡ್ಡ ಬಿಲ್ವವೃಕ್ಷ ಗಳು ಬೆಳದಿದ್ದವು. ಈ ಮರಗಳ ಬುಡದಲ್ಲೆಲ್ಲಾ ಚಂದ್ರಸ್ಫಟಿಕಮಣಿಗಳಿಂದ ನಿರ್ಮಿತವಾದ ಶಿವಲಿಂಗವೊಂದಿರುತ್ತಿದ್ದಿತು. ಅದರ ಸುತ್ತಲೂ ಅನೇಕ ಸಣ್ಣ ಸಣ್ಣ ಶಿವಲಿಂಗಗಳು ಪ್ರಕಾಶಿಸುತ್ತಿದ್ದುವು. ಲಿಂಗಸ್ವರೂಪಿಯಾದ ಶಿವನು ಚಂದ್ರಮೌಳಿ ಯಾದುದರಿಂದಲೂ, ಬಿಲ್ವವೃಕ್ಷಗಳ ಕೆಳಗೆ ಇರುವವನಾದುದರಿಂದಲೂ, ಆ ಬಿಲ್ವ ಮರದಿಂದ ಬೀಳುವ ಪತ್ರೆಗಳು, ಈ ಚಂದ್ರನ ಕಿರಣಸಮೂಹದಿಂದುಂಟಾದ ಅಮೃತಮಯವಾದ ನೀರುಗಳಿಂದ ಬೆರೆತು ಶಿವಲಿಂಗಗಳ ಮೇಲೆ ಬೀಳುತ್ತಿದ್ದವು. ಇಂತಹ ಬಿಲ್ವಪತ್ರೆಗಳಿಂದಲೂ, ತಾನಾಗಿಯೇ ಬೀಳುವ ಪುಷ್ಪರಾಶಿಯಿಂದಲೂ,

ನವರತ್ನಾಖಂಡಕ್ಲೃಪ್ತಸ್ತಂಬವಿದ್ರುಮಪುತ್ರಿಕಂ।
ಚಿತ್ರವೇದೀತೋರಣಾದ್ಯೈಃ ಸಾಲೀಸಾಲಿವಿರಾಜಿತಂ ॥೨೯॥

ಕಪೋತಕುಂಭಕೀಟೈಶ್ಚ ದೇವಕೋಷ್ಠೈಶ್ಚ ಶೋಭಿತಂ।
ರುದ್ರಾವತಾರಚರಿತೈರ್ಮಣಿಸುಂದರವಿಗ್ರಹೈಃ ॥೩೦॥

ತತ್ತತ್ಸ್ಥಾನಕಸಂಕ್ಲುಪ್ತರಾಜದ್ವೃಷಭಶೋಭಿತಂ।
ಪ್ರಾಕಾರಗೋಪುರೋಪಾಂತಮಂಟಪಾಂತರ್ಗೃಹಂ ತದಾ ॥೩೧॥

ಕುಂಭೋಜ್ವಲನ್ಮಹಾಮೌಲಿಗರ್ಭಾಗಾರೈಕಸುಂದರಂ।
ಗೋಪುರಾಪಾರಶಿಖರಧೂಯಮಾನಪತಾಕಕಂ ॥೩೨॥

---

ಅಲ್ಲಿನ ಶಿವಲಿಂಗಗಳು ಸರ್ವದಾ ಪೂಜಿಸಲ್ಪಟ್ಟವುಗಳಂತೆಯೇ ತೋರುತ್ತಿದ್ದುವು. ಅಂತಹ ಶಿವಲಿಂಗಗಳ ಸುತ್ತಲೂ ರತ್ನಪ್ರಾಕಾರವಿದ್ದಿತು. ॥೨೭-೨೮॥

ಆ ಪ್ರಾಕಾರದಲ್ಲಿ ನವರತ್ನಮಯವಾದ ಸ್ತಂಭಗಳೂ, ಅವುಗಳಲ್ಲಿ ಹವಳದ ಬೊಂಬೆಗಳೂ, ರಚಿಸಲ್ಪಟ್ಟಿದ್ದುವು. ಚಿತ್ರವಿಚಿತ್ರವಾದ ಜಗಲಿಗಳೂ, ತೋರಣಗಳೂ ನಿರ್ಮಿತವಾಗಿದ್ದುವು. ಅಲ್ಲಿಯೂ ಸಹ ವಿರಾಜಿಸುವ ಮುಂಜೂರುಗಳು ಸುಂದರವಾಗಿ ಪ್ರಕಾಶಿಸುತ್ತಿದ್ದುವು. ॥೨೯॥

ಪಾರಿವಾಳಗಳು ಬಂದು ವಾಸಮಾಡಲು ಅನುಕೂಲವಾದ ಗೂಡುಗಳೂ, ಇತರ ಕೀಟಗಳು ವಾಸಿಸಲು ಅನುಕೂಲವಾಗುವಂತೆ ಚಿಕ್ಕ ಬಿರುಕುಗಳೂ ಅಲ್ಲಿ ಕಲ್ಪಿತವಾಗಿದ್ದುವು. ಪ್ರತ್ಯೇಕವಾಗಿ ದೇವರಮನೆಗಳೂ, ಅದರಲ್ಲಿ ರುದ್ರಾವತಾರದ ಕಥೆಯನ್ನು ತಿಳಿಸುವ ಮಣಿಮಯವಾದ ಸುಂದರ ವಿಗ್ರಹಗಳೂ ಕಾಣುತ್ತಿದ್ದುವು. ॥೩೦॥

ಪ್ರಾಕಾರ ಮತ್ತು ಗೋಪುರ ಇವುಗಳ ಸಮೀಪದಲ್ಲಿ ಮಂಟಪಗಳೂ ಗರ್ಭಗುಡಿಯೂ ಇದ್ದುವು. ಈ ಗರ್ಭಗುಡಿಯಲ್ಲಿ ಆಯಾಯ ಸ್ಥಾನಕ್ಕೆ ಉಚಿತವಾಗುವಂತೆ ಪ್ರಕಾಶಮಾನವಾದ ವೃಷಭವಿಗ್ರಹಗಳು ರಚಿತವಾಗಿದ್ದುವು. ॥೩೧॥

ಗರ್ಭಗುಡಿಯ ಮೇಲ್ಭಾಗದಲ್ಲಿ ಕುಂಭಾಕಾರವಾದ ಭುವನೇಶ್ವರಿಯು ಅತ್ಯಂತ ಸುಂದರವಾಗಿ ಕೆತ್ತಲ್ಪಟ್ಟಿದ್ದಿತು. ಎತ್ತರವಾದ ಗೋಪುರದ ತುದಿಯಲ್ಲಿ ಬಾವುಟಗಳು ಹಾರಾಡುತ್ತಿದ್ದುವು. ॥೩೨॥

ರಮ್ಯವಿದ್ರುಮಮುಕ್ತೋರುಸರೈರಾಲಂಬಿಪೀಠಕೆಂ ।
ಮಣಿಮಾಣಿಕ್ಯಖಚಿತಜ್ಯೋತಿಭಿಸ್ಸುಪ್ರಭಾಂತರಂ ॥೩೩॥

ಗಂಧಚಂದನಸಿಕ್ತಾಂಬುಪರಿಕ್ಲಿನ್ನತಲಂ ಸದಾ ।
ಧೂಪೈರಗರುಸಂಭೂತೈರ್ಗುಗ್ಗುಲೂದ್ದಾಮಸೌರಭೈಃ ॥೩೪॥

ಅಖಂಡಘನಕರ್ಪೂರದೀಪಮಾಲಾವಿರಾಜಿತಂ ।
ತತ್ರಾಂತರ್ಗೃಹಪೀಠಸ್ಥಂ ಯೋಜನಂ ಸ್ಫಟಿಕೋಜ್ಜ್ವಲಂ ॥೩೫॥

ಲಿಂಗಂ ತದಂಬಿಕೇಶಾಖ್ಯಂ ಕೈಲಾಸೇಶ್ವರಪಶ್ಚಿಮೇ ।
ದೇವ್ಯಾ ಮನೋಗೃಹಾಂತಸ್ಸ್ಥಂ ದಿವ್ಯಂ ತನ್ನಿರ್ಗತಂ ಮುನೇ ॥೩೬॥

---

ಶಿವಲಿಂಗದ ಪೀಠದಲ್ಲಿ ಮನೋಹರವಾದ ಹವಳ ಮತ್ತು ಮುತ್ತು ಇವುಗಳಿಂದ ರಚಿತವಾದ ದೊಡ್ಡ ಹಾರವು ಜೋಲಾಡುತ್ತಿದ್ದಿತು. ಅದರಲ್ಲಿರುವ ರತ್ನಗಳ ಕಾಂತಿಯು ಶಿವಲಿಂಗದ ಮೇಲೆಬಿದ್ದು ಲಿಂಗವನ್ನು ಅತ್ಯಂತ ತೇಜೋಮಯವನ್ನಾಗಿ ಮಾಡಿದ್ದಿತು. ॥೩೩॥

ಯಾವಾಗಲೂ ಆ ಶಿವಲಿಂಗದ ಮೇಲ್ಭಾಗವು ಗಂಧ, ಚಂದನ, ಮತ್ತು ನೀರು ಇವುಗಳಿಂದ ಆರ್ದ್ರವಾಗಿಯೇ ಇರುತ್ತಿದ್ದಿತು. ಅನವರತವೂ ಭಕ್ತರು ಪೂಜೆ ಸಲ್ಲಿಸುತ್ತಿದ್ದುದರಿಂದ ಅಗರುಚಕ್ಕೆ, ಗುಗ್ಗುಲ ಇವುಗಳ ಅಪರಿಮಿತ ಸೌಗಂಧ್ಯವು ಆ ದೇವಾಲಯದಲ್ಲಿ ಎಡಬಿಡದೆ ಎರಚುತ್ತಿದ್ದಿತು. ॥೩೪॥

ಆ ಶಿವಲಿಂಗವು ಉಂಡೇ ಕರ್ಪೂರದ ಆರತಿಯಿಂದಲೂ, ದೀಪಮಾಲೆಯಿಂದಲೂ ಯಾವಾಗಲೂ ಬೆಳಗುತ್ತಿದ್ದಿತು. ಕೈಲಾಸೇಶ್ವರನ ಪಶ್ಚಿಮ ದಿಕ್ಕಿನ ಗರ್ಭಗುಡಿಯಲ್ಲಿರುವ ಪೀಠದಲ್ಲಿ ವಿರಾಜಿಸಿರುವ ಆ ಸ್ಫಟಿಕಲಿಂಗವು ಅಂಬಿಕೇಶ್ವರ ಲಿಂಗವೆಂದು ಪ್ರಸಿದ್ಧವಾಗಿದ್ದಿತು. ಜೈಗೀಷವ್ಯಮುನಿಯೇ, ಗೌರೀದೇವಿಯ ಮನೋಗೃಹದಲ್ಲಿ ಅಡಗಿದ್ದ ಶಿವಭಾವವೇ, ಲಿಂಗರೂಪವಾಗಿ ಆವಿರ್ಭವಿಸಿ, ದಿವ್ಯವಾದ ಅಂಬಿಕೇಶಲಿಂಗವೆಂದು ಕರೆಯಲ್ಪಡುತ್ತಿದೆ. ॥೩೫-೩೬॥

**ಸುಧಾಂಶುಖಂಡಮೌಲಿಂ ಚ ಭೋಗಿಭೋಗಫಣಾವೃತಂ ।**
**ಧೃತತ್ರಿಪುಂಡ್ರನಿಟಿಲಂ ಬಿಲ್ವಾಲಂಕೃತಮಸ್ತಕಂ ॥೩೭॥**

**ಮಂದಾರಪುಂಡರೀಕಾಚ್ಛಮಾಲಾಮೌಲಿಮನೋಹರಂ ।**
**ಸುಚಂದನಘನಾಲೇಪಸುಂದರಾಪೀಠಲೇಪಿತಂ ॥೩೮॥**

**ಮಣಿಪ್ರಭಾಮಲಮಣಿಮೌಲಿಕಾಂತಿವಿರಾಜಿತಂ ।**
**ಪೂಜೋಪಕರಣಾಪಾರಕುಂಭೈರತ್ನಪರಿಚ್ಛದೈಃ ॥೩೯॥**

**ಛತ್ರೈಶ್ಚಾಮರಪಂಕ್ತಿಭಿಃ ಪತಾಕಾವ್ಯಜನೈರಪಿ ।**
**ರುದ್ರಾಣೀಗಣಸಾಹಸ್ರಕರಾತ್ತವರವಾದ್ಯಕೈಃ ॥೪೦॥**

---

ಅಂಬಿಕೇಶನ ಮೌಳಿಭಾಗವು, ಅರ್ಧಚಂದ್ರನಿಂದಲೂ ಆದಿಶೇಷನ ಹೆಡೆಗಳಿಂದಲೂ ಆವರಿಸಲ್ಪಟ್ಟಿರುವುದು. ಹಣೆಯಲ್ಲಿ ತ್ರಿಪುಂಡ್ರಾಕಾರವಾದ ಭಸ್ಮವು ಹೊಳೆಯುತ್ತಿರುವುದು. ಶಿರಸ್ಸಿನ ಮೇಲೆ ಪೂಜೆಮಾಡಿರುವ ಬಿಲ್ವದಳಗಳು ಸದಾ ಅಲಂಕಾರಪ್ರದಗಳಾಗಿರುವುವು. ||೩೭||

ಮಂದಾರ ಮತ್ತು ಕಮಲ ಪುಷ್ಪಗಳಿಂದ ಕಟ್ಟಿದ ಶುದ್ಧವಾದ ಮಾಲೆಯು, ಶಂಕರನ ಶಿರೋಭಾಗದಲ್ಲಿ ಧರಿಸಲ್ಪಟ್ಟು ಮನೋಹರವಾಗಿ ಕಾಣುತ್ತಿರುವುದು. ಪೀಠದ ಸುತ್ತಲೂ ದೃಢವಾಗಿ, ಸುಂದರವಾಗಿ ಕಾಣುವಂತೆ ಚಂದನಲೇಪವಿರುವುದು. ||೩೮||

ಲಿಂಗದ ಮೇಲ್ಭಾಗದಲ್ಲಿಯೂ, ಮತ್ತು ಸುತ್ತಲೂ ಇರುವ ರತ್ನದ ಕಾಂತಿಯಿಂದ ಪರಿಶುದ್ಧವಾದ ಪ್ರಭೆಯು ಲಿಂಗದ ಮೌಳಿಭಾಗವನ್ನು ಹೊಳೆಯುವಂತೆ ಮಾಡುತ್ತಿರುವುದು. ದೇವರ ಸಮೀಪದಲ್ಲಿ ಪೂಜೆಮಾಡಲು ಅನುಕೂಲವಾದ ಅಸಂಖ್ಯಾತ ಕುಂಭಗಳೂ, ರತ್ನಮಯವಾದ ಇತರ ಸಲಕರಣೆಗಳೂ, ಅನೇಕ ಛತ್ರಿಗಳೂ, ಚಾಮರಗಳ ಸಮೂಹವೂ, ಪತಾಕೆಗಳೂ ಮತ್ತು ಬೀಸಣಿಗೆಗಳೂ ಪರಶಿವನ ಸೇವೆಗಾಗಿ ಸಿದ್ಧವಾಗಿರುವುವು. ಸಾವಿರಾರು ರುದ್ರಾಣೀಗಣಗಳು ತಮ್ಮ ಕೈಯಿಂದ ಶ್ರೇಷ್ಠವಾದ ವಾದ್ಯಗಳನ್ನು ಹಿಡಿದು ಬಾರಿಸುತ್ತಿರುವರು. ||೩೯-೪೦||

ಮದ್ದುಮದ್ದಲಭೇರೀಣಾಂ ಸಹಸ್ರೈರ್ವೇಣುವೈಣಿಕೈಃ ।
ಕಾಹಲಾಪಾರನಿನದಪ್ರತಿಧ್ವನಿವಿರಾಜಿತಂ ॥೪೧॥

ಧೂಪಪಾತ್ರೈರ್ದೀಪಪಾತ್ರೈರ್ವರಶಂಖಸಹಸ್ರಕೈಃ ।
ಸಹಸ್ರದೀಪಾರಾರ್ತಿಕ್ಯೈರ್ಮಣಿಸ್ವರ್ಣವಿನಿರ್ಮಿತೈಃ ॥೪೨॥

ಸ್ವಹೃತ್ಪದ್ಮೇ ತದಾ ದೇವ್ಯಾ ಧ್ಯಾತಂ ತತ್ಪುರತಃ ಕ್ಷಣಾತ್ ।
ಅದರ್ಶಿ ದಿವ್ಯಂ ದೇವ್ಯಾ ಚ ಪ್ರಾಕಾರವರಗೋಪುರಂ ॥೪೩॥

ರತ್ನಗರ್ಭಗೃಹಾಂತಸ್ಸ್ಥಂ ಲಿಂಗಂ ತತ್ರಾಂಬಿಕೇಶಿತುಃ ।
ಸ್ವದೃಶಾ ದರ್ಶಯಾಂಚಕ್ರೇ ದೇವೀ ತತ್ರಾಂಬಿಕೇಶ್ವರಂ ॥೪೪॥

ದೃಷ್ಟ್ವಾ ಜಹರ್ಷ ನಿತರಾಮಂಬಿಕೇಶಂ ತದಂಬಿಕಾ ।
ಪ್ರದಕ್ಷಿಣಪ್ರಕ್ರಮಣೈ ರಮ್ಯಮಂಜೀರಪಾದತಃ ॥೪೫॥

---

ಮೃದಂಗ, ತಬಲ, ಭೇರಿ, ಇವುಗಳ ನಾದವೂ, ಸಾವಿರಾರು ಕೊಳಲಿನ ಧ್ವನಿಯೂ, ಅಪಾರವಾದ ಕೊಂಬಿನ ಕೂಗುಗಳೂ, ಒಟ್ಟುಸೇರಿ ಎಲ್ಲ ಕಡೆಯಲ್ಲಿಯೂ ಪ್ರತಿಧ್ವನಿಕೊಂಡುವಂತೆ ಶಬ್ದಮಾಡುತ್ತಿದ್ದುವು. ॥೪೧॥

ರತ್ನಮಯವಾದ ಧೂಪಾರತಿಗಳೂ, ಸುವರ್ಣಮಯಗಳಾದ ದೀಪದ ಕಂಬಗಳೂ, ಹಾಗೆಯೇ ಧ್ವನಿಗೈಯ್ಯುವ ಸಹಸ್ರಾರು ಸಂಖ್ಯೆಯ ಶಂಖಗಳೂ ಅಲ್ಲಿ ವಿರಾಜಿಸುತ್ತಿದ್ದುವು. ॥೪೨॥

ಹಿಂದೆ ಹೇಳಿದ ಅಂಬಿಕೇಶ್ವರ ದೇವಾಲಯ, ಪ್ರಾಕಾರ, ಪೂಜಾಸಾಮಗ್ರಿ, ಇವೆಲ್ಲವೂ ಆ ತಪೋವನದಲ್ಲಿರಲಿಲ್ಲ. ದೇವಿಯು ಹಠಾತ್ತಾಗಿ ಅಲ್ಲಿಗೆ ಬಂದು, ತನ್ನ ಹೃದಯಕಮಲದಲ್ಲಿದ್ದ ಪರಶಿವನನ್ನು ಧ್ಯಾನಮಾಡಿ, ಅನಂತರ ಕಣ್ದೆರೆದು ನೋಡಲಾಗಿ, ಎದುರಿನಲ್ಲಿ ಹಿಂದೆ ಹೇಳಿದಂತೆ, ದಿವ್ಯಲಿಂಗವೂ, ಪ್ರಾಕಾರಗೋಪುರಾದಿಗಳಿಂದ ಅಲಂಕೃತವಾದ ಶಿವಾಲಯವೂ ನಿರ್ಮಾಣವಾಗಿದ್ದಿತು. ॥೪೩॥

ಅನಂತರ ಗಿರಿಜಾದೇವಿಯು ಆಶ್ಚರ್ಯದಿಂದ ರತ್ನಮಯವಾದ ಗರ್ಭಗುಡಿಯಲ್ಲಿ ಪ್ರಕಾಶಿಸುತ್ತಿದ್ದ ಅಂಬಿಕೇಶ್ವರನ ಲಿಂಗವನ್ನು ದರ್ಶನಮಾಡಿದಳು. ॥೪೪॥

ಅಂಬಿಕೇಶ್ವರನನ್ನು ನೋಡಿ ಮಹಾದೇವಿಯು ಸಂತುಷ್ಟಳಾಗಿ, ಆ ಅಂಬಿಕೇಶಲಿಂಗವನ್ನು ಮನೋಹರವಾದ ಕಾಲ್ಗಡಗದ ಧ್ವನಿಯುಳ್ಳ ತನ್ನ ಪಾದಗಳಿಂದ ಪ್ರದಕ್ಷಿಣೆಮಾಡಿ ನಮಸ್ಕರಿಸಿದಳು. ॥೪೫॥

ಪದ್ಮಾರುಣಪದಾಕಾರಿ ತತಸ್ಸಾ ಸರಸಸ್ತಟಂ ।
ಯಯೌ ಮಂದಂ ಪರಿವೃತಾ ಸ್ವಸಖೀಗಣಮಧ್ಯಗಾ ॥೪೬॥

ತಪಸಾ ಪರಿಖಿನ್ನಾಂಗೀ ಕೃಶಾ ವಿದ್ಯುಲ್ಲತೇವ ಸಾ ।
ಅಂಭೋಜಿನೀತಟಂ ಪ್ರಾಪ್ಯ ಸಾ ಸಸ್ನೌ ಮಣಿಸಪ್ರಭೇ ॥೪೭॥

ಅಂಬಾ ತೀರ್ಥಜಲೇ ಗಾಹ್ಯ ಪರಿಧಾಯ ದುಕೂಲಕೇ ।
ಅತ್ಯಂತಸೂಕ್ಷ್ಮೇ ಚಂದ್ರಾಚ್ಛಕಾಂತಕಾಂತಿಸುವಾಸಿತೇ ॥೪೮॥

ಪ್ರಕ್ಷಾಳ್ಯ ಪಾಣೀಚರಣೌ ಸ್ವರ್ಣಭೃಂಗಾರುನೀರತಃ ।
ಸ್ವರ್ಣಸಿಂಹಾಸನಾಸೀನಾ ಸ್ವಸಖೀಭಿಃ ಪರೀವೃತಾ ॥೪೯॥

ಸ್ನಾತಾಂ ತಾಂ ಪರಿಸೇವಂತಿ ತಥಾಲಿಗಣಕೋಟಿಯಃ ।
ದೇವ್ಯಾ ಜಟಾವೇಣಿಕಾಂ ಚ ಪರಿಕ್ಲಿನ್ನಾಂ ತಥಾಂಶುಕೈಃ ॥೫೦॥

---

ಅನಂತರ ದೇವಿಯು, ಕಮಲದಂತೆ ಕಾಂತಿಯುಳ್ಳ ಮೃದುವಾದ ತನ್ನ ಕಾಲು ನಡಿಗೆಯಿಂದಲೇ ಹೊರಟು, ಸಖಿಯರ ಮಧ್ಯ ಸಂಚರಿಸುತ್ತಾ, ಸರೋವರದ ದಡಕ್ಕೆ ಬಂದಳು. ॥೪೬॥

ತಪಸ್ಸಿನಿಂದ ಅತ್ಯಂತ ಕೃಶವಾದ ಶರೀರವುಳ್ಳವಳಾದರೂ, ಮಿಂಚಿನ ಬಳ್ಳಿಯಂತೆ ಸೌಂದರ್ಯದಿಂದ ಹೊಳೆಯುತ್ತಿರುವ ಗೌರಿಯು, ಕಮಲಸರೋವರದ ದಡಕ್ಕೆ ಬಂದು ರತ್ನದಂತೆ ಕಾಂತಿಯುಳ್ಳ ನಿರ್ಮಲೋದಕದಲ್ಲಿ ಸ್ನಾನಮಾಡಿದಳು. ॥೪೭॥

ಅಂಬಿಕೆಯು ಆ ತೀರ್ಥೋದಕದಲ್ಲಿ ಸ್ನಾನಮಾಡಿದ ಮೇಲೆ ಅತ್ಯಂತ ಸೂಕ್ಷ್ಮವೂ, ಚಂದ್ರನಂತೆ ಶುಭ್ರವೂ, ಕಾಂತಿಯುಕ್ತವೂ ಆಗಿ ಸುವಾಸನೆಯಿಂದ ಕೂಡಿದ ನಾರುಮಡಿಗಳನ್ನು ಧರಿಸಿದಳು. ॥೪೮॥

ಅನಂತರ ತನ್ನ ಕೈಯ್ಯಲ್ಲಿದ್ದ ಚಿನ್ನದ ಗಿಂಡಿಯ ನೀರಿನಿಂದ ಕೈಕಾಲುಗಳನ್ನು ತೊಳೆದುಕೊಂಡು ತನ್ನ ಗೆಳತಿಯರಿಂದ ಪರಿವೃತಳಾಗಿ ಸುವರ್ಣಸಿಂಹಾಸನದಲ್ಲಿ ಮಂಡಿಸಿದಳು. ॥೪೯॥

ಸ್ನಾನಮಾಡಿ ಸಿಂಹಾಸನಾಸೀನಳಾಗಿರುವ ದೇವಿಯನ್ನು ಅಸಂಖ್ಯಾತ ಸಖಿಯರು ಸುತ್ತಲೂ ನಿಂತು ಸೇವೆ ಮಾಡುತ್ತಿದ್ದರು. ಅವರಲ್ಲಿ ಕೆಲವರು ನೀರಿನಿಂದ

ಶುಭ್ರೈಃ ಶಿರೋ ವೇಷ್ಟಯಂತ್ಯಸ್ತಥಾನ್ಯಾಃ ಪಾದಧಾವಕಾಃ ।
ತಥಾಽನ್ಯಾ ಜಗೃಹುಸ್ತತ್ರ ಬಾಲಾತಪನಿವಾರಣೇ ॥೫೦॥

ಛತ್ರಾಣ್ಯಪಿ ತಥೈವೇಂದುಧಾಮಪುಂಡಲಶೋಭಿಭಿಃ ।
ಚಾಮರೈರ್ವೀಜಯಂತ್ಯೇನಾಂ ತಥಾ ವ್ಯಜನಪಾಂಸುಭಿಃ ॥೫೨॥

ವೀಜಯಂತಿ ಪರಿಶ್ರಾಂತಾಂ ಚಿರಾಧ್ಯುಷ್ಟಾಂ ತಪೋವನೇ ।
ಬಾಲಾಮಬಾಲಕಲನಾಂ ಧೂಪಯಂತ್ಯಸ್ತಥಾ ಜಟಾಃ ॥೫೩॥

ರತ್ನಾದರ್ಶಕರಾಪಾರಕಜ್ಜಲಾನಾಂ ಚ ಸಂಪುಟೈಃ ।
ಪಟವಾಸೈರ್ಮುಖಾಮೋದೈಃ ಕರ್ಪೂರರಾಗುಚ್ಛಿ(ಲಿ)ಕಾದಿಭಿಃ ॥೫೪॥

ತಾಂಬೂಲಪೇಟೀವೀಟೀಭಿಸ್ತಥಾ ಕಾಲಂಜಿಕಾಕರೈಃ ।
ಅರುಣೋತ್ತಮಕೌಸುಂಭವಸ್ತ್ರೋದ್ಘೂಲಸಕೈಶ್ಚಿಪಾಂ ॥೫೫॥

---

ತೊಯ್ದಿರುವ ದೇವಿಯ ಜಡೆಗಳನ್ನು ಶುಭ್ರವಾದ ವಸ್ತ್ರಗಳಿಂದ ಒರೆಸುತ್ತಿದ್ದರು. ಮತ್ತೆ ಕೆಲವರು ದೇವಿಯ ಪಾದಗಳನ್ನು ಚೆನ್ನಾಗಿ ತೊಳೆಯುತ್ತಿದ್ದರು. ॥೫೦॥

ಇನ್ನು ಕೆಲವು ಸಖಿಯರು ದೇವಿಗೆ ಎಳೆಬಿಸಿಲು ತಾಗದಂತೆ ಛತ್ರಿಗಳನ್ನು ಹಿಡಿದು ಮರೆಮಾಡುತ್ತಿರುವರು. ॥೫೧॥

ಹಾಗೆಯೇ ಚಂದ್ರಕಾಂತಿಯ ಸಮೂಹದಂತೆ ಪ್ರಕಾಶಿಸುತ್ತಿರುವ ಚಾಮರಗಳನ್ನು ಹಿಡಿದು ಕೆಲವರು ಬೀಸುತ್ತಿರುವರು. ಇತರರು ಬೀಸಣಿಗೆಗಳನ್ನು ತೆಗೆದುಕೊಂಡು ಬಹಳಕಾಲ ತಪೋನಿರತಳಾಗಿ, ಬಳಲಿರುವ ದೇವಿಗೆ ಗಾಳಿಯನ್ನೊದಗಿಸುವರು. ॥೫೨॥

ಬಾಲಿಕೆಯಾಗಿ ತೋರುತ್ತಿದ್ದರೂ ಬಾಲಿಕಾಭಾವವನ್ನು ಮೀರಿ ಉತ್ತಮಳೆನಿಸಿರುವ ದೇವಿಯನ್ನು ಸೇವಿಸಲು ಕೆಲವು ಸಖಿಯರು, ತಮ್ಮ ಕೈಗಳಲ್ಲಿ ರತ್ನಗನ್ನಡಿಗಳನ್ನು ಹಿಡಿದಿರುವರು. ಹಲವರು ಕಾಡಿಗೆ ಡಬ್ಬಿಯನ್ನು ಕೈಯ್ಯಲ್ಲಿಟ್ಟುಕೊಂಡಿರುವರು. ಮತ್ತೆ ಕೆಲವರು ಸಂಪುಟಗಳನ್ನು ಧರಿಸಿ ಜಡೆಗಳಿಗೆ ಧೂಪಹಾಕುತ್ತಿರುವರು. ॥೫೩॥

ಹಲವು ಸಖಿಯರು ಮುಖಕ್ಕೆ ಸುವಾಸನೆಯನ್ನುಂಟುಮಾಡುವ ಪುಡಿಗಳನ್ನು ತೆಗೆದುಕೊಂಡು ಅದನ್ನು ಗೌರಿಯ ಮುಖಕ್ಕೆ ಲೇಪಿಸುತ್ತಿರುವರು. ಇನ್ನು ಕೆಲವರು

ಖಡ್ಗಕೋಶಕರಾಶ್ಚಾನ್ಯಾಸ್ತಥಾ ಖೇಟಧರಾಸ್ಸ್ತ್ರಿಯಃ ।
ನಿಷಂಗಕಾರ್ಮುಕಧರಾಶ್ಶರಧಾರಾಧರಾಸ್ತಥಾ ॥೫೬॥

ಸ್ತ್ರಿಯಃ ಕ್ವಣನ್ಮಣೀದಂಡಬದ್ಧಾಲಾಬುಮಣೀಂದ್ರಜೈಃ ।
ವೀಣಾಪಾಣಿಮುಖೋದ್ಭೂಷ್ಟಗಾಯನ್ತ್ಯಸ್ತಾಂ ಸಿಷೇವಿರೇ ॥೫೭॥

ಸಖೀಪಾಣಿಧೃತೋತ್ತುಂಗರತ್ನಾದರ್ಶವಿಲೋಕನೈಃ ।
ಧೃತತ್ರಿಪುಂಡ್ರರುದ್ರಾಕ್ಷಾ ಭಸ್ಮಪಾಂಡರವಿಗ್ರಹಾ ॥೫೮॥

ದಧಾನಾ ವಾಸಸೀ ಶುಭ್ರೇ ಭೃಂಗಾರುಕರಪಲ್ಲವಾ ।
ಮಣೀಂದ್ರಕಲ್ಪಿತಮಹಾಪಾದುಕಾಧ್ಯಸ್ತಪಾದಭೂಃ ॥೫೯॥
ಮಂದಂ ಮಂದಂ ಸಖೀವೃಂದೈಸ್ಸಮಾಯಾತ್ಯಂಬಿಕೇಶ್ವರಂ ।

---

ಪಚ್ಚಕರ್ಪೂರದ ಪುಡಿಯನ್ನು ದೇವಿಯ ಅವಯವಗಳಿಗೆ ಹಚ್ಚುತ್ತಿರುವರು. ಕೆಲವು ಗೆಳತಿಯರು ತಾಂಬೂಲದ ಪೆಟ್ಟಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ತಾಂಬೂಲವನ್ನು ದೇವಿಗೆ ಮಡಿಸಿಕೊಡುತ್ತಿರುವರು. ಕಾಲಂಜಿಕೆಯಿಂದ (ಪೀಕದಾನಿ) ಕೆಲವರು ಪಚರಿಸುತ್ತಿರುವರು. ಕುಸುಂಭಪುಷ್ಪದಂತೆ ಕೆಂಪಾದ ಬಟ್ಟೆಗಳಿಂದ ಕೆಲವರು ದೇವಿಯ ಮೈಮೇಲೆ ಬೀಳುವ ಧೂಳುಗಳನ್ನು ಹೋಗಲಾಡಿಸುತ್ತಿರುವರು. ||೫೪-೫೫||

ಕೆಲವರು ಕತ್ತಿ ಮತ್ತು ಒರೆಯನ್ನು ಹಿಡಿದು ನಿಂತಿರುವರು. ಹಲವರು ಸುಂದರವಾದ ಮತ್ತು ವಿನೋದಾರ್ಥವಾದ ಪಕ್ಷಿಗಳನ್ನು ಹಿಡಿದುಕೊಂಡು ನಿಂತಿರುವರು. ಬತ್ತಳಿಕೆ ಬಿಲ್ಲುಗಳನ್ನು ಧರಿಸಿ ಕೆಲವು ಸ್ತ್ರೀಯರು ಬಾಣಗಳನ್ನು ಕೈಯಲ್ಲಿ ಹಿಡಿದು ದೇವಿಯನ್ನು ನೋಡುತ್ತಿರುವರು. ||೫೬||

ಶಬ್ದಮಾಡುವ ಮಣಿಮಯವಾದ ದಂಡಕ್ಕೆ ಅಲಾಬು (ಸಿಹಿಸೋರೇಬುರಡೆ) ವನ್ನು ಸೇರಿಸಿ, ಅದಕ್ಕೆ ಮಣಿಗಳನ್ನೂ ತಂತಿಗಳನ್ನೂ ಜೋಡಿಸಿರುವ ವೀಣೆಯನ್ನು ಹಿಡಿದು, ಅದನ್ನು ಮೀಟುತ್ತಾ, ಇಂಪಾದ ಸೊಂಪಾದ ಸಂಗೀತವನ್ನು ಹಾಡುತ್ತಾ, ಕೆಲವು ಸಖಿಯರು ದೇವಿಯನ್ನು ಆನಂದಗೊಳಿಸುತ್ತಿದ್ದರು. ||೫೭||

ಆಗ ದೇವಿಯು ಸಖಿಯರ ಕೈಯಲ್ಲಿರುವ ದೊಡ್ಡ ರತ್ನಗನ್ನಡಿಗಳನ್ನು ಪದೇಪದೇ ನೋಡುತ್ತಾ, ಸಿಂಹಾಸನದಿಂದ ಮೇಲೆದ್ದಳು. ತ್ರಿಪುಂಡ್ರವನ್ನೂ ರುದ್ರಾಕ್ಷಮಾಲೆಯನ್ನೂ ಧರಿಸಿ, ಭಸ್ಮವನ್ನು ಶರೀರಕ್ಕೆಲ್ಲಾ ಲೇಪನ ಮಾಡಿಕೊಂಡಿ

ಸ್ವಸಖೀವಿಧೃತಾಪಾರರತ್ನಕುಂಭಧೃತೈರ್ಜಲೈಃ ॥೬೦॥

ಸುವಸ್ತ್ರಪೂತೈಃ ಕರ್ಪೂರತಗರಾಗರುಪಾಟಲೈಃ ।
ಸುವಾಸಿತಮಹಾಕುಂಭವಕ್ತ್ರನ್ಯಸ್ತಾಮ್ರಪಲ್ಲವೈಃ ॥೬೧॥

ನಾರಂಗಮಾತುಲಿಂಗಾಮ್ರಮೋಚಾಜಂಬೀರಪಾನಸೈಃ ।
ಇಕ್ಷುದ್ರಾಕ್ಷಾಫಲೀಗುಚ್ಛಸ್ವಚ್ಛಮೋಚಾಫಲೀಕುಲೈಃ ॥೬೨॥

ಹರಿದ್ರಾರಕ್ತಧವಲನಾರಿಕೇಲಫಲೀಭರೈಃ ।
ರಮ್ಯಪೂಗೀಫಲಾಭಾರಮಾತುಲಿಂಗಕಪಿತ್ಥಕೈಃ ॥೬೩॥
ರತ್ನಪಾತ್ರವರಾಕ್ಲೃಪ್ತಫಲಜಾಲೈರನೇಕಧಾ ।

---

ರುವುದರಿಂದ ಶುಭ್ರವಾದ ಶರೀರಕಾಂತಿಯಿಂದ ದೇವಿಯು ಕಂಗೊಳಿಸುತ್ತಿದ್ದಳು. ಮಡಿಯಾದ ಬಟ್ಟೆಗಳನ್ನುಟ್ಟು ಚಿಗುರಿನಂತಿರುವ ತನ್ನ ಕೈಯ್ಯಲ್ಲಿ ಭಂಗಾರದ ಗಿಂಡಿಯನ್ನು ಹಿಡಿದು, ದೇವಿಯು ಶ್ರೇಷ್ಠವಾದ ಮಣಿಗಳಿಂದ ಖಚಿತವಾದ ಪಾದುಕೆಯನ್ನು ಧರಿಸಿ, ಮೆಲ್ಲಮೆಲ್ಲಗೆ ತನ್ನ ಸಖಿಯರ ಗುಂಪಿನೊಡನೆ ಅಂಬಿಕೇಶ್ವರನ ಸಮೀಪಕ್ಕೆ ಬಂದಳು. ॥೫೮-೫೯॥

ಜೊತೆಯಲ್ಲಿ ಬರುತ್ತಿದ್ದ ಸಖಿಯರು ದೊಡ್ಡ ರತ್ನ ಕುಂಭಗಳಲ್ಲಿ ಒಳ್ಳೆಯ ಬಟ್ಟೆಗಳಿಂದ ಶೋಧಿಸಿದ ಮಡಿನೀರನ್ನು ತರುತ್ತಿದ್ದರು. ಆ ನೀರಿಗೆ ಪಚ್ಚಕರ್ಪೂರ, ತಗರ (ಧೂಪವಿಶೇಷ) ಅಗರು ಮೊದಲಾದ ಸುವಾಸನ ದ್ರವ್ಯಗಳನ್ನು ಹಾಕಿದ್ದುದರಿಂದ ಅದು ಪಾಟಲವರ್ಣವಾಗಿ (ಕೆಂಪು, ಮತ್ತು ಬಿಳುಪು ಮಿಶ್ರವಾದ ಬಣ್ಣ) ಕಾಣುತ್ತಿದ್ದಿತು. ಸುಗಂಧಮಯವಾದ ಆ ದೊಡ್ಡ ಕಲಶಗಳ ಮೇಲ್ಭಾಗದಲ್ಲಿ ಮಾವಿನ ಚಿಗುರುಗಳನ್ನು ಇರಿಸಿದ್ದರು. ॥೬೦-೬೧॥

ಕಿತ್ತಲೇ, ಮಾದಲ, ಮಾವು, ಮೋಚಾ (ಬಾಳೇ), ನಿಂಬೆ, ಮತ್ತು ಹಲಸು, ಈ ಹಣ್ಣುಗಳನ್ನೂ, ಕಬ್ಬು, ದ್ರಾಕ್ಷಿಯಹಣ್ಣುಗಳ ಗೊಂಚಲು, ಸ್ವಚ್ಛವಾದ ಬಾಳೇ ಹಣ್ಣಿನ ಚಿಪ್ಪುಗಳೂ, ಇವುಗಳನ್ನೂ ಕೆಲವು ಸಖಿಯರು ಮಣಿಮಯವಾದ ಬುಟ್ಟಿಗಳಲ್ಲಿ ತರುತ್ತಿದ್ದರು. ॥೬೨॥

ಹಳದಿ, ಕೆಂಪು, ಧವಳ, ಈ ವರ್ಣಗಳಿಂದ ಅಲಂಕೃತವಾಗಿದ್ದ ಎಳನೀರು, ತೆಂಗಿನಕಾಯಿ, ಕೊಪ್ಪರೀ ಇವುಗಳನ್ನೂ, ಮನೋಹರವಾದ ಅಡಿಕೆಕಾಯಿಗಳನ್ನೂ, ಮಾದಲ, ಬೇಲ ಈ ಹಣ್ಣುಗಳನ್ನೂ ಅಲ್ಲದೇ ಇನ್ನೂ ಅನೇಕವಿಧವಾದ ಹಣ್ಣು

ನಾಗವಲ್ಲೀದಲಾನಾಂ ಚ ಭಾರೈರ್ಗಿರಿಶಿಖೋಪಮೈಃ ॥೬೪॥

ಸಹಸ್ರಾರರಕ್ತಸುದಲಫುಲ್ಲಪಂಕೇರುಹೈಸ್ತಥಾ ।
ಫುಲ್ಲಮಂದಾರಜೋದ್ದಾಮಕರ್ಣಿಕಾರಬಕೈಸ್ತಥಾ ॥೬೫॥

ನೀಲನೀಲೋತ್ಪಲಾನಾಂ ಚ ಭಾರೈಶ್ಚ ಕರವೀರಜೈಃ ।
ಶಮ್ಯಪಾಮಾರ್ಗದೂರ್ವಾದಿದ್ರೋಣಾರ್ಕಕುಮುದೈಸ್ತಥಾ ॥೬೬॥

ಬಂಧೂಕಾರಕ್ತದಾಡಿಂಬಪುಂಡರೀಕಸುಪಾಟಲೈಃ ।
ಬಿಲ್ವೈರಾರಕ್ತಮಧುರತ್ರಿಶಾಖಾಭರಪೂರಿತೈಃ ॥೬೭॥

ಪಾತ್ರೈಃ ಪಾತ್ರೀಕೃತಾ ದೇವೀಮನುಜಗ್ಮುಸ್ಸಹಸ್ರಧಾ ।
ಸುನೀರಪೂರಿತಘಟಸಹಸ್ರೈಃ ಪ್ರಯಯುಶ್ಚಿನಾಂ ॥೬೮॥

---

ಹಂಪಲುಗಳನ್ನೂ ರತ್ನಖಚಿತವಾದ ಪಾತ್ರೆಗಳಲ್ಲಿ ಸಖಿಯರು ರಾಶಿರಾಶಿಯಾಗಿ ತರುತ್ತಿದ್ದರು. ॥೬೩॥

ಮತ್ತೆ ಕೆಲವು ಮಂದಿ ಗೆಳತಿಯರು ಬೆಟ್ಟದ ಶಿಖರದಂತೆ ಮೊನೆಚಾಗಿ ಜೋಡಿಸಿರುವ ವೀಳ್ಯೇದೆಲೆಗಳನ್ನೂ, ಅರಳಿ ಒಳ್ಳೆಯ ಎಸಳುಗಳುಳ್ಳ ಕೆಂಪಾದ ಸಹಸ್ರದಳ ಕಮಲಗಳನ್ನೂ, ಮತ್ತು ಅರಳಿದ ಮಂದಾರಪುಷ್ಪಗಳನ್ನೂ ಸುಂದರವಾದ ಕರ್ಣಿಕಾರ (ಕಣಿಗಲೆ) ಮತ್ತು ಬಕಪುಷ್ಪಗಳನ್ನೂ ಜೊತೆಯಲ್ಲಿ ಪೂಜೆಗೋಸ್ಕರ ತರುತ್ತಿದ್ದರು. ॥೬೪-೬೫॥

ಮತ್ತೂ ನೀಲವರ್ಣದ ಕನ್ನೈದಿಲೆಹೂವುಗಳನ್ನೂ, ಕರವೀರ, ಪುಷ್ಪ, ಬನ್ನಿ, ಅಪಾಮಾರ್ಗ, ಗರಿಕೆ ಮೊದಲಾದ ಪತ್ರೆಗಳನ್ನೂ, ತುಂಬೆಹೂವು, ಎಕ್ಕದಹೂ, ನೈದಿಲೆ ಇವುಗಳನ್ನೂ ॥೬೬॥

ದಾಸವಾಳದಹೂ, ಕೆಂಪಾದ ದಾಳಿಂಬೇಹೂ, ಕೆಂಪು, ಬಿಳುಪು ಮಿಶ್ರವಾದ ಬಣ್ಣದ ತಾವರೇಹೂಗಳೂ, ಬಿಲ್ವದಳಗಳೂ ಇವೆಲ್ಲವನ್ನೂ ಶುದ್ಧವಾದ ಮಣಿಮಯ ಪಾತ್ರೆಗಳಲ್ಲಿ ತುಂಬಿಕೊಂಡು ಸಾವಿರಾರು ಜನ ಸಖಿಯರು ದೇವಿಯನ್ನು ಹಿಂಬಾಲಿಸುತ್ತಿದ್ದರು. ॥೬೭॥

ಕೆಲವರು ಶುದ್ಧವಾದ ನೀರಿನಿಂದ ತುಂಬಿದ ಸಾವಿರಾರು ಗಡಿಗೆಗಳನ್ನು ಹೊತ್ತುಕೊಂಡು ಅಂಬಿಕೆಯನ್ನು ಹಿಂಬಾಲಿಸುತ್ತಿದ್ದರು. ॥೬೮॥

ಛತ್ರಚಾಮರಧಾರಿಣ್ಯೋ ವೀಣಾದರ್ಶಕರಾಸ್ತಥಾ ।
ಫಲಪಲ್ಲವರಾಶೀನಾಂ ಭಾರಾಪಾರಕರಾಸ್ತಥಾ ॥೬೯॥

ನಾನಾಶಂಖೈಃ ಕಾಹಲೀಭಿರ್ವೀಣಾವೇಣುಮೃದಂಗಕಾನ್ ।
ನಾದಯಂತಿ ಪುರೋ ದೇವ್ಯಾಸ್ಸಖ್ಯಸ್ತತ್ರ ಮಹೇಶ್ವರೀಂ ॥೭೦॥

ತದಾಂಬಿಕೇಶಂ ಸಂಪ್ರಾಪ್ಯ ತದ್ಗೋಪುರವರಾಗ್ರತಃ ।
ವಿಸೃಜ್ಯ ಪಾದುಕೇ ದಿವ್ಯೇ ಪ್ರಕ್ಷಾಲ್ಯ ಚ ಪದದ್ವಯಂ ॥೭೧॥

ಗರ್ಭಾಗಾರಂ ಮಹೇಶಸ್ಯ ಪ್ರವಿಶ್ಯಾಂಬಾಂಬಿಕೇಶ್ವರಂ ।
ನತ್ವೋಪವಿಶ್ಯ ಚೇಲಾದಿವ್ಯಾಪೃತೇ ಸುಂದರಾಕೃತಿಃ ॥೭೨॥

ಪ್ರಾಣಾನಾಯಮ್ಯ ಸಾ ದೇವೀ ದಧ್ಯೌ ಪ್ರಾಣೇಶ್ವರಂ ಹೃದಿ ॥೭೩॥

---

ಕೆಲವರು ಛತ್ರಿ ಮತ್ತು ಚಾಮರಗಳನ್ನು ಹಿಡಿದು ಸೇವೆಮಾಡುತ್ತಾ ಬರುತ್ತಿದ್ದರು. ಕೆಲವರು ವೀಣೆಯನ್ನು ನುಡಿಸುತ್ತಲೂ, ಹಲವರು ಕನ್ನಡಿಯನ್ನು ಹಿಡಿದು ಹೊಳೆಯುತ್ತಲೂ ಬರುತ್ತಿದ್ದರು. ಬೇರೆ ಕೆಲವರು ಹಣ್ಣು ಮತ್ತು ಚಿಗುರುಗಳ ಸಮೂಹವನ್ನು ತೆಗೆದುಕೊಂಡು, ಅದರ ಭಾರದಿಂದ ಜಗ್ಗಿದವರಾಗಿ ದೇವಿಯನ್ನು ಹಿಂಬಾಲಿಸುತ್ತಿದ್ದರು. ॥೬೯॥

ಕೆಲವರು ಕೊಂಬುಗಳನ್ನು ಮೊಳಗಿಸುತ್ತಿದ್ದರು. ಅನೇಕರು ವೀಣೆ, ಕೊಳಲು ಮೃದಂಗ ಇವುಗಳನ್ನು ಬಾರಿಸುತ್ತಾ ದೇವಿಯಸುತ್ತಲೂ ಬರುತ್ತಿದ್ದರು. ॥೭೦॥

ಹೀಗೆ ದೇವಿಯು ತನ್ನ ಸಖೀಪರಿವಾರದೊಡನೆ, ಅಂಬಿಕೇಶದೇವಾಲಯದ ಗೋಪುರದ ಮುಂಭಾಗದಲ್ಲಿ ದಿವ್ಯವಾದ ತನ್ನ ಪಾದುಕೆಗಳನ್ನು ಬಿಟ್ಟು ಕಾಲುಗಳೆರಡನ್ನೂ ತೊಳೆದುಕೊಂಡಳು. ॥೭೧॥

ಅನಂತರ ಅಂಬಿಕೆಯು ಗರ್ಭಗುಡಿಯನ್ನು ಹೊಕ್ಕು ಮೊದಲು ಅಂಬಿಕೇಶ್ವರನಿಗೆ ನಮಸ್ಕರಿಸಿ, ಸಮೀಪದಲ್ಲಿದ್ದ ಮಡಿಬಟ್ಟೆಯ ಆಸನದ ಮೇಲೆ ಕುಳಿತುಕೊಂಡಳು. ಆಮೇಲೆ ಪೂಜಾರ್ಥವಾಗಿ ಗಿರಿಜಾದೇವಿಯು ಪ್ರಾಣಾಯಾಮಮಾಡಿ, ಸ್ವಲ್ಪ ಕಾಲ ಪ್ರಾಣೇಶ್ವರನಾದ ಪರಶಿವನನ್ನು ಹೃದಯದಲ್ಲಿ ಧ್ಯಾನಮಾಡಿದಳು. ॥೭೨-೭೩॥

॥ ಸ್ಕಂದ ಉವಾಚ ॥

**ಜ್ವಲನ್ನಿಟಿಲಲೋಚನಂ ವಿಷಗಲಾರ್ಚಿರ್ಮೇಘಾಂಗಕ**
**ಪ್ರಭಾತತಿವಿರಾಜಿತಂ ಜಿತಮಹೇಂದುಧಾಮಾನನಂ ।**
**ಪಟೇಭವರಕೃತ್ತಿಧೃಗ್ವಿಧೃತಪೋತಚಂದ್ರಂ ಸರಿ**
**ಜ್ಜಟಾಪಟುಕುಟೀರಕೋಜ್ಜ್ವಲಿತಭೋಗಿಭೋಗಾನತಂ ॥೭೪॥**

**ಫಣಾಮಣಿವಿದೀಪಿತಂ ಸ್ವಹೃದಿ ಪಂಕಜಾಧ್ಯಾಸಿತಂ**
**ದಧಾರ ಚಿರಮಂಬಿಕಾ ತಪನಸೋಮಸಪ್ತಾರ್ಚಿತಃ ।**
**ಪ್ರಕಾಶನಯನತ್ರಿಷಂ ಮಧುಹರಾಕ್ಷಿಪದ್ಮಾಂಘ್ರಿಕಂ**
**ಸುಬಾಲಮೃಗಟಂಕಧೃಕ್ಪ್ರಥಿತಬಾಹುದಂಡಾನತಂ ॥೭೫॥**

---

ಪರಮೇಶ್ವರನು ಹಣೆಯಲ್ಲಿ ಯಾವಾಗಲೂ ಉರಿಯುತ್ತಿರುವ ಅಗ್ನಿನೇತ್ರವುಳ್ಳವನು. ವಿಷಪಾನ ಮಾಡಿದುದರಿಂದ ಕಂಠದಲ್ಲಿ ಅದರ ಕಾಂತಿಯು ಹಾಗೆಯೇ ನೆಲಸಿ, ದೇಹವೆಲ್ಲಾ ಮೇಘದಂತೆ ಕಪ್ಪಾಗಿರುವಂತೆ ತೋರುತ್ತಿರುವುದು. ಅಲ್ಲದೆ ದಿವ್ಯವಾದ ದೇಹಕಾಂತಿಯಿಂದ ಪರಮಾತ್ಮನ ಶರೀರವೆಲ್ಲಾ ಸೂರ್ಯನಂತೆ ಪ್ರಕಾಶಿಸುತ್ತಿರುವುದು. ಮುಖದ ಸುಂದರವಾದ ತೇಜಸ್ಸಾದರೋ ಚಂದ್ರನನ್ನೇ ಜಯಿಸಿದಂತಿರುವುದು. ಶ್ರೇಷ್ಠವಾದ ಆನೆಯ ಚರ್ಮವನ್ನೇ ಪರಮಾತ್ಮನು ವಸ್ತ್ರವನ್ನಾಗಿ ಧರಿಸಿರುವನು. ಶಿರಸ್ಸಿನಲ್ಲಿ ಬಾಲಚಂದ್ರನು ವಿರಾಜಿಸುತ್ತಿರುವನು. ಗಂಗಾದೇವಿಯು ಶಿವನ ಜಡೆಯೆಂಬ ದೃಢವಾದ ಗುಡಿಸಿಲಿನಲ್ಲಿ ನೆಲಸಿರುವಳು. ಪ್ರಕಾಶಿಸುತ್ತಿರುವ ಸರ್ಪದ ಶರೀರದಿಂದ ಜಡೆಯನ್ನು ಬಿಗಿದಿರುವುದರಿಂದ ಆ ಜಡೆಯು ಸ್ವಲ್ಪಮಟ್ಟಿಗೆ ಬಾಗಿರುವುದು. ॥೭೪॥

ಶಿವನು ಸರ್ಪಭೂಷಣನಾದುದರಿಂದ ಆ ಸರ್ಪದ ಹೆಡೆಯಲ್ಲಿರುವ ಮಣಿಯು ಶಂಕರನ ಶಿರೋಭಾಗದಲ್ಲಿ ರಂಜಿಸುತ್ತಿರುವುದು. ಸೂರ್ಯ, ಚಂದ್ರ ಮತ್ತು ಅಗ್ನಿ ಈ ಮೂವರೇ ಶಿವನ ಮೂರು ಕಣ್ಣುಗಳಾಗಿರುವುದರಿಂದ, ಶಂಕರನ ನೇತ್ರಗಳು ಜಗದ್ವ್ಯಾಪಿಯಾಗಿರುವುವು. ಮಧುಸೂದನನ ನೇತ್ರಕಮಲದಿಂದ ಪೂಜಿತವಾದ ಪಾದಪದ್ಮವುಳ್ಳ ಶಂಕರನು ಜಿಂಕೆಯ ಮರಿಯನ್ನೂ, ಬಾಲಚಂದ್ರನನ್ನೂ ಪ್ರೀತಿಯಿಂದ ಧರಿಸಿರುವನು. ಬಾಹುಗಳು ನೀಳವಾಗಿ ದಂಡಕಾಷ್ಠದಂತೆ ದೃಢವಾಗಿರುವುವು.

ವರಾಭಯಯುಕರಾಂಬುಜಂ ಭಸಿತಪುಂಡ್ರರೇಖೋಜ್ಜ್ವಲಂ ।
ಸುಮಂದಹಸಿತಾನನಂ ಪ್ರಣತಪಕ್ವಬಿಂಬಾಧರಂ ॥೭೬॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಅಂಬಿಕೇಶ್ವರಪೂಜನಂ ನಾಮ ಚತುರ್ಥೋಽಧ್ಯಾಯಃ

---

ಇಂತಹ ದೇವದೇಹನನ್ನು ಅಂಬಿಕೆಯು ತನ್ನ ಹೃದಯಕಮಲದಲ್ಲಿ ಭಾವಿಸಿ ಬಹಳ ಹೊತ್ತು ಧ್ಯಾನಮಾಡುತ್ತಿದ್ದಳು. ॥೭೫॥

ಮತ್ತೂ ಈ ಪರಶಿವನು ಕಮಲದಂತೆ ಕಾಂತಿಯುಕ್ತವಾದ ವರದ ಮತ್ತು ಅಭಯಹಸ್ತಗಳುಳ್ಳವನಾಗಿರುವನು. ಹಣೆಯಲ್ಲಿ ಭಸ್ಮತ್ರಿಪುಂಡ್ರರೇಖೆಗಳು ಹೊಳೆಯುತ್ತಿರುವುವು. ಮುಖವು ಮಂದಹಾಸದಿಂದ ಕೂಡಿರುವುದು. ಕೆಳದುಟಿಯು ಪಕ್ವವಾದ ತೊಂಡೆಹಣ್ಣಿನಂತಿರುವುದು, ಎಂಬುದಾಗಿ ಸುಂದರವಾದ ದೇಹಕಾಂತಿಯುಳ್ಳ ಪರಮೇಶ್ವರನನ್ನು ಗಿರಿಜಾದೇವಿಯು ತನ್ನ ಮನಸ್ಸಿನಲ್ಲಿ ಧ್ಯಾನಮಾಡುತ್ತಿದ್ದಳು. ॥೭೬॥

ಇಲ್ಲಿಗೆ ಶ್ರೀಶಿವರಹಸ್ಯದ ಭವಾಖ್ಯವಾದ ಎರಡನೆಯ ಅಂಶದಲ್ಲಿ ಅಂಬಿಕೇಶ್ವರ ಪೂಜೆಯೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಪಂಚಮೋಽಧ್ಯಾಯಃ



॥ ಸ್ಕಂದ ಉವಾಚ ॥

**ಸಮಾಹಿತೇನ ಮನಸಾ ಧ್ಯಾತ್ವೈವಂ ಪರಮೇಶ್ವರಂ ।**
**ಆವಾಹನಂ ಸ್ಥಾಪನಂಚ ಸನ್ನಿಧಾನಂ ನಿರೀಕ್ಷಣಂ ॥೧॥**

**ಧೇನುಮುದ್ರಾಂ ಪ್ರದರ್ಶ್ಯಾಥ ಪೀಠಪೂಜಾಂ ತತೋ ದ್ವಿಜ ।**
**ಧ್ಯಾಯೇತ್ಸದಾಶಿವಂ ಸಾಕ್ಷಾದ್ದೇವಂ ಸಕಲನಿಷ್ಕಲಂ ॥೨॥**

**ಶುದ್ಧಸ್ಫಟಿಕಸಂಕಾಶಂ ತ್ರಿಣೇತ್ರಂ ಶೀತಲದ್ಯುತಿಂ ।**
**ವಿದ್ಯುದ್ವಲಯಸಂಕಾಶಜಟಾಮುಕುಟಶೋಭಿತಂ ॥೩॥**

---

### ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಐದನೆಯ ಅಧ್ಯಾಯ

ಸ್ಕಂದನು ಮುಂದಿನ ಕಥೆಯನ್ನು ಜೈಗೀಷವ್ಯನಿಗೆ ವಿವರಿಸಲಾರಂಭಿಸಿದನು. ಹಿಂದೆ ಹೇಳಿದಂತೆ ಸಾವಧಾನವಾದ ಮನಸ್ಸಿನಿಂದ ದೇವಿಯು ಪರಮೇಶ್ವರನನ್ನು ಆವಾಹನ, ಸ್ಥಾಪನ, ಸನ್ನಿಧಾನ, ನಿರೀಕ್ಷಣ, ಧೇನುಮುದ್ರಾಪ್ರದರ್ಶನ, ಮೊದಲಾದ ಮಾನಸಿಕ ಪೂಜಾಕ್ರಮದಿಂದ ಧ್ಯಾನಮಾಡುತ್ತಾ, ಅನಂತರ ಶಿವಪೀಠಪೂಜೆಯನ್ನು ಮಾಡಿದಳು. ಓ ಮಹರ್ಷಿಯೇ, ಕಲಾವಿಶಿಷ್ಟನಾಗಿಯೂ ರೂಪಗುಣರಹಿತನಾಗಿಯೂ ಇರುವ ಸಾಕ್ಷಾತ್ಸದಾಶಿವಸ್ವಾಮಿಯನ್ನು ಈ ರೀತಿ ಧ್ಯಾನಮಾಡಬೇಕು. ॥೧-೨॥

ಈ ಸ್ವಾಮಿಯು ಶುದ್ಧವಾದ ಸ್ಫಟಿಕದಂತೆ ಕಾಂತಿಯುಳ್ಳವನು. ತ್ರಿಲೋಚನನು. ಇವನ ಕಾಂತಿಯು ಶೀತಲವಾದುದು. (ಅಂದರೆ ದರ್ಶನಮಾಡಿದವರಿಗೆ ಒಂದು ವಿಧವಾದ ತಂಪನ್ನುಂಟುಮಾಡುವುದು) ಮಿಂಚಿನ ಸಮೂಹದಂತೆ ಕಾಂತಿ

ಶಾರ್ದೂಲಚರ್ಮವಸನಂ ಕಿಂಚಿತ್ಸ್ಮಿತಮುಖಾಂಬುಜಂ ।
ರಕ್ತಪದ್ಮದಲಪ್ರಖ್ಯಪಾಣಿಪಾದತಲಾಧರಂ ॥೪॥

ಸರ್ವಲಕ್ಷಣಸಂಪನ್ನಂ ಸರ್ವಾಭರಣಭೂಷಿತಂ ।
ದಿವ್ಯಾಯುಧಧರೈರ್ಯುಕ್ತಂ ದಿವ್ಯಗಂಧಾನುಲೇಪನಂ ॥೫॥

ಪಂಚವಕ್ತ್ರಂ ದಶಭುಜಮಿಂದುಖಂಡಶಿರೋಮಣಿಂ ।
ಅಸ್ಯ ಪೂರ್ವಮುಖಂ ಸೌಮ್ಯಂ ಬಾಲಸೂರ್ಯಸಮಚ್ಛವಿ ॥೬॥

ತ್ರಿಲೋಚನಾರವಿನ್ದಾಢ್ಯಂ ಸೋಮಧಾಮಾರ್ಧಶೇಖರಂ ।
ದಕ್ಷಿಣಂ ನೀಲಜೀಮೂತಸಮಾನರುಚಿರಪ್ರಭಂ ॥೭॥

---

ಯುಕ್ತವಾದ ಜಡೆ, ಕಿರೀಟ ಇವುಗಳಿಂದ ಪರಮೇಶ್ವರನು ಸದಾ ಅಲಂಕೃತನಾಗಿರುವನು. ॥೩॥

ಇವನು ವ್ಯಾಘ್ರ ಚರ್ಮವನ್ನೇ ವಸ್ತ್ರವನ್ನಾಗಿ ಮಾಡಿಕೊಂಡಿರುವನು. ಸದಾ ಶಿವನ ಮುಖಕಮಲವು ಕೊಂಚ ಮುಗುಳು ನಗೆಯಿಂದ ಕೂಡಿರುವುದು. ದೇವ ದೇವನ ಅಂಗೈ, ಅಂಗಾಲು, ಮತ್ತು ಕೆಳದುಟಿಗಳು ಕೆಂದಾವರೆಯ ದಳಗಳಂತೆ ಕೆಂಪಾಗಿರುವುವು. ॥೪॥

ಪರಮೇಶ್ವರನು ಸಕಲ ಸಲ್ಲಕ್ಷಣಗಳಿಂದಲೂ ಪರಿಪೂರ್ಣನು. ಸಕಲಾಭರಣಗಳನ್ನೂ ಧರಿಸಿರುವನು. ಇವನ ಜೊತೆಯಲ್ಲಿ ದಿವ್ಯವಾದ ಆಯುಧಗಳನ್ನು ಧರಿಸಿದ ಕಿಂಕರರನೇಕರಿರುವರು. ಅಂಗಾಂಗಗಳಿಗೆಲ್ಲಾ ದಿವ್ಯವಾದ ಸುಗಂಧವನ್ನು ಇವನು ಲೇಪನಮಾಡಿಕೊಂಡಿರುವನು. ॥೫॥

ಶಿವನಿಗೆ ಐದು ಮುಖ ಮತ್ತು ಹತ್ತು ತೋಳುಗಳಿವೆ. ಅರ್ಧಚಂದ್ರನೇ, ಇವನಿಗೆ ಶಿರೋಮಣಿಯಾಗಿರುವನು. ಬಾಲಸೂರ್ಯನಿಗೆ ಸಮಾನವಾದ ಕಾಂತಿಯಿಂದ ಕೂಡಿದ ಇವನ ಪೂರ್ವ ದಿಕ್ಕಿನ ತತ್ಪುರುಷಮೂರ್ತಿಯು ಬಹು ಸೌಮ್ಯವಾದುದು. ಈ ತತ್ಪುರುಷ ಮೂರ್ತಿಗೆ ಅರವಿಂದ ಸಮಾನಗಳಾದ ಮೂರು ಕಣ್ಣುಗಳೂ, ಅರ್ಧಚಂದ್ರನೂ ಇರುವರು. ॥೬॥

ಶಿವನ ದಕ್ಷಿಣಮುಖವೇ ಅಘೋರಮೂರ್ತಿಯು. ಅದು ಕರಿಯ ಮೋಡಕ್ಕೆ ಸಮಾನವಾದ ಕಾಂತಿಯಿಂದ ಕೂಡಿದುದು. ವಕ್ರವಾದ ಹುಬ್ಬು

ಭ್ರುಕುಟೀಕುಟಿಲಂ ಘೋರಂ ರಕ್ತವೃತ್ತತ್ರಿಲೋಚನಂ ।
ದಂಷ್ಟ್ರಾಕರಾಲೇಂಪುಲಸತ್ಸ್ಫುರಿತಾಧರಪಲ್ಲವಂ ॥೮॥

ಉತ್ತರಂ ವಿದ್ರುಮಪ್ರಖ್ಯಂ ನೀಲಾಲಕವಿಭೂಷಿತಂ ।
ಸವಿಲಾಸಂ ತ್ರಿನಯನಂ ಚಂಚಚ್ಚಂದ್ರಕಲಾಧರಂ ॥೯॥

ಪಶ್ಚಿಮಂ ಸೂರ್ಯಚಂದ್ರಾಭಂ ಲೋಚನತ್ರಿತಯೋಜ್ಜ್ವಲಂ ।
ಚಂದ್ರರೇಖಾಧರಂ ಸೌಮ್ಯಂ ಮಂದಸ್ಮಿತಮನೋಹರಂ ॥೧೦॥

ಪಂಚಮಂ ಸ್ಫಟಿಕಪ್ರಖ್ಯಮಿಂದುರೇಖಾಕಲಾಧರಂ ।
ಅತೀವಸೌಮ್ಯಮುತ್ಫುಲ್ಲಸೋಮಸೂರ್ಯಾಗ್ನಿಚಕ್ಷುಷಂ ॥೧೧॥

---

ಗಳುಳ್ಳದ್ದು. ಭಯಂಕರವಾದುದು ; ಈ ಮುಖದಲ್ಲಿ ಕೆಂಪಾಗಿ ದುಂಡಗಿರುವ ಮೂರುಕಣ್ಣುಗಳಿರುವುವು. ಕೋರೆದಾಡೆ, ವಕ್ರವಾದ ಚಂದ್ರ ಇವುಗಳಿಂದ ಕೂಡಿ ಪ್ರಕಾಶಮಾನವಾಗಿರುವುದು. ಅಧರಪಲ್ಲವವು ಈ ಮುಖದಲ್ಲಿ ಶೋಭಿಸುತ್ತಿರುವುದು. ॥೭-೮॥

ಪರಶಿವನ ಉತ್ತರಮುಖವೇ ವಾಮದೇವಮೂರ್ತಿಯು. ಇದು ಹವಳದಂತೆ ಹೊಳೆಯುವುದು. ಇದರಲ್ಲಿ ಕಪ್ಪಾದ ಮುಂಗುರುಳುಗಳು ಅಲಂಕಾರಪ್ರಾಯವಾಗಿರುವುವು. ಮೂರುಕಣ್ಣುಗಳೂ ವಿಲಾಸಯುಕ್ತವಾಗಿರುವುವು. ಹೊಳೆಯುತ್ತಿರುವ ಚಂದ್ರಕಲೆಯು ಅಲ್ಲಿ ಕಾಣುವುದು. ಸುಂದರವಾದ ಕೆಳದುಟಿಯು ಈ ಮುಖದಲ್ಲಿ ಶೋಭಿಸುತ್ತಿರುವುದು. ॥೯॥

ಪಶ್ಚಿಮ ದಿಕ್ಕಿನ ಮುಖವೇ ಸದ್ಯೋಜಾತಮೂರ್ತಿಯು. ಇದು ಸೂರ್ಯಚಂದ್ರರಿಬ್ಬರ ಮೂರ್ತಿಯನ್ನೂ ಹೋಲುವುದು. ಇದರಲ್ಲಿಯೂ, ಉಜ್ವಲವಾದ ಮೂರುಕಣ್ಣುಗಳಿರುವುವು. ಚಂದ್ರನ ರೇಖೆಗಳು ಇದರಲ್ಲಿಯೂ ಶೋಭಿಸುವುವು. ಮಂದಹಾಸದಿಂದ ಮನೋಹರವಾಗಿರುವ ಈ ಮುಖವು ಬಹು ಸೌಮ್ಯವಾಗಿ ಕಾಣುವುದು. ॥೧೦॥

ಪರಮೇಶ್ವರನ ಐದನೆಯ ಮುಖವೇ ಈಶಾನ್ಯಮೂರ್ತಿ. ಅದು ಸ್ಫಟಿಕದಂತೆ ಶುಭ್ರವಾದ ಕಾಂತಿಯುಳ್ಳದ್ದು. ಚಂದ್ರರೇಖೆಯೂ ಚಂದ್ರನ ಕಲೆಗಳೂ ಈ ಮುಖದಲ್ಲಿ ಶೋಭಿಸುತ್ತಿರುವುವು. ಪೂರ್ಣಚಂದ್ರ, ಸೂರ್ಯ, ಅಗ್ನಿ ಈ

**ದಕ್ಷಿಣೇ ಶೂಲಪರಶುಂ ವಜ್ರಖಡ್ಗಾನಲೋಜ್ಜ್ವಲಂ ।**
**ಸವ್ಯೇ ಪರಶುನಾರಾಚಘಂಟಾಪಾಶಾಙ್ಕುಶೋಜ್ಜ್ವಲಂ ॥೧೨॥**

**ನಿವೃತ್ತ್ಯಾ ಜಾನುಸಂಬದ್ಧಮಾನಾಭೇಶ್ಚ ಪ್ರತಿಷ್ಠಯಾ ।**
**ಆಕಂಠಂ ವಿದ್ಯಯಾ ತದ್ವದಾಲಲಾಟಂತು ಶಾಂತಯಾ ॥೧೩॥**

**ತದೂರ್ಧ್ವಂ ಶಾಂತ್ಯತೀತಾಖ್ಯಕಲಯಾ ಪರಯಾ ತಥಾ ।**
**ಪಂಚೋರ್ಧ್ವವ್ಯಾಪಕಂ ತಸ್ಮಾತ್ಕಲಾಪಂಚಕವಿಗ್ರಹಂ ॥೧೪॥**

**ಈಶಾನಮುಕುಟಂ ದೇವಂ ಪುರುಷಾಸ್ಯಂ ಮಹೇಶ್ವರಂ ।**
**ಅಘೋರಹೃದಯಂ ತದ್ವದ್ವಾಮಗುಹ್ಯಂ ಸದಾಶಿವಂ ॥೧೫॥**

---

ಮೂವರೂ ಮೂರು ಕಣ್ಣಿನಂತಿರುವರು. ಇಂತಹ ಪರಶಿವನ ಈ ಐದನೆಯ ಮುಖವೂ ಬಹಳ ಸೌಮ್ಯವಾಗಿ ಕಾಣುತ್ತಿರುವುದು. ॥೧೧॥

ಪರಮೇಶ್ವರನ ಬಲಗಡೆ ಇರುವ ಐದುತೋಳುಗಳಲ್ಲಿ ಕ್ರಮವಾಗಿ ತ್ರಿಶೂಲ, ಕೊಡಲಿ, ವಜ್ರಾಯುಧ, ಕತ್ತಿ ಮತ್ತು ಅಗ್ನಿ ಇವುಗಳು ಪ್ರಕಾಶಿಸುತ್ತಿರುವುವು. ಎಡಭಾಗದ ಕೈಗಳಲ್ಲಿ, ಕೊಡಲಿ, ಬಾಣ, ಗಂಟೆ, ಪಾಶಾಯುಧ, ಅಂಕುಶ ಈ ಐದು ಆಯುಧಗಳು ಹೊಳೆಯುತ್ತಿರುವುವು. ॥೧೨॥

ಪಾದದಿಂದ ಮೊಳಕಾಲಿನ ವರೆಗೆ ನಿವೃತ್ತಿಕಲೆಯಿಂದಲೂ, ಅಲ್ಲಿಂದ (ಮೊಳಕಾಲಿನಿಂದ) ನಾಭಿಯ ವರೆಗೆ ಪ್ರತಿಷ್ಠಾಕಲೆಯಿಂದಲೂ, ನಾಭಿಯಿಂದ ಕುತ್ತಿಗೆಯ ವರೆಗೆ ವಿದ್ಯಾಕಲೆಯಿಂದಲೂ, ಕುತ್ತಿಗೆಯಿಂದ ಹಣೆಯ ವರೆಗೆ ಶಾಂತರೂಪವಾದ ಕಲೆಯಿಂದಲೂ, ಹಣೆಯಿಂದ ಮೇಲೆ ಶಾಂತಿಕಲೆಯನ್ನೂ ಮೀರಿರುವ ಪರಾ ಎಂಬ ಕಲೆಯಿಂದಲೂ ಪರಮೇಶ್ವರನ ಶರೀರವು ವ್ಯಾಪ್ತವಾಗಿರುವುದು. ॥೧೩॥

ಈ ಐದು ಕಲೆಗಳಿಂದಲೇ ಊರ್ಧ್ವಪ್ರದೇಶವನ್ನೆಲ್ಲಾ ವ್ಯಾಪಿಸಿರುವ ಮಹೇಶನು ಪಂಚ ಕಲಾಮಯವಾದ ಶರೀರವುಳ್ಳವನೆನಿಸಿರುವನು. ಮಹಾದೇವನು ಈಶಾನಮೂರ್ತಿಯನ್ನೇ ಮಧ್ಯಶಿರಸ್ಸನ್ನಾಗಿ ಹೊಂದಿರುವನು. ಗಂಭೀರವಾದ ತತ್ಪುರುಷ ಮುಖವೇ ಈಶ್ವರನ ಅಸ್ಯ. ಅಘೋರಮೂರ್ತಿಯೇ ಮಹೇಶ್ವರನ ಹೃದಯ, ವಾಮದೇವ ಮೂರ್ತಿಯೇ ಗುಹ್ಯಪ್ರದೇಶ. ॥೧೪-೧೫॥

ಸದ್ಯೋಜಾತಪದಂ ಮೂರ್ತಿಂ ಹ್ಯಷ್ಟತ್ರಿಂಶತ್ಕಲಾಮಯಂ ।
ಮಾತೃಕಾಮಯಮಿಶಾನಂ ಪಂಚಬ್ರಹ್ಮಮಯಂ ತಥಾ ॥೧೬॥

ಓಂಕಾರಾಖ್ಯಮಯಂ ಚೈವ ಹಂಸಶಕ್ತ್ಯಾ ಸಮಾಯುತಂ ।
ಪಂಚಾಕ್ಷರಮಯಂ ದೇವಂ ಷಡಕ್ಷರಮಯಂ ತಥಾ ॥೧೭॥

ಅಂಗಷಟ್ಕಮಯಂ ಚೈವ ಸರ್ವಜ್ಞಾನಮಯಂ ತಥಾ ।
ಸಾಮಾನ್ಯಾರ್ಘ್ಯವಿಶೇಷಾರ್ಘ್ಯೈಃ ಪಂಚಪಾತ್ರಾಷ್ಟಪಾತ್ರಕಂ ॥೧೮॥

ಪಂಚಾಮೃತೈಃ ಪಂಚಗವ್ಯೈರ್ನೀರಪೂರಿತಕಾಂಚನೈಃ ।
ಘಟೈಃ ಫಲರಸೈಶ್ಚೈವ ದಧ್ಯಕ್ಷತಕುಶೋದಕೈಃ ॥೧೯॥

---

ಪಾದಭಾಗದಲ್ಲಿ ಸದ್ಯೋಜಾತಮೂರ್ತಿಯುಳ್ಳ ಮಹೇಶ್ವರನು ಮೂವತ್ತೆಂಟು ಕಲಾಸ್ವರೂಪನಾಗಿರುವನು. ಪರಮಾಣುವಿನಂತೆ ಸೂಕ್ಷ್ಮಸ್ವರೂಪನೂ ಮಾತೃಕಾಮಯನೂ ಆದ ಈಶಾನನು, ಪೃಥಿವ್ಯಪ್ತೇಜೋವಾಯ್ವಾಕಾಶರೂಪವಾದ ಪಂಚಭೂತಗಳ ಸ್ವರೂಪನಾಗಿರುವನು. ಅಥವಾ ತತ್ಪುರುಷಾದಿ ಪಂಚಬ್ರಹ್ಮಸ್ವರೂಪನೂ ಆಗಿರುವನು. ॥೧೬॥

ಪರಮೇಶ್ವರನು ಓಂಕಾರರೂಪವಾದ ಪ್ರಣವಸ್ವರೂಪನು. ಹಂಸಮಂತ್ರ (ಹಂಸಸ್ಸೋಽಹಂ ಸೋಽಹಂ ಹಂಸಃ) ಶಕ್ತಿಯಿಂದ ಕೂಡಿದವನು. ಪಂಚಾಕ್ಷರ ಮತ್ತು ಷಡಕ್ಷರ ಮಂತ್ರಗಳ ಸ್ವರೂಪನು. ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಮತ್ತು ಕಲ್ಪಗಳೆಂಬ ಆರು ವೇದಾಂಗಗಳಿಂದಲೂ ಪ್ರತಿಪಾದ್ಯನು. ಅಲ್ಲದೇ ಸಕಲ ಜ್ಞಾನಸ್ವರೂಪನೂ ತಾನೇ ಆಗಿರುವನು. ॥೧೭॥

ಇಂತಹ ಮಹಾಮಹಿಮನಾದ ಪರಮೇಶ್ವರನಿಗೆ, ಪಂಚಪಾತ್ರೆಗಳು, ಅಂದರೆ ಐದು ಅರ್ಘ್ಯಪಾತ್ರೆಗಳಿಂದ ಸಾಮಾನ್ಯಾರ್ಘ್ಯವನ್ನೂ, ಅಷ್ಟಪಾತ್ರೆಗಳು ಅಂದರೆ ಎಂಟು ಅರ್ಘ್ಯಪಾತ್ರೆಗಳಿಂದ ಅಷ್ಟಾರ್ಘ್ಯರೂಪವಾದ ವಿಶೇಷಾರ್ಘ್ಯವನ್ನೂ ಅರ್ಪಿಸಬೇಕು. ಪಂಚಾಮೃತ, ಪಂಚಗವ್ಯ, ಚಿನ್ನದ ಕಲಶದಲ್ಲಿ ತುಂಬಿರುವ ನೀರು, ಹಣ್ಣಿನರಸಗಳು, ಮೊಸರು, ಅಕ್ಷತೆ, ದರ್ಭೆ ಇವುಗಳಿಂದ ಕೂಡಿಬ ಶುದ್ಧೋದಕ ಇವೇ ಮೊದಲಾದುವುಗಳಿಂದ ಅರ್ಘ್ಯ ಪ್ರದಾನಮಾಡಬೇಕು. ॥೧೮-೧೯॥

ಯನ್ಮೈಸ್ಸಿದ್ಧಾರ್ಥಕೈರ್ಯುಕ್ತೋ ದೇವ್ಯಾ ಚಾರ್ಘ್ಯಃ ಪ್ರಕಲ್ಪಿತಃ ।
ಶತಧಾರಾಮಯೈಃ ಪಾತ್ರೈಃ ಸಾಹಸ್ರವರಧಾರಕೈಃ ॥೨೦॥

ಶಂಖೈಶ್ಚ ದಕ್ಷಿಣಾವರ್ತೈಸ್ಸವ್ಯಾವರ್ತೈಶ್ಚ ಶಙ್ಖಕೈಃ ।
ಸಂಸ್ನಾಪ್ಯ ಶಂಖತೋಯೇನ ಪ್ರಣವಪ್ರೋಕ್ಷಣಕ್ರಮಾತ್ ॥೨೧॥

ಭವೇ ಭವೇ ನಾತಿ ಭವ ಇತಿ ಪಾದ್ಯಂ ಪ್ರಕಲ್ಪಯೇತ್ ।
ರುದ್ರಾಯ ನಮ ಇತ್ಯುಕ್ತ್ವಾ ದದ್ಯಾದಾಚಮನೀಯಕಂ ॥೨೨॥

ವಾಮದೇವಾಯ ನಮ ಇತಿ ವಸ್ತ್ರಂ ತತ್ರ ಪ್ರಕಲ್ಪಯೇತ್ ।
ಜ್ಯೇಷ್ಠಾಯ ನಮ ಇತ್ಯುಕ್ತ್ವಾ ದದ್ಯಾದ್ಯಜ್ಞೋಪವೀತಕಂ ॥೨೩॥

ಕನಿಷ್ಠಾಯ ನಮ ಇತ್ಯುಕ್ತ್ವಾ ಪುನರ್ಭಸ್ಮಾಭಿಪಾತಯೇತ್ ।
ಕಾಲಾಯನಮ ಇತ್ಯುಕ್ತ್ವಾ ದದ್ಯಾದ್ಗಂಧಂ ಸುಗಂಧಿತಂ ॥೨೪॥

---

ಇದೇರೀತಿ ಮಂತ್ರಾಕ್ಷತೆಯಿಂದ ಕೂಡಿದ ಅರ್ಘ್ಯವು ದೇವಿಯಿಂದ ಅರ್ಪಿಸಲ್ಪಟ್ಟಿತು. ಅಭಿಷೇಕವನ್ನು ವಜ್ರಮಯವಾದ ಪಾತ್ರೆಗಳಿಂದಲೂ, ಸಾವಿರಾರು ಧಾರೆಗಳಾಗಿ ಬೀಳುವ ಪಾತ್ರೆಗಳಿಂದಲೂ, ಬಲಸುಳಿ ಮತ್ತು ಎಡಸುಳಿಗಳಿಂದ ಕೂಡಿರುವ ಶಂಖಗಳಿಂದಲೂ, ಸಮರ್ಪಿಸಿದಳು. ॥೨೦॥

ಓಂಕಾರವನ್ನುಚ್ಚರಿಸುತ್ತಾ ಶಂಖದಲ್ಲಿ ನೀರನ್ನು ತೆಗೆದುಕೊಂಡು, ಅದರಿಂದ ಪ್ರೋಕ್ಷಣೆಮಾಡಿ ಕ್ರಮವಾಗಿ ಪರಮೇಶ್ವರನಿಗೆ ಸ್ನಾನವನ್ನು ಮಾಡಿಸಿದಳು. ॥೨೧॥

ದೇವದೇವನಿಗೆ, ‘ ಭವೇ ಭವೇ ನಾತಿಭವೇ ’ ಎಂಬ ಮಂತ್ರಪೂರ್ವಕವಾಗಿ ಪಾದ್ಯವನ್ನೂ ‘ ರುದ್ರಾಯ ನಮಃ ’ ಎಂಬ ಮಂತ್ರವನ್ನೂ ಹೇಳುತ್ತಾ ಆಚಮನೀಯವನ್ನೂ ಸಮರ್ಪಿಸಬೇಕು. ॥೨೨॥

‘ ವಾಮದೇವಾಯ ನಮಃ ’ ಎಂದು ಹೇಳಿ ವಸ್ತ್ರವನ್ನೂ ‘ ಜ್ಯೇಷ್ಠಾಯ ನಮಃ ’ ಎಂದು ಹೇಳುತ್ತಾ ಯಜ್ಞೋಪವೀತವನ್ನು ಸಮರ್ಪಿಸಬೇಕು. ॥೨೩॥

‘ ಕನಿಷ್ಠಾಯ ನಮಃ ’ ಎಂದು ಹೇಳಿ ಪುನಃ ಭಸ್ಮವನ್ನೂ ‘ ಕಾಲಾಯ ನಮಃ ’ ಎಂದು ಸುಗಂಧವಿಶಿಷ್ಟವಾದ ಗಂಧವನ್ನೂ ಮಹೇಶನಿಗೆ ಅರ್ಪಿಸಬೇಕು. ॥೨೪॥

ಕಲವಿಕರಣಾಯ ನಮ ಇತ್ಯಕ್ಷತಾನ್ ಪರಿಕಲ್ಪಯೇತ್ ।
ಬಲವಿಕರಣಾಯೇತಿ ದದ್ಯಾತ್ಪುಷ್ಪಾಣಿ ಸಾಂಬಿಕಾ ॥೨೫॥

ಬಲಪ್ರಮಥನಾಯೇತಿ ಧೂಪಂ ದದ್ಯಾನ್ಮುನೇ ತದಾ ।
ಸರ್ವಭೂತದಮನಾಯ ಚೇತಿ ದೀಪಂ ತತೋ ದ್ವಿಜಾಃ ॥೨೬॥

ಮನೋನ್ಮನಾಯ ಇತಿ ನೈವೇದ್ಯಂಚ ಸಮರ್ಪಯೇತ್ ।
ತಾಂಬೂಲಂ ಚೈವ ನೀರಾಜಂ ತಥೋಪಚರಣಾದಿಕಂ ॥೨೭॥

ಸರ್ವಂ ಪಂಚಾಕ್ಷರೇಣೈವ ಕುರ್ಯಾದ್ದೇವೀ ತತೋ ಮುನೇ ।
ಅರ್ಚಯೇತ್ಪರಮಂ ದೇವಂ ಪ್ರಣವೇನ ಶಿವೇನ ಚ ॥೨೮॥

ತ್ರಿಯಂಬಕೇಣ ಮಂತ್ರೇಣ ಸರ್ವಂ ತತ್ರ ಪ್ರಕಲ್ಪಯೇತ್ ।
ಆಧಾರಪೀಠಪೂಜಾದಿ ಕೃತ್ವಾ ದೇವೀ ಮಹೇಶ್ವರೀ ॥೨೯॥

---

ಇದೇ ಕ್ರಮವನ್ನು ಅನುಸರಿಸಿ, 'ಕಲವಿಕರಣಾಯ ನಮಃ' ಎಂದು ಹೇಳಿ ಅಕ್ಷತೆಯನ್ನು ಪೂಜಿಸಿ, 'ಬಲವಿಕರಣಾಯ ನಮಃ' ಎನ್ನುತ್ತಾ ಆ ಅಂಬಿಕಾ ದೇವಿಯು ಪುಷ್ಪಗಳನ್ನು ಸ್ವಾಮಿಗೆ ಪೂಜಿಸುತ್ತಿದ್ದಳು. ॥೨೫॥

ಮುನಿವರ್ಯನೇ, 'ಬಲಪ್ರಮಥನಾಯ ನಮಃ' ಎನ್ನುತ್ತಾ ಗುಗ್ಗುಲಾದಿ ಧೂಪವನ್ನೂ 'ಸರ್ವಭೂತದಮನಾಯ ನಮಃ' ಎಂದು ದೀಪವನ್ನೂ ಸಮರ್ಪಿಸಬೇಕು. ॥೨೬॥

'ಮನೋನ್ಮನಾಯ ನಮಃ' ಎಂದು ಹೇಳಿ ನೈವೇದ್ಯವನ್ನು ಸಮರ್ಪಿಸಬೇಕು. ತಾಂಬೂಲ, ಕರ್ಪೂರನೀರಾಜನ (ಕರ್ಪೂರಾರತಿ) ಮತ್ತು ಮಂತ್ರಪುಷ್ಪ, ಪ್ರದಕ್ಷಿಣೆನಮಸ್ಕಾರಗಳು ಇವೇ ಮೊದಲಾದ ಇತರ ಉಪಚಾರಗಳೆಲ್ಲವನ್ನೂ 'ನಮಃಶಿವಾಯ' ಎಂಬ ಪಂಚಾಕ್ಷರಮಂತ್ರದಿಂದಲೇ ದೇವಿಯು ಪರಮೇಶ್ವರನಿಗೆ ಮಾಡಿದಳು. ಜೈಗೀಷವ್ಯ ಮುನಿಯೇ, ಎಲ್ಲರೂ ಆದರಂತೆಯೇ ಅರ್ಚನಾ ವಿಧಿಯನ್ನು ಅರಿತುಕೊಳ್ಳಬೇಕು. ॥೨೭॥

ಪರಮಪುರುಷನಾದ ಮಹಾದೇವನನ್ನು ಪ್ರಣವಪೂರ್ವಕವಾದ 'ಓಂ ನಮಃ ಶಿವಾಯ' ಎಂಬ ಶಿವಮಂತ್ರದಿಂದ ಪೂಜಿಸಬೇಕು. ಆಧಾರಭೂತವಾದ

ಪುನಶ್ಚ ವಿಸ್ತರೇಣೈವ ಚಾಂಬಿಕೇಶಮಪೂಜಯತ್ ।
ಸಖೀಭಿಶ್ಚ ಸಮಾನೀತೈಸ್ಸಂಭಾರೈರ್ಮನಸಾ ತತೈಃ ॥೩೦॥

ಶೃಣು ತ್ವಂ ಸಾವಧಾನೇನ ಚೈಕಾಗ್ರಮನಸಾ ಮುನೇ ।
ಏವಂ ಹೃತ್ಪಂಕಜೇ ಪೂಜ್ಯ ಬಾಹ್ಯೇಽಪ್ಯಂಬಾ ಪ್ರಪೂಜಯತ್॥೩೧॥

ತತ ಉದ್ವಾಸ್ಯ ನಿರ್ಮಾಲ್ಯಂ ಪೂರ್ವಪೂಜಾಪ್ರಕಲ್ಪಿತಂ ।
ಪಂಚಾಕ್ಷರಾವೃತ್ತಿಪರಾ ಪಂಚಾಸ್ಯಧ್ಯಾನತತ್ಪರಾ ॥೩೨॥

ಸ್ವಸಖೀಕಲ್ಪಿತಾಸಾರಪೂಜಾಭಾರೈಶ್ಚ ಸುಂದರೈಃ ।
ಅಂಬಿಕೇಶಂ ಮಹಾಲಿಙ್ಗಂ ಪರಿಚಿಂತ್ಯ ಪ್ರಪೂಜಯತ್ ॥೩೩॥

---

ಪೀಠಪೂಜೆ ಮುಂತಾದವುಗಳನ್ನು 'ತ್ರಿಯಮ್ಬಕಂ ಯಜಾಮಹೇ' ಎಂಬ ಮಂತ್ರದಿಂದ ಮಾಡಬೇಕು. ಹಾಗೆಯೇ ದೇವಿಯೂ ನೆರವೇರಿಸಿದಳು. ||೨೮-೨೯||

ಹೀಗೆ ಮೊದಲು ಲಘುಪ್ರಕಾರ ಪೂಜೆಯನ್ನು ಮಾಡಿದಮೇಲೆ ಪುನಃ ದೇವಿಯು ಅಂಬಿಕೇಶ್ವರನನ್ನು, ತನ್ನ ಸಖಿಯರು ತಂದಿರುವ ಪೂಜಾ ಸಾಮಗ್ರಿಗಳಿಂದ ವಿಸ್ತಾರವಾಗಿ ಪೂಜಿಸಲಾರಂಭಿಸಿದಳು. ||೩೦||

ಜೈಗೀಷವ್ಯ ಮುನಿಯೇ! ಏಕಾಗ್ರಮನಸ್ಸಿನಿಂದ ಸಾವಧಾನವಾಗಿ ನಾನು ಹೇಳುವುದನ್ನು ಕೇಳು; ಮಹಾದೇವಿಯು ಹಾಗೆ ತನ್ನ ಹೃದಯ ಕಮಲದಲ್ಲಿ ಶಿವನನ್ನು ಪೂಜಿಸಿದಮೇಲೆ ಅದೇ ರೀತಿ ಬಾಹ್ಯದಲ್ಲಿಯೂ ಪೂಜಿಸಿದಳು. (ಅಂದರೆ ಮೊದಲು ಮಾನಸಿಕವಾದ ಪೂಜೆಯನ್ನು ಮಾಡಿ ಅನಂತರ ಬಾಹ್ಯಪೂಜೆಯನ್ನು ಮಾಡಬೇಕು ಎಂದು ಭಾವ) ||೩೧||

ದೇವಿಯು ಹಿಂದೆ ಪೂಜೆಮಾಡಿದ್ದ ನಿರ್ಮಾಲ್ಯವನ್ನು ತೆಗೆದುಹಾಕಿ, ಶಿವ ಪಂಚಾಕ್ಷರೀ ಮಂತ್ರವನ್ನುಚ್ಚರಿಸುತ್ತಾ, ಪಂಚಮುಖನಾದ ಪರಮೇಶ್ವರನನ್ನು ಮತ್ತೆ ಧ್ಯಾನಮಾಡಿದಳು. ಅನಂತರ ತನ್ನ ಗೆಳತಿಯರು ತೆಗೆದುಕೊಂಡುಬಂದಿದ್ದ ಮನೋಹರವಾದ ಪೂಜಾಸಾಮಗ್ರಿಗಳಿಂದ ಅಂಬಿಕೇಶ್ವರನ ಮಹಾಲಿಂಗವನ್ನು ಧ್ಯಾನಮಾಡುತ್ತಾ ಹೀಗೆ ಅರ್ಚಿಸಲಾರಂಭಿಸಿದಳು. ||೩೨-೩೩||

ಸುಗಂಧವರತೈಲಜೈರ್ವರಘಟೈಶ್ಚ ದೇವೀ ಗವಾಂ
ಪಯೋನಿಭೃತಸದ್ಘಟೈರ್ದಧಿಜಮುಂಡಖಂಡೈರ್ಘಟೈಃ ।
ನವಾಜ್ಯವರಗಂಧಜಪ್ರಸೃತಮೋದಮಾದ್ಯದ್ಘಟೈ
ರಕ್ಷುದ್ರಫಲದಾಯಿಭಿರ್ವರಸುಕ್ಷೌದ್ರಧಾರಾಘಟೈಃ ॥೩೪॥

ವಲಕ್ಷಜಮಹೇಕ್ಷುಜಪ್ರಥಿತಸಾರಧಾರಾರಸ
ಪ್ರಕಾಶಸಿತಶರ್ಕರಾಗಿರಿಭಿರೀಶಲಿಂಗೇಽಂಬಿಕಾ ।
ಮಧೂತ್ಥಮಧುಪರ್ಕತೋ ಮಧುರಪಂಚಗವ್ಯೈಶ್ಶಿವೈ
ಸ್ಸನಾರಿಲಜಲಾರ್ಪಣೈರ್ವಿಮಲಲಿಙ್ಗಮೌಲ್ಯಮ್ಬಿಕಾ ॥೩೫॥

ಅಪಾರಕದಲೀಫಲೈರ್ಲಿಕುಚಸಾರನೀರೈಸ್ತಥಾ
ಸುಪಾನಸಜಕೋಶಕೈರ್ಮಧುಗಲೋರುಪೀತಪ್ರಭೈಃ ।

---

ಶ್ರೇಷ್ಠವಾದ ಸುಗಂಧತೈಲಗಳಿಂದ ಪರಿಪೂರ್ಣವಾದ ಕಲಶಗಳನ್ನು ತೆಗೆದುಕೊಂಡು ಮೊದಲು ದೇವಿಯು ಅಂಬಿಕೇಶನ ಲಿಂಗಕ್ಕೆ ಮಜ್ಜನಮಾಡಿಸಿದಳು. ಅನಂತರ ಕೊಡಗಳಲ್ಲಿ ತುಂಬಿರುವ ಹಸುವಿನ ಹಾಲಿನಿಂದಲೂ, ಗಡಿಗೆಗಳಲ್ಲಿ ಚೆನ್ನಾಗಿ ಹೆಪ್ಪಾಗಿರುವ ಮೊಸರಿನ ಗರಣೆಗಳಿಂದಲೂ, ಹೊಸದಾಗಿ ಕಾಸಿ, ಪಾತ್ರೆಗಳಿಗೆಲ್ಲಾ ಸುವಾಸನೆಯನ್ನುಂಟು ಮಾಡುತ್ತಿರುವ ಶ್ರೇಷ್ಠವಾದ ತುಪ್ಪದಿಂದಲೂ, ಕಲಶಗಳಲ್ಲಿ ತುಂಬಿಟ್ಟಿರುವ ಜೇನುತುಪ್ಪದಿಂದಲೂ, ದೇವಿಯು ಕ್ರಮವಾಗಿ ಪಂಚಾಮೃತಾಭಿಷೇಕ ಮಾಡಿದಳು. ॥೩೪॥

ಬಿಳಿಯ ಕಬ್ಬಿನರಸದಿಂದ ತಯಾರಿಸಿರುವ ಶುದ್ಧವಾದ ಸಕ್ಕರೆಯನ್ನು ರಾಶಿರಾಶಿಯಾಗಿ ತೆಗೆದುಕೊಂಡು ದೇವಿಯು ಮಹೇಶ್ವರನ ಲಿಂಗಕ್ಕೆ ಅಭಿಷೇಕ ಮಾಡಿದಳು. ಅನಂತರ ಜೇನುತುಪ್ಪದಿಂದ ಮಾಡಿರುವ ಮಧುಪರ್ಕವನ್ನು ಸಮರ್ಪಿಸಿ ಮಧುರವಾದ ಪಂಚಗವ್ಯಗಳನ್ನೂ (ಹಾಲು, ಮೊಸರು, ತುಪ್ಪ, ಗಂಜಳ, ಸಗಣಿ) ಮಂಗಳಕರವಾದ ಎಳನೀರನ್ನೂ ಪರಿಶುದ್ಧವಾದ ಅಂಬಿಕೇಶ್ವರನ ಶಿರಸ್ಸಿನಮೇಲೆ ಅಭಿಷೇಕಮಾಡಿದಳು. ॥೩೫॥

ಅನೇಕ ಬಾಳೆಯ ಹಣ್ಣುಗಳಿಂದಲೂ, ಗಜನಿಂಬೇ ಹಣ್ಣಿನ ರಸದಿಂದಲೂ, ಜೇನುತುಪ್ಪದಿಂದ ಮಿಳಿತವಾಗಿ ಹೊಂಬಣ್ಣದಿಂದ ರಂಜಿಸುವ ಹಲಸಿನ ತೊಳೆಗ

ತಥೇಕ್ಷುಸುರಸಾಲಜ್ಯೈರ್ಮಧುರಚನ್ದನೋತ್ಥೈರ್ಘಟೈ
ಗಿರಿಸ್ರವಝುರೀಭರೈರ್ಗಿರಿಶಲಿಂಗಮಭ್ಯಾಸಿಚತ್ ॥೩೬॥

ಸಹಸ್ರಶತಧಾರಯಾ ಮಣಿಜಕುಂಭಪೀಠೋತ್ಥಯಾ
ಸುರುದ್ರಚಮಕೈಶ್ಶಿವಾ ವರರಥನ್ತರೈರ್ವಾಮಕೈಃ ।
ಸುಧೂಪಿತಗೃಹಂ ವಿಭೋರ್ಬಹುಲವಾದ್ಯಸಂಘಾರವೈ
ರ್ದಿಶಾಂ ಶ್ರವಣಮಙ್ಗಲೈರ್ವರಸುಶಂಖನಾದೈರಪಿ ॥೩೭॥

ಜಲಂಧರರವೋಪಮೈಃ ಪಟಹದುನ್ದುಭೀನಾಂ ಗಣೈಃ ।
ಮೃದಙ್ಗವರಘೋಷಕೈರ್ವಿಮಲಶೀತವಾರಾಙ್ಘಟೈಃ ॥೩೮॥

ಅಭಿಷಿಚ್ಯ ಭಿಷಗ್ವರಂ ಮಹೇಶಂ
ವಿಮಲೈಃ ಪಟ್ಟದುಕೂಲಹೇಮವಸ್ತ್ರೈಃ ।

---

ಳಿಂದಲೂ, ಉತ್ತಮವಾದ ರಸದಾಳೇ ಕಬ್ಬಿನ ರಸದಿಂದಲೂ, ಚಂದನದಿಂದ ಸುವಾಸಿತವಾಗಿ ಬೆಟ್ಟದಮೇಲೆ ಹರಿಯುವ ಝುರಿಯ ನೀರಿನಿಂದಲೂ, ದೇವಿಯು ಅಂಬಿಕೇಶ್ವರ ಲಿಂಗಕ್ಕೆ ಅಭಿಷೇಕ ಮಾಡಿದಳು. ॥೩೬॥

ಮಣಿಮಯವಾದ ಪೀಠದಿಂದ ಕೂಡಿರುವ ಧಾರಾಪಾತ್ರೆಯಲ್ಲಿ, ಸಾವಿರಾರು ಜಲಧಾರೆಗಳಿಂದ, ಶಿವೆಯು, ರುದ್ರ, ಚಮಕ, ಶ್ರೇಷ್ಠವಾದ ರಥನ್ತರಸಾಮಗಳು, ವಾಮದೇವ ಸೂಕ್ತಗಳು ಇವೇ ಮೊದಲಾದ ಮಂತ್ರಗಳನ್ನು ಹೇಳುತ್ತಾ ಅಭಿಷೇಕ ಮಾಡಿದಳು. ಆಗ ದಿಗಂತವ್ಯಾಪ್ತವಾಗುವಂತೆ ಶಂಖವೇ ಮೊದಲಾದ ವಾದ್ಯಗಳು ಧ್ವನಿಗೈಯ್ಯುತ್ತಿದ್ದುವು. ॥೩೭॥

ಅಭಿಷೇಕಕಾಲದಲ್ಲಿ ಮೇಘಧ್ವನಿಗೆ ಸಮಾನವಾದ ತಮಟೆ, ದುನ್ದುಭಿ ಮೊದಲಾದ ವಾದ್ಯಧ್ವನಿಗಳೂ, ಶ್ರೇಷ್ಠವಾದ ಮೃದಂಗ ಶಬ್ದವೂ ಭೋರ್ಗರೆಯುತ್ತಿದ್ದುವು. ಇಂತಹ ಸುಸಮಯದಲ್ಲಿ ದೇವಿಯು ಅಂಬಿಕೇಶ್ವರನ ಲಿಂಗಕ್ಕೆ ಘಟಗಳಲ್ಲಿ ತಂದಿಟ್ಟಿದ್ದ ಶೀತಲೋದಕದಿಂದ ಅಭಿಷೇಕ ಮಾಡಿದಳು. ॥೩೮॥

ಹೀಗೆ ಗಿರಿಜೆಯು ಅಂಬಿಕೇಶ್ವರನಿಗೆ ಅಭಿಷೇಕ ಮಾಡಿ, ವೈದ್ಯ ಶ್ರೇಷ್ಠನಾದ ಮಹೇಶನಿಗೆ ಪರಿಶುದ್ಧವಾದ ರೇಷ್ಮೆಮಡಿ ಮತ್ತು ಸುವರ್ಣವಸ್ತ್ರ ಇವು

ಪರಿವೇಷ್ಟ್ಯ ಮುಲಮುಷ್ಣಿಕೇಶಮುಷ್ಟಾ
ಮೃದುಲೈರ್ಯಕ್ಷಸುಕರ್ದಮೈಶ್ಚ ಗಂಧೈಃ ॥೩೯॥

ಪರಿಲಿಪ್ಯೋತ್ತಮತುಙ್ಗಲಿಂಗಮೌಲಿಂ
ವಿಮಲಾಪೀಠತಲಂ ತದಾಂಬಿಕೇಶಂ ।
ವರಕರ್ಪೂರರಜಖಣ್ಡದೀಪಮಾಲಾ
ಮಣಿಕಾಸ್ತದ್ಯುತಿಭಿರ್ಘೃತಾದಿದೀಪೈಃ ॥೪೦॥

ಅನೇಕರತ್ನೋತ್ತಮಗೋಲಕೋದ್ಯತ್
ಫಣೀಫಣಾಭ್ರಾಜಿತಲಿಂಗಮೌಲಿಂ ।
ಹೀರೋತ್ಥಪುಂಡ್ರಾಙ್ಕಿತಫಾಲದೇಶಂ
ಮಣೀಸರಾಲೋಲಿತಮೌಕ್ತಿಕೌಘಂ ॥೪೧॥

ನೈಪಥ್ಯಜಾಲೈರ್ವರಪುಷ್ಪಮಾಲಾಂ
ಬಿಲ್ವಾದಿಮಾಲಾಃಕಮಲೋರುಮಾಲಾಃ ।

---

ಗಳನ್ನು ಧರಿಸಿದಳು. ಮತ್ತು ಮೃದುವಾದ ಅರಗಜಗಂಧದಿಂದ (ಕಸ್ತೂರೀ, ಕರ್ಪೂರ, ಅಗರು, ಮತ್ತು ತಕ್ಕೋಲ ಈ ನಾಲ್ಕೂ ಸಮಭಾಗವಾಗಿ ಸೇರಿರುವ ಗಂಧ) ಮತ್ತು ಇತರ ಶ್ರೀಗಂಧ ಇವೇ ಮೊದಲಾದವುಗಳಿಂದ; ॥೩೯॥

ಉತ್ತಮವೂ, ಉನ್ನತವೂ, ಆದ ಅಂಬಿಕೇಶನ ಲಿಂಗಕ್ಕೆ, ಲೇಪನ ಮಾಡಿದಳು. ಅನಂತರ ಪರಿಶುದ್ಧವಾದ ಪೀಠವುಳ್ಳ ಆ ಅಂಬಿಕೇಶ್ವರ ಲಿಂಗಕ್ಕೆ, ಶ್ರೇಷ್ಠವಾದ ಕರ್ಪೂರದ ಆರತಿಗಳ ಸಮೂಹಗಳಿಂದಲೂ, ರತ್ನದಂತೆ ಕಾಂತಿಯುಕ್ತವಾದ ತುಪ್ಪದ ದೀಪಗಳಿಂದಲೂ, ಮಂಗಳಾರತಿಯನ್ನೆತ್ತಿದಳು. ॥೪೦॥

ಅಭಿಷೇಕ, ನೀರಾಜನ ಇವುಗಳಾದ ಮೇಲೆ ದೇವಿಯು ಶಿವಲಿಂಗಕ್ಕೆ ನಾಗಾಭರಣವನ್ನಿಟ್ಟಳು. ಅದರಲ್ಲಿ ಅನೇಕ ನಾಗರತ್ನಗಳು ಶಿವಲಿಂಗವನ್ನು ಭೂಷಿಸುತ್ತಿದ್ದುವು. ಹೀರರತ್ನಗಳಿಂದ ನಿರ್ಮಿತವಾದ ತ್ರಿಪುಂಡ್ರವನ್ನು ಶಿವಲಿಂಗದ ಹಣೆಗೆ ಜೋಡಿಸಿದಳು. ಮುತ್ತಿನ ಸರವನ್ನು ಕಂಠಕ್ಕೆ ಕಟ್ಟಿದಳು. ॥೪೧॥

ಅಲಂಕಾರ ವಸ್ತುಗಳ ಸಮೂಹದಿಂದ ದೇವಿಯು ಅಂಬಿಕೇಶ್ವರನ ಲಿಂಗವನ್ನು ಶೃಂಗರಿಸಿದಳು. ಶ್ರೇಷ್ಠವಾದ ಪುಷ್ಪಮಾಲೆಗಳನ್ನೂ, ಬಿಲ್ವಪತ್ರೆಯೇ

ಸುಮಲ್ಲಿಕಾಹಲ್ಲಕಮಲ್ಲಿಕುನ್ದ
ಮಾಲಾಶತೈರ್ಗನ್ಧಫಲೀಸರೈಶ್ಚ ॥೪೨॥

ಸುಪಾಟಲಾಮೋದಿತಮಾಲಿಕಾಭಿ
ರುತ್ಫುಲ್ಲನೀಲೋತ್ಪಲಮಾಲಿಕಾಭಿಃ ।
ಮನ್ದಾರಮಾಲಾದಿಭಿರಂಬಿಕೇಶ
ಮಮ್ಬಾ ಸಮಾವೇಷ್ಟ್ಯ ಮುದಂ ಪ್ರಪೇದೆ ॥೪೩॥

ಬಿಲ್ವಾನಾಂ ಚ ಸಹಸ್ರಕೈಶ್ಚ ತ್ರಿದಲೈರಾರಕ್ತಪಂಕೇರುಹೈ
ರ್ಮಂದಾರೈರ್ವರಚಮ್ಪಕಾದಿಕುಸುಮೈಸ್ಸತ್ಪುಂಡರೀಕೈಶ್ಶಿವಾ ।
ನಾಮ್ನಾಂ ಚಾಪಿ ಸಹಸ್ರಕೈಶ್ಚ ಶತಕೈಸ್ಸಂಪೂಜ್ಯ ಹೃಷ್ಟಾ ಭವ
ತ್ಪುಣ್ಯಂ ಲಿಂಗಮುಮಾಪತೇಃ ಪ್ರಿಯತರಂ ಧೂಪೈಸ್ತಥಾಧೂಪಯತ್॥೪೪॥

---

ಮೊದಲಾದ ಶ್ರೇಷ್ಠ ಪತ್ರೆಗಳ ಸರವನ್ನೂ ದೊಡ್ಡ ಕಮಲದ ಹಾರವನ್ನೂ, ಒಳ್ಳೆಯ ಮಲ್ಲಿಗೆ, ಕೆಂಪುಕಲ್ಹಾರ, ಮಲ್ಲೇ, ನೈದಿಲೆ, ಇವುಗಳಿಂದ ನಿರ್ಮಿತವಾದ ದಂಡೆಗಳನ್ನೂ, ಗಂಧದಿಂದ ರಂಜಿತವಾದ ಸರಗಳನ್ನೂ ಸಹ ಪರಮೇಶ್ವರನಿಗೆ ಅಲಂಕಾರಾರ್ಥವಾಗಿ ಹಾಕಿದಳು. ||೪೨||

ಚೆನ್ನಾಗಿ ಅರಳಿದ ಕನ್ನೈದಿಲೆ ಹಾರಗಳನ್ನೂ, ಅಲ್ಲದೇ ಮಂದಾರ ಪುಷ್ಪಮಾಲೆಯೇ ಮುಂತಾದ ನಾನಾವಿಧವಾದ ಹೂಮಾಲೆಗಳನ್ನು ಅಂಬಿಕೇಶ್ವರ ನಿಗೆ ಸಮರ್ಪಿಸಿ, ಅಂಬಿಕೆಯು ಸಂತೋಷ ಹೊಂದಿದಳು. ||೪೩||

ಮೂರು ದಳಗಳುಳ್ಳ ಸಾವಿರ ಬಿಲ್ವಗಳು, ಕೆಂದಾವರೆ ಹೂವುಗಳು, ಮನ್ದಾರ ಪುಷ್ಪಗಳು, ಶ್ರೇಷ್ಠವಾದ ಸಂಪಿಗೆ ಮೊದಲಾದ ಹೂವುಗಳು, ದಿವ್ಯವಾದ ಕಮಲ ಗಳು, ಇವುಗಳಿಂದ ಶಿವ ಸಹಸ್ರನಾಮ ಮತ್ತು ಅಷ್ಟೋತ್ತರ ಶತನಾಮ ಇವು ಗಳನ್ನು ಹೇಳುತ್ತಾ ಅಂಬಿಕೇಶನ ಲಿಂಗಕ್ಕೆ ಅರ್ಚನೆ ಮಾಡಿದಳು. ಹಾಗೆಯೇ ಪರಮೇಶ್ವರನಿಗೆ ಪ್ರೀತಿಕರವಾದ ಧೂಪವನ್ನು ಹಾಕಿದಳು. ಆ ಧೂಪಕ್ಕೆ ಹಾಕಿದ ಸುಗಂಧ ದ್ರವ್ಯಗಳಾವುದೆಂದರೆ ; ||೪೪||

ಅಗರೂತ್ಥಸುಗುಗ್ಗುಲೂಭಿರೀಶಂ
ವರಸಾಮ್ರಾಣಿಸುಧೂಪವರ್ತಿಪಾತ್ರೈಃ ।
ಮಣಿದೀಪೈರ್ವರಚನ್ದ್ರಖಣ್ಡದೀಪೈ
ರ್ಘೃತದೀಪೈಸ್ಸಿತವರ್ತಿಭಿಸ್ಸದೋದ್ಯತ್ ॥೪೫॥

ಮಧುರಾನ್ನಾದಿಸುರಾಶಿಭಿಸ್ತದಾಂಬಾ
ಘೃತಸೂಪಾಕುಲಸೋಪದಂಶಜಾಲೈಃ ।
ಫಲಜಾಲೈರ್ದಧಿಪಾಯಸಾದಿಯುಕ್ತೈ
ರ್ಮಧುರೈರ್ಭಕ್ಷ್ಯವರೋತ್ಥರಾಶಿಜಾಲೈಃ ॥೪೬॥

ವಿನಿವೇದ್ಯ ಮಹೇಶಮಿಷ್ಟಲಿಂಗಂ
ವರತಾಮ್ಬೂಲಗಿರಿಪ್ರಚಾರಪೂಗೈಃ ।
ವಿನಿವೇದ್ಯ ಸುಗನ್ಧಗನ್ಧಯುಕ್ತೈ
ರ್ವರತೌರ್ಯತ್ರಿಕಹಾವಭಾವಲಾಸ್ಯೈಃ ॥೪೭॥

---

ಅಗರು, ಒಳ್ಳೆಯ ಗುಗ್ಗುಲ, ಶ್ರೇಷ್ಠವಾದ ಸಾಮ್ರಾಣಿ, ಒಳ್ಳೆಯ ಊದು ಬತ್ತಿಗಳು ಇವುಗಳನ್ನು ಉತ್ತಮವಾದ ಪಾತ್ರೆಯಲ್ಲಿರಿಸಿ ಅದರಿಂದ ಸುವಾಸನೆಯುನ್ನುಂಟುಮಾಡಿದಳು. ಆ ಮೇಲೆ ರತ್ನದೀಪಗಳು, ಚಂದ್ರಖಂಡದೀಪಗಳು, ತುಪ್ಪದ ದೀಪಗಳು, ಬಿಳಿಯ ಬತ್ತಿಯ ದೀಪಗಳು, ಇವುಗಳು ಸದಾ ಉರಿಯುವಂತೆ ಮಾಡಿ ನೀರಾಜನವನ್ನೆತ್ತಿದಳು. ॥೪೫॥

ಅನಂತರ ದೇವಿಯು ಮಧುರವಾದ ಅನ್ನದ ರಾಶಿಗಳನ್ನೂ, ತುಪ್ಪ, ತೊವ್ವೆ ಇವುಗಳೊಡನೆ ಉಪ್ಪಿನಕಾಯಿ, ಗೊಜ್ಜು ಮೊದಲಾದವುಗಳನ್ನೂ, ಮೊಸರು ಮತ್ತು ಪಾಯಸಗಳೊಡನೆ ಬೆರತ ಹಣ್ಣುಗಳನ್ನೂ, ಮಧುರವೂ, ಶ್ರೇಷ್ಠವೂ ಆದ ಭಕ್ಷ್ಯಗಳ ರಾಶಿಗಳನ್ನೂ ನಿವೇದಿಸಿದಳು. ॥೪೬॥

ಅನಂತರ ಬೆಟ್ಟದ ಬಯಲಿನಲ್ಲಿ ಬೆಳೆದ ಅಡಿಕೆಯೊಡನೆ, ಸುಗಂಧಮಯವಾದ ತಾಂಬೂಲವನ್ನೂ ಸಮರ್ಪಿಸಿದಳು. ತರುವಾಯ ಶ್ರೇಷ್ಠವಾದ ಗಾನ, (ಸಂಗೀತ) ನರ್ತನ ಮತ್ತು ವಾದ್ಯ ಇವುಗಳ ಸಹಾಯದಿಂದ ಹಾವ, ಭಾವ ಮತ್ತು ಲಾಸ್ಯ ಇವುಗಳನ್ನು ಪ್ರದರ್ಶಿಸುತ್ತಾ ಭಕ್ತಿಪೂರ್ವಕವಾಗಿ ನರ್ತನ ಮಾಡಿದಳು. ॥೪೭॥

ಪದಮಞ್ಜೀರರಣಜ್ಝಣಾದಿಶಬ್ದೈ
ರ್ಮೃದುವೇಣೂರವತಾಲಶಂಖನಾದ್ಯೈಃ ।
ಮೃದುವಾದ್ಯತ್ಕರತಾಲದುನ್ದುಭೀನಾಂ
ಸ್ವನಮುದ್ದಲಕಾಹಲೋತ್ಥನಾದ್ಯೈಃ ॥೪೮॥

ಕಲಹಂಸಗತೀಸುಯೌವನೋದ್ಯ
ತ್ತರುಣೀರುದ್ರಗಣಾಂಗನಾದಿಕ್ಲೃಪ್ತೈಃ ।
ಅತಿಸೋಮಸಮಾನಛತ್ರಪಙ್ಕ್ತ್ಯಾ
ವರಹಂಸೋತ್ಥಸುಪಕ್ಷಪಕ್ಷತಾಭೈಃ ॥೪೯॥

ಪರಿದೋಧೂಯ ಸುಚಾಮರೋತ್ಥವಾತೈ
ರ್ವ್ಯಜನೈಃ ಪಿಞ್ಛವಿಚಿತ್ರಬರ್ಹಿಜಾತೈಃ ।
ಸುಪತಾಕರತಿಪ್ರಕಾಶಮಾನೈ
ರ್ವಿವಿಧೈಶ್ಚಿತ್ರಪಟಪ್ರಕಲ್ಪಿತೈಶ್ಚ ॥೫೦॥

---

ನಾಟ್ಯವಾಡುವಾಗ ಕಾಲಿಗೆ ಹಾಕಿಕೊಂಡಿರುವ ಕಡಗಗಳ ಝುಣಝುಣವೂ, ಮೃದುವಾದ ಕೊಳಲಿನ ನಾದವೂ, ತಾಲಗಳ ಇಂಚರವೂ ಬಹು ಮನೋಹರವಾಗಿದ್ದವು. ಶಂಖಗಳೂ, ದುಂದುಭಿಗಳೂ, ಮದ್ದಲೆ (ತಬಲ) ಮುಂತಾದ ಇತರ ವಾದ್ಯವಿಶೇಷಗಳೂ, ತಮ್ಮ ಮೃದುಮಧುರವಾದ ನಾದವನ್ನು ಎಲ್ಲ ಕಡೆಗೂ ಹರಡುತ್ತಿದ್ದವು. ||೪೮||

ಕಲಹಂಸದ ಗಮನವನ್ನು ಅನುಕರಿಸುತ್ತಿರುವ ನಡಗೆಯುಳ್ಳವರೂ, ಸೌಂದರ್ಯ ಮತ್ತು ಯೌವನದಿಂದ ಮನೋಹರರಾಗಿರುವವರೂ ಆದ ರುದ್ರಾಣಿಯರು, ಚಂದ್ರನ ಕಾಂತಿಯನ್ನು ಮೀರಿಸುವ ಶ್ವೇತಛತ್ರಿಗಳನ್ನು ಹಿಡಿದು ಪರಮೇಶ್ವರನಿಗೆ ಸೇವೆ ಸಲ್ಲಿಸಿದರು. ||೪೯||

ಹಂಸದ ರೆಕ್ಕೆಗಳಂತೆ ಪ್ರಕಾಶಿಸುವ ಬೀಸಣಿಗೆಗಳಿಂದಲೂ, ಶುಭ್ರವಾದ ಚಾಮರಗಳಿಂದಲೂ ಪರಶಿವನನ್ನು ಉಪಚರಿಸಿದರು. ಕೆಲವರು ವಿಚಿತ್ರ ಬಣ್ಣವುಳ್ಳ ನವಿಲುಗರಿಯ ಬೀಸಣಿಗೆಗಳಿಂದ ಬೀಸಿದರು. ಇನ್ನು ಕೆಲವರು ಪ್ರಕಾಶಮಾನವಾದ ಪತಾಕೆಗಳ (ಬಾವುಟಗಳ) ನ್ನು ಹಿಡಿದು ನಿಂತಿದ್ದರು. ಮತ್ತೆ ಕೆಲವರು ನಾನಾ ವಿಧವಾದ ಚಿತ್ರ ಪಟಗಳನ್ನು ಧರಿಸಿ ಸ್ವಾಮಿಯನ್ನು ಭಜಿಸಿದರು. ||೫೦||

ಅತಿಸುಂದರಕಾಂತಿಕಾನ್ತಕಾನ್ತ್ಯೈ
ರ್ಮುಕುರೈರ್ದೃಷ್ಟಿಪಥೇ ಶಿವಸ್ಯ ದತ್ವಾ ।
ಅತಿತೋಷತರೋರುಹರ್ಷವರ್ಷೈ
ರ್ನತಿಭಿಃಪ್ರಕ್ರಮಣೈಸ್ತದಾ ಸಿಷೇವೇ ॥೫೧॥

ಪರಿಪೂಜ್ಯ ಶಿವಂ ಪ್ರಕೃಷ್ಟವಾಚಾ
ಮಧುರಂ ಸ್ತೌತಿ ಮಹೇಶಮಮ್ಬಿಕೇಶಂ ।
ವಿಮಲೋದಾರಸುರುದ್ರವೀಣಯಾ
ಸಿತತುಂಬೀಫಲಕಾಂತಿಕಾಂತತಂತ್ರ್ಯಾ ॥೫೨॥

ಮಧುರಂ ಗಾಯತಿ ಶಂಭುನಾಮಜಾಲಂ ।
ನಖನಿಕ್ವಣನೈರ್ಮುದಾ ತದಾ ಭವಾನೀ ॥೫೩॥

---

ಅಂಬಿಕೆಯು ಅತ್ಯಂತ ಸುಂದರವೂ, ಕಾಂತಿಯುಕ್ತವೂ, ಆದ ಕನ್ನಡಿಯನ್ನು ಪರಶಿವನ ಮುಖಕ್ಕೆ ತೋರಿಸಿ, ಅದರಲ್ಲಿ ಶಿವಲಿಂಗದ ಸೊಬಗನ್ನು ಕಂಡು ರೋಮಾಂಚವನ್ನುಂಟು ಮಾಡುತ್ತಿರುವ ಸಂತೋಷಾತಿಶಯದಿಂದ, ಅಂಬಿಕೇಶ್ವರನಿಗೆ ಪ್ರದಕ್ಷಿಣಾದಿಗಳನ್ನು ಮಾಡಿ ನಮಸ್ಕರಿಸಿದಳು. ॥೫೧॥

ಹೀಗೆ ದೇವಿಯು ಶಿವನನ್ನು ಪೂಜಿಸಿ ಅನಂತರ, ಬಿಳಿಯ ಸೋರೇ ಬುರುಡೆಯಿಂದ ನಿರ್ಮಿತವಾಗಿ ಮನೋಹರವಾಗಿರುವ, ರುದ್ರವೀಣೆಯನ್ನು ಹಿಡಿದು ಮೃದುಮಧುರವಾಗಿ ಶಿವಗೀತಗಳನ್ನು ಹಾಡಿದಳು. ಆ ರುದ್ರವೀಣೆಯ ತಂತಿಯಾದರೋ ಸಿತತುಂಬೀಫಲದ (ಬಿಳೀಸೋರೆಹಣ್ಣು) ಕಾಂತಿಯನ್ನು ಮೀರಿಸಿ ಹೊಳೆಯುತ್ತಿದ್ದಿತು. ॥೫೨॥

ಭವಾನಿಯು ವೀಣೆಯನ್ನು ತನ್ನ ಉಗುರುಗಳಿಂದ ಮೃದುವಾಗಿ ಮೀಟುತ್ತಾ, ಶಂಭುವಿನ ನಾಮಗಳನ್ನು ಬಹಳ ಇಂಪಾಗಿ ಹಾಡುತ್ತಾ ಹೀಗೆ ಸ್ತುತಿಸಿದಳು. ॥೫೩॥

ಹರ ಹರ ಶಙ್ಕರ ಚಂದ್ರಶೇಖರ
ಪ್ರಮಥಾಧೀಶ್ವರ ವಿಶ್ವನಾಥ ಶಂಭೋ ।
ಕರುಣಾರಸಸಾರಶೋಭಿತಾಂಗಾಂ
ಗದಕಾಹೀಶ್ವರ ದೇವದೇವ ಪಾಹಿ ॥೫೪॥

ಅಂಬಿಕೇಶ ಗಗನಾತಿಗಮೌಳೇ
ಲಮ್ಬಿತೋರುಜಟಯಾಖಿಲಕಾಶ ।
ವ್ಯೋಮಕೇಶ ವಿನತಾರ್ತಿವಿನಾಶ
ನಾಗಭೂಷಣಕ ಕಾರ್ಮುಕಪಾಣೇ ॥೫೫॥

ಹರಿಬಾಣಾಮಲಪದ್ಮನೇತ್ರ ಶಂಭೋ
ಕೃತದಕ್ಷಾಧ್ವರಶಿಕ್ಷವೀಕ್ಷಣ ।
ದಗ್ಧಕಾಮಪುರವರ್ಗ ಮದೋದ್ಯತ್ಕುಂಭಿ
ಕುಂಭದಲನಾಮಲಪಾದ ॥೫೬॥

---

"ಪಾಪನಾಶಕನಾದ ಹರನೇ! ಮಂಗಳಕರನಾದ ಶಂಕರನೇ! ಚಂದ್ರಮೌಳಿಯೇ! ಪ್ರಮಥಗಣಾಧಿಪನೇ! ಜಗದೊಡೆಯನಾದ ಶಂಭುವೇ! ಅಂಗಾಂಗಳಲ್ಲಿಯೂ ದಯಾರಸ ಪ್ರವಾಹದಿಂದ ಶೋಭಿಸುತ್ತಿರುವ ದೇವದೇವನೇ! ನಮ್ಮನ್ನು ರಕ್ಷಿಸು. ॥೫೪॥

ಅಂಬಿಕೇಶ್ವರನೇ! ನಿನ್ನ ಶಿರಸ್ಸು ಅಂತರಿಕ್ಷವನ್ನು ಭೇದಿಸಿ ಮುಂದುವರಿದಿರುವುದು. ಜೋಲಾಡುತ್ತಿರುವ ದೊಡ್ಡ ಜಡೆಗಳಿಂದ ಬ್ರಹ್ಮಾಂಡವನ್ನೆಲ್ಲಾ ಮುಚ್ಚುತ್ತಿರುವ ವ್ಯೋಮಕೇಶನೇ! ವಿನಯದಿಂದ ಬಾಗಿದವರ ದುಃಖವನ್ನು ನೀಗುವವನೇ! ಸರ್ಪಾಭರಣನೇ! ಧನುರ್ಧಾರಿಯೇ, ರಕ್ಷಿಸು. ॥೫೫॥

ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡಿರುವವನೆ, ಪರಿಶುದ್ಧವಾದ ಕಮಲದಂತೆ ಕಣ್ಣುಗಳುಳ್ಳವನೇ, ನೀನು ದಕ್ಷಯಜ್ಞದಲ್ಲಿ ಅಪರಾಧಿಯಾದ ದಕ್ಷಬ್ರಹ್ಮನನ್ನೇ ಶಿಕ್ಷಿಸಿದೆಯಲ್ಲವೆ! ಮನ್ಮಥನನ್ನೂ, ತ್ರಿಪುರವರ್ಗವನ್ನೂ ದಹಿಸಿ, ಮದೋನ್ಮತ್ತರಾದ ಶತ್ರುಗಳೆಂಬ ಆನೆಗಳ ಕುಂಭಸ್ಥಳವನ್ನು ನಿನ್ನ ಪವಿತ್ರವಾದ ಪಾದದಿಂದ ಸೀಳಿರುವೆ. ಅಂತಹ ವೀರಶಂಕರನೇ ನಮ್ಮನ್ನು ಕಾಪಾಡು. ॥೫೬॥

ಗಿರಿರಾಜಸುತಾಜಟೋರುಬಂಧ
ಹ್ಯವ ಮಾಂ ಘೋರತಪೋಭಿರುಗ್ರದೇಹಾಂ ।
ಭವ ಭೀಮೋಗ್ರಕಪಾಲಮಾಲಧಾರಿನ್
ಕರಶೂಲಾಮಲಭೂತಿಭೂಷಿತಾಂಗ ॥೫೭॥

ತ್ವದಪಾಂಗತತಿಪ್ರಭೂತಕಾಮಾ
ಕಿಮಿಹೇಹಾಮಿ ತವಾನ್ವೃತೇರ್ಮಮಾದ್ಯ ।
ಗಣನಾಥಷಡಾನನಾದಿಸೇವ್ಯ
ಪ್ರಕಟಾಪಾರಶ್ರುತೀಭಿರೀಡ್ಯಪಾದ ॥೫೮॥

ದಹರಗಗನಸಂಸ್ಥ ವಿಶ್ವನಾಥ
ಪ್ರಮುಥಾಧೀಶ ನತಾಸ್ಮಿ ತೇ ಪದಾಬ್ಜಂ । ॥೫೯॥

---

ಪರ್ವತರಾಜಕುಮಾರಿಯನ್ನೇ ನಿನ್ನ ದೊಡ್ಡ ಜಡೆಯಲ್ಲಿ ಅಡಗಿಸಿಕೊಂಡಿರುವ ಪರಶಿವನೇ, ಭಯಂಕರವಾದ ವೇಷಗಳಿಂದ ಉಗ್ರವಾಗಿ ತೋರುವವನೇ, ಕಪಾಲಮಾಲೆಗಳನ್ನು ಧರಿಸಿದವನೇ, ನೀನು ಕೈಯಲ್ಲಿ ತ್ರಿಶೂಲವನ್ನು ಹಿಡಿದು, ಪರಿಶುದ್ಧವಾದ ಭಸ್ಮದಿಂದ ತನ್ನ ಶರೀರವನ್ನು ಅಲಂಕರಿಸಿಕೊಂಡಿರುವೆಯಲ್ಲವೆ! ಘೋರವಾದ ತಪಸ್ಸನ್ನಾಚರಿಸಿ ಖಿನ್ನಳಾಗಿರುವ ನನ್ನನ್ನು ರಕ್ಷಿಸು. ॥೫೭॥

ನಿನ್ನ ಕಡೆಗಣ್ಣಿನ ವೀಕ್ಷಣವನ್ನೇ ದೊಡ್ಡ ವರವನ್ನಾಗಿಟ್ಟುಕೊಂಡಿರುವ ನನಗೆ ಆ ನಿನ್ನ ಅನುಗ್ರಹವೊಂದನ್ನು ಬಿಟ್ಟು ಮತ್ತಾವುದೂ ಬೇಡ. ಗಣಪತಿ, ಷಣ್ಮುಖ ಇವರೇ ಮೊದಲಾದವರಿಂದ ಸೇವಿಸಲ್ಪಡುತ್ತಿರುವವನೇ, ನೀನು ಅನಂತವಾದ ವೇದಗಳಿಂದ ಸದಾ ಸ್ತುತಿಸಲ್ಪಡುವೆಯಲ್ಲವೆ! ಪೂಜ್ಯಪಾದನೇ, ನನ್ನನ್ನು ರಕ್ಷಿಸು. ॥೫೮॥

ದಹರಾಕಾಶದಲ್ಲಿ ನೆಲಸಿರುವ ವಿಶ್ವನಾಥನೇ, ಓ ಪ್ರಮಥಗಣಗಳಿಗೊಡೆಯನಾದ ದೇವನೇ, ಇದೋ ನಿನ್ನ ಪಾದಕಮಲಗಳಿಗೆ ನಮಸ್ಕರಿಸುವೆನು. ॥೫೯॥

॥ ಸ್ಕಂದ ಉವಾಚ ॥

ಇತ್ಥಂ ಸಂಪೂಜ್ಯ ಸಾ ದೇವೀ ಕೈಲಾಸಾಚಲಮೂರ್ಧನಿ ।
ಅಮ್ಬಿಕೇಶಂ ಮಹಾಲಿಂಗಮಮ್ಬಿಕಾ ಭಕ್ತಿತತ್ಪರಾ ॥೬೦॥

ಪ್ರಣನಾಮ ಮುಹುರ್ಭಕ್ತ್ಯಾ ದೃಷ್ಟ್ವಾ ಲಿಂಗಮುಮಾಪತೇಃ ।
ಮಹಾನನ್ದಾಮ್ಬುಧೌ ಮಗ್ನಾ ನಾನ್ಯಜ್ಜಾನಾತಿ ಕಿಂಚನ ॥೬೧॥

ಏವಂ ತತ್ರಾರ್ಚನರತಾ ದ್ವಾದಶಾಬ್ದಂ ಕಿಲಾಮ್ಬಿಕಾ ।
ತ್ರಿಕಾಲಂ ಸಾವಧಾನೇನ ಪ್ರದೋಷೇಷು ವಿಶೇಷತಃ ॥೬೨॥

ಮಹಾಕೈಲಾಸಶೈಲಾಗ್ರೇಽಪ್ಯಮ್ಬಿಕೇಶಶಿವಾಲಯೇ ।
ಅಪೂಜಯತ್ತದಾ ದೇವೀ ಚಾಮ್ಬಿಕೇಶಂ ದ್ವಿಜೋತ್ತಮ ॥೬೩॥

ನಕ್ತಾಶನರತಾ ದೇವೀ ಸ್ವಸಖೀಭಿಃ ಪರೀವೃತಾ ।
ತರುಣೇನ್ದುಕಲಾಮೌಲಿಲಿಙ್ಗಂ ಸಂಪಶ್ಯತೀ ಮುದಾ ॥೬೪॥

---

ಈ ರೀತಿ ಕೈಲಾಸಪರ್ವತದ ಶಿಖರದಲ್ಲಿ ಅಂಬಿಕಾದೇವಿಯು ಅಂಬಿಕೇಶ್ವರನನ್ನು ಭಕ್ತಿಯುಕ್ತಳಾಗಿ ಅನನ್ಯಮನಸ್ಸಿನಿಂದ ಪೂಜಿಸಿ ನುತಿಸಿದಳು. ॥೬೦॥

ಬಾರಿಬಾರಿಗೂ ನಮಸ್ಕಾರಮಾಡಿದಳು. ಪುನಃ ಪುನಃ ದರ್ಶನಮಾಡಿದಳು. ಕೊನೆಗೆ ಆನಂದವೆಂಬ ಸಮುದ್ರದಲ್ಲಿ ಮುಳುಗಿ ಯಾವುದನ್ನೂ ಅರಿಯದಂತೆ ತಲ್ಲೀನಳಾಗಿ ನಿಂತಳು. ॥೬೧॥

ಈ ರೀತಿ ಹನ್ನೆರಡು ವರ್ಷಗಳಕಾಲ ಅಂಬಿಕೆಯು, ಪ್ರಾತಃ ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಶಿವಲಿಂಗಾರ್ಚನಮಾಡುತ್ತಾ, ಪ್ರದೋಷಕಾಲಗಳಲ್ಲಿ ವಿಶೇಷವಾಗಿ ಸಾವಧಾನತೆಯಿಂದ ಶಂಕರನನ್ನು ಪೂಜಿಸುತ್ತಿದ್ದಳು. ॥೬೨॥

ಓ ಬ್ರಾಹ್ಮಣೋತ್ತಮನೇ, ಮಹಾಕೈಲಾಸಪರ್ವತದ ಶಿಖರದಲ್ಲಿಯೂ ಮತ್ತು ಅಂಬಿಕೇಶ್ವರನ ದೇವಾಲಯದಲ್ಲಿಯೂ ಸಹ ಗಿರಿಜೆಯು ಅಂಬಿಕೇಶ್ವರನನ್ನು ಇದೇ ರೀತಿ ಪೂಜಿಸುತ್ತಿದ್ದಳು. ॥೬೩॥

ಮಹಾದೇವಿಯು ಹೀಗೆ ತನ್ನ ಗೆಳತಿಯರೊಡನೆ ಹಗಲೆಲ್ಲಾ ಉಪವಾಸದಿಂದಿದ್ದು ನಕ್ತಭೋಜನವನ್ನು ಮಾಡುತ್ತಾ, ಯಾವಾಗಲೂ ಸಂತೋಷದಿಂದ ಬಾಲಚಂದ್ರಮೌಳಿಯಾದ ಶಿವಲಿಂಗವನ್ನು ದರ್ಶನಮಾಡುತ್ತಾ ಅನೇಕರಾತ್ರಿಗಳನ್ನು ಕಳೆದಳು. ॥೬೪॥

ನಿನಾಯ ಸಾ ಕ್ಷಪಾಸ್ತತ್ರ ಮಹಾದೇವೀ ಸದಾ ಮುದಾ।
ಸ್ವಯಂ ಸಖೀಭಿಸ್ಸಹಿತಾ ಕುಸುಮಾಪಚಯೋದ್ಯತಾ ॥೬೫॥

ಕೈಲಾಸಮೌಲಿವಿಪಿನೇ ಪುಷ್ಪಾಸಾರಯುತೇ ಸದಾ ।
ಪುಲ್ಲಾಬ್ಜಿನೀಷು ಸತತಂ ಪಙ್ಕಜಾಹರಣಾದರಾ ॥೬೬॥

ಬಿಲ್ವಕಣ್ಟಕನುನ್ನಾಪಿ ಸ್ವಯಮೇವಾಹರಚ್ಛಿವಾ ।
ಫಲಾನಿ ಸ್ವಾದುಭೂತಾನಿ ಸಮಾಹೃತ್ಯಾಮ್ಬಿಕೇಶ್ವರಂ ॥೬೭॥

ನಿವೇದ್ಯಾಶ್ನಾತಿ ನಿಯತಂ ಸಖೀಭಿಸ್ಸಹಿತಾ ಶಿವಾ ।
ಯನ್ನಿವೇದಿತಮೀಶಾನೇ ತದಶ್ನಾತಿ ಕುತೂಹಲಾತ್ ॥೬೮॥

ಪವಿತ್ರಂ ಶಿವನೈವೇದ್ಯಂ ಜ್ಞಾನಪ್ರದಮನುತ್ತಮಂ ।
ಜಿತಾಮೃತರಸಾಸ್ವಾದಂ ಪಾಪಸಂಘವಿನಾಶನಂ ॥೬೯॥

---

ದೇವಿಯು ತನ್ನ ಗೆಳತಿಯರೊಡನೆ ಕೈಲಾಸಪರ್ವತಶಿಖರದಲ್ಲಿರುವ ಕಾಡುಗಳಲ್ಲಿ ಪುಷ್ಪಾಪಚಯಕ್ಕಾಗಿ ಹೋಗುತ್ತಿದ್ದಳು. ಅರಳಿದ ಕಮಲಗಳುಳ್ಳ ಪದ್ಮಸರೋವರಗಳಲ್ಲಿ ನಿಂತು, ಯಾವಾಗಲೂ ಆದರದಿಂದ ಪದ್ಮಗಳನ್ನು ಕುಯ್ದು ತರುತ್ತಿದ್ದಳು. ||೬೫-೬೬||

ಬಿಲ್ವಪತ್ರೆಗಿಡದ ಮುಳ್ಳುಗಳಿಂದ ಅನೇಕಬಾರಿ ಚುಚ್ಚಲ್ಪಟ್ಟರೂ, ತಾನೇ ಬಿಲ್ವಪತ್ರೆಗಳನ್ನು ಕೊಯ್ದು ತರುತ್ತಿದ್ದಳು. ರುಚಿಕರವಾದ ಹಣ್ಣುಗಳನ್ನು ತಂದು ಅಂಬಿಕೇಶ್ವರನಿಗೆ ಭಕ್ತಿಯಿಂದ ಅರ್ಪಿಸುತ್ತಿದ್ದಳು. ||೬೭||

ನಿತ್ಯವೂ ತನ್ನ ಸಖಿಯರೊಡನೆ ಶಿವನಿಗೆ ನೈವೇದ್ಯಮಾಡಿದ ಪ್ರಸಾದವನ್ನೇ, ತಾನೂ ಕುತೂಹಲದಿಂದ ಸೇವಿಸುತ್ತಿದ್ದಳು. ||೬೮||

ಪವಿತ್ರವಾದ ಈ ಶಿವನೈವೇದ್ಯವು ಶ್ರೇಷ್ಠವಾದ ಜ್ಞಾನವನ್ನುಂಟುಮಾಡುವುದು. ತನ್ನ ಮಾಧುರ್ಯದಿಂದ ಅಮೃತದ ರುಚಿಯನ್ನೂ ಸಹ ಜಯಿಸಿರುವುದು. ಮತ್ತು ಸಕಲ ಪಾಪಗಳನ್ನೂ ನಾಶಮಾಡುವುದು. ||೬೯||

ಆಸ್ವಾದ್ಯ ಶಿವನೈವೇದ್ಯಂ ಜಲಮನ್ನಂ ಫಲಾದಿಕಂ ।
ದೇವೀ ಹೃಷ್ಟತರಾ ನಿತ್ಯಮಷ್ಟಮೂರ್ತ್ಯರ್ಚನೇ ರತಾ ॥೨೦॥

ಸ್ವತಪೋತ್ಥಂ ಕಷ್ಟಜಾಲಂ ಜಹೌ ಲಿಙ್ಗಸಮರ್ಚನಾತ್ ॥೨೧॥

ದೇವ್ಯಾ ಕೈಲಾಸಮೌಲೌ ಸತತಪರಿಚಿತಾಪಾದಪೂಜಾಪ್ರಭಾವೈ
ಸ್ತುಷ್ಟಶ್ಚೈವಾಮ್ಬಿಕೇಶೋ ಗಣಗಣಸಹಿತಃ ಪ್ರಾದುರಾಸೀನ್ಮಹೇಶಃ ।
ದೇವೀಂ ವೀಕ್ಷ್ಯ ಮುದಾಹ ಗಾಢಭುಜಕೈರಾಲಿಂಗ್ಯ ಧನ್ಯೇಽಮ್ಬಿಕೇ
ಕೋ ವೇತ್ತಿ ಪ್ರಸಭಂ ಮಮೇಷ್ಟದಮಹಾಲಿಙ್ಗಾರ್ಚನಾಯಾಃ ಫಲಂ॥೨೨॥

**ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಅಂಬಿಕೇಶಪ್ರಸಾದೋ ನಾಮ ಪಂಚಮೋಽಧ್ಯಾಯಃ**

---

ಪರಮೇಶ್ವರನಿಗೆ ನಿವೇದನ ಮಾಡಿದ ಅಂತಹ ನೀರು, ಅನ್ನ, ಮತ್ತು ಹಣ್ಣು ಮೊದಲಾದವುಗಳನ್ನು ತಾನೂ ಆಸ್ವಾದನಮಾಡಿ ನಿತ್ಯವೂ ಸಂತೋಷದಿಂದ ಅಷ್ಟಮೂರ್ತಿಯಾದ ಶಿವನ ಧ್ಯಾನದಲ್ಲಿಯೇ ಕಾಲಕಳೆದಳು. ||೨೦||

ಹೀಗೆ ಅಂಬಿಕೆಯು ಅಂಬಿಕೇಶ್ವರನ ಲಿಂಗವನ್ನು ಪೂಜೆಮಾಡಿದುದರಿಂದ ತನ್ನ ತಪಸ್ಸಿನಕ್ಲೇಶವನ್ನೆಲ್ಲಾ ಪರಿಹರಿಸಿಕೊಂಡಳು. ||೨೧||

ದೇವಿಯು ಕೈಲಾಸಪರ್ವತದ ಶಿಖರದಲ್ಲಿ ಸದಾ ತನಗೆ ತೃಪ್ತಿಕರವಾದ ಅನೇಕ ಪೂಜಾಸಾಮಗ್ರಿಗಳಿಂದ ಪೂಜೆಮಾಡುವುದನ್ನು ತಿಳಿದು, ತೃಪ್ತನಾದ ಅಂಬಿಕೇಶ್ವರನು ತನ್ನ ರುದ್ರಗಣಗಳೊಡನೆ ದೇವಿಗೆ ಪ್ರತ್ಯಕ್ಷನಾದನು. ಅನಂತರ ಮಹೇಶ್ವರನು ಮಹಾದೇವಿಯನ್ನು ಸಂತೋಷದಿಂದ ನೋಡಿ, ತನ್ನ ಬಾಹುಗಳಿಂದ ದೇವಿಯನ್ನು ದೃಢವಾಗಿ ಆಲಿಂಗನಮಾಡಿ ಅವಳನ್ನು ಕುರಿತು, ಅಂಬಿಕೇ! ನೀನೇ ಧನ್ಯಳು, ನೀನಲ್ಲವೇ, ನನಗೆ ಇಷ್ಟವಾದ ಲಿಂಗಾರ್ಚನೆಯನ್ನು ಮಾಡಿ ಈ ರೀತಿ ಜಾಗ್ರತೆ ಫಲವನ್ನು ಪಡೆದವಳು! ನಿನಗೆ ಸಮಾನರು ಮತ್ತಾರಿರುವರು? ಎಂದು ಶ್ಲಾಘಿಸಿದನು. ||೨೨||

ಇಲ್ಲಿಗೆ ಶ್ರೀಶಿವರಹಸ್ಯದ ಎರಡನೆಯ ಅಂಶದಲ್ಲಿ ಅಂಬಿಕೇಶ್ವರನ ಅನುಗ್ರಹವೆಂಬ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಷಷ್ಠೋಽಧ್ಯಾಯಃ

॥ ಸ್ಕಂದ ಉವಾಚ ॥

**ತತೋ ದೇವೀಂ ಮಹಾದೇವಶ್ಶಿವಶ್ಚಂದ್ರಕಲಾಧರಃ ।**
**ಪ್ರತಿಪಚ್ಚಂದ್ರಸಂಕಾಶಾಂ ತಪಸಾ ತನುತಾಂ ಗತಾಂ ॥೧॥**

**ಶರದ್ಘನೋದ್ಯತ್ತಟಿತಾ ಸದೃಶಾಮಲವಿಗ್ರಹಾಂ ।**
**ಭಸ್ಮಚ್ಛನ್ನಾಂ ತ್ರಿಪುಂಡ್ರಾಙ್ಕಫಾಲಭಾಗಮನೋಹರಾಂ ॥೨॥**

**ಪಿಶಂಗಿತಮಹಾವೇಣೀಜಟಿಲಾಲಕಶೋಭಿತಾಂ ।**
**ಅವಗ್ರಹಗ್ರಹಾಕಾರಾಂ ಭೂಷಾಹೀನಾಂ ಚ ಸುಂದರಾಂ ॥೩॥**

---

### ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಆರನೆಯ ಅಧ್ಯಾಯ

ಪಾರ್ವತಿಯು ಶಂಕರನನ್ನು ಸ್ತುತಿಸಿದಮೇಲೆ ಮಹಾದೇವನೂ, ಚಂದ್ರಕಲೆಯನ್ನು ಶಿರಸ್ಸಿನಲ್ಲಿ ಧರಿಸಿದವನೂ ಆದ ಶಂಕರನು, ತಪಸ್ಸಿನಿಂದ ಕೃಶಳಾಗಿದ್ದರೂ ಪ್ರತಿಪತ್ತಿನ ಚಂದ್ರನಂತೆ ಕಾಂತಿಯುಕ್ತಳಾಗಿರುವ ದೇವಿಯನ್ನು ಪ್ರೀತಿಯಿಂದ ಆಲಿಂಗನೆಮಾಡಿದನು. ॥೧॥

ಆಗ ದೇವಿಯು ಶರದೃತುವಿನ ಮೇಘಮಧ್ಯದಲ್ಲಿ ತೋರುವ ಮಿಂಚಿನಂತೆ ಹೊಳೆಯುತ್ತಿದ್ದಳು. ಭಸ್ಮಲಿಪ್ತವಾದ ದೇವಿಯ ದೇಹವು ಶರತ್ಕಾಲದ ಮೇಘದಂತೆಯೂ, ಲಲಾಟದಲ್ಲಿ ತೋರಿಬರುವ ತ್ರಿಪುಂಡ್ರತಿಲಕವು ಮಿಂಚಿನಂತೆಯೂ ಶೋಭಿಸುತ್ತಿದ್ದಿತು. ॥೨॥

ಪಾರ್ವತಿಯ ಜಡೆ ಮತ್ತು ಮುಂಗುರುಳು, ಧೂಳುಗಳಿಂದ ವ್ಯಾಪ್ತವಾಗಿ ಹೊಂಬಣ್ಣವನ್ನು ಹೊಂದಿದ್ದಿತು. ದೇವಿಯ ದೇಹದಲ್ಲಿ ಯಾವ ಒಂದು ಒಡವೆಯಿಲ್ಲದಿದ್ದರೂ ಕ್ಷಾಮಕಾಲದ ಗ್ರಹದಂತೆ ಸರ್ವದಾ ಸ್ಫುರಿಸುತ್ತಲೇ ಇದ್ದಿತು. ॥೩॥

ವಲ್ಕಲಾಜಿನಸಂವೀತಾಂ ರುದ್ರಾಕ್ಷಾಮಲಕಂಕಣಾಂ ।
ಭದ್ರಾಂ ಭದ್ರತರಾಕಾರಾಂ ಸುಧಾಧಾಮಸಮಾನನಾಂ ॥೪॥

ಬಾಹುಭ್ಯಾಂ ಪೀನವೃತ್ತಾಭ್ಯಾಂ ತಾಂ ದೇವೀಂ ಪ್ರೀತಿವತ್ತರಾಂ ।
ಗಾಢಂ ತದ್ಧೃದಯೇ ದೇವಃ ಪ್ರವಿಷ್ಟ ಇವ ಸಸ್ವಜೇ ॥೫॥

ಸ್ವಾರಿಕಸಿಂಹಾಸನಾಸೀನಾಂ ತಾಂ ಚಕಾರಾಮಲೇಕ್ಷಣಾಂ ।
ಪಸ್ಪರ್ಶ ಶಂತಮಾಭ್ಯಾಂ ಚ ಪಾಣಿಭ್ಯಾಂ ತಾಂ ಕೃಶಾಙ್ಗಕಾಂ ॥೬॥

ಕಮಲೋದರಸೌಭಾಗ್ಯರಂಜಿತಾಭ್ಯಾಂ ಮಹೇಶ್ವರಃ ।
ಸುಧಾಂಶುವೀಕ್ಷಣೋತ್ಫುಲ್ಲನಯನಾಮೃತಶೀಕರೈಃ ॥೭॥

---

ನಾರುಮಡಿ ಮತ್ತು ಕೃಷ್ಣಾಜಿನಗಳನ್ನು ಧರಿಸಿ, ರುದ್ರಾಕ್ಷಮಣಿಗಳ ಕಂಕಣವನ್ನು ಕಟ್ಟಿಕೊಂಡಿರುವ ಆ ದೇವಿಯು ಸಲ್ಲಕ್ಷಣವತಿಯಾಗಿ ಕಾಣುತ್ತಿದ್ದಳು. ದೇವಿಯ ಮುಖವು ಅಮೃತಕ್ಕೆ ಆಶ್ರಯವಾದ ಪೂರ್ಣಚಂದ್ರನಂತೆ ದುಂಡಾಗಿಯೂ ಕಾಂತಿಯುಕ್ತವಾಗಿಯೂ ತೋರುತ್ತಿತ್ತು. ॥೪॥

ಇಂತಹ ಸುಂದರಾಂಗಿಯೂ ತುಂಬಾ ಪ್ರೀತಿಪಾತ್ರಳೂ ಆದ ಗಿರಿಜೆಯನ್ನು ಮಹಾದೇವನು ಪೀನವಾಗಿ ದುಂಡಾಗಿರುವ ತನ್ನ ತೋಳುಗಳಿಂದ ದೇವಿಯ ಹೃದಯವನ್ನೇ ಪ್ರವೇಶಮಾಡುತ್ತಿರುವನೋ ಎನ್ನುವಂತೆ ದೃಢವಾಗಿ ಆಲಿಂಗನೆ ಮಾಡಿದನು. ॥೫॥

ಅನಂತರ ನಿರ್ಮಲಾಕ್ಷಿಯಾದ ಆ ಗಿರಿಜೆಯನ್ನು ತನ್ನ ತೊಡೆಯೆಂಬ ಸಿಂಹಾಸನದ ಮೇಲೆ ಕೂರಿಸಿಕೊಂಡು, ಸುಖಕರವಾದ ತನ್ನ ಕೈಗಳಿಂದ ಕೃಶಾಂಗಿಯಾದ ದೇವಿಯನ್ನು ಸ್ಪರ್ಶಮಾಡಿದನು. ॥೬॥

ದೇವಿಯ ಮೈಯನ್ನು ಸ್ಪರ್ಶಮಾಡುವ ಮಹಾದೇವನ ಕೈಗಳು, ತಾವರೆಯ ಹೂವಿನ ಸೊಬಗನ್ನು ಪಡೆದು ಕೆಂಪಾಗಿ ಕಾಣುತ್ತಿದ್ದುವು. ದೇವಿಯ ಮುಖವೆಂಬ ಚಂದ್ರನ ದರ್ಶನದಿಂದ, ಅರಳಿದ ತನ್ನ ಕಣ್ಣುಗಳ ಅಮೃತಕಣಗಳಿಂದ ಪಾರ್ವತಿಯನ್ನು ಆಪಾದತಲಮಸ್ತಕವಾಗಿ ನೆನೆಯುವಂತೆ ಮಾಡಿದನು. ॥೭॥

ಸ್ನಾಪಯಾಮಾಸ ತಾಂ ದೇವೀಮಾಪಾದತಲಮಸ್ತಕಂ ।
ಸುಧಾರಸವರಸ್ಯಂದಿನಯನೇನಾತುಲೇನ ಚ ॥೮॥

ಕೃಪಾಕಟಾಕ್ಷತೋ ವೀಕ್ಷ್ಯ ತ್ರ್ಯಕ್ಷೋ ದಾಕ್ಷಾಯಣೀಮುಮಾಂ ।
ಶಿವಶಂಕರಪಾಣಿಭ್ಯಾಂ ಸಂಸ್ಪೃಷ್ಟ್ವಾ ಜಗದಂಬಿಕಾ ॥೯॥

ಆನಂದವಾರಿಧಿಸ್ಫಾರತರಙ್ಗ ಇವ ಸಾಽವೃಧತ್ ।
ಕ್ಷೀರೋದಧಿರಿವೋದ್ದಾಮತರಙ್ಗಾವಲಿಧಾಸುರಃ ॥೧೦॥

ಚಂದ್ರೋದಯಮಿವ ಪ್ರಾಪ್ಯ ಗಿರಿಜಾನನ್ದಿತಾಽಭವತ್ ।
ಸಂಜಾತಪುಲಕಾ ದೇವೀ ಹ್ಯಾನಂದಘನಸುಂದರಾ ॥೧೧॥

ಪ್ರಣನಾಮ ತದಾ ದೇವೀ ಶಙ್ಕರಂ ಲೋಕಶಂಕರಂ ।
ಸ್ಪೃಶನ್ ಸ್ವಪಾಣಿಕಮಲೈಸ್ತತ್ಪದಾಂಭೋರುಹದ್ವಯಂ ॥೧೨॥

---

ಅಮೃತರಸವನ್ನೇ ಸುರಿಸುತ್ತಿರುವುದೋ ಎಂಬಂತಿರುವ ಅಪ್ರತಿಮವಾದ ತನ್ನ ಕಣ್ಣುಗಳಿಂದ ನೋಡಿ ದೇವಿಯನ್ನು ಆನಂದಪಡಿಸಿದನು. ॥೮॥

ಹೀಗೆ ತ್ರಿಲೋಚನನಾದ ಮಹೇಶ್ವರನು ದಾಕ್ಷಾಯಣಿಯಾಗಿದ್ದ ಉಮೆಯನ್ನು ತನ್ನ ಕೃಪಾಕಟಾಕ್ಷದಿಂದ ನೋಡಿ, ಪ್ರೀತಿಯಿಂದ ಸ್ಪರ್ಶಮಾಡುತ್ತಲೇ ಇದ್ದನು. ಇದರಿಂದ ಜಗದಂಬಿಕೆಯು ಆನಂದಸಮುದ್ರದಲ್ಲಿ ತಾನಾಗಿಯೇ ಉಕ್ಕಿಬರುತ್ತಿರುವ ಅಲೆಗಳಂತೆ ಉಬ್ಬಿದಳು. ತನ್ನ ಹಿಂದಿನ ತಪಃಕ್ಲೇಶಗಳನ್ನೆಲ್ಲಾ ತೊರೆದು, ಮೊದಲಿಗಿಂತ ಅತಿಶಯವಾದ ಉತ್ಸಾಹಭರಿತಳಾದಳು. ॥೯॥

ಚಂದ್ರೋದಯವಾದಾಗ ತನ್ನ ದೊಡ್ಡ ದೊಡ್ಡ ಅಲೆಗಳ ಸಮೂಹದಿಂದ ಪ್ರಕಾಶಿಸುವ ಕ್ಷೀರಸಮುದ್ರದಂತೆ, ಗಿರಿಜಾದೇವಿಯೂ ಚಂದ್ರಮೌಳಿಯಾದ ಪರಮೇಶ್ವರನ ದರ್ಶನಸ್ಪರ್ಶನಾದಿಗಳಿಂದ, ಉಬ್ಬಿದಂತೆ ಕಾಣುತ್ತಿದ್ದಳು. ॥೧೦॥

ಹಾಗೆ ಆನಂದಪರವಶಳಾದ ದೇವಿಯು, ರೋಮಾಂಚಹೊಂದಿ ತನ್ನ ಕರಕಮಲಗಳಿಂದ ಮಹಾದೇವನ ಪಾದಪದ್ಮಗಳನ್ನು ಒತ್ತುತ್ತಾ ಲೋಕಕ್ಕೇ ಕಲ್ಯಾಣಕರನಾದ ಶಂಕರನನ್ನು ಭಕ್ತಿಯಿಂದ ವಂದಿಸಿದಳು. ॥೧೧-೧೨॥

ಜಗದಾನಂದಕಂದೋದ್ಯತ್ಸುಧಾಮಂಡಲವಚ್ಛಿವಾಂ ।
ಪ್ರಣಾಮಮುಖರಾಂ ದೇವೀಂ ದೋರ್ಭ್ಯಾಮುತ್ಥಾಪ್ಯ ಶಂಕರಃ ॥೧೩॥

ಸ್ವಾಂಕಮಂಚಸ್ಥಿತಾಂ ದೇವೀಂ ಚಕ್ರೇ ಕೈಲಾಸಸೌಧಗಃ ।
ದಿವ್ಯಸಿಂಹಾಸನಾಸೀನೋ ದೇವೋ ದೇವ್ಯಾ ಮಹೇಶ್ವರಃ ॥೧೪॥

ಪ್ರಾಹಾಲಿಙ್ಗ್ಯ ಮಹಾದೇವೀಂ ಪುನಃ ಪುನರುಮಾಪತಿಃ ।
ಸ್ಪೃಶನ್ಸ್ವಪಾಣಿನಾ ದೇವ್ಯಾ ವದನಾಂಬುಜಮುತ್ತಮಂ ॥೧೫॥

ಸ್ವಿನ್ನಂ ಶಂಕರಸಂಸ್ಪರ್ಶದರ್ಶನಾನಂದಭಾಸುರಂ ।
ಪದ್ಮಿನೀವ ತದೋತ್ಫುಲ್ಲಪಂಕಜಾಕಾರಸಶ್ರಿಯಂ ॥೧೬॥

ಉದ್ಯದ್ಭಾನುಕರಸ್ಪೃಷ್ಟಕಮಲೋತ್ಫುಲ್ಲಸೋದರಂ ॥೧೭॥

---

ಜಗತ್ತಿಗೇ ಆನಂದದಾಯಕನಾಗಿರುವ ಚಂದ್ರನ ಅಮೃತಸಮೂಹವೋ ಎನ್ನುವಂತೆ ಅಂಬಿಕೆಯು ನಮಸ್ಕಾರಮಾಡಲು, ಕೈಲಾಸಶಿಖರವಾಸಿಯಾದ ಶಂಕರನು ತನ್ನ ಬಾಹುಗಳಿಂದ ಮತ್ತೆ ಹಿಡಿದೆತ್ತಿ, ತನ್ನ ತೊಡೆಗಳೆಂಬ ಮಂಚದ ಮೇಲೆ ಪ್ರೀತಿಯಿಂದ ಕೂರಿಸಿಕೊಂಡನು. ||೧೩||

ದಿವ್ಯಸಿಂಹಾಸನಾರೂಢನಾಗಿರುವ ಮಹೇಶ್ವರನು, ದೇವಿಯ ಸುಂದರವಾದ ಮುಖಕಮಲವನ್ನೇ ನೋಡುತ್ತಾ, ಪದೇ ಪದೇ ಆಲಿಂಗಿಸುತ್ತಾ, ದೇವಿಯನ್ನು ಕುರಿತು ಮುಂದೆ ಹೇಳುವಂತೆ ನುಡಿದನು. ||೧೪-೧೫||

ಶಂಕರನ ಕರಸ್ಪರ್ಶದಿಂದ ಬೆವರನ್ನು ಹೊಂದಿದ ದೇವಿಯ ಮುಖಕಮಲವು, ನೋಡುವುದಕ್ಕೆ ಆನಂದಕರವಾಗಿಯೂ, ಪ್ರಕಾಶವಾಗಿಯೂ ಇದ್ದಿತು. ಆಗ ದೇವಿಯು, ಚೆನ್ನಾಗಿ ಅರಳಿರುವ ಕಮಲಗಳ ಕಾಂತಿಗಳಿಂದ ರಂಜಿಸುವ ಪದ್ಮಸರಸ್ಸಿನ ಸಾಮ್ಯವನ್ನು ಪಡೆದಿದ್ದಳು. ಅಲ್ಲದೆ ಉದಯಸೂರ್ಯನ ಕಿರಣಗಳಿಂದ ಅರಳಿದ ಕಮಲದ ಕಾಂತಿಯಂತೆ ದೇವಿಯ ಮುಖವು ವಿಕಸಿತವಾಗಿದ್ದಿತು. ||೧೬-೧೭||

|| ಈಶ್ವರ ಉವಾಚ ||

ಖಿನ್ನಾಸಿ ತಪಸಾ ಗೌರಿ ಜಾನೇ ತವ ಚಿಕೀರ್ಷಿತಂ ।
ಶಿರೀಷಮೃದುಲಾ ತೇಽದ್ಯ ತನುಸ್ತಾಪವಿಶೋಷಿತಾ ॥೧೮॥

ಭ್ರಾಜದಾರಕ್ತಕಮಲಸೋದರಂ ತವ ವಕ್ತ್ರಕಂ ।
ಹಿಮಸಾರಪರಿಕ್ಲಿನ್ನಂ ಪಂಕಜೋಪಮಮದ್ರಿಜೇ ॥೧೯॥

ವದನಂ ಪಕ್ಷಯೋಶ್ಛಂಚಚ್ಚಂದ್ರವನ್ನ ವಿರಾಜತೇ ।
ನೀಲಾಲಕಮಿದಂ ಸುಭ್ರು ಭಸ್ಮರೇಣುಸುಧೂಸರಂ ॥೨೦॥

ವನಪ್ರಸೂನರಜಸಾ ವಾತಾನೀತೇನ ಪಾಂಡರಂ ।
ಜಟಾಲಮಿದಮತ್ಯಂತಂ ತ್ವದ್ವೇಣೀಮಂಡಲಂ ಶಿವೇ ॥೨೧॥

ವಲ್ಮೀಕವಿಲಯಾತಂ ಚ ವ್ಯಾಲ್ಯಂಗಮಿವ ಧೂಸರಂ ।
ಪರಿಕ್ಲಿನ್ನಮಿದಂ ಭಾತಿ ಭೂಷಣೈರ್ಹೀನಮಪ್ಯುಮೇ ॥೨೨॥

---

ಎಲೌ ಗೌರಿಯೇ, ನೀನು ತಪಸ್ಸಿನಿಂದ ಖಿನ್ನಳಾಗಿರುವೆ. ನಿನ್ನ ತಪಸ್ಸಿಗೆ ಕಾರಣವೇನೆಂಬುದು ನನಗೆ ಗೊತ್ತು. ಬಾಗೆಯ ಹೂವಿನಂತೆ ಮೃದುವಾದ ಈ ನಿನ್ನ ಶರೀರವು ಕಠಿನವಾದ ತಪಸ್ಸಿನಿಂದ ಒಣಗಿ ಕಾಂತಿಹೀನವಾಗಿರುವುದಲ್ಲವೇ ! ||೧೮||

ಗಿರಿಜೆಯೇ, ವಿಕಸಿತವಾದ ಕೆಂದಾವರೆಯಂತಿದ್ದ ನಿನ್ನ ಮುಖವು, ಈಗ ಹಿಮಕಣಗಳಿಂದ ಕಾಂತಿಹೀನವಾಗಿರುವ ಕಮಲವನ್ನು ಹೋಲುತ್ತಿರುವುದು. ||೧೯||

ನಿನ್ನ ಮುಖವು ಈಗ ಪೂರ್ಣಚಂದ್ರನಂತೆ ಪ್ರಕಾಶಿಸುತ್ತಿಲ್ಲ. ಶೋಭನವಾದ ಹುಬ್ಬುಳ್ಳ ದೇವಿಯೇ, ನಿನ್ನ ಕಪ್ಪುಮುಂಗುರುಳು ಭಸ್ಮರೇಣುಗಳಿಂದ ಧೂಮ್ರವರ್ಣವಾಗಿದೆ. ||೨೦||

ನಿನ್ನ ಕಪ್ಪಾದ ಜಡೆಯು ಗಾಳಿಯಿಂದ ತರಲ್ಪಟ್ಟ ಕಾಡುಹೂಗಳ ಪರಾಗದಿಂದ ಕೂಡಿ ಬಿಳುಪಾಗಿ ಕಾಣುತ್ತಿರುವದು. ಅಲ್ಲದೇ ಸದಾ ತಪೋನಿರತಳಾಗಿದ್ದ ನಿನ್ನ ಜಡೆಗಳೆಲ್ಲಾ ಒತ್ತೆಕಟ್ಟಿಕೊಂಡು ಮಂಕಾಗಿ ಕಾಣುತ್ತಿವೆ. ||೨೧||

ಪಾರ್ವತಿಯೇ, ಆಭರಣಗಳಿಲ್ಲದೇ ಇರುವ ಈ ನಿನ್ನ ಜಡೆಯು ಈಗತಾನೇ ಹುತ್ತಹೊಳಗಿನಿಂದ ಬಂದ ಸರ್ಪದಂತೆ ಮಾಸಲು ಬಣ್ಣವಾಗಿ ತೋರುತ್ತಿರುವುದು. ||೨೨||

ರತ್ನಕುಂಡಲಸಂಕ್ಲೃಪ್ತೇ ಶ್ರವಣೇ ತೇ ವಿಲಾಸಿನಿ ।
ರುದ್ರಾಕ್ಷಮೌಕ್ತಿಜಾಯುಕ್ತಕುಂಡಲಾಭ್ಯಾಂ ವಿಭೂಷಿತೇ ॥೨೩॥

ತಪಸಾ ಕಲ್ಪಕೇನಾಪಿ ತಪೋಮೂರ್ತಿರಿವ ರಾಜಸೇ ।
ದ್ವಿಜರಾಜಸಮಾನಾಸ್ಯೇ ಸುನಸೇ ತೇಽದ್ಯ ನಾಸಿಕಾ ॥೨೪॥

ರತ್ನಕ್ಲೃಪ್ತಮಹಾಮುಕ್ತವಿಹೀನಾಪಿ ವಿಶೋಭತೇ ।
ತ್ವದ್ವಕ್ತ್ರಮಂಡಲಂ ದೇವಿ ಸಿಂಧೂರತಿಲಕಾನ್ವಿತಂ ॥೨೫॥

ಭಸ್ಮತ್ರಿಪುಂಡ್ರತೋದ್ಭಾತಿ ವದನಂ ತಿಲಕೋಜ್ಝಿತಂ ।
ತ್ವತ್ಕಣ್ಠಮಂಡಲಂ ಮುಕ್ತಾಸರಹೀನಮಪಿ ಪ್ರಿಯೇ ॥೨೬॥

ರುದ್ರಾಕ್ಷಮಾಲಾಜಾಲೈಶ್ಚ ನಿತರಾಮಪಿ ಭಾಸತೇ ।
ಅಪರ್ಣೇ ಪರ್ಣವಸನೈಃ ಕಥಂ ಕ್ಲಿಷ್ಟಾ ಹಿಮಾಗಮೇ ॥೨೭॥

ಪ್ರಚಂಡಸೂರ್ಯಕಿರಣೈಸ್ತೀಮಜ್ಜೈರಪಿ ಶಂಕರಿ ।
ಋತುಭಿರ್ವಾತವರ್ಷೈಶ್ಚ ಪರಿಕ್ಲಿಷ್ಟಾಸಿ ಶೈಲಜೇ ॥೨೮॥

---

ಹಿಂದೆ ರತ್ನಕುಂಡಲಗಳಿಂದ ಅಲಂಕರಿಸಲ್ಪಡುತ್ತಿದ್ದ ಈ ನಿನ್ನ ಕಿವಿಗಳು, ಈಗ ರುದ್ರಾಕ್ಷಿಯಿಂದ ಮಾಡಿದ ಕುಂಡಲಗಳಿಂದ ಕೂಡಿವೆ. ||೨೩||

ಚಂದ್ರಮುಖಿಯಾದ ದೇವಿಯೇ, ಕಲ್ಪಪರ್ಯಂತ ತಪಸ್ಸನ್ನಾಚರಿಸಿದರೂ ನೀನು ಸಾಕ್ಷಾತ್ತಪೋಮೂರ್ತಿಯಂತೆಯೇ ಪ್ರಕಾಶಿಸುತ್ತಿರುವೆ. ಶೋಭನವಾದ ಮೂಗುಳ್ಳ ಅಂಬಿಕೆಯೇ! ನಿನ್ನ ಈ ನಾಸಿಕವು ರತ್ನಗಳಿಂದ ಆವೃತವಾದ ಮುತ್ತಿನ ಮೂಗುತಿಯಿಲ್ಲದಿದ್ದರೂ ಮೊದಲಿಗಿಂತಲೂ ಹೆಚ್ಚಾಗಿಯೇ ಹೊಳೆಯುತ್ತಿದೆ. ||೨೪||

ದೇವಿ! ಹಿಂದೆ ಸಿಂಧೂರತಿಲಕದಿಂದ ಶೋಭಿಸುತ್ತಿದ್ದ ಈ ನಿನ್ನ ಮುಖವು ಈಗ ತಿಲಕವೇ ಇಲ್ಲದೇ ಕೇವಲ ಭಸ್ಮತ್ರಿಪುಂಡ್ರಗಳಿಂದಲೇ ಬೆಳಗುತ್ತಿರುವುದು. ||೨೫||

ಪ್ರಿಯೇ! ಹಿಂದಿನಂತೆ ಮುಕ್ತಾಹಾರವಿಲ್ಲದೆ ಕೇವಲ ರುದ್ರಾಕ್ಷಮಾಲೆಯನ್ನು ಧರಿಸಿದ್ದರೂ, ಈ ನಿನ್ನ ಕುತ್ತಿಗೆಯು ಅತಿಶಯವಾಗಿಯೇ ಹೊಳೆಯುತ್ತಿರುವುದು. ||೨೬||

ಅಪರ್ಣೆಯೇ, ಚಳಿಗಾಲದಲ್ಲಿ ಕೇವಲ ಎಲೆಗಳನ್ನೇ ಬಟ್ಟೆಗಳಂತೆ ಧರಿಸಿ ಹೇಗೆ ಹಿಮಬಾಧೆಯನ್ನು ಅನುಭವಿಸಿದೆ? ಶಂಕರಿ! ಹಗಲೆಲ್ಲಾ ಪ್ರಚಂಡಸೂರ್ಯನ

ಬಿಲ್ವಾರ್ಜನೇನ ತೇ ಪಾಣಿಃ ಕಿಣಿತಃ ಕಂಟಕೇನ ಹಿ ।
ತ್ವತ್ಪಾಣಿಸ್ಪರ್ಶನೇನಾದ್ಯ ಧನ್ಯಾ ವೃಕ್ಷಾಸ್ಸುಪುಷ್ಪಿತಾಃ ॥೨೯॥

ತ್ವತ್ಪಾದಪಂಕಜಸ್ಪರ್ಶೈಃ ಕೈಲಾಸೋಽಯಂ ನಗೇಂದ್ರಜೇ ।
ಧನ್ಯಧುರ್ಯತ್ವಮಾಪನ್ನೋ ದೇವೈರ್ಮಾನ್ಯಸ್ಸದಾ ಗಿರಿಃ ॥೩೦॥

ತವಾಂಗಮಿದಮತ್ಯಂತಂ ಸುಕುಮಾರತರಂ ಶಿವೇ ।
ತಪಸಾತೀವ ಸಂತಪ್ತಂ ತಪಸಾಮೇಕನಾಯಿಕೇ ॥೩೧॥

ಬಿಂಬೋಪಮಾಧರೇಣಾದ್ಯ ತ್ವಯಾ ಜಿಹ್ವಾಗ್ರತೋ ಮನು ।
ಪಂಚಾಕ್ಷರೀ ಸದಾ ಜಪ್ತಾ ರುದ್ರೋಽಪ್ಯಾವರ್ತಿತಸ್ಸದಾ ॥೩೨॥

---

ತೀಕ್ಷ್ಣಗಳಾದ ಕಿರಣಗಳಿಂದಲೂ ರಾತ್ರಿವೇಳೆ ಚಂದ್ರನ ಶೀತಕಿರಣಗಳಿಂದಲೂ ಬಹುವಾಗಿ ಪೀಡಿತಳಾಗಿರುವೆ. ನಗರಾಜಪುತ್ರಿ ! ಮಳೆಗಾಳಿಗಳ ಹೊಡೆತಕ್ಕೆ ಸಿಕ್ಕಿ ಅತಿಯಾಗಿ ಬಳಲಿರುವೆಯಲ್ಲವೆ ! ॥೨೭-೨೮॥

ದೇವಿ ! ಬಿಲ್ವಪತ್ರೆಯನ್ನು ತರುವುದಕ್ಕೆ ಹೋಗಿ ಆ ಮುಳ್ಳುಗಳಿಂದ ನಿನ್ನ ಕೈ ಗಾಯವಾಗಿ ಗುರುತಾಗಿದೆ. ನಿನ್ನ ಹಸ್ತಸ್ಪರ್ಶದಿಂದ ಗಿಡಗಳೆಲ್ಲವೂ ಧನ್ಯಗಳೆನಿಸಿ ಪುಷ್ಪಭರಿತಗಳಾದುವಲ್ಲವೆ ! ॥೨೯॥

ಪರ್ವತರಾಜಕುಮಾರಿಯೇ, ನಿನ್ನ ಪಾದಕಮಲಸ್ಪರ್ಶವು ಈ ಕೈಲಾಸ ಪರ್ವತಕ್ಕೆ ಒಂದು ಅಸಾಧಾರಣವಾದ ಧನ್ಯತೆ (ಶ್ರೇಷ್ಠತೆ) ಯನ್ನುಂಟುಮಾಡಿತು. ಅಲ್ಲದೆ ಸಕಲ ದೇವತೆಗಳೂ ಈ ಪರ್ವತವನ್ನು ಸದಾ ಗೌರವಿಸುವಂತೆ ಮಾಡಿರುವುದು. ॥೩೦॥

ಶಿವೇ ! ಅತ್ಯಂತ ಸುಕುಮಾರವಾದ ಈ ನಿನ್ನ ಶರೀರವು ತಪಸ್ಸಿನಿಂದ ತುಂಬಾ ಬಳಲಿರುವುದು. ಇದರಿಂದಲೇ ನೀನು ತಪಸ್ವಿಗಳಿಗೆಲ್ಲಾ ನಾಯಕಿಯಂತಾಗಿರುವೆ. ॥೩೧॥

ತೊಂಡೆಯ ಹಣ್ಣಿನಂತೆ ತುಟಿಯುಳ್ಳ ನೀನು ಯಾವಾಗಲೂ ನಾಲಿಗೆಯ ತುದಿಯಲ್ಲಿ ಶಿವಪಂಚಾಕ್ಷರೀ ಮಂತ್ರವನ್ನೂ, ರುದ್ರಾಧ್ಯಾಯವನ್ನೂ ಎಡಬಿಡದೆ ಜಪಮಾಡಿರುವೆ. ॥೩೨॥

ತ್ವಯಾ ಸ ಧನ್ಯೋ ಮನುರಾಡ್ರುದ್ರೋ ವೇದೇಷು ಭಾಸುರಃ ।
ತವ ಕ್ರೀಡೇಯಮತುಲಾ ಲೋಕಶಿಕ್ಷಾರ್ಥಮಂಬಿಕೇ ॥೩೩॥

ತ್ಯಕ್ತ್ವಾ ತ್ವಯಾ ರಾಙ್ಕವಾದಿವರಾಸ್ತರಣಸಂತತಿಃ ।
ಮಂಚೇಷು ರತ್ನಸೌಧೇಷು ದೀಪಧೂಪೋದ್ಯತೇಷು ಚ ॥೩೪॥

ಶೋಭಿತೇಷು ಮಣಿಪ್ರೋದ್ಯತ್ಸೌಧವಾತಾಯನಸ್ಥಿತಾ ।
ನಗಾಗ್ರಮೌಲೌ ಕಠಿನಭೂಭಸ್ಮಸ್ಥಾನಗಾ ಸದಾ ॥೩೫॥

ಮಾಲೂರಲೂನಪತ್ರೈಶ್ಚ ವಾತಪೋತಪ್ರಪಾತಿತೈಃ ।
ಪರಿಕ್ಲಿಷ್ಟಾಸಿ ನಿತರಾಂ ತಾಪಸೀವ ನಗೇಂದ್ರಜೇ ।೩೬॥

ತ್ವಯಾ ನ ವಿದಿತಂ ಕಿಂಚಿತ್ತ್ರಿಷು ಲೋಕೇಷು (ವಿಶ್ರುತಂ) ವಿದ್ಯತೇ ।
ತ್ವಮೇವ ತಪಸಾಂ ದೇವಿ ಫಲದಾನೋನ್ಮುಖೀ ಸದಾ ॥೩೭॥

---

ಅಂಬಿಕೆಯೇ, ಸಕಲ ಮಂತ್ರಗಳಲ್ಲಿಯೂ ಶ್ರೇಷ್ಠವೆನಿಸಿ ವಿರಾಜಿಸುತ್ತಿರುವ ರುದ್ರಾಧ್ಯಾಯವೂ ನಿನ್ನಿಂದ ಜಪಮಾಡಲ್ಪಟ್ಟು ಧನ್ಯವೆನಿಸಿತು. ದೇವಿ ! ಈ ನಿನ್ನ ತಪಶ್ಚರ್ಯಾರೂಪವಾದ ಕ್ರೀಡೆಯೆಲ್ಲವೂ ಲೋಕಶಿಕ್ಷಣಕ್ಕಾಗಿಯೇ ಅಲ್ಲವೆ ! ಎಲ್ಲರೂ ತನ್ನಂತೆಯೇ ಸಕಲ ಭೋಗಗಳನ್ನೂ ತೊರೆದು ಭಕ್ತಿಯಿಂದ ತಪಸ್ಸುಮಾಡಲಿ ; ಎನ್ನುವಂತೆ ತೋರುತ್ತಿರುವುದು. ॥೩೩॥

ನಗರಾಜಪುತ್ರಿಯೇ, ಚಿತ್ರವಿಚಿತ್ರವಾದ ಧೂಪದೀಪಗಳಿಂದಲೂ, ನಾನಾ ವಿಧವಾದ ಮಂಚಗಳಿಂದಲೂ, ಶೋಭಿಸುತ್ತಿರುವ ರತ್ನಮಯವಾದ ಉಪ್ಪರಿಗೆ ಮನೆಗಳಲ್ಲಿ ಮಣಿಮುಕ್ತಾಮಯವಾದ ವಾತಾಯನಗಳಲ್ಲಿ ನಿಂತು, ಉತ್ತಮವಾದ ಶಾಲು ಮೊದಲಾದ ಶ್ರೇಷ್ಠವಾದ ಬಟ್ಟೆಗಳನ್ನೇ ಧರಿಸುತ್ತಿದ್ದ ನೀನು, ಈಗ ಅವೆಲ್ಲವನ್ನೂ ದೂರಮಾಡಿದೆಯಲ್ಲವೆ ! ಪರ್ವತದ ಶಿಖರದಲ್ಲಿ ಕಠಿನವಾದ ಬಂಡೆಗಳ ಮೇಲೂ, ಭಸ್ಮಾಸನದಮೇಲೂ ಕುಳಿತು, ಗಾಳಿಯ ಹೊಡೆತದಿಂದಲೂ, ಅಥವಾ ಕೈಯಿಂದ ಕುಯ್ಯುವಿಕೆಯಿಂದಲೂ ಲಬ್ಧವಾದ ಬಿಲ್ವಪತ್ರೆಗಳನ್ನೆ ವಸ್ತ್ರವನ್ನಾಗಿ ಮಾಡಿಕೊಂಡು ತಪಸ್ಸುಮಾಡಿ ನೀನು ತುಂಬಾ ಬಳಲಿರುವೆ. ನಿನ್ನನ್ನು ನೋಡಿದರೆ ನಿಜವಾದ ತಾಪಸಸ್ತ್ರೀಯಂತೆಯೇ ತೋರುತ್ತಿರುವೆ. ॥೩೪-೩೫-೩೬॥

ದೇವಿ ! ನಿನಗೆ ತಿಳಿಯದೇ ಇರುವ ವಿಷಯವು ಮೂರುಲೋಕಗಳಲ್ಲಿಯೂ

ತ್ವತ್ಪಾದಾಂಬುರುಹಧ್ಯಾನೈಸ್ಸರ್ವೈಃ ಪ್ರಾಪಿ ಮನೋರಥಃ ।
ಬ್ರಹ್ಮವಿಷ್ಣ್ವಾದಿವಿಬುಧೈಃ ಪ್ರಮಥೈರ್ಮುನಿಭಿಶ್ಶಿವೇ ॥೩೮॥

ತ್ವಯಾ ತತಮಿದಂ ವಿಶ್ವಂ ತ್ವತ್ಕಟಾಕ್ಷೈಕಭಾಸುರಂ ।
ಸದೇವಾಸುರಮುತ್ಕೃಷ್ಟಂ ನಾನಾವನನಗಾಶ್ರಯಂ ॥೩೯॥

ಲೋಕಜಾಲಮಿದಂ ಭದ್ರೇ ತ್ವಯಾ ಸೃಷ್ಟಂ ಸನಾತನೇ ।
ತ್ವಯೈವ ಪಾಲಿತಂ ಚಾಂತೇ ತ್ವಯ್ಯೇವ ಲಯಮೇಷ್ಯತಿ ॥೪೦॥

ತ್ವತ್ಕೃಪಾಪಾಂಗಸಂಗೇನ ಸರ್ವೇಷಾಮಣಿಮಾದಯಃ ।
ಸಿಧ್ಯಂತಿ ಸಿದ್ಧಯಶ್ಚಾಷ್ಟೌ ತೇನ ಧನ್ಯಾ ಗುಣಾಧಿಕಾಃ ॥೪೧॥

---

ಇಲ್ಲ. ನೀನು ಸರ್ವಜ್ಞಳು. ನೀನೇ ತಪಸ್ಸುಗಳಿಗೆಲ್ಲಾ ಫಲಗಳನ್ನು ಕೊಡುವವಳಾಗಿರುವೆ. ||೩೭||

ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳೂ ಪ್ರಮಥಗಣಗಳೂ ಮತ್ತೂ ಮುನಿಗಳೂ, ನಿನ್ನ ಪಾದಕಮಲಧ್ಯಾನದಿಂದಲೇ ಸಕಲ ಇಷ್ಟಾರ್ಥಗಳನ್ನೂ ಹೊಂದುತ್ತಿರುವರು. ||೩೮||

ದೇವಿ! ದೇವದಾನವರಿಂದಲೂ, ನಾನಾ ಕಾಡುಗಳು, ಬೆಟ್ಟ, ಗುಡ್ಡ, ಮುಂತಾದುವುಗಳಿಂದಲೂ, ಆಶ್ರಯಿಸಲ್ಪಟ್ಟಿರುವ ಈ ಪ್ರಪಂಚವೆಲ್ಲವೂ ನಿನ್ನಿಂದಲೇ ವ್ಯಾಪಿಸಲ್ಪಟ್ಟು ನಿನ್ನ ಕಟಾಕ್ಷಮಾತ್ರದಿಂದ ಪ್ರಕಾಶಿಸುತ್ತಿರುವುದಲ್ಲವೆ! ||೩೯||

ಮಂಗಳಾಂಗಿಯೇ, ಈ ಲೋಕಸಮೂಹವೆಲ್ಲವೂ ನಿನ್ನಿಂದಲೇ ಸೃಷ್ಟಿ ಮಾಡಲ್ಪಟ್ಟು ನಿನ್ನಿಂದಲೇ ರಕ್ಷಣೆಹೊಂದಿ ಕೊನೆಗೆ ನಿನ್ನಲ್ಲಿಯೇ ಲೀನವಾಗುತ್ತಿರುವುದು. ||೪೦||

ದೇವಿಯೇ, ಎಲ್ಲರಿಗೂ ನಿನ್ನ ದಯಾಪೂರ್ವಕವಾದ ಕಡೆಗಣ್ಣಿನ ನೋಟದಿಂದಲೇ ಅಣಿಮಾದ್ಯಷ್ಟಸಿದ್ಧಿಗಳೂ ಸಿದ್ಧಿಸುವುವು. ಈ ಸಿದ್ಧಿಗಳಿಂದಲೇ ಭಕ್ತರಾದ ಪುರುಷರು ಅಧಿಕ ಗುಣಶಾಲಿಗಳೆನಿಸಿ ಧನ್ಯರೆನಿಸುವರು. ||೪೧||

ತ ಏವ ಸರ್ವಭಾಗ್ಯಾನಾಮಾಕಾರಾಸ್ತೇ ಸದೋಜ್ಜ್ವಲಾಃ ।
ತ ಏವ ಸುಕೃತಾಂ ಸಂಘೈಃ ಪರೀತಾಶ್ಶ್ರೀಯುತಾಶ್ಚ ತೇ ॥೪೨॥

ಯೇ ವೈ ತ್ವದೀಕ್ಷಣೈರ್ಹೀನಾ ನಿರ್ಭಾಗ್ಯಾಃ ಪಾಪವತ್ತರಾಃ ।
ವಿಶಂತಿ ನರಕಂ ಘೋರಂ ಸದಾ ದುಃಖೈಕಭಾಗಿನಃ ॥೪೩॥

ತವೈವ ನಿಮಿಷೋನ್ಮೇಷೌ ಜಗತಾಂ ಪ್ರಲಯೋದಯೌ ।
ತ್ವಂ ಶ್ರುತಿಃ ಪರಮಾ ದೇವಿ ತ್ವಂ ವೈ ಸ್ಮೃತಿರನುತ್ತಮಾ ॥೪೪॥

ತ್ವಂ ಪೃಥ್ವೀ ಸಲಿಲಂ ವ್ಯೋಮ ತ್ವಂ ವಾಯುಸ್ತ್ವಂ ಏವ ಚ ।
ಘನದ್ರವ್ಯವ್ಯಾಪಕತ್ವಂ ಚಲನಂ ದೀಪ್ತಯಸ್ಸದಾ ॥೪೫॥

ಭೂತೇಷು ಶಕ್ತಿರಸಿ ವೈ ತ್ವಯಾ ತತಮಿದಂ ಜಗತ್ ।
ತ್ವಚ್ಛಕ್ತಿಹೀನಂ ಚ ಸದಾ ಜಡತಾಮುಪಗಚ್ಛತಿ ॥೪೬॥

---

ನಿನ್ನ ಕೃಪಾಕಟಾಕ್ಷಕ್ಕೆ ಪಾತ್ರರಾದವರೇ ಸಕಲ ಭಾಗ್ಯಗಳಿಗೂ ಅಧಿಕಾರಿಗಳೆನಿಸಿ ಯಾವಾಗಲೂ ಪ್ರಕಾಶಿಸುವರು. ಮತ್ತು ಅವರೇ ಅನಂತಪುಣ್ಯವನ್ನೂ, ಐಶ್ವರ್ಯವನ್ನೂ ಪಡೆಯಲು ಅರ್ಹರು. ॥೪೨॥

ನಿನ್ನ ದೃಷ್ಟಿಗೆ ಪಾತ್ರರಾಗದವರು ನಿರ್ಭಾಗ್ಯರು, ಮತ್ತು ಕಡುಪಾಪಿಗಳು. ಅವರು ಸದಾ ದುಃಖಶೀಲರಾಗಿ ಕೊನೆಗೆ ಭಯಂಕರವಾದ ನರಕವನ್ನು ಹೊಂದುವರು. ॥೪೩॥

ದೇವಿ! ನಿನ್ನ ನಿಮೇಷೋನ್ಮೇಷಗಳೇ (ರೆಪ್ಪೆ ಮುಚ್ಚಿ ತೆಗೆಯುವುದೇ) ಈ ಪ್ರಪಂಚದ ಪ್ರಲಯ ಮತ್ತು ಸೃಷ್ಟಿ. ನೀನೇ. ಶ್ರೇಷ್ಠವಾದ ಶ್ರುತಿಯು; ಉತ್ತಮವಾದ ಸ್ಮೃತಿಯೂ ನೀನೇ ಆಗಿರುವೆ. ॥೪೪॥

ಪೃಥಿವೀ, ಜಲ, ಆಕಾಶ, ವಾಯು, ತೇಜಸ್ಸು ಇವೆಲ್ಲವೂ ನಿನ್ನ ಸ್ವರೂಪವೇ ಆಗಿರುವುವು. ಮೂರ್ತ ದ್ರವ್ಯಗಳಲ್ಲಿ ಪ್ರಸರಿಸುವ ಶಕ್ತಿಯೂ, ಚಲಿಸುವ ಶಕ್ತಿಯೂ, ಪ್ರಕಾಶಿಸುವ ಶಕ್ತಿಯೂ ನೀನೇ ಆಗಿರುವೆ. ॥೪೫॥

ಪೃಥಿವ್ಯಪ್ತೇಜೋವಾಯುರಾಕಾಶರೂಪವಾದ ಪಂಚಮಹಾಭೂತಗಳಲ್ಲಿ ಅಡಗಿರುವ ಶಕ್ತಿಯೂ ನೀನೇ. ಈ ಪ್ರಪಂಚವೆಲ್ಲವೂ ನಿನ್ನಿಂದಲೇ ವ್ಯಾಪಿಸಲ್ಪಟ್ಟಿರು

ಸೂರ್ಯೇ ಮರೀಚಿಕಾಶಕ್ತಿಶ್ಶೀತಭಾನೌ ಹಿ ಶೀತಜಾ ।
ದಾಹಕತ್ವಂ ತಥಾ ವಹ್ನೌ ಪವನೇ ಚಲನಾತ್ಮಿಕಾ ॥೪೭॥

ಸಂಪಚ್ಛಕ್ತಿಸ್ತಥೈವೇಂದ್ರೇ ವರುಣೇಽಪಾಂಪತಿತ್ವತಾ ।
ಈಶಾನೇ ವಾ ಮಹಾಶಕ್ತಿಃ ಪಾಲಿನೀತ್ವಂ ಜನಾರ್ದನೇ ॥೪೮॥

ವಿಧೌ ಹಿ ಸರ್ಜಕೀಶಕ್ತೀರುದ್ರೇ ಶಕ್ತಿಸ್ತಿರೋಧಕೃತ್ ।
ಸದಾಶಿವೇಽನುಗ್ರಹದಾ ತ್ವತ್ತ ಏವಾಸ್ಮಿ ಶಕ್ತಿಮಾನ್ ॥೪೯॥

ಅಹಮಪ್ಯಂತತೋ ದೇವಿ ಸರ್ವಂ ತ್ವಚ್ಛಕ್ತಿವೈಭವಂ ।
ಯೇಷು ಯೇಷು ಚ ಭೂತೇಷು ಯಾ ಯಾ ಶಕ್ತಿರನುತ್ತಮಾ ॥೫೦॥

---

ವುದು. ನಿನ್ನ ಶಕ್ತಿಯಿಂದ ರಹಿತವಾದ ಈ ಪ್ರಪಂಚವು ಕೇವಲ ಜಡಸ್ವರೂಪವನ್ನು ಹೊಂದುವುದು. ॥೪೬॥

ಸೂರ್ಯನಲ್ಲಿರುವ ಮರೀಚಿಕಾಶಕ್ತಿಯೂ (ಬೆಳಕನ್ನು ಕೊಡುವ ಶಕ್ತಿಯೂ) ಚಂದ್ರನಲ್ಲಿರುವ ಶೈತ್ಯೋತ್ಪಾದನ ಶಕ್ತಿಯೂ, ಅಗ್ನಿಯಲ್ಲಿನ ಸುಡುವ ಶಕ್ತಿಯೂ, ವಾಯುವಿನ ಚಲನಾತ್ಮಕಶಕ್ತಿಯೂ ನಿನ್ನದೇ ಆಗಿರುವುದು. ॥೪೬॥

ಇಂದ್ರನಲ್ಲಿರುವ ಐಶ್ವರ್ಯವೂ, ವರುಣನ ಜಲಾಧಿಪತ್ಯವೂ, ಈಶಾನನ ಮಹಾಶಕ್ತಿಯೂ, ಮಹಾವಿಷ್ಣುವಿನ ಜಗದ್ರಕ್ಷಣಶಕ್ತಿಯೂ ನೀನೇ ಅಲ್ಲವೆ! ॥೪೮॥

ಬ್ರಹ್ಮನಲ್ಲಿರುವ ಜಗತ್ಸೃಷ್ಟಿಶಕ್ತಿಯೂ, ರುದ್ರನ ಜಗತ್ಸಂಹಾರಶಕ್ತಿಯೂ, ಸದಾಶಿವನ ಅನುಗ್ರಹಶಕ್ತಿಯೂ ನಿನ್ನದೇ ಆಗಿರುವುದು. ದೇವಿ, ನಾನೂ ಸಹ ನಿನ್ನಿಂದಲೇ ಶಕ್ತಿವಂತನೆನಿಸಿರುವೆನು. ॥೪೯॥

ದೇವಿ, ನಾನೂ ನಿನ್ನ ಶಕ್ತಿವೈಭವವೇ ಎಂದು ತಿಳಿ. ಯಾವ ಯಾವ ಭೂತಗಳಲ್ಲಿ ಶ್ರೇಷ್ಠವಾದ ಶಕ್ತಿಯಿರುವುದೋ ಅವೆಲ್ಲವೂ ಸರ್ವವ್ಯಾಪಕಳಾದ ನಿನ್ನದೇ ಆಗಿರುವುದು. ಅನಾದಿಯಾಗಿರುವ ನೀನು ಸಕಲ ಶಕ್ತಿಗಳಿಗೂ ಆಧಾರ ಭೂತಳಾಗಿರುವೆ. ॥೫೦॥

ಸರ್ವಾಸಿ ಸರ್ವಶಕ್ತೀನಾಮಾಧಾರಾ ತ್ವಂ ಸನಾತನೀ ।
ಶಾಂತಿಃ ಪುಷ್ಟಿರ್ಧೃತಿಸ್ಸ್ವಾಹಾ ಸ್ವಧಾ ತ್ವಂ ಪರಮೇಶ್ವರಿ ॥೫೧॥

ತ್ವಯೈವಂ ಸೃಜ್ಯತೇ ವಿಶ್ವಂ ತ್ವಯಾ ಪಾಲಿತಮೇವ ಹಿ ।
ತ್ವಯ್ಯೇವಾಂತೇ ಪ್ರವಿಶತಿ ತ್ವಯಾ ಸರ್ವಮಿದಂ ಸದಾ ॥೫೨॥

ತ್ವತ್ಕೃಪಾಪಾಂಗತೋ ಹೀನಮಶಕ್ತಂ ಭಾತಿ ಮೇ ಜಗತ್ ।
ಮಾಯಾ ತ್ವಂ ತವ ಮಾಯೋತ್ಥಾ ಲೋಕಾಸ್ಸರ್ವೇ ಚರಾಚರಾಃ॥೫೩॥

ಬ್ರಹ್ಮಾಂಡಕೋಟಯೋ ದೇವಿ ವಿಧಿವಿಷ್ಣುಮಹೇಶ್ವರಾಃ ।
ಇಂದ್ರಾಸ್ಸಮನವೋ ವಿಪ್ರಾಃ ಪಿತರೋ ದೇವತಾಗಣಾಃ ॥೫೪॥

ಧ್ರುವಾಧಾರಾ ಗ್ರಹಾಸ್ಸರ್ವೇ ಸ್ವರ್ಗನಾರಕಸಂಗತಿಃ ।
ದೇವತಿರ್ಯಜ್ಮನುಷ್ಯಾದ್ಯಾ ಯಾತಾಯಾತಪರಾಯಣಾಃ ॥೫೫॥

---

ಪರಮೇಶ್ವರಿಯೇ, ಶಾಂತಿ, ಪುಷ್ಟಿ, ಧೃತಿ, ಸ್ವಾಹಾ, ಸ್ವಧಾ, ಈ ಶಕ್ತಿದೇವತೆಗಳೆಲ್ಲರೂ ನಿನ್ನ ಸ್ವರೂಪಗಳೇ ಆಗಿರುವುವು. ಈ ಪ್ರಪಂಚವೆಲ್ಲವೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟು, ನಿನ್ನ ರಕ್ಷಣೆಯನ್ನೇ ಪಡೆದು, ಕೊನೆಗೆ ನಿನ್ನಲ್ಲೇ ಐಕ್ಯವಾಗುತ್ತಿರುವುದು. ||೫೧-೫೨||

ನಿನ್ನ ಕೃಪಾಪೂರ್ವಕವಾದ ಅಪಾಂಗದೃಷ್ಟಿಯು ಈ ಪ್ರಪಂಚದ ಮೇಲೆ ಬೀಳದಿದ್ದರೆ, ಈ ಜಗತ್ತು ಯಾವ ಕಾರ್ಯದಲ್ಲೂ ಸಮರ್ಥವೆನಿಸಲಾರದು. ದೇವೀ, ನೀನು ಮಾಯಾಸ್ವರೂಪಿಣಿಯು ; ಸ್ಥಾವರಜಂಗಮಾತ್ಮಕವಾದ ಈ ಲೋಕವೆಲ್ಲವೂ ನಿನ್ನ ಮಾಯೆಯಿಂದಲೇ ಉಂಟಾಗಿರುವುದು. ||೫೩||

ದೇವಿ! ಈ ಬ್ರಹ್ಮಾಂಡದಲ್ಲಿ ಅಡಗಿರುವ ಬ್ರಹ್ಮವಿಷ್ಣುಮಹೇಶ್ವರರೂ, ಮನುಸಮೇತರಾದ ಇಂದ್ರರೂ, ವಿಪ್ರರೂ, ಪಿತೃದೇವತೆಗಳೂ, ದೇವತಾಸಮೂಹವೂ ಧ್ರುವಮಂಡಲವನ್ನೇ ಆಧಾರವನ್ನಾಗಿ ಹೊಂದಿರುವ ಆದಿತ್ಯಾದಿ ನವಗ್ರಹಗಳೂ, ಸ್ವರ್ಗ, ನರಕಲೋಕಗಳ ಸಮೂಹವೂ, ದೇವತೆಗಳೂ, ತಿರ್ಯಕ್ಪ್ರಾಣಿಗಳೂ, ಮನುಷ್ಯರೇ ಮುಂತಾದವರೆಲ್ಲರೂ ನಿನ್ನ ಮಾಯೆಗೆ ಸಿಲುಕಿರುವವರೇ. ಅವರು ನೂಲುತೆಗೆಯುವ ರಾಟೆಯಲ್ಲಿ, ನೂಲು ಒಂದುಸಾರಿ ಕೆಳಗೆ ಬಂದು ನೂಲು ಹುರಿಯಾಗುತ್ತಲೂ ಪುನಃ ಮೇಲಕ್ಕೆ ರಾಟೆ ಹೋಗುವಹಾಗೆ, ತಮ್ಮ ಕರ್ಮಗಳು ಸವೆದ

**ಕಾರ್ಪಾಸಚಕ್ರಜಾಲಾತ್ತಸೂತ್ರಾಧೋರ್ಧ್ವಗತಾ ಇವ ।**
**ತೈಲಿಕಾಗಾರವೃಷವನ್ಮೇರುಮೌಲೌ ಮಹರ್ಷಯಃ ॥೫೬॥**

**ಭ್ರಮಂತಿ ಮಾಯಯಾ ತೇಽದ್ಯ ಹ್ಯನಿತ್ಯೇ ನಿತ್ಯಮಾನಿನಃ ।**
**ಸುಖದುಃಖಸಮಾಸಕ್ತಾಃ ಕಾಮಕ್ರೋಧಪರಾಯಣಾಃ ॥೫೭॥**

**ಮೋಹಾಂಧಿತಮಿದಂ ವಿಶ್ವಂ ಧರ್ಮಾಧರ್ಮಾದಿಪಾಶಕೈಃ ।**
**ವರ್ಣಾಶ್ರಮಮಹಾದುಃಖಧರ್ಮೈರತ್ಯಂತಮೋಹಿತಂ ॥೫೮॥**

**ಆತ್ಮಾನಂ ಮಾಮವಿಜ್ಞಾಯ ಜಾತಿದೇಹಾಭಿಮಾನತಃ ।**
**ಆಹಾರಭಯನಿದ್ರಾದಿಯೋನಿಭೋಗಾದಿದೂಷಿತಂ ॥೫೯॥**

**ಜನ್ಮನಾಶೈಕಬಹುಲಂ ಷಡೂರ್ಮಿವಿಕಲಂ ಜಗತ್ ।**
**ದೇವತಿರ್ಯಕ್ಸುರನರತಿರ್ಯಗತ್ಯಂತದುಃಖಿತಂ ॥೬೦॥**

---

ಹಾಗೆಲ್ಲಾ ಊರ್ಧ್ವಲೋಕಗಳನ್ನು ಪಡೆದು ಪುನಃ ಆ ಪುಣ್ಯಕರ್ಮಗಳನ್ನು ಅನುಭವಿಸಿದನಂತರ ಅಧೋಲೋಕಾದಿಗಳನ್ನು ಪಡೆಯುತ್ತಿರುವರು. ॥೫೪-೫೫॥

ಮೇರುಪರ್ವತದ ಶಿಖರದಲ್ಲಿ ತಪಸ್ಸುಮಾಡುತ್ತಿರುವ ಮಹರ್ಷಿಗಳೆಲ್ಲರೂ ನಿನ್ನ ಮಾಯೆಗೊಳಗಾಗಿ, ಗಾಣಿಗನ ಮನೆಯ ಎತ್ತಿನಂತೆ ಅನಿತ್ಯವಾದ ಈ ಪ್ರಪಂಚವನ್ನು ನಿತ್ಯವೆಂದು ಅಭಿಮಾನ ಹೊಂದಿ, ಸುಖದುಃಖಗಳ ಹೊಡೆತಕ್ಕೆ ಸಿಕ್ಕಿ ಕಾಮಕ್ರೋಧಪರವಶರಾಗಿ ಅಲೆಯುತ್ತಿರುವರು. ॥೫೭॥

ದೇವಿಯೇ, ಈ ಜಗತ್ತೆಲ್ಲವೂ ಧರ್ಮ ಮತ್ತು ಅಧರ್ಮಗಳೆಂಬ ಪಾಶಕ್ಕೆ ಒಳಗಾಗಿ ಅಜ್ಞಾನವೆಂಬ ಅಂಧಕಾರದಿಂದ ಕವಿದುಹೋಗಿರುವುದು. ಅಜ್ಞಾನಾವೃತವಾದ ಈ ಜಗತ್ತು (ಪ್ರಪಂಚವು) ನಿನ್ನ ಮಾಯೆಯಿಂದ ವರ್ಣ (ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣಗಳು) ಆಶ್ರಮ (ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ ಈ ನಾಲ್ಕು ಆಶ್ರಮಗಳು) ಇವುಗಳಿಗೆ ಸಿಕ್ಕಿ ಮಹಾಕಷ್ಟಸಾಧ್ಯಗಳಾದ ಧರ್ಮಗಳನ್ನಾಚರಿಸಲಾರದೇ, ಅಹಂಕಾರವಿಶಿಷ್ಟವಾಗಿರುವುದು. ॥೫೮॥

ದೇವತೆಗಳು, ಮನುಷ್ಯರು ಮತ್ತು ತಿರ್ಯಕ್ಪ್ರಾಣಿಗಳು ಇವುಗಳಿಂದ ಪೂರ್ಣವಾದ ಈ ಜಗತ್ತು ತನ್ನನ್ನೇ ತಾನು ತಿಳಿಯಲಾರದೇ, ಜಾತಿ, ಶರೀರ ಇವುಗಳ ಅಭಿಮಾನದಿಂದ ಮರುಳಾಗಿ ಆಹಾರ, ಭಯ, ನಿದ್ರೆ, ಸ್ತ್ರೀಸಂಭೋಗಾದಿಗಳಿಗೆ

ಪಶುಭೂತಮಿದಂ ದೇವಿ ತ್ವನ್ಮಾಯಾಶಕ್ತಿವೈಭವೈಃ ।
ತ್ವದ್ದಯಾಮೋಚಿತಂ ದೇವಿ ಯದಿ ಸ್ಯಾತ್ತತ್ತಪಸ್ಯಯಾ ॥೬೧॥

ಶಕ್ತಿದ್ವಯೋಜ್ಝಿತಂ ದೇವಿ ಭವಿಷ್ಯತಿ ಕಿಲಾಮಲೇ ।
ತಾದೃಶೀ ತ್ವಂ ಪರಾ ಶಕ್ತಿರ್ಮದನನ್ಯಾಪಿ ಶಂಕರಿ ॥೬೨॥

ತಪೋರತಾಸಿ ದೇವೇಶಿ ತವ ಕಿಂ ತಪಸಾಂಬಿಕೇ ॥೬೩॥

॥ ಸೂತ ಉವಾಚ ॥

ದೇವೀಂ ಪ್ರಾಹ ಮಹೇಶ್ವರಸ್ತ್ರಿಜಗತಾಮಾಧಾರಭೂತೋ ಹರ
ಶ್ಚೇತ್ಥಂ ಕೈಲಾಸಮೌಲೌ ಸುರವರಮುನಿಭಿರ್ವರ್ಜಿತೇ ಮತ್ಪ್ರಭಾವಾತ್ ।
ಏತಲ್ಲಿಂಗಸಮರ್ಚನೇನ ಯದುಮೇ ಸರ್ವೇಷು ಲೋಕೇಷ್ವಪಿ
ತಸ್ಮಾದಪ್ಯಮಿತಂ ವಿಮುಕ್ತಿದಮತಃ ಕೈಲಾಸಮೌಲೌ ಕೃತಂ ॥೬೪॥

---

ಆತುರಪಡುತ್ತಾ ಶೋಕಮೋಹ, ಕ್ಷುತ್ಪಿಪಾಸೆ, ಜನನ ಮರಣ ಈ ಷಡೂರ್ಮಿಗಳ ಹೊಡೆತಕ್ಕೆ ಸಿಕ್ಕಿ, ಹುಟ್ಟುವುದು ಸಾಯುವುದು ಇವೆರಡೇ ಮುಖ್ಯವಾದುದೆಂದು ತಿಳಿಯುತ್ತಾ ತನ್ನ ಜೀವಿತವನ್ನೆಲ್ಲಾ ಅನ್ಯಾಯವಾಗಿ ಕಳೆಯುತ್ತಿರುವುದು. ||೫೯-೬೦||

ದೇವಿ! ನಿನ್ನ ಮಾಯಾಶಕ್ತಿವೈಭವಕ್ಕೆ ಒಳಗಾಗಿ ಕೇವಲ ಪಶುಪ್ರಾಯವಾಗಿರುವ ಈ ಪ್ರಾಣಿವರ್ಗವು ನಿನ್ನನ್ನು ಕುರಿತು ತಪಸ್ಸುಮಾಡಿದರೆ ನಿನ್ನ ದಯೆಯಿಂದ ಮಾಯೆಯನ್ನು (ಅಜ್ಞಾನವನ್ನು) ತೊರೆದು, ಮುಕ್ತಿಯನ್ನು .ಪಡೆಯಬಹುದು. ||೬೧||

ಪರಿಶುದ್ಧಳಾದ ದೇವಿಯೇ! ನಿನ್ನ ದಯೆಯಿಂದ, ವಿಕ್ಷೇಪ ಮತ್ತು ಆವರಣವೆಂಬ ಶಕ್ತಿದ್ವಯಗಳಿಂದ ರಹಿತವಾದ ಆನಂದಮುಯತ್ವವನ್ನು ಪಡೆಯಬಹುದು. ಈ ಪ್ರಪಂಚದಲ್ಲಿ ಇದಲ್ಲದೆ ಮತ್ತಾವುದು ಗ್ರಾಹ್ಯವೆನಿಸುವುದು! ಹೀಗಿರುವಾಗ ಎಲೌ ಶಂಕರಿ! ದೇವತೆಗಳಿಗೂ ನಿಯಾಮಕಳಾದ ನಿನಗೆ ಈ ತಪಸ್ಸಿನಿಂದ ಹೊಂದಬೇಕಾದ ಫಲವೇನಿತ್ತು? ಏತಕ್ಕಾಗಿ ನೀನು ತಪಸ್ಸನ್ನಾಚರಿಸಿದೆ? ಎಂದು ಶಿವನು ಗಿರಿಜಾದೇವಿಯನ್ನು ಪ್ರಶ್ನೆಮಾಡಿದನು. ||೬೨-೬೩||

ಮೂರು ಲೋಕಗಳಿಗೂ ಆಧಾರಭೂತನಾದ ಮಹೇಶ್ವರನು ಗಿರಿಜೆಯನ್ನು ಕುರಿತು, ಎಲೌ ದೇವಿ, ದೇವತೆಗಳಿಗೂ ಮತ್ತು ಮುನಿಗಳಿಗೂ ದೊರೆಯಲಸಾಧ್ಯ

ಏತಲ್ಲಿಂಗಸಮರ್ಚನಾರ್ಜಿತಮಹಾಪುಣ್ಯಾಂಬುಧೇಃ ಪಾರಗಾ
ತ್ವನ್ನಾಮ್ನಾ ಪ್ರಥಿತಂ ತ್ರಿಲೋಕಜನನೀ ದೃಷ್ಟ್ವಾಂಬಿಕೇಶಂ ತ್ವಹಂ ।
ತುಷ್ಟೋಽತ್ಯಂತದಯಾರಸೈಕಹೃದಯಃ ಕಿಂ ದೇಯಮಸ್ತ್ಯಂಬಿಕೇ
ತ್ವತ್ತೋ ನಾಸ್ಯದಿದಂ ಜಗತ್ಸುರನರಂ ತ್ವಂ ಶಂಕರೀವಾಸಿ ಮೇ ॥೬೫॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಶಿವಗೌರೀಸಂವಾದೋ
ನಾಮ ಷಷ್ಠೋಽಧ್ಯಾಯಃ

---

ವಾದ ಈ ಕೈಲಾಸಪರ್ವತದಲ್ಲಿ ಈ ರೀತಿ ಲಿಂಗಪೂಜೆಮಾಡಿರುವೆ. ಇದರಿಂದ ನಿನಗೆ ಸಕಲ ಲೋಕಗಳಲ್ಲಿದ್ದ ಲಿಂಗಗಳನ್ನು ಪೂಜೆಮಾಡಿದುದರಿಂದ ಉಂಟಾಗುವ ಪುಣ್ಯಕ್ಕಿಂತಲೂ ಅಧಿಕವಾದ ಪುಣ್ಯವು ದೊರೆತಿರುವುದು. ಅಲ್ಲದೆ ಶಾಶ್ವತವಾದ ಮತ್ತು ಆನಂದಮಯವಾದ ಮುಕ್ತಿಯೂ ಲಭಿಸುವುದು. ॥೬೪॥

ದೇವಿ, ತ್ರಿಲೋಕಜನನಿಯಾದ ನೀನು ಈ ಲಿಂಗಪೂಜೆಯಿಂದ ಅಪಾರವಾದ ಪುಣ್ಯವನ್ನು ಪಡೆದು ಪುಣ್ಯವೆಂಬ ಸಮುದ್ರದ ಪಾರವನ್ನೇ ನೋಡಿದವಳಾಗಿರುವೆ. ಆದುದರಿಂದ ಎಲೌ ಅಂಬಿಕೆಯೇ, ಈ ಲಿಂಗವು ನಿನ್ನ ಹೆಸರಿನಿಂದಲೇ ಅಂಬಿಕೇಶ್ವರನೆಂದು ಪ್ರಸಿದ್ಧಿಹೊಂದಲಿ. ಇದರಿಂದ ಸಂತುಷ್ಟನಾಗಿ ನಾನು ದಯಾರಸಪರಿಪೂರ್ಣವಾದ ಮನಸ್ಸುಳ್ಳವನೆಂದು ಸ್ತೋತ್ರಮಾಡಲ್ಪಟ್ಟರೂ, ನಿನಗೆ ಕೊಡಬೇಕಾದ ವರವೇನಿರುವುದು ? ನಿನಗಿಂತಲೂ ಬೇರೆಯಾದ ಪ್ರಪಂಚವೇ ನನಗೆ ತೋರುವುದಿಲ್ಲ. ದೇವಮಾನುಷರೂಪವಾದ ಈ ಪ್ರಪಂಚವೆಲ್ಲವೂ ನಿನ್ನ ಸ್ವರೂಪವೇ ಆಗಿರುವುದು. ನೀನೇ ನಾನು, ಎಂದು ಮಹೇಶ್ವರನು ಅಂಬಿಕಾದೇವಿಗೆ ಸ್ವಾತ್ಮಭಾವವನ್ನು ಅನುಗ್ರಹಿಸಿದನೆಂದು ಸೂತಮಹರ್ಷಿಗಳು ವಾಜಶ್ರವಸಾದಿಮುನಿಗಳಿಗೆ ಹೇಳಿದರು.॥೬೫॥

ಇಲ್ಲಿಗೆ ಶ್ರೀ ಶಿವರಹಸ್ಯದ ಭವನಾಮಕವಾದ ಎರಡನೆಯ ಅಂಶದಲ್ಲಿ
ಶಿವ ಮತ್ತು ಗೌರೀ ಇವರ ಸಂವಾದವೆಂಬ ಆರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಸಪ್ತಮೋಽಧ್ಯಾಯಃ

|| ಸ್ಕಂದ ಉವಾಚ ||

**ಇತ್ಯುಕ್ತ್ವಾ ಶಂಕರೇಣಾಥ ಪ್ರಾಂಜಲಿಃ ಪರಮೇಶ್ವರೀ ।**
**ಪ್ರಾಹ ಪ್ರಣಮ್ಯ ದೇವೇಶಂ ಭಗವಂತಂ ಮಹೇಶ್ವರೀ ||೧||**

**ತುಷ್ಟಾವ ಹೃಷ್ಟಾ ಕಾಂತಂ ಸ್ವಮಷ್ಟಮೂರ್ತಿಂ ಕೃಪಾಕರಂ ।**
**ಶಿಪಿವಿಷ್ಟಂ ಕಷ್ಟನಾಶಂ ಪುಷ್ಟಾ ದೇವೀ ಹೃದಾ ತದಾ ||೨||**

|| ದೇವ್ಯುವಾಚ ||

**ಶ್ರೀಶಂಕರ ಪ್ರಿಯಕರಾಮಲವೇದಗೀತ**
**ವಿಷ್ಣ್ವಬ್ಜಜಾರ್ಚಿತ ಮಹಾಜನಿಮೇಶ್ವರ ತ್ವಂ ।**

---

### ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಏಳನೆಯ ಅಧ್ಯಾಯ

ಶಂಕರನು ಪರಮೇಶ್ವರಿಯನ್ನು ಶ್ಲಾಘಿಸಿದಮೇಲೆ, ಮಹೇಶ್ವರಿಯು ಷಡ್ಗುಣೈಶ್ವರ್ಯಸಂಪನ್ನನೂ, ದೇವದೇವನೂ ಆದ ಪರಮೇಶ್ವರನಿಗೆ ನಮಸ್ಕರಿಸಿ, ಹೀಗೆ ನುಡಿದಳೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮುನಿಗಳಿಗೆ ಮುಂದಿನ ವೃತ್ತಾಂತವನ್ನು ವಿವರಿಸಲಾರಂಭಿಸಿದನು. ||೧||

ಓ ಜೈಗೀಷವ್ಯಾದಿ ಮುನಿಗಳಿರಾ, ಆಗ ದೇವಿಯು ಅಷ್ಟಮೂರ್ತಿಯೂ, ದಯಾಸಮುದ್ರನೂ, ಸರ್ವಕಿರಣಗಳಲ್ಲಿ ಪ್ರವೇಶಿಸಿರುವವನೂ ಮತ್ತು ಭಕ್ತರ ಕಷ್ಟಗಳನ್ನು ದೂರಮಾಡುವವನೂ ಆದ ತನ್ನ ಪತಿಯನ್ನು ಸಂತೋಷದಿಂದ ಮನಃಪೂರ್ವಕವಾಗಿ ಸ್ತುತಿಸಲಾರಂಭಿಸಿದಳು. ||೨||

“ ದೇವ, ನೀನು ಐಶ್ವರ್ಯ ಮತ್ತು ಸೌಖ್ಯ ಇವುಗಳನ್ನು ಭಕ್ತರಿಗೆ ಕೊಡು

ಪಾಹೀಶ ಮಾಮುಕಥಿಯಾ ಶಶಿಖಂಡಮೌಲೇ
ಭಕ್ತಾಂ ತ್ವನನ್ಯಕರುಣಾರಸವೀಕ್ಷಣೇನ ॥೩॥

ಹೇ ಶಂಕರ ಸ್ಮರಹರಾಂಧಕಸೂದನೇಶ
ವಿಶ್ವೇಶ ಭರ್ಗ ಭಗನೇತ್ರ ನಿಶಾಟನಾಶ ।
ಪಾಹೀಶ ಮಾಮುಕಥಿಯಾ ಶಶಿಖಂಡಮೌಳೇ
ಭಕ್ತಾಂ ತ್ವನನ್ಯಕರುಣಾರಸವೀಕ್ಷಣೇನ ॥೪॥

ಗಂಗಾಧರ ಪ್ರಮಥನಾಥ ಪಿನಾಕಪಾಣೇ
ಮಾರ್ತಂಡನಂದನಹರಾವ್ಯಯ ದೀನಬಂಧೋ ।
ಪಾಹೀಶ ಮಾಮುಕಥಿಯಾ ಶಶಿಖಂಡಮೌಳೇ
ಭಕ್ತಾಂ ತ್ವನನ್ಯಕರುಣಾರಸವೀಕ್ಷಣೇನ ॥೫॥

---

ವವನು. ಪರಿಶುದ್ಧನು ಮತ್ತು ಸರ್ವರಿಗೂ ಪ್ರಿಯಕರನು. ಸಕಲ ವೇದಗಳೂ ನಿನ್ನನ್ನೇ ಸ್ತುತಿಸುತ್ತಿವೆ. ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೆಲ್ಲರೂ ಅನವರತ ನಿನ್ನನ್ನೇ ಪೂಜಿಸುತ್ತಿರುವರು. ಮಹಾಪುರುಷನೂ, ಸರ್ವೇಶ್ವರನೂ ಎನಿಸಿದ ಚಂದ್ರ ಮೌಳಿಯೇ! ಭಕ್ತಳಾದ ನನ್ನನ್ನು ಆತ್ಮೀಯಭಾವನೆಯಿಂದ ರಕ್ಷಿಸು. ||೩||

ಸ್ವಾಮಿಯೇ, ನಿನ್ನ ಮನಸ್ಸನ್ನು ಚಂಚಲಗೊಳಿಸಿದ ಮನ್ಮಥನನ್ನು ಫಾಲ ನೇತ್ರದಿಂದ ಭಸ್ಮಮಾಡಿ, ಲೋಕಕಂಟಕನಾಗಿದ್ದ ಅಂಧಕಾಸುರನನ್ನು ಧ್ವಂಸಮಾಡಿ ರುವೆ. ಶಂಕರನೇ, ಜಗದೊಡೆಯನೆಂಬ ಹೆಸರು ನಿನಗೇ ಸಲ್ಲುವುದು. ಸೃಷ್ಟಿಸ್ಥಿತಿ ಸಂಹಾರಕಾರ್ಯಗಳನ್ನೂ ಮಾಡುವ ಸ್ವಾಮಿಯೇ, ಲೋಕಚಕ್ಷುಸ್ಸೆನಿಸಿದ ಸೂರ್ಯನೇ ನಿನಗೆ ಕಣ್ಣಾಗಿರುವನು. ರಾಕ್ಷಸನಾಶಕನಾದ ಈಶ್ವರನೇ! ಚಂದ್ರಮೌಳಿಯೇ! ಈ ಭಕ್ತಳನ್ನು ನಿನ್ನ ದಯಾರಸಪರಿಪೂರ್ಣವಾದ ದೃಷ್ಟಿಯಿಂದ ಉದ್ಧರಿಸು. ||೪||

ಪರಮಪಾವನೆಯಾದ ಗಂಗೆಯನ್ನು ತಲೆಯಲ್ಲಿ ಧರಿಸಿ ಪ್ರಮಥಗಣಗಳಿಗೆಲ್ಲಾ ಒಡೆಯನಾಗಿ, ಪಿನಾಕವೆಂಬ ಆಯುಧವನ್ನು ಹಿಡಿದಿರುವ ಸ್ವಾಮಿಯೇ! ಮಾರ್ತಂ ಡರಕ್ಷಕನಾದ ನಿನ್ನನ್ನು ಹರ, ನಾಶರಹಿತ ಎಂದು ಕರೆಯುವರು. ದೀನಬಂಧುವಾದ ಚಂದ್ರಮೌಳಿಯೇ! ನಿನ್ನ ಭಕ್ತಳಾದ ನನ್ನನ್ನು (ನಿನ್ನ) ದಯಾದೃಷ್ಟಿಯಿಂದ ಕಾಪಾಡು. ||೫||

ಷಡ್ವಕ್ತ್ರಸಿಂಧುರವರಾನನನಂದಿತೇಂದು
ನೇತ್ರೋರುಲೋಕನ ಮಹೇಶ್ವರ ದಕ್ಷಶಿಕ್ಷ ।
ಪಾಹೀಶ ಮಾಮುಕಥಿಯಾ ಶಶಿಖಂಡಮೌಳೇ
ಭಕ್ತಾಂ ತ್ವನನ್ಯಕರುಣಾರಸವೀಕ್ಷಣೇನ ॥೬॥

ಇತಿ ಸಂಸ್ತುತ್ಯ ಸಾ ದೇವೀ ಪ್ರಾಂಜಲಿಃ ಪ್ರಣಮಚ್ಛಿವಂ ।
ತ್ವತ್ಸಂಗತಾಹಂ ದೇವೇಶ ಶಕ್ತಿರಸ್ಮಿ ಸನಾತನೀ ॥೭॥

ಸೃಜಾಮೀದಂ ಜಗಜ್ಜಾಲಂ ಸರ್ವಂ ದೇವಾಸುರಾತ್ಮಕಂ ।
ನದೀನದಗಿರಿದ್ವೀಪಸಮುದ್ರೈರ್ಭೂತವರ್ಗಕೈಃ ॥೮॥

ತಥಾಪಿ ದೇಹಧರ್ಮಾತ್ತಪ್ರಣಯೇನಾಹಮೀಶ್ವರ ।
ಲೋಕಸ್ಯಾನುಗ್ರಹಂ ಕರ್ತುಂ ತಪಃ ಕೃತಮಹೋ ಶಿವ ॥೯॥

---

ಷಣ್ಮುಖ ಮತ್ತು ಗಜಾನನ ಇವರು ಸದಾ ತಮ್ಮ ಮೃದು ಮಧುರವಾದ ಮಾತುಗಳಿಂದ ನಿನ್ನನ್ನು ಸಂತೋಷಪಡಿಸುತ್ತಿರುವರು. ಚಂದ್ರನೇ ನಿನ್ನ ಎಡಗಣ್ಣಾಗಿರುವನು. ಎಲೈ ! ಶ್ರೇಷ್ಠವಾದ ನೋಟವುಳ್ಳ ಮಹೇಶ್ವರನೇ, ಗರ್ವದಿಂದ ಯಾಗದಲ್ಲಿ ನಿನಗೆ ಅಪಮಾನಮಾಡಿದ ದಕ್ಷಬ್ರಹ್ಮನನ್ನು ಕ್ಷಣಮಾತ್ರದಲ್ಲಿ ಶಿಕ್ಷಿಸಿದೆಯಲ್ಲವೇ ! ಓ ಚಂದ್ರಮೌಳಿಯಾದ ಈಶ್ವರನೇ! ಭಕ್ತಳಾದ ಈ ನನ್ನನ್ನು ತನ್ನವಳೆಂಬ ಭಾವನೆಯಿಂದ ದಯಾಪೂರ್ವಕವಾದ ದೃಷ್ಟಿಯನ್ನಿಟ್ಟು ಸಲಹು." ||೬||

ಹೀಗೆ ಗಿರಿಜಾದೇವಿಯು ಪರಶಿವನನ್ನು ಸ್ತೋತ್ರಮಾಡಿ ಅಂಜಲಿಬದ್ಧಳಾಗಿ ನಮಸ್ಕಾರಮಾಡಿದಳು. ಅನಂತರ ಶಿವನನ್ನು ಕುರಿತು, ಈಶ್ವರನೇ ! ನಿನ್ನೊಡಗೂಡಿದ್ದರಿಂದ ನಾನು ಈಗ ಅನಾದಿಯಾದ ಶಕ್ತಿಯೆಂದು ಕರೆಯಲ್ಪಡುತ್ತಿರುವೆನು. ||೭||

ನಿನ್ನ ಸಾಹಚರ್ಯದಿಂದ ನಾನು, ನದೀ, ನದ, ಬೆಟ್ಟ, ದ್ವೀಪಗಳು, ಸಮುದ್ರಗಳು, ಸಕಲ ಭೂತವರ್ಗಗಳು, ಇವುಗಳೊಡನೆ ದೇವ ಮತ್ತು ರಾಕ್ಷಸಮಯವಾದ ಸಕಲ ಜಗತ್ತನ್ನೂ ಸೃಷ್ಟಿಮಾಡುತ್ತಿರುವೆನು. ನನಗೆ ಯಾವ ಕೊರತೆಯೂ ಇಲ್ಲ. ||೮||

ಆದರೂ ಶರೀರಧರ್ಮಾನುಸಾರವಾಗಿ ಒದಗಿದ ಭಕ್ತಿಪೂರ್ವಕವಾದ ನಿನ್ನಲ್ಲಿನ ಪ್ರೇಮದಿಂದಲೂ, ಲೋಕಾನುಗ್ರಹಕ್ಕೋಸ್ಕರವೂ ಈ ತಪಸ್ಸನ್ನಾಚರಿಸಿದೆನು. ||೯||

ಸ್ವತಂತ್ರಾಪಿ ಭವೇನ್ನಾರೀ ತಥಾ ಭರ್ತೃಪ್ರಸಾದತಃ ।
ಕೃತಸರ್ವಕ್ರಿಯಾಪೀಶ ರಾಜತೇಽತ್ಯಂತಮುತ್ಕಟಂ ॥೧೦॥

ತೀರ್ಥಯಾತ್ರಾಂ ವ್ರತಾರಂಭಂ ಲಿಂಗಾರ್ಚನಮಪಿ ಪ್ರಭೋ ।
ಭರ್ತ್ರಾರ್ಚಾನುಮತಾ ನಾರೀ ಕೃತ್ವಾ ಪುಣ್ಯಮವಾಪ್ನುಯಾತ್ ॥೧೧॥

ತಥಾಪಿ ಲೋಕಗುಪ್ತ್ಯರ್ಥಂ ಕ್ರೀಡೇಯಂ ಮಮ ಶಂಕರ ।
ನಾವಯೋರ್ವಿದ್ಯತೇ ಭೇದಶ್ಚಂದ್ರಚಂದ್ರಿಕಯೋರಿವ ॥೧೨॥

ಆವಾಭ್ಯಾಂ ಮನುತೇ ಭೇದಂ ಸ ಏವ ನರಗರ್ದಭಃ ।
ತವ ಕೈಲಾಸವಸತೇರುತ್ಕಟಂ ಸುಂದರಂ ಶಿವ ॥೧೩॥

ಮಯಾ ತ್ವಯಾ ಯೋಗಿನೀಭೀರಮಣಾಕ್ರೀಡಮುತ್ತಮಂ ।
ತತ್ಸ್ಥಾನಂ ಕಲ್ಪನೀಯಂ ಮೇ ನಾನ್ಯಃ ಕಾಮೋಽದ್ಯ ವಿದ್ಯತೇ ॥೧೪॥

---

ಸ್ತ್ರೀಯು ತಾನು ಸಮರ್ಥಳಾಗಿದ್ದರೂ ಪತಿಯ ಅನುಗ್ರಹವನ್ನು ಪಡೆದೇ ಸಕಲ ಕರ್ಮಗಳನ್ನೂ ಆಚರಿಸಿದರೆ, ತಾನೊಬ್ಬಳೇ ಮಾಡಿದ ಕಾರ್ಯಾಚರಣೆಗಿಂತ ಅತಿಯಾದ ಫಲವನ್ನು ಹೊಂದಿ ಮೆರೆಯುವಳು. ॥೧೦॥

ಸ್ವಾಮಿ! ತೀರ್ಥಯಾತ್ರೆ, ವ್ರತಾಚರಣೆ, ಲಿಂಗಪೂಜೆ ಇವುಗಳನ್ನು ಪತಿಯಾಜ್ಞೆಯಿಂದ ಆಚರಿಸುವ ಸ್ತ್ರೀಯು ಅತಿಶಯಪುಣ್ಯಭಾಗಿನಿಯಾಗುವಳು. ॥೧೧॥

ಶಂಕರನೇ, ಹೀಗಿದ್ದರೂ ಈಗ ನಾನು ಮಾಡಿದ ಲೀಲೆಯೆಲ್ಲವೂ ಲೋಕರಕ್ಷಣೆಗಾಗಿಯೇ. ದೇವ, ಚಂದ್ರ ಮತ್ತು ಬೆಳದಿಂಗಳು ಇವುಗಳಿಗೆ ಹೇಗೆ ಲೋಕದಲ್ಲಿ ಭೇದಭಾವವಿಲ್ಲವೋ ಅದರಂತೆ ನಮ್ಮಿಬ್ಬರಿಗೂ ಎಂದಿಗೂ ವಿಶ್ಲೇಷವಿಲ್ಲ. ॥೧೨॥

ನಮ್ಮಿಬ್ಬರಲ್ಲಿ ಭೇದವೆಣಿಸುವಾತನು ನರಾಧಮನೆನಿಸುವನು. ಶಿವನೇ, ಕೈಲಾಸವಾಸಿಯಾದ ನಿನಗೆ ಶ್ರೇಷ್ಠವಾದ ಈ ಕೈಲಾಸವೇ ಸುಂದರವಾದ ಸ್ಥಳವಾಗಿರುವುದಲ್ಲವೆ! ॥೧೩॥

ನಾನು ನಿನ್ನೊಡನೆ ಯೋಗಿನೀಗಣಗಳಿಂದ ಪರಿವೃತಳಾಗಿ ಈ ಕೈಲಾಸಕ್ಷೇತ್ರದಲ್ಲಿ ಉತ್ತಮವಾದ ರತಿಕ್ರೀಡೆಯನ್ನು ಅನುಭವಿಸಬೇಕೆಂದು ಕುತೂಹಲವಿರುವುದು. ಆದುದರಿಂದ ಎಲೈ ಸ್ವಾಮಿಯೇ, ನನ್ನ ಮನೋರಥವು ಈಡೇರುವಂತೆ ಅಂತಹ

ಕಾಮಾಂಗದಾಹಸಾದಾಬ್ಜ ಧ್ಯಾನತೋ ನೈವ ಕಾಮಿತಾ ।
ತ್ವದೀಯಾಲೋಕಕಾಮೇನ ಕಾಮಸ್ಸಂಜೀವಿತೋ ಮಯಾ ॥೧೫॥

ತಥಾ ವದಂತ್ಯಾಮಂಬಾಯಾಂ ದೇವಃ ಪ್ರಾಹ ಮಹೇಶ್ವರಃ ॥೧೬॥

॥ ಈಶ್ವರ ಉವಾಚ ॥

ಕಿಮಶಕ್ಯಮಿದಂ ದೇವಿ ಜಗನ್ನಿರ್ಮಾಣಪಂಡಿತೇ ।
ನ ಕಿಂ ತ್ವತ್ಸ್ಮೃತಿಮಾತ್ರೇಣ ಭವತ್ಯಾ ಕಲ್ಪಿತಂ ಯದಿ ॥೧೭॥

ತದೇವ ಮೇ ಕಾಂತತರಂ ವಿಹಾರವರ(ನ)ಮದ್ರಿಜೇ ।
ತಸ್ಮಾದುಪಕ್ರಮಃ ಕಿಂನು ಕ್ರೀಯಂ ತೇ ತಪಸಿ ಸ್ಥಿತಿಃ ॥೧೮॥
ಕಿಂತ್ವೇಕಂ ಮಮ ಕೈಲಾಸೇ ತವ ಹೃತ್ಪದ್ಮಸದ್ಮಗಂ ।

---

ವಿಹಾರಸ್ಥಾನವೊಂದನ್ನು ದಯೆಯಿಟ್ಟು ಕಲ್ಪಿಸಬೇಕು. ಇದು ಹೊರತು ನನಗೆ ಮತ್ತಾವ ಅಪೇಕ್ಷೆಯೂ ಇಲ್ಲ. ॥೧೪॥

ಮನ್ಮಥನ ಅವಯವವನ್ನೆಲ್ಲಾ ಭಸ್ಮಮಾಡಿದ ನಿನ್ನ ಪದಕಮಲಧ್ಯಾನದಲ್ಲಿಯೇ ಇಲ್ಲಿಯವರೆವಿಗೂ ನಿರತಳಾಗಿದ್ದುದರಿಂದ ನಿನ್ನೊಡನೆ ಕಾಮಸುಖವನ್ನು ಪಡೆಯಲು ಅವಕಾಶವಾಗಲಿಲ್ಲ. ಈಗ ಪುನಃ ನಿನ್ನ ತೇಜಸ್ಸನ್ನು ಅಪೇಕ್ಷಿಸಿದ್ದರಿಂದಲೇ ನಾನು ಮನ್ಮಥನನ್ನು ಮತ್ತೆ ಬದುಕಿಸಿರುವೆನು. ॥೧೫॥

ಈ ರೀತಿ ಅಂಬಿಕೆಯು ಹೇಳುತ್ತಿರಲು ದೇವಿಯನ್ನು ಕುರಿತು ಮಹಾದೇವನು ಇಂತೆಂದನು. ॥೧೬॥

ದೇವಿಯೇ, ಜಗತ್ಸೃಷ್ಟಿಕಾರ್ಯದಲ್ಲಿಯೇ ಚತುರಳಾದ ನಿನಗೆ ಇದೊಂದು ಅಸಾಧ್ಯವಾದ ಕಾರ್ಯವೇ? ನೀನು ಮಾಡಬೇಕೆಂದು ಸ್ಮರಿಸಿದರೆ ಏನು ತಾನೆ ಆಗಲಾರದು. ॥೧೭॥

ಎಲೌ ನಗರಾಜಪುತ್ರಿ, ನಿನ್ನ ಇಚ್ಛೆಯಂತೆ ಈ ಕೈಲಾಸವೇ ನನಗೆ ಅತ್ಯಂತ ಸುಂದರವಾದ ವಿಹಾರವನವಾಗಿರುವುದು. ಮತ್ತು ಕ್ರೀಡಾಯೋಗ್ಯವಾದ ಉದ್ಯಾನವೂ ಆಗಿರುವುದು. ಆದುದರಿಂದ ಇನ್ನು ನಿನ್ನಿಷ್ಟದಂತೆಯೇ ಕ್ರೀಡಿಸೋಣ. ಇನ್ನು ನಿನಗೇಕೆ ಈ ತಪಶ್ಚರ್ಯೆ? ॥೧೮॥

ಬಹಿಸ್ತನ್ನಿರ್ಗತಂ ದೇವಿ ಚಾಂಬಿಕೇಶಾಖ್ಯಮುತ್ತಮಂ ॥೧೯॥

ಲಿಂಗಂ ಮಂಗಲದಂ ಮೇಽದ್ಯ ತೇನ ಕಾಂತತರೋ ನಗಃ ।
ಯೋಽಂಬಿಕೇಶಂ ಮಹಾಧಾಮಮೌಲಿಕುಂಭಾಗ್ರಲೋಚನಃ ॥೨೦॥

ತ್ರಿಲೋಚನೋ ಹಿ ಭವತಿ ತಥಾನ್ಯೇ ಚ ದ್ವಿಲೋಚನಾಃ ।
ದೃಷ್ಟ್ವಾ ತ್ವತ್ಪೂಜಿತಂ ಲಿಂಗಮಂಬಿಕೇಶಾಖ್ಯಮಂಬಿಕೇ ॥೨೧॥

ನಾನ್ಯತ್ರ ರಮತೇ ಚೇತೋ ಯಥಾ ತ್ವದ್ಗಾತ್ರಸಂಗಮಾತ್ ।
ತಥಾ ಮೇ ಲಿಂಗಸಂಗೇನ ತ್ವದಿಯೇ ಪರಮೇಶ್ವರಿ ॥೨೨॥

ಅತಃ ಕೈಲಾಸಲಿಂಗೇಷು ಶ್ರೇಷ್ಠಮೇತತ್ಸನಾತನಂ ।
ಪ್ರೋತ್ಫುಲ್ಲಂ ಮಾನಸಾಬ್ಜಂ ಮೇ ದೃಷ್ಟ್ವಾ ಲಿಂಗಮಿದಂ ತವ ॥೨೩॥
ಇತ್ಯುಕ್ತ್ವಾ ಹರ್ಷವಿವಶೋ ಗಾಢಮಾಲಿಂಗ್ಯ ತಾಂ ಶಿವಾಂ ।

---

ಆದರೆ ದೇವಿ, ನಿನ್ನ ಹೃದಯಕಮಲವನ್ನೇ ಮನೆಮಾಡಿಕೊಂಡಿದ್ದ ಶಿವ ಲಿಂಗವು ಈಗ ಹೊರಹೊರಟು ಉತ್ತಮವಾದ ಅಂಬಿಕೇಶಲಿಂಗವೆಂದು ಪ್ರಸಿದ್ಧ ವಾಗಿದೆ. ಪ್ರಿಯೇ, ಇಂತಹ ಅಂಬಿಕೇಶ್ವರಲಿಂಗವು ನನಗೆ ಈಗ ಸಂತೋಷಪ್ರದ ವಾಗಿರುವುದು. ಈ ಕೈಲಾಸಪರ್ವತವು ಈ ಅಂಬಿಕೇಶಲಿಂಗಮಹಿಮೆಯಿಂದಲೇ ಇತರ ಪರ್ವತಗಳಿಗಿಂತಲೂ ಮನೋಹರವಾದುದಾಗಿರುವುದು. ॥೧೯॥

ಅಂಬಿಕೆಯೇ, ಅತಿ ತೇಜಸ್ವಿಯಾದ ಈ ಅಂಬಿಕೇಶ್ವರನ ಲಿಂಗವನ್ನು ನೀನು ಭಕ್ತಿಯಿಂದ ಪೂಜೆಮಾಡಿರುವೆ. ನಿನ್ನಿಂದ ಪೂಜೆಮಾಡಲ್ಪಟ್ಟಿರುವ ಈ ಲಿಂಗವನ್ನು ದರ್ಶನಮಾಡುವವನು ಈಶ್ವರಾಭೇದವನ್ನು ಪಡೆದು, ಮೂರು ಕಣ್ಣುಗಳುಳ್ಳವನಾಗಿ ಶಿವಸ್ವರೂಪವನ್ನು ಪಡೆಯುವನು. ಹಾಗಿಲ್ಲದವರು ಎರಡೇ ಕಣ್ಣುಳ್ಳವರಾಗಿ ಸಾಮಾನ್ಯ ಮಾನವಧರ್ಮವನ್ನು ಎಂದೂ ಬಿಡಲಾರರು. ॥೨೦-೨೧॥

ಎಲೌ ಪರಮೇಶ್ವರೀ, ನಿನ್ನ ಅವಯವಸಂಬಂಧದಿಂದ ಈಗ ನನ್ನ ಮನಸ್ಸು ಹೇಗೆ ಅನ್ಯತ್ರ ಚಲಿಸದೆ ಸ್ಥಿರವಾಗಿರುವುದೋ, ಹಾಗೆಯೇ ನಿನ್ನಿಂದ ಪೂಜಿಸಲ್ಪಟ್ಟಿರುವ ಈ ನನ್ನ ಅಂಬಿಕೇಶ್ವರಲಿಂಗಸಂಬಂಧದಿಂದ ನಿನ್ನ ಮನಸ್ಸು ಇತರತ್ರ ಚಲಿಸದೆ ಆ ಅಂಬಿಕೇಶಲಿಂಗದಲ್ಲಿಯೇ ವಿಹರಿಸುತ್ತಿರುವುದು. ॥೨೨॥

ಆದುದರಿಂದ ಕೈಲಾಸಪರ್ವತದಲ್ಲಿರುವ ಲಿಂಗಗಳಲ್ಲೆಲ್ಲಾ ಈ ಅಂಬಿಕೇಶ್ವರ ಲಿಂಗವೇ ಶ್ರೇಷ್ಠವೂ, ಸನಾತನವೂ ಆಗಿರುವುದು. ನಿನ್ನ ಪೂಜೆಗೆ ಪಾತ್ರವಾಗಿರುವ

**ಸುಸ್ನಾತಾಂ ತಾಂ ತದಾ ದೇವೀಂ ದಿವ್ಯಸಿಂಹಾಸನಾಶ್ರಿತಾಂ ॥೨೪॥**

**ಭೂಷಾಭಿರ್ಭೂಷಯಾಮಾಸ ಮುಕುಟೇನಾರ್ಕರೋಚಿಷಾ ।**
**ಸುಧಾಧಾಮೇಂದುಖಂಡೋದ್ಯದ್ಧೀರಮುಕ್ತಾಸರಾವೃತಾಂ ॥೨೫॥**

**ನೂಪುರೈರಂಗದೈರ್ದೇವೋ ಸ್ವಯಂ ದೇವೀಮಭೂಷಯತ್ ।**
**ನಖಾಗ್ರೈಸ್ತಜ್ಜಟಾಲೋಲವೇಣೀಜಾಲಂ ವಿಮುಚ್ಯ ವೈ ॥೨೬॥**

**ರತ್ನಚೂಡಾಮಣಿವ್ರಾತೈರಭೂಷಯದುಮಾಪತಿಃ ।**
**ಚಂದನಾಗರುಕರ್ಪೂರೈರ್ದೇವ್ಯಂಗಂ ಪರಿಲೇಪಯತ್ ॥೨೭॥**

---

ಈ ಅಂಬಿಕೇಶ್ವರನ ಲಿಂಗವನ್ನು ನೋಡಿ ನನ್ನ ಮನಸ್ಸೆಂಬ ಕಮಲವು ಚೆನ್ನಾಗಿ ಅರಳಿರುವುದು. ॥೨೩॥

ಪರಮೇಶ್ವರನು ದೇವಿಯನ್ನು ಕುರಿತು ಹೀಗೆ ಹೇಳಿ, ಸಂತೋಷದಿಂದ ದೇವಿಯನ್ನು ಆಲಿಂಗನೆಮಾಡಿದನು. ಅನಂತರ ಸ್ನಾತಳಾದ ದೇವಿಯನ್ನು ದಿವ್ಯವಾದ ಸಿಂಹಾಸನದಲ್ಲಿ ಕುಳ್ಳಿರಿಸಿ, ನಾನಾವಿಧವಾದ ಆಭರಣಗಳಿಂದ ತಾನೇ ಅಲಂಕರಿಸಿದನು. ಸೂರ್ಯನಂತೆ ಹೊಳೆಯುವ ಕಿರೀಟವನ್ನು ದೇವಿಯ ತಲೆಯಲ್ಲಿರಿಸಿದನು. ॥೨೪॥

ಅಮೃತಕ್ಕೆ ಆಶ್ರಯವಾಗಿರುವ ಚಂದ್ರನ ಖಂಡಗಳಂತೆ ಹೊಳೆಯುತ್ತಿರುವ ಹೀರರತ್ನಹಾರಗಳನ್ನೂ, ಶುಭ್ರವಾದ ಮುತ್ತಿನಸರಗಳನ್ನೂ, ದೇವಿಯು ಧರಿಸಿಕೊಂಡಳು. ಪರಮೇಶ್ವರನು ತಾನೇ ದೇವಿಗೆ ಕಾಲುಕಡಗ, ತೋಳುಬಳೆ ಮುಂತಾದ ಒಡವೆಗಳನ್ನು ತೊಡಿಸಿದನು. ॥೨೫॥

ತನ್ನ ಉಗುರಿನ ತುದಿಭಾಗಗಳಿಂದ, ಜಡೆಗಟ್ಟಿಕೊಂಡಿದ್ದ ದೇವಿಯ ಕೇಶಪಾಶವನ್ನು ಬಿಡಿಸಿದನು. ರತ್ನಖಚಿತವಾದ ಅನೇಕ ಚೂಡಾಮಣಿ (ತಲೆಗೆ ಧರಿಸುವ ಆಭರಣ) ಗಳನ್ನು ಉಮಾಕಾಂತನಾದ ಶಿವನು ತಾನೇ ಕಟ್ಟಿ ಅಲಂಕರಿಸಿದನು. ಅಲ್ಲದೇ ಚಂದನ, ಅಗರು, ಪಚ್ಚಕರ್ಪೂರ ಇವುಗಳಿಂದ ಮಿಶ್ರಿತವಾಗಿರುವ ಸುಗಂಧ ದ್ರವ್ಯಗಳನ್ನು ದೇವಿಯ ಅವಯವಗಳಿಗೆಲ್ಲಾ ತಾನೇ ಲೇಪನಮಾಡಿದನು. ॥೨೬-೨೭॥

ಕುಸುಂಭಕಾಂತಿನಿದ್ಯೋತಿಕೋಟಿಬಾಲಾರ್ಕವರ್ಚಸಂ ।
ವಸನೈರ್ವಾಸಯಾಂಚಕ್ರೇ ನಿಚೋಲೇನಾಪಿ ಶಂಕರಃ ॥೨೮॥

ಧೂಪೈರ್ದೀಪೈಸ್ಸುನೋದ್ದಾಮಗುಂಫೈಃ ಕಚವಿರಾಜಿತೈಃ ।
ತಾಂಬೂಲಜಾಲೈಸ್ಸುಭಗೈರ್ನಾನಾಫಲವರಾಶನೈಃ ॥೨೯॥

ಸ್ವರ್ಣಪಾತ್ರಪರೀಕ್ಲಪ್ತೈಸ್ಸ್ವಯಂ ದೇವ್ಯಾ ಮಹೇಶ್ವರಃ ।
ಬುಭುಜೇ ನಂದಿತಹೃದಾ ಸ್ವಯಂದೇವ್ಯಾ ಮಹೇಶ್ವರಃ ॥೩೦॥

ದೇವ್ಯಾಸ್ತದ್ವದನಾಂಭೋಜೇ ಫಲಖಂಡಾನಿ ಶಂಕರಃ ।
ಭುಂಕ್ಷ್ವೇತಿ ತಪಸಾ ಗೌರಿ ಸದೈವಾನಶನೇನ ಚ ॥೩೧॥

ಚಿರಂ ಕ್ಲಿಷ್ಟಾಸಿ ಧನ್ಯಾಸಿ ಮಾನ್ಯಾಸಿ ಚ ಸುರಾಸುರೈಃ ।
ಇದಂ ಕೈಲಾಸಲಿಂಗಸ್ಯ ನೈವೇದ್ಯಂ ಭಕ್ಷ್ಯಭೋಜ್ಯಕಂ ॥೩೨॥

---

ಶಂಕರನು ಬೆಂಕಿಯ ಜ್ವಾಲೆಯಂತೆ ಹೊಳೆಯುತ್ತಿರುವವಳೂ, ಕೋಟಿಬಾಲ ಸೂರ್ಯರಂತೆ ತೇಜಸ್ಸುಳ್ಳವಳೂ ಆದ ಅಂಬಿಕೆಯನ್ನು ನಾನಾವಿಧವಾದ ವಸ್ತ್ರಗಳಿಂದಲೂ ಮೇಲುಹೊದಿಕೆಯಿಂದಲೂ ಸಿಂಗರಿಸಿದನು. ||೨೮||

ಶಿವನು ನಾನಾವಿಧವಾದ ಧೂಪಗಳಿಂದಲೂ, ಹೂದಂಡೆಗಳಿಂದಲೂ ದೇವಿಯ ಕೇಶಪಾಶವನ್ನು ಶೃಂಗರಿಸಿದನು. ಮನೋಹರವಾದ ತಾಂಬೂಲಪಟ್ಟಿಗಳನ್ನೂ, ಉಪಭೋಗಾರ್ಹವಾದ ಉತ್ತಮ ಫಲಗಳನ್ನೂ, ಚಿನ್ನದ ಪಾತ್ರೆಯಲ್ಲಿ ತಾನೇ ಸಿದ್ಧಪಡಿಸಿದನು. ಹೀಗೆ ಮಹೇಶ್ವರನು ತನಗಾಗಿ ಪ್ರೀತಿಯಿಂದ ಉಪಚರಿಸುತ್ತಿರುವುದನ್ನು ನೋಡಿ, ದೇವಿಯು ಸಂತೋಷಮನಸ್ಸಿನಿಂದ ಪರಮೇಶ್ವರನಿಗೆ ಕೆಲವು ಹಣ್ಣುಗಳನ್ನು ಸಮರ್ಪಿಸಿದಳು. ಭಕ್ತಪರಾಧೀನನಾದ ಮಹಾದೇವನು ಸಂತೋಷದಿಂದ ಆ ಫಲಗಳನ್ನು ಸೇವಿಸಿದನು. ||೨೯-೩೦||

ತಾನು ಸೇವಿಸಿದನಂತರ ಪರಮೇಶ್ವರನು, ಮಹಾದೇವಿಯ ಬಾಯಿಗೆ ತನಗೆ ನಿವೇದನಮಾಡಿದ್ದ ಹಣ್ಣಿನ ಚೂರುಗಳನ್ನು ತಾನೇ ಪ್ರೀತಿಯಿಂದ ಇಡುತ್ತಾ, ದೇವಿ ! ನೀನು ಈ ಹಣ್ಣುಗಳನ್ನು ತಿನ್ನು, ಬಹುಕಾಲ ತಪಸ್ಸುಮಾಡಿ ಉಪವಾಸದಿಂದ ಬಹಳ ಕ್ಲೇಶಹೊಂದಿರುವೆ. ನೀನು ಸಕಲ ದೇವದಾನವರಿಂದಲೂ ಧನ್ಯಳೆಂದು

ಭುಂಕ್ಷ್ವಾಂಬಿಕೇಶಲಿಂಗಸ್ಯ ನೈವೇದ್ಯಂ ಮಧುರಂ ಮಧು ।
ಯೋ ನೈವೇದ್ಯಂ ಮಹೇಶಸ್ಯ ಭುಕ್ತ್ವಾ ಸಂತುಷ್ಟಮಾನಸಃ ॥೩೩॥

ಸ ಸರ್ವತಪಸಾಂ ರಾಶಿಂ ಯೋಗಯಾಗಫಲಂ ಶಿವೇ ।
ಪ್ರಾಪ್ನೋತಿ ಮುಕ್ತಿಸಾಮ್ರಾಜ್ಯಂ ಕಿಮನ್ಯತಪಸಾ ಶಿವೇ ॥೩೪॥

ತಸ್ಮಾದ್ಭುಂಕ್ಷ್ವ ಮಹೇಶಸ್ಯ ನೈವೇದ್ಯಂ ಮಧುರಂ ಮೃದು ।
ನಾಭಕ್ತೈರ್ಭೋಜ್ಯಮೇತದ್ವೈ ಭಕ್ತೈರ್ಭೋಜ್ಯಂ ಸದೈವ ಹಿ ॥೩೫॥

ಇತ್ಯುಕ್ತ್ವಾ ಭೋಜಯಾಮಾಸ ನೈವೇದ್ಯೈಃ ಫಲಮಂಡಲೈಃ ।
ಪ್ರಕ್ಷಾಳ್ಯ ಹಸ್ತೌ ಚರಣೌ ದೇವ್ಯೋ ದೇವ್ಯಾ ಮಹೇಶ್ವರಃ ॥೩೬॥

---

ಗೌರವಿಸಲ್ಪಟ್ಟಿರುವೆ. ಇದು ಕೈಲಾಸೇಶ್ವರಲಿಂಗದ ಪ್ರಸಾದ. ಬಹು ಪವಿತ್ರವಾದದ್ದು. ||೩೧-೩೨||

ದೇವಿ ! ಮಧುರವೂ ರುಚಿಕರವೂ ಆದ ಈ ಅಂಬಿಕೇಶ್ವರನ ನೈವೇದ್ಯವನ್ನು ಭಕ್ಷಿಸು. ಪಾರ್ವತಿಯೇ, ಮಹೇಶ್ವರನಿಗೆ ನಿವೇದನಮಾಡಿದ ಪದಾರ್ಥಗಳನ್ನು ಸಂತೋಷಮನಸ್ಸಿನಿಂದ ಭಕ್ಷಿಸಿದರೆ ಸಕಲ ತಪಸ್ಸುಗಳ ಮತ್ತು ನಿಖಿಲಯೋಗ ಮತ್ತು ಯಾಗಗಳ ಆಚರಣೆಯಿಂದ ಒದಗುವ ಫಲವೆಲ್ಲವನ್ನೂ ಪಡೆಯಬಹುದು. ಅಲ್ಲದೆ ಮುಕ್ತಿಸಾಮ್ರಾಜ್ಯವೇ ಅವರಿಗೆ ದೊರೆಯುವುದು ; ಹೀಗಿರುವಾಗ ಕೇವಲ ತಪಸ್ಸುಗಳಿಂದ ಆಗುವ ಫಲವೇನು ? ||೩೩-೩೪||

ಆದುದರಿಂದ ಎಲೌ ದೇವಿಯೇ, ಮಧುರವೂ, ಮೃದುವೂ ಆದ ಮಹೇಶ್ವರನ ನೈವೇದ್ಯಶೇಷವನ್ನು ಸ್ವೀಕರಿಸು. ಈ ಶಿವಪ್ರಸಾದವು ಕೇವಲ ಹರಭಕ್ತರಿಂದ ಮಾತ್ರ ಸೇವಿಸಲ್ಪಡಬೇಕೇ ಹೊರತು ಭಕ್ತರಲ್ಲದ ಜನರು ಯಾವರೀತಿಯಲ್ಲಿಯೂ ಈ ಪ್ರಸಾದವನ್ನು ಸ್ವೀಕರಿಸಲು ಅರ್ಹರಲ್ಲ. ||೩೫||

ಎಂದು ಹೇಳಿ ಮಹೇಶ್ವರನು, ಕೈಲಾಸೇಶ್ವರ ಪ್ರಸಾದವನ್ನೂ, ಅನೇಕ ಫಲ ಸಮೂಹವನ್ನೂ ದೇವಿಗೆ ಕೊಟ್ಟನು. ಆನಂತರ ದೇವಿಯ ಕೈ ಮತ್ತು ಕಾಲುಗಳನ್ನು ತಾನೇ ತೊಳೆದನು. ||೩೬||

ಪರಾರ್ಘ್ಯಾಸ್ತರಣಾಸ್ತೀರ್ಣೇ ಸೋಪಧಾನೋರುಮಂಚಕೇ ।
ಕೈಲಾಸೇ ಹೀರಮಣಿಜಸೌಧೇ ದಿಕ್ತಟಧೂಪಿತೇ ॥೩೭॥

ನಿಷಣ್ಣಶ್ಚಾಂಬಯಾ ದೇವೋ ತಾಂಬೂಲಂ ಚಾಪ್ಯಗೃಹ್ಯತ ।
ತಾಂಬೂಲರಸಧಾರಾಭಿಸ್ಸಂತೃಪ್ತಾಂ ಪರಮೇಶ್ವರೀಂ ॥೩೮॥

ಪಸ್ಪರ್ಶ ಪಾಣಿನಾ ದೇವೋ ದೇವ್ಯಾ ವದನಪಂಕಜಂ ।
ಕ್ಲಿಷ್ಟಾಸೀತಿ ಚ ಪಾಣಿಭ್ಯಾಂ ಮುಹುರ್ಮುಹುರನನ್ಯಧೀಃ ॥೩೯॥

ಸಖೀಗಣಕರಾಪಾರವ್ಯಜನೈಸ್ತಾಮವೀಜಯತ್ ।
ಏವಂ ಸಂವತ್ಸರಗಣಾನ್ ಕ್ರೀಡಂತೌ ನಗಮೂರ್ಧನಿ ॥೪೦॥

---

ಆಮೇಲೆ ಕೈಲಾಸಪರ್ವತದಲ್ಲಿ ಹೀರರತ್ನಖಚಿತವಾದ ಉಪ್ಪರಿಗೆಯ ಮನೆಯಲ್ಲಿ ಸುಗಂಧವು ಸರ್ವತ್ರ ವ್ಯಾಪ್ತವಾಗಿರುವಾಗ, ಅಮೂಲ್ಯವಾದ ಹಾಸಿಗೆ ಮತ್ತು ತಲೆದಿಂಬು ಇವುಗಳಿಂದ ಯುಕ್ತವಾದ ದೊಡ್ಡ ಮಂಚದ ಮೇಲೆ ಪರಮೇಶ್ವರನು ದೇವಿಯೊಡನೆ ಕುಳಿತುಕೊಂಡು, ದೇವಿಯು ಪ್ರೀತಿಯಿಂದ ತನಗೆ ಕೊಟ್ಟ ತಾಂಬೂಲವನ್ನು ಸ್ವಿಕರಿಸಿದನು. ॥೩೭॥

ದೇವಿಯೂ ತಾಂಬೂಲವನ್ನು ಸ್ವೀಕರಿಸಿ, ಆ ತಾಂಬೂಲರಸಧಾರಾಸೇವನೆಯಿಂದ ಸಂತುಷ್ಟಳಾದಮೇಲೆ, ಪರಮೇಶ್ವರನು ದೇವಿಯ ವದನಕಮಲವನ್ನು ಸ್ಪರ್ಶಿಸುತ್ತಾ ದೇವಿ! ನೀನು ಬಹಳ ಕ್ಲೇಶಪಟ್ಟಿರುವೆ; ತಪಸ್ಸಿನಿಂದ ಬಳಲಿರುವೆ; ಎಂದು ಪದೇ ಪದೇ ಹೇಳುತ್ತಾ ಅವಳಲ್ಲೇ ನೆಟ್ಟಮನಸ್ಸುಳ್ಳವನಾಗಿದ್ದನು. ॥೩೮-೩೯॥

ಮತ್ತೂ ದೇವಿಯ ಸಖಿಯರಿಗೆ ಹೇಳಿ ಅವರ ಕೈಗಳಿಂದ ಬೀಸಣಿಗೆಯನ್ನು ಬೀಸುವಂತೆ ಮಾಡಿಸಿದನು. ಪರಮೇಶ್ವರನ ಅಪ್ಪಣೆಯಿಂದ ದೇವಿಯ ಸಖಿಯರು ಗುಂಪು ಗುಂಪಾಗಿ ಬೀಸಣಿಗೆಗಳನ್ನು ಬೀಸಿ ದೇವಿಯನ್ನು ಉಪಚರಿಸಿದರು. ಹೀಗೆ ಸಂತೋಷದಿಂದ ಪಾರ್ವತೀಪರಮೇಶ್ವರರು ಕೈಲಾಸಪರ್ವತದ ಶಿಖರದಲ್ಲಿ ವಿಹರಿಸುತ್ತಿದ್ದರು. ॥೪೦॥

ನಾನಾಹಾರವಿಹಾರೈಶ್ಚ ಸ್ವತಂತ್ರೌ ಪರಮೇಶ್ವರೌ ।
ಕೈಲಾಸಮೌಲಿಸೌಧೇಷು ರಮ್ಯಸಾನುವನೇಷ್ವಪಿ ॥೪೧॥

ಸರಸ್ಸು ವಿಮಲೋದಾರಪದ್ಮಹಲ್ಲಕಶೋಭಿಷು ।
ಲಿಂಗಾಲಯೇಷು ಪುಣ್ಯೇಷು ಲಿಂಗಪೂಜಾಪರೌ ಶಿವೌ ॥೪೨॥

ಲಿಂಗಸಂದರ್ಶನಾಪಾರಕುತುಕೌ ಪರಮೇಶ್ವರೌ ।
ಮೃಗಪಕ್ಷಿಗಣಾನಾಂ ಚ ದರ್ಶನಾಪ್ಯಾಯಿತಾಂತರೌ ॥೪೩॥

ಪ್ರಫುಲ್ಲವನಸಂಚಾರಕ್ರೀಡಾಮಾತಂಗಸನ್ನಿಭೌ ।
ರುದ್ರಾಣೀಕರಜಾಲೋತ್ಥವಾದ್ಯನೃತ್ತಾವಲೋಕಕೌ ॥೪೪॥

---

ಸ್ವತಂತ್ರರಾದ ಪಾರ್ವತೀಪರಮೇಶ್ವರರು, ನಾನಾವಿಧವಾದ ಆಹಾರ ಸೇವನೆಯಿಂದಲೂ, ಬಗೆಬಗೆಯ ವಿಹಾರಗಳಿಂದಲೂ ಕೈಲಾಸಪರ್ವತದ ತುದಿಯಲ್ಲಿರುವ ಉಪ್ಪರಿಗೆ ಮನೆಗಳಲ್ಲಿಯೂ, ಮನೋಹರವಾದ ತಪ್ಪಲುಪ್ರದೇಶದ ವನಗಳಲ್ಲಿಯೂ ವಿಹರಿಸಿದರು. ॥೪೧॥

ನಿರ್ಮಲವೂ, ವಿಶಾಲವೂ, ಆದ ಪದ್ಮ ಮತ್ತು ಕನ್ನೈದಿಲೆ ಹೂಗಳಿಂದ ಶೋಭಿಸುತ್ತಿರುವ ಸರೋವರಗಳ ಸೌಂದರ್ಯಕ್ಕೆ ಮನಸೋತರು. ಅಲ್ಲದೇ ಪುಣ್ಯಕರವಾದ ಶಿವಲಿಂಗಗಳಿರುವ ಸ್ಥಳಗಳಲ್ಲಿ ಶಿವಾಂಬಿಕೆಯರು ಭಕ್ತಿಯಿಂದ ಲಿಂಗಪೂಜೆಮಾಡುತ್ತಿದ್ದರು. ॥೪೨॥

ಈ ಗಿರಿಜೆ ಮಹಾದೇವರು ಶಿವಲಿಂಗದರ್ಶನದಿಂದ ಕುತೂಹಲವಿಶಿಷ್ಟರಾಗುತ್ತಿದ್ದರು. ಅಲ್ಲದೇ ಆ ಪರ್ವತದ ಪ್ರದೇಶದಲ್ಲಿ ಸಂಚರಿಸುವ ಮೃಗಗಳ, ಪಕ್ಷಿಗಳ, ಚಿತ್ರವಿಚಿತ್ರವಾದ ಸಮೂಹವನ್ನು ನೋಡಿ ಸಂತೋಷಹೊಂದುತ್ತಿದ್ದರು. ॥೪೩॥

ಸೊಂಪಾಗಿ ಬೆಳೆದಿರುವ ವನಗಳಲ್ಲಿ ಸ್ವೇಚ್ಛೆಯಿಂದ ಸಂಚಾರಮಾಡುವ ಮದಿಸಿದ ಆನೆಗಳಂತೆ, ವನಮಧ್ಯದಲ್ಲಿ ಈ ಪುರಾಣದಂಪತಿಗಳು ಕ್ರೀಡಿಸುತ್ತಿದ್ದರು. ಕೆಲವು ವೇಳೆ ರುದ್ರಾಣೀದೇವಿಯರು ಬಾರಿಸುವ ವಾದ್ಯವನ್ನು ಕೇಳುತ್ತಲೂ ಅವರಿಂದಲೇ ನಡೆಯುತ್ತಿದ್ದ ನಾಟ್ಯವನ್ನು ನೋಡುತ್ತಲೂ ಅಲ್ಲಲ್ಲಿ ನಿಲ್ಲುತ್ತಿದ್ದರು. ॥೪೪॥

ರಮ್ಯಸ್ವಚ್ಛಸುಧಾಂಭೋಧೌ ನೌಕಾಕ್ರೀಡಾಪರಾಯಣೌ ।
ಸುರುದ್ರವೀಣಾನಿನದೈಸ್ತುಷ್ಟೌ ಹೃಷ್ಟತರೌ ಶಿವೌ ॥೪೫॥

ಸೋಮಸುಧಾಮಕರಾಸಾರನಿಶಾಸು ನಗಮೂರ್ಧನಿ ।
ದಿವ್ಯಕ್ರೀಡಾರಸಭರೈಃ ಕ್ರೀಡತುಶ್ಚ ಸದಾ ಶಿವೌ ॥೪೬॥

ಸರೋವಗಾಹನಪರೌ ವರಯಂತ್ರೋರುಸರ್ಜಕೌ ।
ಕಂದುಕೈಶ್ಚ ತಥಾಕ್ಷೈಶ್ಚ ದೀವ್ಯಂತೌ ಸೌಧಭೂಮಿಷು ॥೪೭॥

ಡೋಲಾಂದೋಲೈಶ್ಚ ಮುದಿತೌ ರಮ್ಯಹಲ್ಲೀಸಲಾಸ್ಯಕೈಃ ॥೪೮॥

॥ ಸ್ಕಂದ ಉವಾಚ ॥

ಏವಂ ತೌ ಶಿವಯೋರಪಾರಪರಮಾನಂದಪ್ರದಾಕೌತುಕ
ಕ್ರೀಡಾಸಾರವಿಲಾಸಲೋಲಹೃದಯೌ ಮೂರ್ಧನ್ಯಶೈಲಸ್ಥಿತೌ ।

---

ಮನೋಹರವೂ ನಿರ್ಮಲವೂ ಆದ ಅಮೃತಸರೋವರದಲ್ಲಿ ದೋಣಿಗಳ ಮೇಲೆ ಕುಳಿತು ಕ್ರೀಡಿಸುತ್ತಿದ್ದರು. ಒಂದೊಂದು ವೇಳೆ ಇಂಪಾಗಿ ಕೇಳಿಬರುವ ರುದ್ರವೀಣೆಗಳ ಧ್ವನಿಗಳಿಂದ ಆನಂದಪರವಶರಾಗುತ್ತಿದ್ದರು. ॥೪೫॥

ಅಮೃತಮಯನಾದ ಚಂದ್ರನು ತನ್ನ ಪೂರ್ಣಕಿರಣವನ್ನು ಬೀರುತ್ತಿರುವ ಬೆಳದಿಂಗಳಿನ ರಾತ್ರಿಗಳಲ್ಲಿ, ಅಂಬಿಕಾ, ಈಶ್ವರರು ಕೈಲಾಸಶಿಖರದಲ್ಲಿ ಸದಾ ದಿವ್ಯವಾದ ಕ್ರೀಡೆಯನ್ನಾಡುತ್ತಾ ಆ ಕ್ರೀಡಾರಸದಿಂದ ಮೈಮರೆಯುತ್ತಿದ್ದರು. ॥೪೬॥

ಆ ಕೈಲಾಸಪರ್ವತದ ಸರಸ್ಸುಗಳಲ್ಲಿ ಕೆಲವು ವೇಳೆ ಜಲಕ್ರೀಡೆಯನ್ನಾಡುತ್ತಿದ್ದರು. ವಿನೋದಕ್ಕಾಗಿ ದೊಡ್ಡ ದೊಡ್ಡ ಯಂತ್ರಗಳನ್ನು ತಾವೇ ಸೃಷ್ಟಿಮಾಡುತ್ತಿದ್ದರು. ಅಲ್ಲದೇ ಸೌಧಪ್ರದೇಶಗಳಲ್ಲಿ ಚಂಡುಗಳಿಂದಲೂ ಮತ್ತು ಪಗಡೆಗಳಿಂದಲೂ ಆಟವಾಡುತ್ತಿದ್ದರು. ॥೪೭॥

ಉಯ್ಯಾಲೆಯನ್ನಾಡುತ್ತಲೂ ಮನೋಹರವಾದ ಹಲ್ಲೀಸ, ಲಾಸ್ಯಕ ಎಂಬ ನಾಟ್ಯಗಳಿಂದ ಸಂತೋಷಹೊಂದುತ್ತಲೂ ಉಮಾಮಹೇಶ್ವರರು ಕಾಲಕಳೆಯುತ್ತಿದ್ದರು. ॥೪೮॥

ಹೀಗೆ ಪಾರ್ವತೀಪರಮೇಶ್ವರರು ಕೈಲಾಸಪರ್ವತ ಶಿಖರದಲ್ಲಿ ವಿಹರಿಸುತ್ತಾ, ಅಪಾರವಾದ ಆನಂದವನ್ನು ಅನುಭವಿಸುತ್ತಾ, ತಮ್ಮ ಕ್ರೀಡೆ ಮತ್ತು ವಿಲಾಸಾದಿ

**ನಾನಾದೇವಯುಗಾದಿವರ್ತನಮಹಾಕಾಲಾತಿಗೌ ತತ್ರ ತೌ**
**ಕೋ ವಾ ವೇತ್ತಿ ಮಹೇಶದಿವ್ಯಚರಿತಂ ಪ್ರೋಕ್ತಂ ಹಿ ಸಂಕ್ಷೇಪತಃ ॥೪೯॥**

**ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ದೇವೀಸಾಂತ್ವನಂ ನಾಮ ಸಪ್ತಮೋಽಧ್ಯಾಯಃ**

---

ಗಳಿಂದ ವೈಮರೆತ ಮನಸ್ಸುಳ್ಳವರಾಗಿ ಅನೇಕ ದೇವಯುಗಪರ್ಯಂತ ಸಂತೋಷದಿಂದ ವಿಹರಿಸುತ್ತಿದ್ದರು. ಜೈಗೀಷವ್ಯನೇ! ಈ ಮಹೇಶ್ವರನ ದಿವ್ಯಲೀಲೆಯನ್ನು ಇಷ್ಟೇ ಎಂದು ಯಾರಿಂದ ತಾನೇ ಹೇಳಲು ಸಾಧ್ಯವಾದೀತು? ನಿನಗೆ ನಾನು ಸಂಕ್ಷೇಪವಾಗಿ ಹೇಳಿರುವೆನು; ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೪೯॥

ಇಲ್ಲಿಗೆ ಶ್ರೀಶಿವರಹಸ್ಯದ ಭವಾಖ್ಯವಾದ ಎರಡನೆಯ ಅಂಶದಲ್ಲಿ
ದೇವೀಸಮಾಧಾನವೆಂಬ ಏಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಅಷ್ಟಮೋಽಧ್ಯಾಯಃ

## ದೇವಸ್ತವಃ

—ಂ೦ಃಂ—

|| ಸ್ಕಂದ ಉವಾಚ ||

ಶೃಣು ದಿವ್ಯಚರಿತ್ರಂ ತ್ವಮ್ಮಹೇಶಸ್ಯ ತ್ರಿಶೂಲಿನಃ ।
ನಿಟಲೇ ಚಿತ್ರಭಾನೋಶ್ಚ ಪಾಪಸಂಘನಿಬರ್ಹಣಂ ||೧||

ಸಾವಧಾನಮನಾ ವಿಪ್ರ ಜೈಗೀಷವ್ಯ ಮಹಾಮತೇ ।
ಮಣಿದ್ವೀಪಸ್ಯ ಚೋತ್ಪತ್ತಿಂ ವಿಸ್ತರಾದ್ಗದತೋ ಮಮ ||೨||

ಯಾಃ ಕಥಾ ಮುನಯಶ್ಶ್ರುತ್ವಾ ಗಣಾ ಅಪಿ ಸುರೋತ್ತಮಾಃ ।
ಭದ್ರಾಣಿ ಪ್ರಾಪ್ನುವಂತ್ಯೇವ ಸ್ಥಾನಂ ವಿಂದೇತ್ಸುದೂರಗಂ ||೩||

---

ಎಲೈ ಜೈಗೀಷವ್ಯಮುನಿಯೇ; ಹಣೆಯಲ್ಲಿ ಅಗ್ನಿಯನ್ನೇ ಧರಿಸಿರುವ ತ್ರಿಶೂಲಿಯಾದ ಮಹೇಶ್ವರನ ಲೀಲೆಯನ್ನು ವಿವರಿಸುವೆನು ಕೇಳು; ಈ ಚರಿತ್ರೆಯ ಶ್ರವಣದಿಂದ ಸಕಲ ಪಾಪಸಮೂಹವು ನಾಶವಾಗುವುದು. ||೧||

ಮಹಾಮೇಧಾವಿಯಾದ ಓ ಜೈಗೀಷವ್ಯಮಹರ್ಷಿಯೇ, ಮಣಿದ್ವೀಪದ ಉತ್ಪತ್ತಿಯನ್ನು ವಿಸ್ತಾರವಾಗಿ ಹೇಳುವೆನು. ಸಾವಧಾನಮನಸ್ಸಿನಿಂದ ಲಾಲಿಸು. ||೨||

ಈ ವಿಷಯವನ್ನು ಕೇಳಿ ಮುನಿಗಳೂ ದೇವತಾಗಣಗಳೂ, ಸಕಲ ಸನ್ಮಂಗಲವನ್ನೂ ಹೊಂದುವರು. ಅಲ್ಲದೇ ಉತ್ತಮವಾದ ಮುಕ್ತಿಯನ್ನೂ ಸಹ ಪಡೆಯುವರೆಂಬುದರಲ್ಲಿ ಸಂಶಯವಿಲ್ಲ ಎಂದು ಸ್ಕಂದಸ್ವಾಮಿಯು ನುಡಿದನು. ||೩||

॥ ಸೂತ ಉವಾಚ ॥

**ಪುನಃ ಪ್ರಣಮ್ಯ ಸಾ ದೇವೀ ಪ್ರಾಹ ಭರ್ತಾರಮೀಕ್ಷತೀ ।**
**ಮನಸಾ ಸುಪ್ರಸನ್ನೇನ ಚೋತ್ಫುಲ್ಲಾನನಪಂಕಜಾ ॥೪॥**

**ಪದ್ಮಕೋಶನಿಭಾಭ್ಯಾಂ ಸಾಶಯಾಭ್ಯಾಂ ಸ್ವಾಂಜಲಿಶ್ರಿನಾ ।**
**ಸ್ವಾಶಯಂ ವಿವಶಂತ್ಯಸ್ಮೈ ಸಾ ಜಗಾದ ತ್ರಿಶೂಲಿನೇ ॥೫॥**

**ದರ್ಶಯಂತೀವ ಸಾ ದೇವೀ ಪ್ರಾಹ ದೇವಂ ಘೃಣಾನಿಧಿಂ ।**
**ರೋಮಾಂಚಕಂಚುಕವತೀ ಮಹಾಪ್ರಣಯಗರ್ಭಿಣೀ ॥೬॥**

**ಚಾರ್ವಕ್ಷೀ ತಂ ವಿರೂಪಾಕ್ಷಮಕ್ಷದೂರಂ ತದೈಕ್ಷತ ॥೭॥**

॥ ದೇವ್ಯುವಾಚ ॥

**ದೇವದೇವ ಮಹಾದೇವ ಲೀಲಾಲಲಿತವಿಗ್ರಹ ।**
**ಖಟ್ವಾಂಗಪಾಣೇ ಭಗವನ್ನಿಭಾಜಿನಧರಾವ್ಯಯ ॥೮॥**

---

ಮಹರ್ಷಿಗಳಿರಾ, ಗಿರಿಜಾದೇವಿಯು ಪುನಃ ಪತಿಗೆ ನಮಸ್ಕರಿಸಿ ಪತಿಯ ಮುಖವನ್ನೇ ನೋಡುತ್ತಾ, ಅರಳಿದ ಮುಖಕಮಲವುಳ್ಳವಳಾಗಿ ನಿರ್ಮಲವಾದ ಮನಸ್ಸಿನಿಂದ ಹೀಗೆ ಪ್ರಶ್ನಿಸಿದಳು. ॥೪॥

ಪದ್ಮದ ಮೊಗ್ಗಿನಂತೆ ಅಂಜಲಿಬದ್ಧಳಾಗಿ ನಿಂತು ಅಭಿಪ್ರಾಯಗರ್ಭಿತವಾದ ಸ್ವಾಶಯವನ್ನು ತ್ರಿಶೂಲಧಾರಿಯಾದ ತನ್ನ ಪತಿಗೆ ತಿಳಿಸುತ್ತಾ ಪರಮೇಶ್ವರನನ್ನು ಕುರಿತು ಹೀಗೆಂದಳು. ॥೫॥

ಪರಶಿವನಲ್ಲಿ ಅತ್ಯಂತ ಭಕ್ತಿಯುಳ್ಳವಳಾದುದರಿಂದ ದೇವಿಯು ಆಗ ರೋಮಾಂಚವೆಂಬ ಕಂಚುಕವನ್ನು ಧರಿಸಿದ್ದಳು. ಅತಿಶಯವಾದ ಪ್ರಣಯವನ್ನೇ ಗರ್ಭದಲ್ಲಿ ಇರಿಸಿದ್ದಳು. ತನ್ನ ಕುತೂಹಲವನ್ನು ಕಣ್ಣುಗಳಿಂದ ವ್ಯಕ್ತಪಡಿಸುತ್ತಾ ಇಂದ್ರಿಯಗಳಿಗೆ ಗೋಚರನಾಗದ ವಿರೂಪಾಕ್ಷನನ್ನು ಕುರಿತು ಹೀಗೆಂದಳು. ॥೬-೭॥

ಮಹಾದೇವನೇ, ದೇವತೆಗಳಿಗೂ ದೇವನಾದ ನೀನು ಲೀಲಾಮಾತ್ರದಿಂದ ದೇಹಿಯಾಗುವೆ. ಸುಂದರವಾದ ರೂಪುಳ್ಳವನೆನಿಸುವೆ. ಖಟ್ವಾಂಗವೆಂಬ ಆಯುಧ ಧಾರಿಯಾಗಿರುವೆ. ಆನೆಯ ಚರ್ಮವನ್ನು ಧರಿಸುವೆ. ನಾಶರಹಿತನೆನಿಸಿ ವ್ಯವಹರಿಸ

ಚಾರುಚಂದ್ರಕಲಾಮೌಲೇ ನಾಗಹಾರಾಂಗಭೂಷಣ ।
ಪ್ರಮಥಾಧೀಶ ಮನ್ನಾಥ ಲೋಕನಾಥ ಜಗತ್ಪತೇ ॥೯॥

ಜಗನ್ಮಯಾವ್ಯಯಾಪಾರಸ್ಥಿತಿರಕ್ಷಣನಾಶಕ ।
ಕಿಂ ತವಾದ್ಯ ವಿಲಂಬೇನ ಸಾಂಬ ಶಂಭೋ ವದಾಧುನಾ ॥೧೦॥

ವಿಚಿತ್ರಶಕ್ತೇ ಭಗವಂಸ್ತ್ವಯಾ ಮೇ ಸ್ಥಾನಮುತ್ತಮಂ ।
ಸುಂದರಾತ್ಸುಂದರಂ ಶಂಭೋ ಚಾನಂದಾಮೃತಸಾಗರಂ ॥೧೧॥

ನ ಕ್ಷುತ್ಪಿಪಾಸೇ ನ ಗ್ಲಾನಿರ್ನ ತೃಷ್ಣಾ ನ ಜರಾದಿಕಂ ।
ತತ್ರ ಸ್ಥಿತಾನಾಂ ಸರ್ವೇಷಾಂ ಕೈಲಾಸಾದಪಿ ಸುಂದರಂ ॥೧೨॥

---

ಲ್ಪಡುವೆ. ಸ್ವಾಮಿಯೇ, ಎಲ್ಲರೂ ನಿನ್ನನ್ನು ಷಡ್ಗುಣೈಶ್ವರ್ಯಸಂಪನ್ನನೆಂದು ಸ್ತೋತ್ರಮಾಡುವರು. ॥೮॥

ದೇವನೇ, ಮನೋಹರನಾದ ಚಂದ್ರಕಲೆಗಳನ್ನೇ ನೀನು ತಲೆಯಲ್ಲಿ ಧರಿಸಿರುವೆ. ಸರ್ಪಹಾರವೇ ನಿನ್ನ ಶರೀರಕ್ಕೆ ಅಲಂಕಾರವಾಗಿರುವುದು. ಸ್ವಾಮಿನ್, ನೀನು ಪ್ರಮಥಗಣಗಳಿಗೂ, ಹದಿನಾಲ್ಕು ಲೋಕಕ್ಕೂ, ಈ ಜಗತ್ತಿಗೂ ಮತ್ತು ನನಗೂ ಒಡೆಯನಾಗಿರುವೆ. ॥೯॥

ನಾಶರಹಿತನಾದ ದೇವನೇ, ಜಗನ್ಮಯನಾದ ನೀನು ಅಪಾರವಾದ ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರ ಇವುಗಳಿಗೆ ಕಾರಣನಾಗಿರುವೆ. ಜಗನ್ಮಂಗಳಕರನಾದ ಸಾಂಬನೇ, ಏಕೆ ವಿಲಂಬಮಾಡುತ್ತಿರುವೆ? ನಿನ್ನ ಇಷ್ಟವನ್ನು ವಿವರಿಸಿ ಹೇಳು. ॥೧೦॥

ವಿಚಿತ್ರಶಕ್ತಿಯುಳ್ಳ ಭಗವಂತನೇ, ನೀನು ನನಗೋಸ್ಕರ ಉತ್ತಮವಾದ ಸ್ಥಾನವೊಂದನ್ನು ನಿರ್ಮಿಸಿ ಕೊಡು. ಆ ಸ್ಥಳವು ಅತ್ಯಂತ ಸುಂದರವಾಗಿ ಆನಂದವೆಂಬ ಅಮೃತಕ್ಕೆ ಆಶ್ರಯವಾದ ಸಾಗರದಂತೆಯೂ ಇರಬೇಕು. ॥೧೧॥

ಅಲ್ಲಿ ವಾಸಮಾಡುವವರಿಗೆ, ಹಸಿವು, ಬಾಯಾರಿಕೆ, ಆಯಾಸ, ಇಚ್ಛೆ ಮತ್ತು ಮುಪ್ಪು ಇವೇ ಮೊದಲಾದವುಗಳಾವುವೂ ಇರಕೂಡದು. ಅದು ಕೈಲಾಸ ಪರ್ವತಕ್ಕಿಂತಲೂ ಸುಂದರವಾದ ಸ್ಥಳವೆನಿಸಿರಬೇಕು. ಅಂತಹ ಪ್ರದೇಶವನ್ನು ನನಗೋಸ್ಕರ ಸೃಷ್ಟಿಮಾಡು. ॥೧೨॥

ಸೃಜ ವಿಶ್ವೇಶ ದಯಯಾ ಮಹ್ಯೈನಾಪಾರಕೌತುಕಂ ।
ನ ಸೃಷ್ಟ್ವಾ ನ ವಿಧಾತ್ರಾಪಿ ವಿಷ್ಣುನಾ ವಾ ತಥೋತ್ತರಂ ॥೧೩॥

ಸ್ರಷ್ಟುಂ ಶಕ್ಯಂ ತ್ವಯಾ ದೇವ ಮನಸೈವ ಮಹೇಶ್ವರ ।
ತ್ವಯಾ ಹಿ ಭಾರತೇ ಖಂಡೇ ಸೃಷ್ಟಮಾನಂದಕಾನನಂ ॥೧೪॥

ತ್ರಿವಿಷ್ಟಪಂ ಚ ವೈಕುಂಠಂ ಸತ್ಯಲೋಕಮಪಿ ಪ್ರಭೋ ।
ನಾರ್ಹಂತಿ ತುಲನಾಂ ಯಸ್ಯ ಲೋಕಾ ಅಪಿ ಚತುರ್ದಶ ॥೧೫॥

ತತ್ರ ತ್ವಂ ಲಿಂಗರೂಪೇಣ ವಿಶ್ವೇಶಾಖ್ಯೇನ ರಾಜಸೇ ।
ಅನ್ನಪೂರ್ಣಾ ಸದೈವಾಹಂ ತತ್ರ ಭಕ್ತಾನ್ನದಾಯಿನೀ ॥೧೬॥

ತತ್ರಾಂತೇ ಸರ್ವಜಂತೂನಾಂ ಮುಕ್ತಿಂ ನಿತ್ಯಾಂ ಪ್ರಯಚ್ಛಸಿ ।
ಲೋಕೋತ್ತರಂ ತೇ ಚರಿತಂ ಕಿಂ ತವಾನುಕೃತಿಂ ಸುರಾಃ ॥೧೭॥

---

ಎಲೈ ವಿಶ್ವೇಶ್ವರನೇ! ನನ್ನ ಮೇಲೆ ದಯೆಯಿಟ್ಟು ನನಗೂ ಆಶ್ಚರ್ಯದಾಯಕವಾಗುವಂತೆ ಒಂದು ಸ್ಥಳವನ್ನು ನಿರ್ಮಿಸು. ನಿನ್ನಿಂದಲ್ಲದೆ, ಇಂತಹ ಸೃಷ್ಟಿಕಾರ್ಯವು ಬ್ರಹ್ಮ ವಿಷ್ಣುಗಳಿಂದಾಗಲಿ, ಇತರ ಯಾರಿಂದಲೇ ಆಗಲಿ ಆಗಲಾರದು. ದೇವ! ನೀನು ಅಪೇಕ್ಷಿಸಿದರೆ ಕ್ಷಣಕಾಲದಲ್ಲಿ ಮನಸ್ಸಿನಿಂದಲೇ ಈ ಕಾರ್ಯವನ್ನು ನಡೆಸುವೆ. ||೧೩||

ಮಹೇಶ್ವರ! ನೀನು ಭರತಖಂಡದಲ್ಲಿ ಮನೋಹರವಾದ ಆನಂದವನವನ್ನು ನಿರ್ಮಿಸಿರುವೆ. ಅಲ್ಲದೇ ಸ್ವರ್ಗ, ವೈಕುಂಠ ಮತ್ತು ಸತ್ಯಲೋಕ ಮುಂತಾದ ಲೋಕಗಳನ್ನು ಸೃಷ್ಟಿಮಾಡಿರುವೆ. ಅಷ್ಟಾದರೂ ಭೂಲೋಕವೇ ಮೊದಲಾದ ಹದಿನಾಲ್ಕು ಲೋಕಗಳೂ, ಈ ಆನಂದವನದ ಸೊಬಗನ್ನು ಹೊಂದಲಾರವು. ||೧೫||

ಪ್ರಭುವೇ! ಆ ಆನಂದವನದಲ್ಲಿ ನೀನು ಲಿಂಗರೂಪವನ್ನು ತಾಳಿ ವಿಶ್ವೇಶನೆಂದು ಪ್ರಸಿದ್ಧನಾಗಿ ಪ್ರಕಾಶಿಸುತ್ತಿರುವೆ. ನಾನು ಅನ್ನಪೂರ್ಣಾ ಎಂಬ ಹೆಸರಿನಿಂದ ಯಾವಾಗಲೂ ನಿನ್ನ ಭಕ್ತರಿಗೆ ಅನ್ನದಾನ ಮಾಡುತ್ತಿರುವೆನು. ||೧೬||

ಈ ಆನಂದಕಾನನದಲ್ಲಿ ವಾಸಮಾಡುವ ಸಕಲ (ಜಂತು) ಪ್ರಾಣಿಗಳಿಗೂ ಅಂತ್ಯಕಾಲದಲ್ಲಿ ನೀನು ಶಾಶ್ವತವಾದ ಮುಕ್ತಿಯನ್ನು ಕೊಟ್ಟು ರಕ್ಷಿಸುವೆ. ಮಹಾದೇವ! ನಿನ್ನ ಚರಿತ್ರೆಯು ಲೋಕೋತ್ತರವಾಗಿರುವುದು. ಸ್ವಾಮಿ! ಇತರ

ಸಾಮರಾಃ ಕಲ್ಪಯಿಷ್ಯಂತಿ ನ ಸ್ರಷ್ಟಾ ನ ಮಯೋಽಪಿ ಹಿ ।
ತವಾನ್ಯಾನಿರ್ಮಿತಂ ಶಂಭೋ ಸಾಕ್ಷಾತ್ಕಾರಣಕಾರಣಂ ॥೧೮॥

ತ್ವಯೈವೇದಂ ಜಗಜ್ಜಾಲಂ ಪುರಾ ಸೃಷ್ಟಂ ಮಹೇಶ್ವರ ।
ರುದ್ರಾಣಾಂ ಕೋಟಯಶ್ಶಂಭೋ ಜರಾಮರಣವರ್ಜಿತಾಃ ॥೧೯॥

ಚಂದ್ರೋತ್ತಂಸಾಃ ಕಪರ್ದೋರುಮೌಲಯೋ ಭಸ್ಮಭೂಷಿತಾಃ ।
ತ್ರಿಶೂಲೋದ್ಯತ್ಕರಾ ದೇವ ತವ ಲೀಲಾವಲೋಕನೈಃ ॥೨೦॥

ದಿವ್ಯಂತರಿಕ್ಷಪಾತಾಲೇ ತಾಂ ದೃಷ್ಟ್ವೈವ ವಿಧಿರ್ಭಯಾತ್ ।
ತ್ವಾಂ ಚ ಸಂಪ್ರಾರ್ಥಯಾಮಾಸ ಮಾ ತೇಽಭೂತ್ಸೃಷ್ಟಿರೀದೃಶೀ॥೨೧॥

---

ಸಾಮಾನ್ಯ ದೇವತೆಗಳು ಇಂತಹ ನಿನ್ನನ್ನು ಅನುಕರಣಮಾಡಲು ಸಾಧ್ಯವೆ! ಸೃಷ್ಟಿ ಕಾರ್ಯದಲ್ಲಿ ಬ್ರಹ್ಮನಾಗಲೀ ಮಯನಾಗಲೀ ನಿನಗೆ ಸರಿದೂಗಲಾರರು. ||೧೭||

ಶಂಭುವೆ! ಬ್ರಹ್ಮಾದಿಗಳಿಂದ ನಿರ್ಮಿತವಾದ ಪ್ರಪಂಚಕ್ಕೆಲ್ಲ ನೀನೇ ಸಾಕ್ಷಾತ್ಕಾರಣನಾಗಿರುವೆ. (ಅಂದರೆ ನಿನ್ನನುಮತಿಯಿಂದ ಬ್ರಹ್ಮಾದಿಗಳೆಲ್ಲರೂ ಪ್ರಪಂಚ ಸೃಷ್ಟಿಮಾಡುವರಾದ್ದರಿಂದ ಆ ಸೃಷ್ಟಿಗೂ ಶಂಕರನೇ ಮುಖ್ಯಕಾರಣನಾಗಿರುವನೆಂದು ಅಭಿಪ್ರಾಯ) ಮಹೇಶ್ವರನೇ, ಈ ಪ್ರಪಂಚಸಮೂಹವೆಲ್ಲವೂ ಮೊದಲು ನಿನ್ನಿಂದಲೇ ಸೃಷ್ಟಿಮಾಡಲ್ಪಟ್ಟಿದ್ದಿತು. ಈಗ ನಿಮಿತ್ತಮಾತ್ರಕ್ಕೆ ಬ್ರಹ್ಮನೇ ಮುಂತಾದವರು ಸೃಷ್ಟಿಕರ್ತರೆನಿಸಿರುವರು. ||೧೮||

ದೇವ! ನಿನ್ನ ಕೃಪಾಕಟಾಕ್ಷಕ್ಕೆ ಪಾತ್ರರಾದವರು ಮುಪ್ಪು ಮತ್ತು ಸಾವು ಇವುಗಳಿಲ್ಲದ ಶಿವಸ್ವರೂಪವನ್ನೇ ತಾಳುವರು. ಅವರೆಲ್ಲರೂ ಚಂದ್ರಮೌಳಿಗಳಾಗಿ ದೊಡ್ಡ ದೊಡ್ಡ ಜಟಾಸಮೂಹಗಳಿಂದ ಕೂಡಿ, ಅಂಗಾಂಗಗಳಿಗೆಲ್ಲಾ ಭಸ್ಮವನ್ನು ಹಚ್ಚಿಕೊಂಡು ನಿನ್ನಂತೆಯೇ ತ್ರಿಶೂಲಿಗಳೆನಿಸುವರು. ಅಂತಹವರನ್ನೇ ಮೊದಲು ನೀನು ಸೃಷ್ಟಿಸಿದೆ. ||೧೯-೨೦||

ಅಂತಹ ನಿನ್ನ ಭಕ್ತರ ತಂಡವನ್ನು ಭೂಮಿ, ಅಂತರಿಕ್ಷ ಮತ್ತು ಪಾತಾಳ ಈ ಎಲ್ಲಾ ಕಡೆಗಳಲ್ಲಿಯೂ ನೋಡಿ, ಬ್ರಹ್ಮನು ಹೆದರಿ ಭಯದಿಂದ ಆಗ ನಿನ್ನನ್ನು ಕುರಿತು, ದೇವ! ಇನ್ನು ಮೇಲೆ ಈ ರೀತಿ ನೀನು ಭಕ್ತರನ್ನು ಸೃಷ್ಟಿಮಾಡುವ ಕಾರ್ಯವನ್ನು ದಯೆಯಿಟ್ಟು ನಿಲ್ಲಿಸು ಎಂದು ಪ್ರಾರ್ಥಿಸಿದನು. ||೨೧||

ತದ್ವಾಕ್ಯಾನಂತರಂ ಶಂಭೋಸ್ಸ್ಥಾಣುತ್ವಂ ಪ್ರಾಪ್ತವಾನೀಶ್ವರ ।
ತ್ವಯೈವೋಕ್ತೋ ವಿಧೇ ಸೃಷ್ಟೌ ಸೃಜ ತ್ವಮಶುಭಾಃ ಪ್ರಜಾಃ ॥೨೨॥

ಜರಾಮರಣಧರ್ಮಿಣ್ಯೋ ನಾಹಂ ಸ್ರಷ್ಟ್ಯೇಽಶುಭಾಃ ಪ್ರಜಾಃ ।
ತ್ವಂ ಸರ್ವಮಂಗಲಾಕಾರಸ್ತಸ್ಮಾತ್ಸ್ಥಾನವರಂ ಮಮ ॥೨೩॥

ಲೋಕೋತ್ತರಂ ಮಹಾದೇವ ವಿಹಾರಶ್ಚಾವಯೋಸ್ಸದಾ ।
ಸೃಜೈವಂ ಮನಸಾ ದೇವ ಮತ್ಪ್ರಿಯಾರ್ಥಂ ಮಹೇಶ್ವರ ॥೨೪॥

ಇತಿ ದೇವ್ಯಾ ಮಹಾದೇವಃ ಪ್ರಾರ್ಥಿತಸ್ಸ ತದಾ ಮುದಾ ।
ಜಾತಹರ್ಷಸ್ಸ್ವಶೀರ್ಷಾಗ್ರಂ ತಾನೋಮಿತ್ಯಾಂದೋಲಯನ್ಮುದಾ ॥೨೫॥

ಪರಮಾನಂದಸಂದೋಹಸಾಗರಾಂತರ್ನಿಮಗ್ನಧೀಃ ।
ಕ್ಷಣಂ ದಧ್ಯೌ ಮಹಾದೇವೋ ಲೀಲಾಸೃಷ್ಟಿಪ್ರವರ್ತಕಃ ॥೨೬॥

---

ಈಶ್ವರನೇ, ಹೀಗೆ ಬ್ರಹ್ಮನು ನಿನ್ನನ್ನು ಪ್ರಾರ್ಥಿಸಿದ ನಂತರ ಶಂಭುವೆನಿಸಿದ ನಿನಗೆ "ಸ್ಥಾಣು" (ಸುಮ್ಮನೆ ಇರುವವನು. ಮೋಟುಮರದಂತೆ ಯಾವ ಸೃಷ್ಟ್ಯಾದಿಕಾರ್ಯಕ್ಕೂ ಪ್ರಯತ್ನಿಸದವನು) ಎಂದು ಹೆಸರು ಬಂದಿತು. ಆಗ ನೀನು ಬ್ರಹ್ಮನನ್ನು ಕುರಿತು, ಬ್ರಹ್ಮನೇ, ಜರೆ (ಮುಪ್ಪು) ಮತ್ತು ಮರಣ (ಸಾವು) ಈ ಧರ್ಮಗಳಿಗೊಳಗಾಗುವ ಅಶುಭಪ್ರಾಣಿಗಳನ್ನು ನೀನೇ ಸೃಷ್ಟಿಮಾಡು, ಇನ್ನು ಮುಂದೆ ಈ ರೀತಿಯಾದ ಅಶುಭಪ್ರಾಣಿಗಳ ಸೃಷ್ಟಿಕಾರ್ಯಕ್ಕೆ ನಾನು ಕೈಹಾಕುವುದಿಲ್ಲವೆಂದು ಹೇಳಿರುವೆ. ॥೨೨॥

ಮಹೇಶ್ವರನೇ, ನೀನು ಸರ್ವಮಂಗಳಸ್ವರೂಪನು. ನಾವಿಬ್ಬರೂ ಸದಾ ಸುಖವಾಗಿ ವಿಹಾರಮಾಡಲು ಅನುಕೂಲವಾದ ಮತ್ತು ಉತ್ತಮವಾದ ಒಂದು ಸ್ಥಾನವನ್ನು ಲೋಕೋತ್ತರ ಸೌಂದರ್ಯಯುಕ್ತವಾಗಿರುವಂತೆ ನನಗೋಸ್ಕರ ಮನಸ್ಸುಮಾಡಿ ಸೃಷ್ಟಿಸು. ಇದರಿಂದ ನನಗೆ ಪ್ರಿಯವನ್ನುಂಟುಮಾಡಿದಂತೆ ಆಗುವುದು. ॥೨೩-೨೪॥

ಹೀಗೆ ಪಾರ್ವತೀದೇವಿಯು ಪ್ರಾರ್ಥನೆಮಾಡಿದಮೇಲೆ ಪರಮೇಶ್ವರನು ಸಂತೋಷದಿಂದ ಆಗಲಿ ಎಂಬ ಅಂಗೀಕಾರಸೂಚಕವಾದ ಓಂಕಾರಮಾಡುತ್ತಾ ತನ್ನ ತಲೆಯನ್ನಲ್ಲಾಡಿಸಿದನು. ಮತ್ತು ಪರಮಾನಂದಭರಿತನಾಗಿ ಲೀಲಾಮಾತ್ರದಿಂದ

ತತ್ಕ್ಷಣಾದ್ವಾಪ್ಯಸ್ವರಂ ತೇಜಸ್ಸಮುತ್ತಸ್ಥೌ ಸುಧಾಂಬುಧೇಃ ।
ಕೋಟಿಭಾಸ್ಕರಸಂಕಾಶಂ ಪಾರ್ವಣೇಂದುಶತಾಧಿಕಂ ॥೨೭॥

ವಿದ್ಯುತ್ಕೋಟಿಪ್ರತೀಕಾಶಮಿಂದ್ರಚಾಪಾಯುತೋತ್ತರಂ ।
ವಲಕ್ಷಂ ಭಾಸಿತಾಕಾಶಂ ಜ್ಯೋತಿರ್ಮಯಮನುತ್ತಮಮ್ ॥೨೮॥

ತತ್ಪ್ರಭಾಭಾಸಿತಾ ಲೋಕಾ ಭುವನಾನಿ ಚತುರ್ದಶ ।
ಬ್ರಹ್ಮಾ ವಿಷ್ಣುರ್ಹರಶ್ಶಕ್ರಸ್ತಥೈವ ಮರುತಾಂ ಗಣಾಃ ॥೨೯॥

ಗಂಧರ್ವಾ ಗರುತಾಸ್ಸಿದ್ಧಾಸ್ತಥೈವ ಚ ವರಾಪ್ಸರಾಃ ।
ಲೋಕಪಾಲಾಸ್ತಥಾ ಯಕ್ಷಾ ಗ್ರಹಾಸ್ತಾರಾ ಮುನೀಶ್ವರಾಃ ॥೩೦॥

ಅತ್ಯಂತವಿಸ್ಮಿತಾ ಭೀತಾಸ್ತೇ ಪಶ್ಯಂತಿ ಸ್ವಲೋಕಗಾಃ ।
ಕಿಮೇತದಿತ್ಯಹೋಽಕಾಂಡಂ ತೇಜಃಪುಂಜಂ ದುರಾಸದಂ ॥೩೧॥

---

ಸೃಷ್ಟಿಕಾರ್ಯವನ್ನೆಸಗುವ ಮಹಾದೇವನು ಕ್ಷಣಕಾಲ ಧ್ಯಾನಾಸಕ್ತನಾದನು. ॥೨೬॥

ಮಹಾದೇವನು ಧ್ಯಾನಮಾಡಿದ ಮರುಕ್ಷಣದಲ್ಲಿಯೇ ಅಮೃತಸಮುದ್ರದಿಂದ ಕೋಟಿಸೂರ್ಯರಿಗೆ ಸಮಾನವಾದುದೂ, ನೂರಾರು ಪರ್ವಕಾಲದ (ಪೂರ್ಣಿಮಾ) ಚಂದ್ರರಿಗಿಂತಲೂ ಅಧಿಕವಾದ ಕಾಂತಿಯುಳ್ಳದ್ದೂ ಆದ ಪ್ರಕಾಶಮಾನವಾದ ದಿವ್ಯ ತೇಜಸ್ಸು ಮೇಲಕ್ಕೆ ಹೊರಟಿತು. ॥೨೭॥

ಆ ತೇಜಸ್ಸು ಕೋಟಿ ಮಿಂಚುಗಳಿಗೆ ಸಮಾನವಾಗಿಯೂ, ಹತ್ತು ಸಾವಿರ ಇಂದ್ರಧನುಸ್ಸುಗಳಿಗೆ ಸದೃಶವಾಗಿಯೂ, ಶುಭ್ರವರ್ಣವುಳ್ಳದಾಗಿಯೂ ಹೊಳೆಯುತ್ತಾ ತನ್ನ ಕಾಂತಿಯಿಂದ ಅಂತರಿಕ್ಷವನ್ನೆಲ್ಲಾ ಪ್ರಕಾಶಪಡಿಸುತ್ತಿದ್ದಿತು. ॥೨೮॥

ಹದಿನಾಲ್ಕು ಲೋಕಗಳೂ ಆ ತೇಜಸ್ಸಿನ ಕಾಂತಿಯಿಂದ ಪ್ರಕಾಶಹೊಂದಿದವು. ಬ್ರಹ್ಮ, ವಿಷ್ಣು, ಮಹೇಶ್ವರ, ಇಂದ್ರ, ದೇವಗಣಗಳೂ, ಮತ್ತು ಮರುದ್ಗಣಗಳೂ, ॥೨೯॥

ಗಂಧರ್ವರೂ, ಗರುಡರೂ, ಸಿದ್ಧರೂ, ಶ್ರೇಷ್ಠರಾದ ಅಪ್ಸರೆಯರೂ, ಇಂದ್ರಾದಿ ಲೋಕಪಾಲಕರೂ, ಯಕ್ಷರೂ, ಆದಿತ್ಯಾದಿ ಗ್ರಹಗಳೂ, ಅಶ್ವಿನ್ಯಾದಿ ನಕ್ಷತ್ರಗಳೂ ಮತ್ತು ಮುನಿಪುಂಗವರು ಇವರೆಲ್ಲರೂ ತಮ್ಮ ತಮ್ಮ ಲೋಕದಲ್ಲಿಯೇ ನಿಂತುಕೊಂಡು

ದೇವಾನಾಂ ಚಾಸುರಾಣಾಂ ಚ ಸರ್ವೇಷಾಂ ನೋ ಭಯಾವಹಂ ।
ಪುರಾ ಸುರಾಸುರೈಶ್ಚೈವ ಮಥಿತಃ ಕ್ಷೀರವಾರಿಧಿಃ ॥೩೨॥

ಸಮುತ್ಪನ್ನಂ ಕಾಲಕೂಟಂ ದೇವಾನಾಂ ತು ಭಯಾವಹಂ ।
(ತತ್ಕೀಲಾ)ತಜ್ಜ್ವಾಲಾದಗ್ಧಸರ್ವಾಂಗಾ ಮಹೇಶೇನ ಪ್ರಸಾದಿತಾಃ ॥೩೩॥

ಗರಂ ಭಕ್ಷಯತಾ ತೇನ ಮಹೇಶೇನಾಮಿತಾತ್ಮನಾ ।
ಅಂಧಕೋತ್ಥಮಹಾಭೀತ್ಯಾ ಶಂಕರೇಣೈವ ರಕ್ಷಿತಾಃ ॥೩೪॥

ತ್ರಿಪುರಾಣಾಂ ಭಯಾಚ್ಚೈವ ತೇನೇಶೇನ ವಿಮೋಚಿತಾಃ ।
ವಯಂ ಶರಣ್ಯಂ ಶರಣಮನುಯಾಸ್ಯಾಮ ಶಂಕರಂ ॥೩೫॥

---

"ಇದೇನು ! ಅಕಾಲದಲ್ಲಿ ಅನಿವಾರ್ಯವಾದ ತೇಜಃಪುಂಜವು ಉಂಟಾಗಿರುವುದಲ್ಲಾ" ಎಂದು ಎಲ್ಲರೂ ಆ ತೇಜಸ್ಸನ್ನು ನೋಡಿ ಬಹಳವಾದ ಆಶ್ಚರ್ಯ ಮತ್ತು ಭಯ ಇವುಗಳಿಗೊಳಗಾದರು. ಆ ತೇಜಃಪುಂಜವು ದೇವತೆಗಳಿಗೂ ರಾಕ್ಷಸರಿಗೂ ಅಲ್ಲದೇ ಇತರ ನಮ್ಮೆಲ್ಲರಿಗೂ ಬಹಳ ಭಯವನ್ನುಂಟುಮಾಡುವುದಾಗಿದ್ದಿತು. ||೩೦-೩೧||

"ಹಿಂದೆ ದೇವ ದಾನವರೆಲ್ಲರೂ ಒಟ್ಟುಸೇರಿ, ಕ್ಷೀರಸಮುದ್ರವನ್ನು ಕಡೆದಾಗ ಈ ಕಡೆತದಿಂದ ದೇವತೆಗಳಿಗೆಲ್ಲಾ ಭಯವನ್ನುಂಟುಮಾಡುವ ಘೋರವಾದ ಕಾಲಕೂಟವಿಷವು ಉತ್ಪನ್ನವಾಯಿತು. ಆಗ ದೇವತೆಗಳಿಗೆ ಆ ಮಹಾ ವಿಷಜ್ವಾಲೆಯಿಂದ ಸರ್ವಾಂಗಗಳಲ್ಲಿಯೂ ಉರಿಯುಂಟಾಗಲು ಮಹಾಮಹಿಮನಾದ ಮಹೇಶ್ವರನು ಆ ವಿಷವನ್ನು ತಾನು ತಿಂದು ದೇವತೆಗಳಿಗೆಲ್ಲಾ ಅನುಗ್ರಹಮಾಡಿದನು. ||೩೨-೩೩||

ಅಂಧಕಾಸುರನು ಭಯಂಕರನಾಗಿ ಲೋಕಕ್ಕೆಲ್ಲಾ ತೊಂದರೆಯನ್ನುಂಟುಮಾಡುತ್ತಿರಲು ಆಗ ಶಂಕರನು ಆ ರಾಕ್ಷಸನನ್ನು ನಾಶಪಡಿಸಿ ಮಹಾಭಯವನ್ನು ಹೋಗಲಾಡಿಸಿದನು. ಅಲ್ಲದೆ ತ್ರಿಪುರಾಸುರರಿಗೆ ಹೆದರಿ ಜಗತ್ತೆಲ್ಲಾ ನಡುಗುತ್ತಿರುವಾಗಲೂ ಆ ಪರಮೇಶ್ವರನೇ, ನಮಗೆ ಆ ರಾಕ್ಷಸರನ್ನು ಕೊಂದು ಭಯವನ್ನು ನೀಗಿದನು. ಆದುದರಿಂದ ನಾವೆಲ್ಲರೂ ಈಗ ಶರಣಾಗತರಕ್ಷಕನಾದ ಆ ಶಂಕರನನ್ನೇ ಮರೆಹೋಗೋಣ." ||೩೪-೩೫||

ಇತಿ ಬ್ರಹ್ಮಾದಯೋ ದೇವಾ ಮೇರುಮೌಲೌ ಸ್ಥಿತಾಸ್ತದಾ ।
ಕೃತಾಂಜಲಿಪುಟಾಸ್ಸರ್ವೇ ಕೈಲಾಸಸ್ಥಂ ಮಹೇಶ್ವರಂ ॥೩೬॥

ತುಷ್ಟುವುಃ ಪರಯಾ ಭಕ್ತ್ಯಾ ಬ್ರಹ್ಮವಿಷ್ಣುಹರಾಮರಾಃ ॥೩೭॥

॥ ದೇವಾ ಊಚುಃ ॥

ಜಯ ಜಯ ಶಂಕರ ಚಂದ್ರಶೇಖರ
ಪ್ರಮಥಾಧೀಶ್ವರ ಚಾರುಚಂದ್ರಚೂಡ ।
ಜಯ ಜಯ ನಿಗಮಾದಿವಂದ್ಯಪಾದೋ
ಜ್ಜ್ವಲಿಕಾನಲಫಾಲಲೋಚ[1]ನಾದ್ಯ ನಃ ॥೩೮॥

ಜಯ ಜಯ ಗಜಚರ್ಮಶೋಭಿತಾಂಗ
ಜಯ ಜಯ ವಿಶ್ವವಿಧಾನ ಶೂಲಪಾಣೇ ।
ಜಯ ಜಯ ತ್ರಿಪುರಾಂತಕೇಶ ಶಂಭೋ
ಜಯ ಜಯ ಶಾಂತ ಶಶಾಂಕಚಾರುಮೌಲೇ ॥೩೯॥

---

ಎಂದು ಯೋಚನೆಮಾಡಿ, ಮೇರುಪರ್ವತದ ಶಿಖರದಲ್ಲಿ ನಿಂತಿದ್ದ ಬ್ರಹ್ಮಾದಿ ದೇವತೆಗಳೆಲ್ಲರೂ ಕೈಜೋಡಿಸಿ ಭಯ ಭಕ್ತಿಯಿಂದ ಕೈಲಾಸವಾಸಿಯಾದ ಪರಮೇಶ್ವರನನ್ನು ಹೀಗೆ ಸ್ತೋತ್ರಮಾಡತೊಡಗಿದರು. ॥೩೬-೩೭॥

"ಚಂದ್ರಶೇಖರನೇ, ಮಂಗಳಸ್ವರೂಪನಾಗಿ ಪ್ರಮಥಗಣಗಳಿಗೆ ಒಡೆಯನೆನಿಸಿ, ಸುಂದರನಾದ ಚಂದ್ರನನ್ನೇ ತಲೆಯಲ್ಲಿ ಧರಿಸಿರುವ ನಿನಗೆ ಜಯವಾಗಲಿ. ನೀನು ಸರ್ವೋತ್ಕೃಷ್ಟನಾಗಿರು. ಅಗ್ನಿಯನ್ನೇ ಹಣೆಯಲ್ಲಿ ಮೂರನೆಯ ಕಣ್ಣಾಗಿ ಧರಿಸಿರುವ ಮಹಾದೇವನೇ, ವೇದವೇ ಮುಂತಾದುವುಗಳಿಂದ (ಶೃತಿಸ್ಮೃತಿಪುರಾಣಗಳಿಂದ) ಅನವರತವೂ ಸ್ತುತಿಸಲ್ಪಡುತ್ತಿರುವವನೇ, ದೇವದೇವನೇ ನಮ್ಮನ್ನು ಈ ಭಯದಿಂದ ರಕ್ಷಿಸು. ॥೩೮॥

ಆನೆಯ ಚರ್ಮದಿಂದ ಪರಿಶೋಭಿಸುತ್ತಿರುವ ಅವಯವಗಳುಳ್ಳ ಸ್ವಾಮಿಯೇ, ನಿನಗೆ ಜಯವಾಗಲಿ. ಜಗತ್ಸೃಷ್ಟಿಸ್ಥಿತಿಸಂಹಾರಕಾರ್ಯಗಳನ್ನೆಸಗುವ ತ್ರಿಶೂಲಪಾಣಿಯೇ, ನೀನು ಸರ್ವೋತ್ಕರ್ಷವನ್ನು ಹೊಂದು. ತ್ರಿಪುರಾಸುರನಾಶಕನಾದ ಶಂಭುವೇ, ನೀನು ಜಯಶೀಲನಾಗು. ಶಾಂತನೂ ಚಂದ್ರಮೌಳಿಯೂ ಆದ ಮಹಾದೇವನೇ, ಇದೋ ನಿನಗೆ ಮಂಗಳವಾಗಲಿ. ॥೩೯॥

---

1 ಲೋಚನಾವನಃ (ಪಾ ರ.)

ಜಯ ಜಯ ತಟಿನೀಜಟೋತ್ತಮಾಂಗ
ಜಯ ಕಾಕೋದರವೀರಹಾರ ಶಂಭೋ ।
ಗರಕಂಧರ ಭೂರುಹೋರುವಾಸ
ತ್ರಿಜಗತ್ತಾಪಹರಾವ್ಯಯೇಶ ದೇವ ॥೪೦॥

ಜಯ ಜಯ ಜಗದೀಶ ದೀನಬಂಧೋ
ಮಧುವೈರಿಪ್ರಕಟಾಕ್ಷಿಪೂಜ್ಯಪಾದ ।
ಜಯ ಜಯ ಮಾರಹರಾತ್ತಶೂಲಪಾಣೇ
ಪ್ರಮಥಾಧೀಶ್ವರ ಪಾಹಿ ಭೀತಿತೋಽದ್ಯ ನಃ ॥೪೧॥

ಜಯ ಜಯ ವಿಬುಧಾರ್ತಿನಾಶಹೇತೋ
ಜಯ ಜಯ ಭಸ್ಮವಿಭೂಷಣೇಷು ತುಷ್ಟ ।
ಪ್ರಸಭಂ ಕಷ್ಟಮಪಾಕುರುಷ್ವ ಶಂಭೋ
ಗಿರಿಜಾನಾಥ ಸನಾಥಯಾಶು ನಃ ॥೪೨॥

---

ದೇವ, ದಿವ್ಯಗಂಗೆಯನ್ನೇ ತಲೆಯಲ್ಲಿ (ಜಡೆಗಳಲ್ಲಿ) ಧರಿಸಿ, ನೀನು ನಾಗ ಶ್ರೇಷ್ಠನಾದ ಆದಿಶೇಷನನ್ನೇ ಹಾರವನ್ನಾಗಿ ಮಾಡಿಕೊಂಡಿರುವೆ. ಮಹಾಭಯಂಕರ ವಾದ ಕಾಲಕೂಟವಿಷವನ್ನು ಭಕ್ಷಿಸಿದುದರಿಂದ ಕಂಠವು ಕಪ್ಪಾಗಿ ನೀನು ವಿಷಕಂಠ ನೆನಿಸಿರುವೆ. ಭೂಮಿಯ ಮೇಲಿರುವ ಪರ್ವತಗಳಿಗೆಲ್ಲಾ ದೊಡ್ಡದಾದ ಕೈಲಾಸ ಪರ್ವತವೇ ನಿನಗೆ ವಾಸಸ್ಥಳವಾಗಿರುವುದು. ದೇವ, ಸರ್ವೇಶ್ವರನಾದ ನೀನು ಈಗ ಮೂರು ಲೋಕಗಳಿಗುಂಟಾಗಿರುವ ಭಯವನ್ನು ಹೋಗಲಾಡಿಸಲು ಸಮರ್ಥನು. ಮಹೇಶ್ವರನೇ, ನಿನಗೆ ಜಯವಾಗಲಿ. ॥೪೦॥

ಜಗದೀಶ್ವರ, ನೀನು ಅನಾಥರಕ್ಷಕನು. ವಿಷ್ಣುವಿನ ಕಮಲನೇತ್ರದಿಂದ ಪಾದ ಪೂಜೆಯನ್ನು ಸ್ವೀಕರಿಸಿದವನು ನೀನು. ತ್ರಿಶೂಲಪಾಣಿಯೇ, ಜಗನ್ಮೋಹಕನಾದ ಮನ್ಮಥನು ನಿನ್ನ ಫಾಲಾಗ್ನಿಗೆ ಗುರಿಯಾಗಿ ಮೃತನಾದನು. ಪ್ರಮಥಗಣಾಧಿಪತಿ ಯಾದ ದೇವನೇ, ನಿನಗೇ ಜಯವಾಗಲಿ. ನಮಗುಂಟಾಗಿರುವ ಭಯವನ್ನು ತೊಲಗಿಸಿ ಕಾಪಾಡು. ॥೪೧॥

ದೇವತೆಗಳ ದುಃಖವನ್ನು ನಾಶಮಾಡಲು ಮೂಲಕಾರಣನಾದ ಶಂಭುವೇ, ಸದಾ ಭಸ್ಮಾಭರಣಗಳಲ್ಲಿಯೇ ಸಂತೋಷಹೊಂದುವ ನಿನಗೆ ಜಯವಾಗಲಿ. ಎಲೈ

|| ಸ್ಕಂದ ಉವಾಚ ||

ಇತಿ ವಿಬುಧಜನೋತ್ಥಘೋಷವರ್ಗ
ಶ್ರವಣಾಸಾರಸುಖಸ್ತವಂ ಮಹೇಶಃ ।
ಪರಿಶುಶ್ರಾವ ನಗಾಧಿಪೋರುಮೌಲೌ
ಗಿರಿಜಾಮೀಕ್ಷ್ಯ ತದಂತಿಕಾಂ ಚ ದೂತೀಂ ॥೪೩॥

ಸಮುಲೋಕಯದಾಶು ಚಾರುದೃಷ್ಟ್ಯಾ
ಹಿಮಧಾಮೋತ್ತರಯಾ ಸುಚಾರುಚಂದ್ರಚೂಡಃ ।
ಕಿಮಿದಂ ಪ್ರಸಭಂ ಸ್ತವೋರುಘೋಷಂ
ಕಥಯಾದ್ಯೇತಿ ವಿಚಾರ್ಯ ನಂದಿನಂ ತ್ವಂ ॥೪೪॥

ದ್ರುತಮಾಯಾಹಿ ಸಖೀತ್ಯವೋಚ
ದ್ಗಿರಿಜಾಜಾನಿತದಿಂಗಿತೇಕ್ಷಣೇನ ।
ಗಿರಿರಾಜಾತ್ಮಜಯಾ ತದಾಭ್ಯನುಜ್ಞಾ
ಮಧಿವಾಪ್ಯೈವ ಸಖೀ ತತೋ ದ್ರುತಂ ಸಾ ॥೪೫॥

---

ಗಿರಿಜಾರಮಣನೇ, ನಮಗೊದಗಿರುವ ಈ ಭಯವನ್ನು ಜಾಗ್ರತೆಯಾಗಿ ಹೋಗಲಾಡಿಸಿ ನಮ್ಮನ್ನು ರಕ್ಷಿಸು. ನೀನೇ ನಮಗೆ ಒಡೆಯನು;" ಎಂದು ದೇವತೆಗಳು ವಿಧವಿಧವಾಗಿ ಸ್ತೋತ್ರಮಾಡಿದರು. ||೪೨||

ಓ ಜೈಗೀಷವ್ಯಮುನಿಯೇ, ಹೀಗೆ ದೇವತಾಸಮೂಹವೆಲ್ಲವೂ ಗಂಭೀರವಾದ ಧ್ವನಿಯಿಂದ ಕರ್ಣಾನಂದವುಂಟಾಗುವಂತೆ ಸ್ತೋತ್ರಮಾಡಿದುದನ್ನು ಕೈಲಾಸ ಪರ್ವತದ ಶಿಖರದಲ್ಲಿದ್ದ ಪರಮೇಶ್ವರನು ಕೇಳಿ, ಒಡನೆಯೇ ಸಮೀಪದಲ್ಲಿದ್ದ ಗಿರಿಜೆಯನ್ನೂ ಅವಳ ಹತ್ತಿರವೇ ಇದ್ದ ದೂತಿಯನ್ನೂ ನೋಡಿದನು. ||೪೩||

ಅತಿಸುಂದರನಾದ ಚಂದ್ರನನ್ನೇ ಜಡೆಯಲ್ಲಿ ಧರಿಸಿರುವ ಮಹಾದೇವನು ತನ್ನ ಮನೋಹರವಾದ ನೋಟದಿಂದ ಆ ಸಖಿಯನ್ನು ಕುರಿತು, "ಏಕಕಾಲದಲ್ಲಿ ದೊಡ್ಡ ಸ್ತೋತ್ರಘೋಷವು ಕೇಳುತ್ತಿರುವುದು. ಇದಕ್ಕೆ ಕಾರಣವೇನು? ಎಂಬುದನ್ನು ತಿಳಿದುಕೊಂಡು ಬಂದು ಹೇಳುವಂತೆ ಜಾಗ್ರತೆ ಹೋಗಿ ನಂದಿಗೆ ತಿಳಿಸು." ಎಂಬ ಅಭಿಪ್ರಾಯವನ್ನು ಕೇವಲ ನೋಟದಿಂದಲೇ ಆ ಸಖಿಗೆ ತಿಳಿಸಿದನು. ||೪೪||

ಸಖಿ! ಜಾಗ್ರತೆಯಾಗಿ ತಿಳಿದುಕೊಂಡುಬರುವಂತೆ ನಂದಿಗೆ ಹೇಳಿಬಾ ಎಂಬ

**ಕೈಲಾಸಾಮಲಹೀರಸೌಧತಲತೋ ಯಾತಾ ದ್ರುತಂ ನಂದಿನಂ
ರಾಜದ್ವಾರಲಲಚ್ಚಲಾಚಲಗತಿರ್ದಿವ್ಯಾಂಗರಾಗೋಜ್ಜ್ವಲಾ ।
ನತ್ವಾ ಶಂಭುಪದಾಂಬುಜಂ ಚ ಗಿರಿಜಾಂ ಸಾ ವೈಜಯಂತೀಮಿವ
ಜ್ಯೋತಿಃ ಕ್ಲಿನ್ನದಿಶಾಂ ಮುಖೋಜ್ಜ್ವಲಯುತಾ ಸಾ ವೈಜಯಂತೀ ಸಖೀ ॥೪೬॥**

**ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ದೇವಸ್ತವೋ ನಾಮ ಅಷ್ಟಮೋಽಧ್ಯಾಯಃ**

---

ಅಭಿಪ್ರಾಯಗರ್ಭಿತವಾದ ಪರಮೇಶ್ವರನ ನೋಟದಿಂದಲೇ ಶಿವನಭಿಪ್ರಾಯವನ್ನರಿತು ಆ ಸಖಿಯು ಗಿರಿಜೆಯನುಮತಿಪಡೆದು ಜಾಗ್ರತೆಯಾಗಿ ಅಲ್ಲಿಂದ ಹೊರಟಳು. ||೪೫||

ರಾಜದ್ವಾರದಲ್ಲಿ ತನ್ನ ಮಂದೋಚ್ಚವಾದ ನಡಿಗೆಯಿಂದ ಪ್ರಕಾಶಿಸುತ್ತಾ ದಿವ್ಯಾಂಗರಾಗಗಳ ಕೆಂಪಿನಿಂದ ಹೊಳೆಯುತ್ತಿರುವ ಗಿರಿಜಾಸಖಿಯಾದ ಆ ವೈಜಯಂತಿಯು, ಪರಿಶುದ್ಧವಾದ ಹೀರರತ್ನಗಳಿಂದ ನಿರ್ಮಿತವಾದ ಕೈಲಾಸಪರ್ವತದ ಉಪ್ಪರಿಗೆಯ ಮನೆಯಿಂದ ಹೊರಡುವುದಕ್ಕೆ ಮುಂಚೆ, ಪರಮೇಶ್ವರನ ಪಾದಕಮಲವನ್ನೂ ತನ್ನ ಒಡತಿಯಾದ ಗಿರಿಜಾದೇವಿಯನ್ನೂ ಸ್ಮರಿಸುತ್ತಾ, ಕಾಂತಿಹೀನವಾದ ದಿಕ್ಕುಗಳಿಗೆಲ್ಲಾ ತನ್ನ ಉಜ್ಜ್ವಲವಾದ ಮುಖಕಾಂತಿಯನ್ನು ಬೀರುತ್ತಾ ಜಾಗ್ರತೆಯಾಗಿ ಕೈಲಾಸಪರ್ವತದ ಅರಮನೆಯಿಂದ ಹೊರಟು ನಂದಿಕೇಶ್ವರನ ಸಮೀಪಕ್ಕೆ ಬಂದಳು. ||೪೬||

ಇಲ್ಲಿಗೆ ಶ್ರೀಶಿವರಹಸ್ಯದ ಭವನಾಮಕವಾದ ಎರಡನೆಯ ಅಂಶದಲ್ಲಿ
ದೇವತೆಗಳು ಮಾಡಿದ ಮಹೇಶ್ವರಸ್ತೋತ್ರ (ದೇವಸ್ತವ) ವೆಂಬ
ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ನವಮೋಽಧ್ಯಾಯಃ

॥ ಸ್ಕಂದ ಉವಾಚ ॥

ಇತಿ ಘೋಷಂ ಮಹಚ್ಛ್ರುತ್ವಾ ಮೇರುಮೂರ್ಧನಿ ಶಂಕರಃ ।
ಸ್ತುವತಾಂ ದೇವಸಂಘಾನಾಮುಗಜಾಜಾನಿರೀಶ್ವರಃ ॥೧॥

ಸಖೀಂ ದೇವ್ಯಾಸ್ತದಾ ದೇವಃ ಕಟಾಕ್ಷೇಣಾಕಟಾಕ್ಷಯತ್ ।
ಸಾ ಜಯಂತೀ ತದಾ ದೇವೀಂ ವೀಕ್ಷ್ಯ ದೇವಾನುಮೋದಿತಾ ॥೨॥

ನತ್ವಾ ದ್ರುತಂ ಸಮುಭ್ಯಾಗಾತ್ಕೈಲಾಸೇ ಹೀರಸೌಧತಃ ।
ಪೂರ್ವಗೋಪುರಭಾಗಾಗ್ರಸೌಧಮಧ್ಯಸ್ಥಿತಂ ದ್ವಿಜಾಃ ॥೩॥

---

ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಒಂಬತ್ತನೆಯ ಅಧ್ಯಾಯ

ಮೇರುಪರ್ವತದ ಶಿಖರಪ್ರದೇಶದಲ್ಲಿ ಬ್ರಹ್ಮಾದಿದೇವತೆಗಳೆಲ್ಲರೂ ಸ್ತೋತ್ರ ಮಾಡುತ್ತಿರಲು, ಈ ಸ್ತೋತ್ರದಿಂದ ದೊಡ್ಡ ಘೋಷವುಂಟಾಯಿತು. ಇದನ್ನು ಕೇಳಿ ಗಿರಿಜಾರಮಣನಾದ ಪರಮೇಶ್ವರನು, ದೇವಿಯ ಸಖಿಯನ್ನು ವಿಚಾರವೇನೆಂಬುದನ್ನು ತಿಳಿದುಕೊಂಡುಬರುವಂತೆ ಕಣ್ಣುಸನ್ನೆಮಾಡಿದನಷ್ಟೆ. ॥೧॥

ದೇವಿಯ ಸಖಿಯಾದ, ಆ ವೈಜಯಂತಿಯು ಗಿರಿಜಾದೇವಿಯನ್ನು ನೋಡಿ, ಪರಮೇಶ್ವರನಿಂದ ಅನುಗೃಹೀತಳಾಗಿ ಇಬ್ಬರಿಗೂ ನಮಸ್ಕರಿಸಿ, ಕೈಲಾಸಪರ್ವತದ ಹೀರಮಣಿಖಚಿತವಾದ ಸೌಧದಿಂದ ಜಾಗ್ರತೆ ಹೊರಟದ್ದೂ ಆಯಿತು. ॥೨॥

ಓ ದ್ವಿಜಶ್ರೇಷ್ಠರಾದ ಜೈಗೀಷವ್ಯಾದಿ ಮುನಿಗಳೇ, ಈ ರೀತಿ ಕೈಲಾಸಪರ್ವತದಿಂದ ಹೊರಟ ವೈಜಯಂತಿಯು, ಕೈಲಾಸಪರ್ವತದ ಪೂರ್ವದಿಕ್ಕಿನ ಗೋಪುರದ ತುದಿಯಲ್ಲಿ ನಿಂತಿರುವ ನಂದಿಕೇಶ್ವರನನ್ನು ನೋಡಿದಳು. ಆ ಸಮಯದಲ್ಲಿ ಆ

ನಂದಿಕೇಶಂ ಮಹಾತ್ಮಾನಂ ಭಸ್ಮಾಭ್ಯಕ್ತಂ ಸದೈವ ಹಿ ।
ದಿವ್ಯತ್ರಿಪುಂಡ್ರವಿಲಸಚ್ಚಂದ್ರೋಜ್ಜ್ವಲಕಿರೀಟಿಕಂ ॥೪॥

ಸ್ವರ್ಣವೇತ್ರಲಸದ್ಧಸ್ತಂ ಗಣಕೋಟಿಪರೀವೃತಂ ।
ಸಿಂಹಾಸನಸ್ಥಂ ವರದಂ ಜಯಂತೀ ತಂ ದದರ್ಶ ಹಿ ॥೫॥

ತಾಂ ದೃಷ್ಟ್ವಾ ನಂದಿಕೇಶೋಽಪಿ ಚಾಭ್ಯುತ್ಥಾಯಾಸನಾದ್ದ್ರುತಂ ।
ಸಂಪೂಜ್ಯ ತಾಂ ವೈಜಯಂತೀಂ ಸ್ಥಾನಮಾನಾಸನಾರ್ಹಣೈಃ ॥೬॥

ಸಮಾಸ್ಯ ತಾಮುಥೋವಾಚ ನಂದಿಕೇಶಶ್ಶಿವಾಸಖೀಂ ॥೭॥

॥ ನಂದಿಕೇಶ ಉವಾಚ ॥

ಕೋಽಯಮಭ್ಯುದಯಃ ಕಾಲೋ ಜಯಂತಿ ತವ ದರ್ಶನಾತ್ ।
ಚಿರಾಯ ಭವತೀಂ ದೃಷ್ಟ್ವಾ ತುಷ್ಟಂ ಮೇಽದ್ಯ ಮನೋ ಭೃಶಂ ॥೮॥

---

ನಂದಿಕೇಶ್ವರನು ಭಸ್ಮತ್ರಿಪುಂಡ್ರಗಳನ್ನು ಧರಿಸಿ ಚಂದ್ರನ ಉಜ್ವಲಪ್ರಭೆಯಿಂದ ಹೊಳೆಯುತ್ತಿರುವ ಕಿರೀಟವನ್ನು ಅಲಂಕರಿಸಿಕೊಂಡಿದ್ದನು. ಅಲ್ಲದೆ ಮಹಾತ್ಮನಾದ ಈ ನಂದಿಯು ತನ್ನ ದೇಹಕ್ಕೆಲ್ಲಾ ಭಸ್ಮವನ್ನು ಬಳಿದುಕೊಂಡಿದ್ದನು. ॥೩-೪॥

ಕೈಯ್ಯಲ್ಲಿ ಚಿನ್ನದ ಬೆತ್ತವನ್ನು ಹಿಡಿದು ಪ್ರಕಾಶಿಸುತ್ತಾ, ತನ್ನ ಕೋಟಿಸಂಖ್ಯಾಕವಾದ ಗಣಗಳಿಂದ ಸುತ್ತುವರಿಯಲ್ಪಟ್ಟಿದ್ದನು. ಜಯಂತಿಯು ಈ ರೀತಿ ಗಣಗಳಿಂದ ಪರಿವೃತನಾಗಿ ಸಿಂಹಾಸನವನ್ನೇರಿ ಕುಳಿತಿದ್ದ ವರಪ್ರದನಾದ ನಂದಿಕೇಶ್ವರನನ್ನು ನೋಡಿದಳು. ॥೫॥

ಆಗ ಆ ನಂದಿಕೇಶ್ವರನು ಅನಿರೀಕ್ಷಿತವಾಗಿ ಬಂದ ಗಿರಿಜಾದೇವಿಯ ಸಖಿಯಾದ ವೈಜಯಂತಿಯನ್ನು ನೋಡಿ, ಜಾಗ್ರತೆಯಾಗಿ ತಾನು ಕುಳಿತಿದ್ದ ಸಿಂಹಾಸನದಿಂದೆದ್ದು, ಅವಳನ್ನು ಯೋಗ್ಯತಾನುಸಾರ ಆಸನ, ಗೌರವ, ಇವುಗಳಿಂದ ಪೂಜಿಸಿ, ಅನಂತರ, ಮೃದುವಾದ ವಚನಗಳಿಂದ ಮಾತನಾಡತೊಡಗಿದನು. ॥೬-೭॥

ಎಲೌ ಜಯಂತೀದೇವಿಯೇ, ನಿನ್ನ ದರ್ಶನದಿಂದ ಈ ದಿನವನ್ನು ಶುಭಕರವೆಂದು ತಿಳಿಯುವೆನು. ನಿನ್ನನ್ನು ನೋಡಿ ಬಹಳಕಾಲವಾಗಿದ್ದಿತು. ಈಗ ನಿನ್ನ ದರ್ಶನದಿಂದ ನಾನು ಧನ್ಯನಾದೆನು. ॥೮॥

ವಿನಷ್ಟಾಶುಭಸಂಘೋಽಸ್ಮಿ ಚಾಷ್ಟಮೂರ್ತಿಪ್ರಸಾದತಃ ।
ಕೋ ವಾದ್ಯಾವಸರೋ ದೇವ್ಯಾ ದೇವಸ್ಯಾಖ್ಯಾಹಿ ಮೇಽಧುನಾ ॥೯॥

ಕಿಮಾಜ್ಞಪ್ತಂ ಮಹೇಶೇನ ದೇವ್ಯಾ ವಾ ತದ್ವದಾದ್ಯ ಮಾಂ ।
ತತ್ಸಾಧಯಾಮಿ ಶಿರಸಾ ಮಾ ತೇ ಕಾಲಾತ್ಯಯಸ್ಸಖಿ ॥೧೦॥

॥ ಜಯಂತೀ ಪ್ರಾಹ ॥

ಮಹಾಕೈಲಾಸಮೌಲಿಸ್ಥಹೀರಾಗಾರಾಗ್ರಸೌಧಕೇ ।
ಸರ್ವಾವಾಸೋಽಪಿ ಭಗವಾನಧ್ಯಾಸ್ತೇ ಚ ಸಹಾಂಬಯಾ ॥೧೧॥

ದೇವ್ಯಾಸ್ಸ್ಥಾನವರಂ ಚಾಪಿ ಚಿಂತಿತಂ ಕ್ಷಣಮಾತ್ರತಃ ।
ತ್ರ್ಯಕ್ಷೇಣ ಮನಸಾ ತಸ್ಮಾಜ್ಜಾತಂ ತತ್ತೇಜಸಾಂ ಗಣಂ ॥೧೨॥

---

ಅಷ್ಟಮೂರ್ತಿಯಾದ ಪರಮೇಶ್ವರನ ಅನುಗ್ರಹದಿಂದ ಇಲ್ಲಿಯ ವರೆವಿಗೆ ಯಾವ ಅಮಂಗಳವೂ ಇಲ್ಲದೇ ಸುಖವಾಗಿರುವೆನು. ವೈಜಯಂತಿ! ಈಗ ನನ್ನಿಂದ ದೇವಿಗಾಗಲೀ ಮಹಾದೇವನಿಗಾಗಲೀ ಏನು ಕಾರ್ಯವಾಗಬೇಕು? ಜಾಗ್ರತೆ ಅದನ್ನು ನನಗೆ ತಿಳಿಸು. ॥೯॥

ಮಹೇಶ್ವರನು ಏನು ಅಪ್ಪಣೆಕೊಡಿಸಿರುವನು? ದೇವಿಯೇನು ಆಜ್ಞೆಯಿತ್ತಿರುವಳು? ಅದನ್ನು ಶಿರಸಾವಹಿಸಿ ನಡೆಸುವೆನು; ಎಲೌ ವೈಜಯಂತಿ! ತಡಮಾಡದೆ ಹೇಳು ಎಂದು ನಂದಿಕೇಶ್ವರನು ವೈಜಯಂತಿಯನ್ನು ಪ್ರಶ್ನೆಮಾಡಿದನು. ॥೧೦॥

ಆಗ ಆ ವೈಜಯಂತಿಯು, ಗಣಗಳಿಗೊಡೆಯನಾದ ನಂದಿಕೇಶ್ವರನನ್ನು ಕುರಿತು ಹೀಗೆಂದಳು. ॥೧೦॥

ಭಗವಂತನಾದ ಮಹೇಶ್ವರನು ಸರ್ವವ್ಯಾಪಿಯಾದರೂ ಮಹಾಕೈಲಾಸಪರ್ವತದ ಶಿಖರಭಾಗದಲ್ಲಿರುವ ಹೀರಮಣಿಖಚಿತವಾದ ಸೌಧಾಗ್ರದಲ್ಲಿ ಅಂಬಿಕೆಯೊಡನೆ ಸುಖಾಸೀನನಾಗಿರುವನು. ॥೧೧॥

ಹೀಗಿರುವಾಗ ದೇವಿಯು ಒಂದು ಉತ್ಕೃಷ್ಟವಾದ ವಿಹಾರಸ್ಥಾನವನ್ನು ನಿರ್ಮಿಸುವಂತೆ ಮಹಾದೇವನನ್ನು ಪ್ರಾರ್ಥಿಸಿದಳು. ಅದಕ್ಕೋಸ್ಕರ ಪರಮೇಶ್ವರನು ಒಂದುಕ್ಷಣಕಾಲ ತನ್ನ ಮನಸ್ಸಿನಲ್ಲಿಯೇ ಏನನ್ನೋ ಯೋಚಿಸಿದನು. ಆಗ ಒಂದು ಅದ್ಭುತವಾದ ತೇಜಃಪುಂಜವೆದ್ದಿತು. ॥೧೨॥

ತತಃ ಕಿಂ ವಾ ಮೇರುಮೌಲೌ ಘೋಷಸ್ಸಮುಜನಿದ್ರುತಂ ।
ತಚ್ಛ್ರುತ್ವಾ ದೇವದೇವೇಶೋ ಮಾಮಪಶ್ಯಚ್ಛಿವಾಂತಿಕೇ ॥೧೩॥

ಶಿವಯಾಜ್ಞಾಪಿ ಚ ತತಸ್ತತ್ರ ಗಂತುಂ ಶಿವಸ್ಯ ಹಿ ।
ರಥೋಪಿ ಸಜ್ಜತಾಮಾಶು ಯಚ್ಛೀಘ್ರಂ ತೇ ಗಣೇಶ್ವರ ॥೧೪॥

ಕಿಂ ಚಿರಾಯಸಿ ದೇವಾಜ್ಞಾಮವಿಲಂಬೇನ ಸಾಧಯ ।
ತದಾ ಜಯಂತೀವಚನಾತ್ತ್ವರಯಾ ನಂದಿಕೇಶ್ವರಃ ॥೧೫॥

ಗಣಾನಾಹೂಯ ತತ್ರಸ್ಥಾನಪಶ್ಯದ್ದೇವತಾಗಣಂ ।
ಸ್ತುವಂತಂ ದೇವಮೀಶಾನಂ ತೇಜಃ ಪುಂಜೇಕ್ಷಣಾತ್ತದಾ ॥೧೬॥

---

ಈ ತೇಜಃಪುಂಜವು ಹೀಗೆ ಅಕಸ್ಮಾತ್ತಾಗಿ ಉಂಟಾಗಲು, ಮೇರುಪರ್ವತದ ಶಿಖರದಲ್ಲಿ ಏನೋ ಒಂದು ಧ್ವನಿಯುಂಟಾಯಿತು. ಈ ಗದ್ದಲದ ಧ್ವನಿಯನ್ನು ಕೇಳಿ ದೇವದೇವನಾದ ಮಹೇಶನು ಗಿರಿಜಾಸಮೀಪದಲ್ಲಿ ಕುಳಿತಿದ್ದ ನನ್ನನ್ನು ನೋಡಿದನು. ಆದುದರಿಂದ ನಾನು ಇಲ್ಲಿಗೆ ವಿಷಯವನ್ನು ತಿಳಿದುಕೊಂಡು ಹೋಗಲು ಬಂದಿರುವೆನು. ॥೧೩॥

ದೇವನು ನನ್ನನ್ನು ನೋಡುವಾಗಲೇ, ಅಂಬಿಕಾದೇವಿಯು ಧ್ವನಿಬರುವ ಸ್ಥಳಕ್ಕೆ ಹೋಗಬೇಕೆಂದು ತಿಳಿಸಿದಳು. ನೀನೂ ರಥಾರೂಢನಾಗಿ ಹೋಗಿ ವಿಷಯ ವನ್ನು ಈಗಲೇ ತಿಳಿದು ಹೇಳು. ॥೧೪॥

ಓ ನಂದಿಕೇಶ್ವರ, ಇದೇನು ತಡಮಾಡುತ್ತಿರುವೆ? ಸ್ವಾಮಿಯಾಜ್ಞೆಯನ್ನು ಜಾಗ್ರತೆ ನಡೆಸು, ಎಂದು ಹೇಳಲು, ಜಯಂತಿಯ ಮಾತನ್ನು ಕೇಳಿ ಜಾಗ್ರತೆಯಾಗಿ ನಂದಿಕೇಶ್ವರನು, ತನ್ನ ಗಣಗಳನ್ನೆಲ್ಲಾ ಕರೆಸಿ ಅವರಿಗೆ ವಿಷಯವೇನೆಂಬುದನ್ನು ತಿಳಿದುಕೊಂಡು ಬರುವಂತೆಯೂ ಪರಮೇಶ್ವರನ ರಥವನ್ನು ಸಿದ್ಧಪಡಿಸುವಂತೆಯೂ ಆಜ್ಞಾಪಿಸಿದನು. ಒಡನೆಯೇ ತಾನೂ ತ್ವರೆಯಿಂದ ಹೋಗಿ ತೇಜಃಪುಂಜಕ್ಕೆ ಹೆದರಿ ಭಯದಿಂದ ಪರಮೇಶ್ವರನನ್ನು ಸ್ತೋತ್ರಮಾಡುತ್ತಿರುವ ದೇವತಾಸಮೂಹವನ್ನು ನೋಡಿದನು. ॥೧೫-೧೬॥

**ಮೇರುಮೌಲಿಗತಂ ತತ್ರ ವಿಷ್ಣುಬ್ರಹ್ಮಾದಿಕಂ ದ್ವಿಜ ।**
**ಭೀತ್ಯಾ ಸಂಭ್ರಾಂತಮತ್ಯಂತಂ ದೃಷ್ಟ್ವಾ ತೇಜೋ ದುರಾಸದಂ ॥೧೭॥**

**ಪುನಸ್ಸಮಾಗತಾಸ್ತತ್ರ ಗಣಪಾ ನಂದಿನೋಜ್ಝಿತಾಃ ।**
**ಪ್ರಣಮ್ಯ ವಿನಯೋಪೇತಾ ನಂದಿಕೇಶಾಗ್ರತೋ ಗಣಾಃ ॥೧೮॥**

॥ ಗಣಾ ಊಚುಃ ॥

**ಸುಧಾಂಬುಧೇರ್ಮಧ್ಯಗತಂ ದೃಷ್ಟ್ವಾ ತೇಜೋ ದುರಾಸದಂ ।**
**ಭೀತಾ ದೇವಗಣಾಸ್ಸರ್ವೇ ಸ್ತುವಂತಿ ಪರಮೇಶ್ವರಂ ॥೧೯॥**

**ಮೇರುಮೌಲೌ ಸದಾ ದೇವಾ ಬೃಹಸ್ಪತಿಪುರೋಗಮಾಃ ।**
**ಅನ್ಯೇ ನ ಸಂತಿ ತತ್ರೈವ ಪೂರ್ವತಸ್ತ್ವಯಿ ಶಾಸತಿ ॥೨೦॥**

---

ನಂದಿಕೇಶ್ವರನನ್ನು ಬಿಟ್ಟು ಉಳಿದ ಗಣಗಳೆಲ್ಲರೂ ಮೇರುಪರ್ವತದಲ್ಲಿದ್ದ ಭಯಂಕರವಾದ ತೇಜಃಪುಂಜವನ್ನು ನೋಡಿ ಭಯಗೊಂಡರು. ಅಲ್ಲದೆ ಭಯದಲ್ಲಿದ್ದ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳನ್ನು ನೋಡಿ ಪುನಃ ಹಿಂತಿರುಗಿ ಬಂದು ನಂದಿಕೇಶ್ವರನಿಗೆ ನಮಸ್ಕಾರಮಾಡಿ ಗಣನಾಯಕರು ಮುಂದೆ ಹೇಳುವಂತೆ ಅರಿಕೆಮಾಡಿದರು. ||೧೭-೧೮||

ಪ್ರಭೋ, ಸುಧಾಸಮುದ್ರದಲ್ಲಿ ಇದ್ದಕ್ಕಿದ್ದಹಾಗೆಯೇ ಉಂಟಾದ ಭಯಂಕರವಾದ ತೇಜಃಪುಂಜವನ್ನು ನೋಡಿ ದೇವಗಣಗಳೆಲ್ಲರೂ ಹೆದರಿ ಮೇರುಪರ್ವತದ ಶಿಖರಪ್ರದೇಶದಲ್ಲಿ ಬೃಹಸ್ಪತ್ಯಾಚಾರ್ಯನನ್ನೇ ಮುಂದುಮಾಡಿಕೊಂಡು ಪರಮೇಶ್ವರನನ್ನು ಸ್ತೋತ್ರಮಾಡುತ್ತಿರುವರು. ||೧೯||

ಶಿಲಾದಮಹರ್ಷಿಯ ಪ್ರೀತಿಪುತ್ರನಾದ ನಂದಿಯೇ, ನಿನ್ನ ಆಳ್ವಿಕೆಗೆ ಒಳಪಟ್ಟ ಪೂರ್ವಭಾಗದಲ್ಲಿ ಮತ್ತಾವ ಭಯವೂ ಇಲ್ಲ. ಎಲೈ ಗಣೇಶ್ವರಶ್ರೇಷ್ಠನೇ, ಮಹಾದೇವನ ರಥವೂ ನಿನ್ನಪ್ಪಣೆಯಂತೆ ಈಗ ಸಿದ್ಧವಾಗಿರುವುದು. ಆದುದರಿಂದ ಜಾಗ್ರತೆ ಮಹೇಶ್ವರನಿಗೆ ಈ ವಿಷಯವನ್ನು ತಿಳಿಸೋಣವಾಗಲಿ, ಎಂದು ನಂದಿಕೇಶ್ವರನ ಗಣಗಳು ಹೇಳಿದರು. ||೨೦-೨೧||

ಶಿಲಾದಹೃದಯಾನಂದ ಗಣೇಶ್ವರವರೋತ್ತಮ ।
ರಥೋಽಪಿ ಸಜ್ಜೋ ದೇವಸ್ಯ ತಚ್ಛೀಘ್ರಂ ವಿನಿವೇದ್ಯತಾಂ
ನಂದಿಕೇಶಸ್ತದಾ ಪ್ರಾಹ ಜಯಂತೀಂ ಪ್ರಾಂಜಲಿಸ್ತದಾ ॥೨೧॥

॥ ನಂದಿಕೇಶ ಉವಾಚ ॥

ಶ್ರುತಂ ಗಣವರ್ಯೈರುಕ್ತಂ ಯತ್ತ್ವಯೋಕ್ತಂ ತಥೈವ ಹಿ ।
ರಥೋಽಪಿ ಸಜ್ಜೋ ದೇವಸ್ಯ ಗಂತುಸ್ತತ್ರ ರುಚಿರ್ಯದಿ ॥೨೨॥

ದೇವದೇವಸ್ಯ ದೇವ್ಯಾಶ್ಚ ನಿವೇದ್ಯಾನಂತರಂ ಕುರು ।
ಇತ್ಯುಕ್ತಾ ಸಾ ತದಾ ತಸ್ಥೌ ನಂದಿಕೇಶಾನುಮೋದಿತಾ ॥೨೩॥

ಯಯೌ ದ್ರುತಂ ಸಾ ಸವಿಧಂ ಶಿವಸ್ಯಾಂಬಾಯುತಸ್ಯ ಚ ।
ಪ್ರಣಮ್ಯ ಸಾ ಶಿವೌ ತತ್ರ ಸಿಂಹಾಸನವರಾಶ್ರಿತೌ ॥೨೪॥

ಪ್ರಾಂಜಲಿಸ್ಸಾ ತದಾ ಪ್ರಾಹ ಜಯಂತೀ ಪರಮೇಶ್ವರೌ ॥೨೫॥

---

ಆಗ ನಂದಿಕೇಶ್ವರನು ಬಂದು ಕೈಮುಗಿದು ವೈಜಯಂತಿಯನ್ನು ಕುರಿತು ಹೀಗೆಂದನು. ॥೨೧॥

ಎಲೌ ವೈಜಯಂತಿಯೇ, ಗಣಶ್ರೇಷ್ಠರು ನೀನು ಹೇಳಿದಂತೆಯೇ ಹೇಳುತ್ತಿರುವರು. ಆದುದರಿಂದ ನೀನು ಹೇಳಿದುದೇ ನಿಜವಾದ ಸಂಗತಿಯಾಗಿರುವುದು. ಮಹೇಶ್ವರನು ಅಲ್ಲಿಗೆ ಹೋಗಲು ಅಪೇಕ್ಷೆಪಡುವುದಾದರೆ ರಥವೂ ಸಹ ಇದೋ ಸಿದ್ಧವಾಗಿರುವುದು. ಈ ವಿಷಯವನ್ನು ದೇವಶ್ರೇಷ್ಠನಾದ ಮಹಾದೇವನಿಗೂ ಗಿರಿಜಾದೇವಿಗೂ ಮೊದಲು ಅರಿಕೆಮಾಡು. ಅವರ ಅಭಿಪ್ರಾಯಗಳನ್ನು ಅನಂತರ ನನಗೆ ತಿಳಿಸು ಎಂದು ನಂದಿಕೇಶ್ವರನು ವೈಜಯಂತಿಗೆ ಹೇಳಿದನು. ॥೨೨॥

ಹೀಗೆ ಹೇಳಿದ ಒಡನೆ ವೈಜಯಂತಿಯು ನಂದಿಕೇಶ್ವರನ ಅನುಮತಿಪಡೆದು, ಜಾಗ್ರತೆ ಅಲ್ಲಿಂದ ಹೊರಟು ಅಂಬಿಕಾಸಮೇತನಾದ ಈಶ್ವರನ ನಿಲಯಕ್ಕೆ ಬಂದಳು. ಅಲ್ಲಿ ಉತ್ತಮವಾದ ಸಿಂಹಾಸನದಲ್ಲಿ ಮಂಡಿಸಿರುವ ಪಾರ್ವತೀಪರಮೇಶ್ವರರಿಗೆ ನಮಸ್ಕರಿಸಿ ಕೈಜೋಡಿಸಿಕೊಂಡು ಇಂತೆಂದಳು. ॥೨೩-೨೪-೨೫॥

॥ ಜಯಂತ್ಯುವಾಚ ॥

ದೇವದೇವ ಜಗನ್ನಾಥ ನಂದಿಕೇಶಾನ್ಮಯಾ ಶ್ರುತಂ ।
ದೇವಾನಾಂ ಭಯಮುತ್ಪನ್ನಂ ತೇಜಃಪುಂಜೋದ್ಗಮೇನ ಚ ॥೨೬॥

ಸ್ತುವಂತಿ ವೇದಘೋಷೇಣ ಮೇರುಮೂರ್ಧ್ನಿ ಸ್ಥಿತಾಸ್ಸುರಾಃ ।
ತ್ವಾಂ ಸ್ತುತ್ಯಂ ಸ್ತೋತ್ರವರ್ಯೈಶ್ಚ ವೇದಸಂಸ್ತುತಮೀಶ್ವರಂ ॥೨೭॥

ರಥೋಽಪಿ ಸಜ್ಜೋ ಭಗವಂಸ್ತವ ಗಂತುಂ ಮನೋ ಯದಿ ।
ತಚ್ಛ್ರುತ್ವಾ ತ್ವಾಂ ಮಹಾದೇವೋ ರಥಕಲ್ಪನಮುತ್ತಮಂ ॥೨೮॥

ವಿಹಿತಸ್ಸ್ಯಂದನಸ್ಸಜ್ಜಸ್ತವಾಸ್ತು ವಿಜಯೋದಯಃ ।
ಅಷ್ಟೌ ಕಂಠೀರವಾ ಯತ್ರ ಯತ್ರೋಕ್ಷ್ಣಾಮಷ್ಟಕಂ ಶುಭಂ ॥೨೯॥
ಯತ್ರೇಭಾಃ ಪರಿಭಾಂತ್ಯಷ್ಟೌ ಯತ್ರಾಷ್ಟೌ ಜವಿನೋ ಹಯಾಃ ।

---

ದೇವದೇವನೇ, ಜಗದೊಡೆಯನಾದ ನಿನ್ನ ಸಂಕಲ್ಪಮಾತ್ರದಿಂದ ಸೃಷ್ಟಿಸಿರುವ ತೇಜಃಪುಂಜವನ್ನು ನೋಡಿ ದೇವತೆಗಳು ಭಯಗೊಂಡಿರುವರು. ಅವರು ಪ್ರಾರ್ಥಿಸುವ ಶಬ್ದವೇ ಅದು ಎಂದು, ನಂದಿಕೇಶ್ವರನು ನನಗೆ ತಿಳಿಸಿದನು. ॥೨೬॥

ಈಗ ಆ ದೇವತೆಗಳು ಮೇರುಪರ್ವತದ ಶಿಖರದಲ್ಲಿ, ವೇದಘೋಷ ಮಾಡುತ್ತಾ, ಉತ್ತಮವಾದ ಸ್ತೋತ್ರಜಾಲಗಳಿಂದ, ವೇದಪ್ರತಿಪಾದ್ಯನೂ, ಸರ್ವೇಶ್ವರನೂ, ಸ್ತೋತ್ರಾರ್ಹನೂ ಆದ ನಿನ್ನನ್ನು ಹೊಗಳುತ್ತಿರುವರು. ॥೨೭॥

ಭಗವಂತನೇ, ಅಲ್ಲಿಗೆ ಪ್ರಯಾಣಬೆಳಸುವುದಾದರೆ ರಥವು ಸಿದ್ಧವಾಗಿರುವುದು ಎಂದು ವೈಜಯಂತಿಯು ಪರಮೇಶ್ವರನಿಗೆ ಹೇಳಲು, ಇದನ್ನು ಕೇಳಿ ಮಹಾದೇವನು ರಥದ ಮೇಲೆ ಹೋಗುವುದೇ ಉತ್ತಮವಾದ ಮಾರ್ಗವಾಗಿರುವುದು ಎಂದನು. ॥೨೮॥

ಪರಮೇಶ್ವರನ ನುಡಿಯನ್ನು ಕೇಳಿ ವೈಜಯಂತಿಯು ದೇವ! ಸಿದ್ಧಪಡಿಸಿರುವ ರಥದಲ್ಲಿ ಪ್ರಯಾಣಮಾಡುವ ನಿನಗೆ ವಿಜಯವಾಗಲಿ. ಈಗ ಎಂಟು ಸಿಂಹಗಳೂ, ಮಂಗಳಕರವಾದ ಎಂಟು ಎತ್ತುಗಳೂ, ಎಂಟು ಆನೆಗಳೂ ಮತ್ತು ವೇಗವಾಗಿ ಹೋಗುವ ಎಂಟು ಕುದುರೆಗಳೂ ರಥವನ್ನೆಳೆಯಲು ಸಿದ್ಧವಾಗಿವೆ. ॥೨೯॥

ಮನಸ್ಸಂಯಮನೋ ಯತ್ರ ಕಶಾಪಾಣಿರ್ವ್ಯವಸ್ಥಿತಃ ॥೩೦॥

ಗಂಗಾಯಮುನಯೋಶ್ಶೈಷಾಂ ಚಕ್ರೇ ಪವನದೇವತಾಃ ।
ಸಾಯಂ ಪ್ರಾತರ್ಮಯೋ ಚಕ್ರೇ ಛತ್ರಂ ತೇ ಹೇಮಮಂಡಲೇ॥೩೧॥

ತಾರಾವಲಿಮಯಾ ಕೀರ್ತಿರಹ್ನೋ ಯಾ ಉಪನಾಯಕಾಃ ।
ಶ್ರುತಯೋ ಮಾರ್ಗದರ್ಶಿನ್ಯಸ್ಸ್ಮೃತಯೋ ರಥಗುಪ್ತಯಃ ॥೩೨॥

ದಕ್ಷಿಣಾರ್ಧದೃಢಾ ಯತ್ರ ಸಖಾ ಯತ್ರಾಪಿ ಲಕ್ಷಕಾಃ ।
ಆಸನಂ ಪ್ರಣವೋ ಯತ್ರ ಗಾಯತ್ರೀ ಚಾಪಿ ಪೀಠಭೂಃ ॥೩೩॥

ಸಾಂಗಾ ವ್ಯಾಹೃತಯೋ ಯತ್ರ ಶುಭಾಸ್ಸೋಪಾನವೀಥಿಕಾಃ ।
ಸೂರ್ಯಾಚಂದ್ರಮಸೌ ಯತ್ರ ಸತತಂ ದ್ವಾರರಕ್ಷಕೌ ॥೩೪॥

---

ಈ ರಥದಲ್ಲಿ ಮನಸ್ಸಿಗೆ ಅಭಿಮಾನದೇವತೆಯಾದ ಬ್ರಹ್ಮನೇ ಚಾವಟಿಯನ್ನು ಹಿಡಿದು ಸಾರಥಿಯಾಗಿರುವನು. ಗಂಗಾ, ಯಮುನಾ ನದಿಗಳ ಮೇಲೆ ಸಂಚಾರ ಮಾಡುವುದರಿಂದ ಪರಿಶುದ್ಧರಾಗಿರುವ ವಾಯುದೇವತೆಗಳೇ ಈ ರಥಚಕ್ರದಲ್ಲಿ ನೆಲಸಿರುವರು. ಈ ಎರಡು ರಥಚಕ್ರಗಳೂ ಕಾಲಚಕ್ರಗಳೆನಿಸಿ ಪ್ರಾತಃಕಾಲ ಮತ್ತು ಸಾಯಂಕಾಲಸ್ವರೂಪಗಳಾಗಿರುವುವು. ಸುವರ್ಣಮಂಡಲವೇ ನಿನಗೆ ಛತ್ರಿಯ ಸ್ಥಾನದಲ್ಲಿರುವುದು. ||೩೦-೩೧||

ನಿನ್ನ ಕೀರ್ತಿಯು ನಕ್ಷತ್ರಮಯವಾಗಿ ಅಂತರಿಕ್ಷದಲ್ಲೆಲ್ಲಾ ಬೆಳಗುತ್ತಿರುವುದು. ಅದರಂತೆಯೇ ಹಗಲಿಗೆ ಅಭಿಮಾನದೇವತೆಯಾದ ಸೂರ್ಯನೇ ಮುಂತಾದವರೂ, ಋಗ್ಯಜುಸ್ಸಾಮಾಥರ್ವಣಗಳೆಂಬ ಶ್ರುತಿಗಳೂ ರಥಕ್ಕೆ ಮಾರ್ಗದರ್ಶಕಗಳಾಗಿರುವರು. ಮನ್ವಾದಿ ಹದಿನೆಂಟು ಸ್ಮೃತಿಗಳೂ ರಥವನ್ನು ರಕ್ಷಣೆಮಾಡುತ್ತಿರುವುವು. ||೩೨||

ದಕ್ಷಿಣಾದೇವಿಯ ಪತಿಯಾದ ಅಗ್ನಿಯೇ ರಥದ ಮೇಲ್ವಿಚಾರಕನಾಗಿ ನಿಂತಿರುವನು. ಪ್ರಣವವೇ ಆಸನವಾಗಿರುವುದು. ಗಾಯತ್ರಿಯೇ ಪೀಠವಾಗಿರುವುದು. ||೩೩||

ಅಂಗಸಹಿತವಾದ "ಭೂರ್ಭುವಸ್ಸುವಃ" ಎಂಬ ವ್ಯಾಹೃತಿಗಳು ಈ ರಥಕ್ಕೆ ಸೋಪಾನಮಾರ್ಗಗಳಾಗಿರುವುವು. ಸೂರ್ಯಚಂದ್ರರೇ ರಥದ ದ್ವಾರಪಾಲಕರಾಗಿರುವರು. ||೩೪||

ಸ್ವಾಸಿತಂ ಕಂಠಮೂಹುಶ್ಚ ರಥಾಶ್ಚ ರಥಗುಪ್ತಯಃ ।
ಧ್ವಜದಂಡೋ ಮಹಾಮೇರುಃ ಪತಾಕಾ ಭಾಸ್ಕರಪ್ರಭಾಃ ॥೩೫॥

ಸ್ವಯಂ ವಾಗ್ದೇವತಾ ಯತ್ರ ಚಲಚ್ಚಾಮರಧಾರಿಣೀ ।
ಲಕ್ಷ್ಮೀಶ್ಚ ಛತ್ರಂ ಸುಶ್ವೇತಂ ಹಿಮಧಾಮಸಮಪ್ರಭಂ ॥೩೬॥

ಆಹೂತಾ ಇವ ಚಾಜಗ್ಮುರ್ವಿಶ್ವೇ ಭುವನವಾಸಿನಃ ।
ದೇವಾಃ ಕೋಟ್ಯಸ್ತ್ರಯಸ್ತ್ರಿಂಶದ್ಗಣಕೋಟ್ಯಯುತದ್ವಯಂ ॥೩೭॥

ನವಕೋಟ್ಯಸ್ತು ಚಾಮುಂಡಾ ಭೈರವಾಃ ಕೋಟಿಸಮ್ಮಿತಾಃ ।
ರುದ್ರಾ ಏಕಾದಶ ವಿಭೋ ಕೋಟಯಸ್ಸಮುಪಾಗತಾಃ ॥೩೮॥

---

ಈ ನಿನ್ನ ರಥ ಮತ್ತು ಅದರ ಮೇಲ್ಭಾಗ, ಅಂದರೆ ರಥದ ಸುತ್ತಲೂ ಇರುವ ಆವರಣ, ಇವು ಕಪ್ಪುಬಣ್ಣದ ಕಂಠಪ್ರದೇಶವನ್ನು ಧರಿಸಿರುವುವು. ಮಹಾಮೇರು ಪರ್ವತವೇ ಧ್ವಜದ ಕೋಲಾಗಿರುವುದು. ಸೂರ್ಯನ ಕಿರಣಗಳೇ ಬಾವುಟಗಳಾಗಿವೆ. ಅಂದರೆ ತೇರಿನ ಪತಾಕೆಗಳು ಸೂರ್ಯನಂತೆ ಕಾಂತಿಯುಕ್ತವಾಗಿ ಹೊಳೆಯುತ್ತಿರುವುವು. ॥೩೫॥

ವಾಗ್ದೇವತೆಯಾದ ಸರಸ್ವತಿಯೇ ಸಾಕ್ಷಾತ್ತಾಗಿ ಚಂಚಲವಾದ ಚಾಮರವನ್ನು ಹಿಡಿದು ಬೀಸುತ್ತಿರುವಳು. ಲಕ್ಷ್ಮಿಯು ಶುಭ್ರವಾದ ಹಿಮದಂತೆ ಶೋಭಿಸುವ ಶ್ವೇತಚ್ಛತ್ರವನ್ನು ಹಿಡಿದಿರುವಳು. ॥೩೬॥

ದೇವಲೋಕಗಳಲ್ಲಿ ವಾಸಮಾಡುತ್ತಿದ್ದ ಎಲ್ಲಾ ದೇವತೆಗಳೂ ಮತ್ತು ಗಣಗಳೂ ಅಂದರೆ ಮೂವತ್ತುಮೂರುಕೋಟಿ ದೇವತೆಗಳೂ ಇಪ್ಪತ್ತುಸಾವಿರಕೋಟಿ ಸಂಖ್ಯಾಕವಾದ ಗಣಗಳಿಂದ ಕೂಡಿ, ಆಹ್ವಾನಿಸಲ್ಪಟ್ಟಿರುವರಂತೆ ಬಂದು ಕಾದಿರುವರು. ॥೩೭॥

ಸ್ವಾಮಿ! ಒಂಬತ್ತುಕೋಟಿ ಚಾಮುಂಡಾಗಣಗಳೂ ಒಂದುಕೋಟಿ ಭೈರವಗಣಗಳೂ ಬಂದು ನೆರೆದಿರುವರು. ಹನ್ನೊಂದುಕೋಟಿ ರುದ್ರಗಣಗಳೂ ಬಂದಿರುವುವು. ॥೩೮॥

ಕಪರ್ದಚಂದ್ರಾರ್ಧಧರಾಶ್ಶೂಲಹಸ್ತಾ ವರಾಯುಧಾಃ ।
ಷಡಾನನಾಃ ಕುಮಾರಾಶ್ಚ ಮಯೂರವರವಾಹನಾಃ ॥೩೯॥

ವೀರಬಾಹುಪ್ರಭೃತಯೋ ನವಲಕ್ಷಂ ಸನಾತನಾಃ ।
ಶಕ್ತಿಹಸ್ತಾ ಮಹಾಭಾಗಾ ಬಲಿನೋ ಹ್ಯನ್ಯದಾಯುಧಾಃ ॥೪೦॥

ರುದ್ರಾಣ್ಯೋ ನವಕೋಟ್ಯೋಥ ಚಾಸಿಹಸ್ತಾ ಮಹಾಬಲಾಃ ।
ಯೋಗಿನ್ಯಸ್ಸಪ್ತಕೋಟ್ಯಸ್ತಾ ಆಯಯುಃ ಪರಶೂಕರಾಃ ॥೪೧॥

ಪಿಚಂಡಿಲಾ ಮಹಾತುಂಡಾ ವಿಘ್ನವಿಘ್ನಾ ಗಜಾನನಾಃ ।
ದ್ವಿಕೋಟಯೋ ಮಹಾಭಾಗಾಃ ಪಾಶಾಂಕುಶಸುಪಾಣಯಃ ॥೪೨॥

ನಂದಿಕೇಶಾನುಗಾಸ್ತೇ ವೈ ಕೋಟಯೋ ಗಣಪುಂಗವಾಃ ।
ಭಸ್ಮಗಾತ್ರಾಸ್ತ್ರಿಪುಂಡ್ರಾಂಕಾಶ್ಶರಕಾರ್ಮುಕಪಾಣಯಃ ॥೪೩॥

---

ಜಡೆಗಳನ್ನೂ ಅರ್ಧಚಂದ್ರರನ್ನೂ ತಲೆಯಲ್ಲಿ ಧರಿಸಿ ತ್ರಿಶೂಲವೇ ಮುಂತಾದ ಶ್ರೇಷ್ಠವಾದ ಆಯುಧಗಳನ್ನು ಹಿಡಿದಿರುವರೂ, ಉತ್ತಮವಾದ ನವಿಲುಗಳನ್ನೇರಿ ಆರು ಮುಖಗಳಿಂದ ಪ್ರಕಾಶಿಸುತ್ತಿರುವ ಕುಮಾರಸ್ವಾಮಿಸದೃಶರೂ ಇಲ್ಲಿಗೆ ಬಂದಿರುವರು. ॥೩೯॥

ಶಕ್ತ್ಯಾಯುಧವನ್ನೂ, ಇತರ ಆಯುಧಗಳನ್ನೂ ಧರಿಸಿ ಮಹಾಬಲಶಾಲಿಗಳೂ, ಸನಾತನಧರ್ಮಾವಲಂಬಿಗಳೂ ಆದ ವೀರಬಾಹುವೇ ಮೊದಲಾದ ಒಂಬತ್ತುಲಕ್ಷ ವೀರರೂ ಇಲ್ಲಿಗೆ ಬಂದಿರುವರು. ॥೪೦॥

ಕತ್ತಿಯನ್ನು ಹಿಡಿದು ಮಹಾಬಲಶಾಲಿಗಳೆನಿಸಿ ಒಂಬತ್ತುಕೋಟಿ ರುದ್ರಾಣೀ ದೇವತೆಯರೂ, ಪರಶ್ವಾಯುಧಧಾರಿಗಳಾದ ಏಳುಕೋಟಿ ಯೋಗಿನೀದೇವತೆಗಳೂ ಬಂದಿರುವರು. ॥೪೧॥

ಪಾಶ ಮತ್ತು ಅಂಕುಶ ಈ ಆಯುಧಗಳನ್ನು ಹಿಡಿದು ಸಕಲ ವಿಘ್ನಗಳನ್ನೂ ನಾಶಮಾಡುವ ಪಿಚಂಡಿಲರೆನಿಸಿದ ಎರಡುಕೋಟಿ ಗಣಪತಿಯ ಸೇವಕರೂ ಅಲ್ಲಿ ಬಂದು ಕಾದಿರುವರು. ॥೪೨॥

ನಂದಿಕೇಶ್ವರನ ಅನುಯಾಯಿಗಳಾದ, ಕೋಟಿಮಂದಿ ಗಣಶ್ರೇಷ್ಠರು ಭಸ್ಮವನ್ನು ಮೈಗೆ ಬಳಿದುಕೊಂಡು ಭಸ್ಮತ್ರಿಪುಂಡ್ರವನ್ನು ಹಣೆಯಲ್ಲಿಟ್ಟು ಕೈಯ್ಯಲ್ಲಿ ಧನುರ್ಬಾಣಗಳನ್ನು ಹಿಡಿದು ನಿಂತಿರುವರು. ॥೪೩॥

ಚಂಡೀಶ್ವರಗಣಾಃ ಕೋಟ್ಯೋ ಗದಾಹಸ್ತಾಸ್ಸಮಾಗತಾಃ ।
ವೀರಭದ್ರಗಣಾಃ ಕೋಟ್ಯಃ ಖಡ್ಗಹಸ್ತಾಸ್ಸಮಾಗತಾಃ ॥೪೪॥

ತಥಾ ಭೃಂಗಿಗಣಾಃ ಕೋಟ್ಯಃ ಖಡ್ಗಹಸ್ತಾ ದುರಾಸದಾಃ ।
ಯಕ್ಷೇಶಾನುಚರಾಃ ಕೋಟ್ಯೋ ದಂಡಹಸ್ತಾ ಮಹಾಬಲಾಃ ॥೪೫॥

ಷಡಶೀತಿಸಹಸ್ರಾಣಿ ಮುನಯೋ ಬ್ರಹ್ಮವಾದಿನಃ ।
ತಾವಂತೋಽತ್ರ ಸಮಾಜಗ್ಮುಸ್ತಾವಂತೋ ಮೃಗಮೇಧಿನಃ ॥೪೬॥

ನಾಗಾನಾಂ ಕೋಟಯಸ್ತಿಸ್ರಃ ಪಾತಾಲತಲವಾಸಿನಾಂ ।
ದಾನವಾನಾಂ ಚ ದೈತ್ಯಾನಾಂ ದ್ವೇ ದ್ವೇ ಕೋಟೀ ಶಿವಾಧುನಾ ॥೪೭॥

ಗಂಧರ್ವಾ ನಿಯುತಾನ್ಯಷ್ಟೌ ಕೋಟ್ಯರ್ಧಂ ಯಕ್ಷರಕ್ಷಸಾಂ ।
ವಿದ್ಯಾಧರಾಣಾಮಯುತಂ ನಿಯುತಂ ಚಾಪ್ಸರೋ ದ್ವಯಂ ॥೪೮॥

---

ಗದಾಪಾಣಿಗಳಾದ ಕೋಟಿ ಮಂದಿ ಚಂಡೀಶ್ವರಗಣಗಳೂ, ಖಡ್ಗಧಾರಿಗಳಾದ ಕೋಟಿವೀರಭದ್ರಗಣಗಳೂ ಬಂದಿರುವರು. ॥೪೪॥

ಹಾಗೆಯೇ ಕತ್ತಿಯನ್ನು ಹಿಡಿದಿರುವ ಭಯಂಕರರಾದ ಕೋಟಿಮಂದಿ ಭೃಂಗಿಗಣಗಳೂ, ಯಕ್ಷೇಶ್ವರನ (ಕುಬೇರನ) ಅನುಚರರೂ, ದಂಡಪಾಣಿಗಳೂ ಮಹಾಬಲಶಾಲಿಗಳೂ, ಆಗಿರುವ ಕೋಟಿಯಕ್ಷಗಣಗಳೂ ಬಂದು ನೆರೆದಿರುವರು. ॥೪೫॥

ಬ್ರಹ್ಮಜ್ಞಾನಿಗಳಾದ ಎಂಬತ್ತಾರುಸಾವಿರ ಮುನಿಗಳು ಬಂದಿರುವರು. ಅಲ್ಲದೆ ಅಶ್ವಮೇಧವೇ ಮೊದಲಾದ ಮಹಾ ಯಾಗಗಳನ್ನು ಮಾಡಿದವರೂ ನೆರೆದಿರುವರು. ॥೪೬॥

ಶಂಕರನೇ, ಪಾತಾಲವಾಸಿಗಳಾದ ಮೂರುಕೋಟಿ ನಾಗರೂ ಎರಡುಕೋಟಿ ದಾನವರೂ, ಎರಡುಕೋಟಿ ದೈತ್ಯರೂ ಈಗ ಸಿದ್ಧರಾಗಿ ನಿಂತಿರುವರು. ॥೪೭॥

ಎಂಟುಲಕ್ಷ ಗಂಧರ್ವರೂ ಐವತ್ತುಲಕ್ಷ ಯಕ್ಷರೂ ಮತ್ತು ರಾಕ್ಷಸರೂ, ಹತ್ತುಸಾವಿರ ವಿದ್ಯಾಧರರೂ, ಎರಡುಲಕ್ಷ ಜನ ಅಪ್ಸರಸ್ತ್ರೀಯರೂ ಸೇರಿರುವರು.॥೪೮॥

ಗೋಮಾತರಸ್ತಥೈವಾಷ್ಟೌ ಸಹಸ್ರಾಣಿ ಸುಪರ್ವಣಾಂ ।
ದಶಸಾಹಸ್ರಮುತ್ಕೃಷ್ಟಂ ಪಕ್ಷಿಣಾಂ ಬಲಶಾಲಿನಾಂ ॥೪೯॥

ಕಿನ್ನರಾಣಾಂ ತಥಾ ಷಷ್ಟಿಸಹಸ್ರಂ ವಾದ್ಯಶಾಲಿನಾಂ ।
ಶಂಖಭೇರೀಮೃದಂಗಾನಾಂ ದುಂದುಭೀಡಮರೂಯುತಾಂ ॥೫೦॥

ಗಂಧರ್ವಕೋಟಯೋಽತ್ರೈವ ವೀಣಾಸಕ್ತಕರಾಸ್ತಥಾ ।
ಸಾಗರಾಸ್ಸಪ್ತ ಸಂಪ್ರಾಪ್ತಾ ನಾನಾರತ್ನೋಪಲಪ್ರದಾಃ ॥೫೧॥

ಸರಿತಾಂ ಚ ಸಹಸ್ರಾಣಿ ತ್ರೀಣಿ ಪಂಚಾಯುತಾನಿ ಚ ।
ಗಿರಯೋಽಷ್ಟೌ ಸಹಸ್ರಾಣಿ ಕೋಟಯೋತ್ರ ವನಸ್ಪತೇಃ ॥೫೨॥

ಆಜಗ್ಮುರ್ದಿಗ್ಗಜಾಶ್ಚಾಷ್ಟೌ ವೇದಾಸ್ಸಾಂಗಾಸ್ಸಮಾಗತಾಃ ।
ಬ್ರಹ್ಮವಿಷ್ಣ್ವಾದಯೋ ದೇವಾ ರುದ್ರೋ ವಾಸವ ಏವ ಚ ॥೫೩॥

---

ಕಾಮಧೇನುವೇ ಮುಂತಾದ ಎಂಟುಸಹಸ್ರ ಗೋಮಾತೃಗಣಗಳೂ, ಸಾವಿರಾರು ಮಂದಿ ದೇವತೆಗಳೂ, ಬಲಶಾಲಿಗಳೂ ಉತ್ಕೃಷ್ಟವೆನಿಸಿದವೂ ಆದ ಹತ್ತು ಸಾವಿರ ಪಕ್ಷಿಗಣಗಳೂ ಬಂದಿರುವುವು. ||೪೯||

ಶಂಖ, ಭೇರಿ, ಮೃದಂಗ, ದುಂದುಭಿ, ಡಮರು ಮುಂತಾದ ವಾದ್ಯಗಳನ್ನು ಬಾರಿಸುವುದರಲ್ಲಿ ನಿಪುಣರಾದ ಅರವತ್ತುಸಾವಿರ ಕಿನ್ನರರು ಬಂದಿರುವರು. ||೫೦||

ಕೋಟಿಮಂದಿ ಗಂಧರ್ವರು ವೀಣಾಪಾಣಿಗಳಾಗಿ ನಿಂತಿರುವರು. ನಾನಾರತ್ನ ಮಣಿಗಳನ್ನು ಕೊಡುವ ಲವಣಾದಿ ಸಪ್ತಸಮುದ್ರಗಳೂ ನೆರೆದಿರುವುವು. ||೫೧||

ಐವತ್ತುಮೂರುಸಾವಿರ ನದಿಗಳೂ ಎಂಟುಸಾವಿರ ಬೆಟ್ಟಗಳೂ, ಅನೇಕ ಕೋಟಿ ವನಸ್ಪತಿಗಳೂ ಬಂದಿರುವುವು. ||೫೨||

ಅಷ್ಟದಿಗ್ಗಜಗಳೂ, ಅಂಗಸಹಿತಗಳಾದ ನಾಲ್ಕು ವೇದಗಳೂ ಬಂದಿರುವುವು. ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೂ ರುದ್ರ, ಇಂದ್ರ ಇವರೂ, ||೫೩||

ತಥೈವ ದ್ವಾದಶಾದಿತ್ಯಾ ವಸವೋಽಥಾಶ್ವಿಸಂಯುತಾಃ ।
ತವಾಗಮನಮಿಚ್ಛಂತಃ ಪ್ರಾರ್ಥಯಂತಿ ಮಹೇಶ್ವರಂ ॥೫೪॥

ಆರುಹ್ಯ ತದ್ರಥವರಂ ಶಿವಯಾ ಸಮೇತೋ
ದೇವೋ ಮುದಾ ಗಣಗಣೈಸ್ಸುರಸಿದ್ಧಸಂಘೈಃ ।
ದೇವಾಸ್ಸಖೀಸುವಚನೇನ ಯಯೌ ಸುಧಾಬ್ಧಾ
ದ್ವೀಪಂ ಮಣೀಂದ್ರಕಲಿತಂ ಶಶಿಧಾಮಮೌಲಿಃ ॥೫೫॥

**ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಈಶ್ವರಮೇರುಗಮನಂ ನಾಮ ನವಮೋಽಧ್ಯಾಯಃ**

---

ಮಹೇಶ್ವರನೇ! ಹಾಗೆಯೇ ದ್ವಾದಶಾದಿತ್ಯರೂ ಅಷ್ಟವಸುಗಳೂ, ಅಶ್ವಿನೀ ದೇವತೆಗಳೂ ಇವರೆಲ್ಲರೂ ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಾ ಸದಾ ನಿನ್ನನ್ನೇ ಪ್ರಾರ್ಥನೆಮಾಡುತ್ತಿರುವರು, ಎಂದು ಜಯಂತಿಯು ಹೇಳಿದಳು. ||೫೪||

ಗಿರಿಜಾದೇವಿಯ ಸಖಿಯಾದ ಜಯಂತಿಯು ಹೀಗೆ ಹೇಳಿದುದನ್ನು ಕೇಳಿ, ಚಂದ್ರಮೌಳಿಯಾದ ಪರಮೇಶ್ವರನು ಅಂಬಿಕೆಯೊಡನೆ ರಥದ ಮೇಲೆ ಸಂತೋಷ ದಿಂದ ಕುಳಿತುಕೊಂಡು, ಅಲ್ಲಿ ನೆರೆದಿದ್ದ ತನ್ನ ಗಣಗಳಿಂದಲೂ, ದೇವತೆಗಳು ಸಿದ್ಧರು ಇವರ ಸಮೂಹದಿಂದಲೂ ಪರಿವೃತನಾಗಿ ಸುಧಾಸಮುದ್ರದ ಮಧ್ಯದಲ್ಲಿರುವ ರತ್ನಖಚಿತವಾದ ಮಣಿದ್ವೀಪಕ್ಕೆ ಪ್ರಯಾಣಮಾಡಿದನು. ||೫೫||

ಇಲ್ಲಿಗೆ ಶ್ರೀಶಿವರಹಸ್ಯದ ಎರಡನೆಯ ಅಂಶದಲ್ಲಿ
ಮಹೇಶ್ವರನು ಮೇರುಪರ್ವತಕ್ಕೆ ಪ್ರಯಾಣಮಾಡಿದುದನ್ನು ತಿಳಿಸುವ
ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ದಶಮೋಽಧ್ಯಾಯಃ

॥ ಜೈಗೀಷವ್ಯ ಉವಾಚ ॥

**ಇಭವಕ್ತ್ರಾನುಜ ಶ್ರೀಮನ್ ಕ್ರೌಂಚಪರ್ವತಸೂದನ ।**
**ಕಥಂ ಜಗಾಮ ಭಗವಾನ್ ಕೈಲಾಸಾಚ್ಛಂಕರಾಲಯಾತ್ ॥೧॥**

**ದೇವ್ಯಾಃ ಪ್ರಿಯಂ ಚಿಕೀರ್ಷುಸ್ಸನ್ ಸೃಷ್ಟದ್ವೀಪವಿಲೋಕನೇ ।**
**ವದ ತನ್ಮಹಿಮೋದಾರಂ ದಿವ್ಯಾಖ್ಯಾನಂ ಪರಂ ಶುಭಂ ॥೨॥**

**ಶ್ರೋತುಂ ವೈ ದೇವದೇವಸ್ಯ ಚರಿತ್ರಂ ಪರಮಾದ್ಭುತಂ ।**
**ನ ಹಿ ತೃಪ್ಯಾಮಿ ಭಗವನ್ ಸರ್ವಂ ವಿಸ್ತರತೋ ವದ ॥೩॥**

---

ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಹತ್ತನೆಯ ಅಧ್ಯಾಯ

ಎಲೈ ಗಜವದನನ ಅನುಜನೂ ಕ್ರೌಂಚಪರ್ವತವನ್ನು ಭೇದಿಸಿದವನೂ ಆದ ಕುಮಾರಸ್ವಾಮಿಯೇ, ದೇವಿಗೆ ಪ್ರೀತಿಯನ್ನುಂಟುಮಾಡುವ ನಿಮಿತ್ತದಿಂದ ತಾನು ಸೃಷ್ಟಿಮಾಡಿದ ದ್ವೀಪವನ್ನು (ಮಣಿದ್ವೀಪವನ್ನು) ನೋಡುವುದಕ್ಕಾಗಿ ಭಗವಂತನು ತನ್ನ ನಿವಾಸಸ್ಥಳವಾದ ಕೈಲಾಸಪರ್ವತದಿಂದ ಪ್ರಯಾಣಮಾಡಿದ ರೀತಿ ಹೇಗೆ? ಅತ್ಯಂತ ಶುಭಕರವೂ ಉದಾರವಾದ ಮಹಿಮೆಯುಳ್ಳದುದೂ ಆದ ಈ ದಿವ್ಯವಾದ ಕಥೆಯನ್ನು ನನಗೆ ಹೇಳು. ॥೧-೨॥

ಭಗವನ್! ದೇವದೇವನಾದ ಮಹೇಶ್ವರನ ಅತ್ಯಂತ ಅದ್ಭುತವಾದ ಚರಿತ್ರೆಯನ್ನು ಎಷ್ಟು ಕೇಳಿದರೂ ತೃಪ್ತಿಯೇ ಆಗುವುದಿಲ್ಲವಾದುದರಿಂದ ಎಲ್ಲವನ್ನೂ ದಯೆಯಿಟ್ಟು ವಿಸ್ತಾರವಾಗಿ ಹೇಳು, ಎಂದು ಜೈಗೀಷವ್ಯನು ಸ್ಕಂದದೇವನನ್ನು ಪ್ರಾರ್ಥನೆಮಾಡಿದನು. ॥೩॥

ತಸ್ಯೋದಾರವಚಶ್ಶ್ರುತ್ವಾ ಶಾಂಭವಸ್ಯ ಮಹಾತ್ಮನಃ ।
ಅತ್ಯಂತಹೃಷ್ಟವದನಸ್ತಾರಕಾರಿರಭಾಷತ ॥೪॥

॥ ಸ್ಕಂದ ಉವಾಚ ॥

ಶೃಣು ವಿಪ್ರೋತ್ತಮ ಶ್ರೀಮತ್ಕೈಲಾಸಾತ್ಸುಂದರಾಲಯಾತ್ ।
ಜಯಂತೀವಾಕ್ಯತುಷ್ಟಾತ್ಮಾ ಶಿಪಿವಿಷ್ಟೋ ಮಹೇಶ್ವರಃ ॥೫॥

ದೇವ್ಯಾ ದತ್ತಕರಶ್ಚಾಪಿ ರತ್ನಪಾದುಕಪಾದಭೂಃ ।
ಕೈಲಾಸವರಸೌಧಾಚ್ಚ ನಿರ್ಗತ್ಯ ಗಿರಿಜಾಯುತಃ ॥೬॥

ಅದ್ರೀಂದ್ರಸುತಯಾ ಸಾಕಂ ದೇವಶ್ಚೋಕ್ಷೇಂದ್ರಮಾರುಹತ್ ।
ಕಕುದಾಭೋಗವಿಸ್ತೀರ್ಣರತ್ನಾಕಲ್ಪವಿಭೂಷಿತಂ ॥೭॥

ಮಹಾಧರ್ಮಮಹಾಪಾದಂ ರತ್ನಘಂಟಾವಿಭೂಷಿತಂ ।
ಶೃಂಗಕೋಟಿತಟೀಭಾಸ್ವದ್ರತ್ನಸನ್ಮಕುಟೀಯುತಂ ॥೮॥
ತತ್ರಾಂತರ್ವಿಲಸತ್ಫಾಲಚಾಮರದ್ವಯಶೋಭಿತಂ ।

---

ಮಹಾತ್ಮನೂ ಶಂಭುಭಕ್ತನೂ ಆದ ಜೈಗೀಷವ್ಯನ ಉದಾರವಾದ ಮಾತನ್ನು ಕೇಳಿ, ತಾರಕಾಸುರನ ಶತ್ರುವಾದ ಕುಮಾರಸ್ವಾಮಿಯು ಅತ್ಯಂತ ಸಂತುಷ್ಟನಾಗಿ ಆ ಜೈಗೀಷವ್ಯಮುನಿಯನ್ನು ಕುರಿತು ಹೀಗೆ ಹೇಳತೊಡಗಿದನು. ॥೪॥

ಬ್ರಾಹ್ಮಣೋತ್ತಮನೇ ಕೇಳು, ಜಯಂತಿಯ ಸ್ತೋತ್ರರೂಪವಾದ ವಾಕ್ಯಗಳಿಂದ ಸಂತೋಷಗೊಂಡ ಸರ್ವವ್ಯಾಪಿಯಾದ ಮಹೇಶ್ವರನು, ದೇವಿಯಿಂದ ಹಸ್ತಲಾಘವವನ್ನು ಪಡೆದು, ರತ್ನಮಯವಾದ ಪಾದುಕೆಗಳನ್ನು ಮೆಟ್ಟಿಕೊಂಡು, ಆ ಸುಂದರವಾದ ಕೈಲಾಸಪರ್ವತದಿಂದ ಹೊರಟು ಗಿರಿಜಾದೇವಿಯೊಡನೆ ತನ್ನ ವಾಹನವಾದ ವೃಷಭರಾಜನನ್ನು ಏರಿದನು. ॥೫-೬॥

ಮಹೇಶ್ವರನ ವಾಹನವಾದ ಆ ವೃಷಭವು ವಿಸ್ತಾರವೂ ಉಬ್ಬಿದುದೂ ಆದ ಹಿಳಲಿನಿಂದ ಕೂಡಿದ್ದಿತು. ಆ ಹಿಳಲನ್ನು ರತ್ನಖಚಿತವಾದ ಅಲಂಕಾರಸಾಮಗ್ರಿಗಳಿಂದ ಸಿಂಗರಿಸಿದ್ದರು. ಇದರ ಪಾದಗಳು ಮಹಾಧರ್ಮಸ್ವರೂಪಗಳಾಗಿ ದೊಡ್ಡ ಆಕೃತಿಯುಳ್ಳದ್ದವು. ಕೊರಳಿಗೆ ರತ್ನಮಯವಾದ ಘಂಟೆಯು ಅಲಂಕರಿಸಲ್ಪಟ್ಟಿ

**ಸೋಮನಂದಿಮಹಾನಂದಿಬಾಣರಾವಣಭೃಂಗಿಭಿಃ ॥೯॥**

**ದೇವ್ಯಾ ಸರ್ವಗಣೈಸ್ಸಾರ್ಧಂ ರುದ್ರಾಣೀಕರಚಾಮರೈಃ ।**
**ರತ್ನವ್ಯಜನಕೈಶ್ಚೈವ ಗಣೈರ್ವಿಧೃತಛತ್ರಕೈಃ ॥೧೦॥**

**ಉದ್ಯಚ್ಛಶಾಂಕಸದೃಶಃ ಪರ್ಯ್ವೋತ್ಥಪರಿಮಂಡಲೈಃ ।**
**ಸ್ಥೂಲಮುಕ್ತಾಸರಾಲಂಬಿಗಣೇಂದ್ರಧೃತಚಾಮರೈಃ ॥೧೧॥**

**ಪದ್ಮಕಾಂತಿವಿನಿಸ್ಫೂರ್ಜದ್ವಾತಪೋತಾಹತಾಗ್ರಕೈಃ ।**
**ತುಹುಂಡಹುಂಡಚಂಡೀಶನಟಭೃಂಗಿರಿಟ್ಯೈಃ ಪುರಃ ॥೧೨॥**

---

ದ್ದಿತು. ಕೊಂಬುಗಳ ತುದಿಗೆ ರತ್ನಮಯವಾದ ಮತ್ತು ಕಿರೀಟಪ್ರಾಯವಾದ ಅಣಸುಗಳು ಹಾಕಲ್ಪಟ್ಟಿದ್ದವು. ಆ ಕೊಂಬುಗಳ ಮಧ್ಯದಲ್ಲಿ ಹಣೆಯ ಎರಡು ಪಕ್ಕಗಳಿಗೂ ಎರಡು ಚಾಮರಗಳನ್ನು ಕಟ್ಟಿದ್ದರು. ಇದರಿಂದ ಆ ಫಾಲಪ್ರದೇಶವು ಅತ್ಯಂತವಾಗಿ ಪ್ರಕಾಶಿಸುತ್ತಿದ್ದಿತು. ||೭-೮||

ವೃಷಭಾರೂಢನಾದ ಪಾರ್ವತೀಪರಮೇಶ್ವರರ ಅಕ್ಕಪಕ್ಕದಲ್ಲಿ ಸೋಮನಂದಿ, ಮಹಾನಂದಿ, ಬಾಣಾಸುರ, ರಾವಣ, ಭೃಂಗಿ ಇವರೂ ದೇವಿಯ ಸಕಲ ಗಣಗಳೂ ಬರುತ್ತಿದ್ದುವು. ರುದ್ರಾಣಿಯರಲ್ಲಿ ಕೆಲವರು ಚಾಮರವನ್ನು ಹಿಡಿದು ಬೀಸುತ್ತಿದ್ದರು. ಕೆಲವರು ರತ್ನಮಯವಾದ ಬೀಸಣಿಗೆಗಳಿಂದ ಗಾಳಿಯನ್ನು ಬೀಸುತ್ತಿದ್ದರು. ||೯-೧೦||

ಉದಯಿಸುವ ಪೂರ್ಣಚಂದ್ರನಿಗೆ ಸಮಾನವಾದ ಮುಖಕಾಂತಿಯುಳ್ಳ ಪರಮೇಶ್ವರನು, ವಾಹನಾರೂಢನಾಗಿ ಬರುತ್ತಿರಲು ಅವನ ಗಣನಾಯಕರೂ, ದೊಡ್ಡ ದೊಡ್ಡ ಮುತ್ತಿನಹಾರಗಳನ್ನು ಕಂಠಗಳಲ್ಲಿ ಧರಿಸಿ, ತಾವೇ ಚಾಮರಗಳನ್ನು ಹಿಡಿದು ಸೇವೆಮಾಡುತ್ತಾ ಹಿಂಬಾಲಿಸುತ್ತಿದ್ದರು. ||೧೧||

ಕೈಯಿಂದ ಹಿಡಿದಿರುವ ಚಾಮರಗಳು ಮಂದಮಾರುತದಿಂದ ಚದರಿರುವಾಗ ಅವು ಕಮಲದ ಕಾಂತಿಯನ್ನು ಸ್ಮರಣೆಗೆ ತರುತ್ತಿದ್ದವು. ಇಂತಹ ಚಾಮರಧಾರಿಗಳಾದ ತುಹುಂಡ, ಹುಂಡ, ಚಂಡೀಶ್ವರ, ನಟರಾಜ, ಭೃಂಗಿ, ರಿಟಿ ಇವರು ಶಿವನ ಮುಂದೆ ನಿದಾನವಾಗಿ ಬರುತ್ತಿದ್ದರು. ||೧೨||

ವೀರಭದ್ರಮಹಾಭದ್ರಕಾಲಾಗ್ನಿವರರುದ್ರಕೈಃ ।
ಶರಕಾರ್ಮುಕನಿಸ್ತ್ರಿಂಶನಿಷಂಗೋದ್ಯತ್ಕರೈರಪಿ ॥೧೩॥

ಸ್ವಮುಖೇ ವಿಧೃತಾಪಾರಸ್ವಚ್ಛಾದರ್ಶಗುಣೋಜ್ಜ್ವಲಃ ।
ಕುಮಾರಗಣಪಾದ್ಯೈಶ್ಚ ಪ್ರಣತೋತ್ಥಾಪಿತಸ್ತಥಾ ॥೧೪॥

ನಂದಿಕೇಶಗಣಾಪಾದಸ್ವರ್ಣವೇತ್ರಪ್ರಚಾಲಿತೈಃ ।
ರುದ್ರೈಶ್ಚ ಯೋಗಿನೀಮುಖ್ಯೈರ್ಭೈರವೈರ್ಡಾಕಿನೀಗಣೈಃ ॥೧೫॥

ಯಕ್ಷೇಂದ್ರೈರ್ವಿವಿಧಾಕಾರೈರ್ನಾನಾಶಸ್ತ್ರಾಸ್ತ್ರಮಂಡಲೈಃ ।
ದಂಡಿಮುಂಡಿಧೃತಾಪಾರಸ್ವರ್ಣಮದ್ದಲಕಾಹಲೈಃ ॥೧೬॥

---

ಬಿಲ್ಲು, ಬಾಣ, ಖಡ್ಗ, ಬತ್ತಳಿಕೆ (ಒರೆ) ಇವುಗಳನ್ನು ಧರಿಸಿರುವ, ವೀರಭದ್ರ, ಮಹಾಭದ್ರ, ಕಾಲಾಗ್ನಿ, ವರರುದ್ರಕ ಇವರೂ ಮಹೇಶ್ವರನ ಅನುಯಾಯಿಗಳಾಗಿದ್ದರು. ॥೧೩॥

ಈ ವೀರಭದ್ರರೇ ಮುಂತಾದ ಗಣಗಳು ಮಹಾದೇವನ ಮುಂದೆ ದೊಡ್ಡ ದೊಡ್ಡ ನಿರ್ಮಲವಾದ ಕನ್ನಡಿಗಳನ್ನು ಹಿಡಿದುಕೊಂಡು ಬರುತ್ತಿದ್ದರು. ಇದರಲ್ಲಿ ಪರಮೇಶ್ವರನ ಮುಖಕಾಂತಿಯು ಪ್ರತಿಫಲಿಸುತ್ತಿದ್ದಿತು. ಕುಮಾರಸ್ವಾಮಿ, ಗಣೇಶ್ವರ ಇವರು ಆಗಾಗ ಪರಶಿವನಿಗೆ ನಮಸ್ಕಾರಮಾಡುತ್ತಿದ್ದರು. ನಮಸ್ಕಾರಮಾಡಿದ ಅನಂತರ ಮಹಾದೇವನು ವಾತ್ಸಲ್ಯದಿಂದ ತಾನೇ ಅವರನ್ನು ಮೇಲಕ್ಕೆ ಎತ್ತಿಕೊಳ್ಳುತ್ತಿದ್ದನು. ॥೧೪॥

ನಂದಿಕೇಶ್ವರನ ಅಪಾರವಾದ ಗಣಗಳು ತಮ್ಮ ಕೈಗಳಲ್ಲಿ ಸುವರ್ಣದ ಬೆತ್ತಗಳನ್ನು ಹಿಡಿದು ಅವುಗಳನ್ನು ಬೀಸುತ್ತಾ ಮುಂದಿನ ದಾರಿಯನ್ನು ಬಿಡಿಸುತ್ತಿದ್ದರು. ಏಕಾದಶರುದ್ರರೂ, ಯೋಗಿನೀಗಣಪ್ರಧಾನರೂ, ಭೈರವರೂ ಮತ್ತು ಡಾಕಿನೀಗಣಗಳೂ, ॥೧೫॥

ನಾನಾಶಸ್ತ್ರಾಸ್ತ್ರಗಳ ಸಮೂಹವನ್ನು ಹಿಡಿದು ವಿವಿಧವಸ್ತ್ರವೇಷಗಳನ್ನು ಧರಿಸಿದ್ದ ಯಕ್ಷಶ್ರೇಷ್ಠರೊಡಗೂಡಿ ಮಹೇಶ್ವರನನ್ನು ಅನುಸರಿಸಿದ್ದರು. ದಂಡಿ ಮತ್ತು ಮುಂಡಿ ಇವರು ಸುವರ್ಣಮಯವಾದ ಮದ್ದಲೆ ಮತ್ತು ಕಹಳೆ ಅಥವ ಕೊಂಬು ಇವುಗಳನ್ನು ಹಿಡಿದು ಬಾರಿಸುತ್ತಾ ಸಾಗುತ್ತಿದ್ದರು. ॥೧೬॥

ಸುಶಂಖವರಘೋಷೈಶ್ಚ ನಿಸ್ವನೈಃ ಪಟಹೋತ್ಥಿತೈಃ ।
ಗಣಹಸ್ತಾಹತಾಪಾರದುಂದುಭೀಭೇರಿಘೋಷಣೈಃ ॥೧೭॥

ಕೈಲಾಸಶಿಖರೋತ್ತುಂಗಮೌಲಿಬರ್ಹಿಕೃತಾರವೈಃ ।
ಅನೇಕಡಿಂಡಿಮಾಪಾರಮಡ್ಡುಗೋಮುಖಜೈರವೈಃ ॥೧೮॥

ಕಾಹಲಾಗ್ರಾಲಂಬಿತಾಚ್ಛಚಾಮರಾಣಾಂ ಚ ಕೋಟಿಭಿಃ ।
ಗಣೇಂದ್ರಜಯಘೋಷೈಶ್ಚ ವಿನಾದಿತದಿಶಾಮುಖಂ ॥೧೯॥

ಕೃಷ್ಣಾಗರುಮಹಾಸಾರಧೂಪಪಾತ್ರಕರೈರ್ಗಣೈಃ ।
ಕರ್ಪೂರಖಂಡಜೋದ್ಭಾಮದೀಪಪಾತ್ರಕರೈರ್ಗಣೈಃ ॥೨೦॥

ಫಲಜಾಲಕರೈರನ್ಯೈಸ್ಸ್ವರ್ಣಪಾತ್ರಕರೈರ್ಗಣೈಃ ।
ಫಲತಾಂಬೂಲಹಸ್ತೈಶ್ಚ ಪ್ರಣಾಮಾಂಜಲಿಸತ್ಕರೈಃ ॥೨೧॥

---

ಶ್ರೇಷ್ಠವಾದ ಶಂಖ(ಗಳ) ನಾದವೂ, ತಮಟೆಗಳ ಧ್ವನಿಯೂ, ಅನೇಕ ಶಿವಗಣಗಳು ಬಾರಿಸುತ್ತಿರುವ ದುಂದುಭಿ ಮತ್ತು ಭೇರಿ ಇವುಗಳ ಘೋಷವೂ, ಪ್ರಯಾಣಸಮಯದಲ್ಲಿ ಪ್ರತಿಧ್ವನಿಗೊಡುತ್ತಿದ್ದವು. ||೧೭||

ಅಲ್ಲದೇ ಕೈಲಾಸಪರ್ವತದ ಉನ್ನತವಾದ ಶಿಖರದಲ್ಲಿ ವಾಸಮಾಡುತ್ತಿರುವ ನವಿಲುಗಳು ಇಂಪಾಗಿ ಕೇಕಾಧ್ವನಿಗೈಯ್ಯುತ್ತಿದ್ದವು. ಅನೇಕ ಡಿಂಡಿಮ, ಮಡ್ಡು, ಗೋಮುಖ ಈ ವಾದ್ಯಗಳ ಧ್ವನಿಯೂ ಭೋರ್ಗರೆಯುತ್ತಿದ್ದಿತು. ||೧೮||

ಕೊಂಬುಗಳ(ವಾದ್ಯವಿಶೇಷ) ತುದಿಯಲ್ಲಿ ಶುಭ್ರವಾದ ಚಾಮರಗಳನ್ನು ಕಟ್ಟಿದ ಕೋಟ್ಯಂತರ ಕೊಂಬುಗಳ ಧ್ವನಿಯೂ, ಆ ಶಿವಗಣಗಳ ಜಯ ಘೋಷಗಳೂ ಒಟ್ಟುಸೇರಿ ಎಲ್ಲಾ ದಿಕ್ಕುಗಳಲ್ಲಿಯೂ ಪ್ರತಿಧ್ವನಿಕೊಡುತ್ತಿದ್ದವು. ||೧೯||

ಕೆಲವು ಗಣಗಳು ಸಾರವತ್ತಾದ ಕೃಷ್ಣಾಗರು (ಕರಿಯ ಅಗಿಲೆಚಕ್ಕೆಯ ಪುಡಿ) ಧೂಪದಿಂದ ಕೂಡಿರುವ ಪಾತ್ರೆಗಳನ್ನು ಹಿಡಿದಿದ್ದರು. ಹಲವರು ಮಡ್ಡೀ ಕರ್ಪೂರದ ದೀಪಗಳನ್ನು ಪಾತ್ರೆಗಳಲ್ಲಿ ಹೊತ್ತಿಸಿಕೊಂಡು ತರುತ್ತಿದ್ದರು. ||೨೦||

ಸುವರ್ಣಮಯವಾದ ಪಾತ್ರೆಗಳಲ್ಲಿ ಹಣ್ಣುಗಳ ಸಮೂಹವನ್ನು ತೆಗೆದು ಕೊಂಡು ಕೆಲವರು ಬರುತ್ತಿದ್ದರು. ಕೆಲವರು ಫಲತಾಂಬೂಲಗಳನ್ನು ಹಿಡಿದೂ,

ಭೂಷಣಾಭೋಗವಿಧೃತವರಪಾತ್ರಕರೈರ್ಗಣೈಃ ।
ಭಸ್ಮಾಧಾರಕರೈರನ್ಯೈರುದ್ರಾಕ್ಷವರಹಸ್ತಕೈಃ ॥೨೨॥

ದೇವೀ ಸಖೀಗಣಾಸಾಶಕೃತನೀರಾಜನೋತ್ಸವಾ ।
ಜಯಂತ್ಯಾಚ್ಛಧೃತಚ್ಛತ್ರಮೋಹನಾನನಸುಂದರಾ ॥೨೩॥

ವಿಜಯಾಕರಸದ್ವೀಟೀವಿಧೃತಾಂಶುನಖೋಜ್ವಲಾ ।
ಲಲಂತ್ಯಾ ವೀಜಿತಮರುಚ್ಚಾಮರೈರತಿಸುಂದರಾ ॥೨೪॥

ವ್ಯಜನೈಕಕರಾಲಂಬಿಭೂಷಣೋತ್ತಮಭೂಷಯಾ ।
ಪದ್ಮಯಾ ಶೋಭಿತಾ ಪಾರ್ಶ್ವೇ ವಾಣ್ಯಾ ಧೃತಪತಾಕಯಾ ॥೨೫॥

---

ಮತ್ತೆಕೆಲವರು ಕೈಜೋಡಿಸಿ ನಮಸ್ಕಾರಮಾಡುತ್ತಲೂ ಮುಂದೆ ಸಾಗುತ್ತಿದ್ದರು. ॥೨೧॥

ಶ್ರೇಷ್ಠವಾದ ಪಾತ್ರೆಗಳಲ್ಲಿ ಆಭರಣಸಾಮಗ್ರಿಗಳನ್ನು ತೆಗೆದುಕೊಂಡು ಕೆಲವು ಗಣಗಳು ಬರುತ್ತಿದ್ದವು. ಕೆಲವರು ಭಸ್ಮದ ಪೆಟ್ಟಿಗೆ ಅಥವ ಸಂಪುಟವನ್ನೂ, ಕೆಲವರು ಶ್ರೇಷ್ಠವಾದ ರುದ್ರಾಕ್ಷಿಮಾಲೆಯನ್ನೂ ಹಿಡಿದಿದ್ದರು. ॥೨೨॥

ದೇವಿಯ ಅಸಂಖ್ಯಾತ ಸಖಿಯರು ಮಹಾದೇವಿಗೆ ಆರತಿಯನ್ನೆತ್ತಿದ್ದರು. ಜಯಂತಿಯೆಂಬ ಸಖಿಯು ಜಗನ್ಮೋಹಕಳಾದ ದೇವಿಗೆ ಶುಭ್ರವಾದ ಶ್ವೇತಚ್ಛತ್ರಿಯನ್ನು ಹಿಡಿದಿದ್ದಳು. ॥೨೩॥

ವಿಜಯಾ ಎಂಬ ಸಖಿಯು ತನ್ನ ಕರದಲ್ಲಿ ವೀಳ್ಯೇದೆಲೆಯ ಪಟ್ಟಿಯನ್ನು ಹಿಡಿದು ಹೊಳೆಯುತ್ತಿರುವ ಉಗುರಿನ ಕಾಂತಿಗಳಿಂದ ದೇವಿಯನ್ನು ಸೇವಿಸುತ್ತಿದ್ದಳು. ಲಲಂತೀ ಎಂಬ ಗೆಳತಿಯು ಚಾಮರವನ್ನು ಹಿಡಿದು ಬೀಸುತ್ತಾ ಅದರ ಗಾಳಿಯಿಂದ ಅತ್ಯಂತ ಸುಂದರಾಂಗಿಯಾದ ದೇವಿಗೆ ಸಂತೋಷವನ್ನುಂಟುಮಾಡುತ್ತಿದ್ದಳು. ॥೨೪॥

ಲಕ್ಷ್ಮೀದೇವಿಯು ಉತ್ತಮವಾದ ಆಭರಣಗಳನ್ನು ಧರಿಸಿ ತಾನೇ ಬೀಸಣಿಗೆಯನ್ನು ಹಿಡಿದು ದೇವಿಗೆ ಗಾಳಿ ಬೀಸುತ್ತಿರುವಳು. ಸರಸ್ವತಿಯು ಪಕ್ಕದಲ್ಲಿ ನಿಂತು ಪತಾಕೆಯನ್ನು ಹಿಡಿದಿರುವಳು. ಇವರಿಬ್ಬರ ಮಧ್ಯದಲ್ಲಿ ದೇವಿಯು ಅತಿಶಯವಾಗಿ ಶೋಭಿಸುತ್ತಿರುವಳು. ॥೨೫॥

ಶಚ್ಯಾ ಭೃಂಗಾರಕರಯಾ ಶುಶುಭೇ ಸಾ ಮಹೇಶ್ವರೀ ।
ದಿವ್ಯಾಂಗನಾಪ್ಸರೋಜಾಲರುದ್ರಾಣೀಕೋಟಿಭಿರ್ವೃತಾ ॥೨೬॥

ಕರಕಜ್ಜಲಭೂಷಾದಿಪುಣ್ಯಸ್ರಗ್ಗಂಧಧಾರಿಭಿಃ ।
ರತ್ನಪಾದುಕಹಸ್ತಾಶ್ಚ ಶರಶೂಲವರಾಯುಧಾಃ ॥೨೭॥

ನವಯೌವನದೀಪ್ತಾಂಗ್ಯಃ ಕುಂಭೋದ್ಯತ್ಸುಪಯೋಧರಾಃ ।
ವಸ್ತ್ರಪೇಟೀಧರಾಶ್ಚಾನ್ಯಾಸ್ತಥಾ ತಾಂಬೂಲವಾಹಿನೀ ॥೨೮॥

ಘಣತ್ಪದಕಮಂಜೀರಕಂಕಣಾವಲನೋಜ್ಜ್ವಲಾಃ ।
ರತ್ನಪೀನಾರುಣಲಸತ್ಕೌಸುಂಭವಸನೋಜ್ಜ್ವಲಾಃ ॥೨೯॥

---

ಮಹೇಶ್ವರಿಯ ಸುತ್ತಲೂ ಅಪ್ಸರಸ್ತ್ರೀಯರ ಸಮೂಹವೂ, ರುದ್ರಾಣೀ ದೇವತೆಗಳ ಸಂಘವೂ ನೆರೆದಿದ್ದಿತು. ಇಂದ್ರಮಹಿಷಿಯಾದ ಶಚೀದೇವಿಯು ಗಿಂಡಿಯನ್ನು ಹಿಡಿದು ದೇವಿಯ ಸಮೀಪದಲ್ಲಿ ನಿಂತಿದ್ದಳು. ಇವರುಗಳಿಂದ ದೇವಿಯ ಕಾಂತಿಯು ಮಿತಿಮೀರಿ ಶೋಭಿಸುತ್ತಿದ್ದಿತು. ॥೨೬॥

ಕೆಲವರು ಸಖಿಯರು ಕಜ್ಜಲವೇ ಮುಂತಾದ ಅಲಂಕಾರಸಾಮಗ್ರಿಗಳು, ಪುಣ್ಯಕರವಾದ ಹಾರಗಳು ಮತ್ತು ಸುಗಂಧ ಇವುಗಳನ್ನು ಕೈಯ್ಯಲ್ಲಿ ಧರಿಸಿದ್ದರು. ಇನ್ನೂ ಕೆಲವರು ಬಾಣ, ತ್ರಿಶೂಲ ಇವೇ ಮೊದಲಾದ ಉತ್ತಮವಾದ ಆಯುಧಗಳನ್ನೂ ರತ್ನಮಯವಾದ ಪಾದುಕೆಗಳನ್ನು ಕೈಯ್ಯಲ್ಲಿ ಹಿಡಿದಿದ್ದರು. ॥೨೭॥

ಕುಂಭದಂತೆ ಉಬ್ಬಿದ ಸ್ತನಗಳುಳ್ಳವರಾಗಿಯೂ ನವಯೌವನದಿಂದ ಹೊಳೆಯುತ್ತಿರುವ ಶರೀರಕಾಂತಿಯಿಂದ ಕೂಡಿದವರಾಗಿಯೂ ಇದ್ದ ಕೆಲವರು ಬಟ್ಟೆಯ ಪೆಟ್ಟಿಗೆಯನ್ನು ಹೊತ್ತು ತರುತ್ತಲಿದ್ದರು. ಮತ್ತೆ ಕೆಲವರು ತಾಂಬೂಲದ ಪೆಟ್ಟಿಗೆಯನ್ನು ಹಿಡಿದು ಹಿಂಬಾಲಿಸುತ್ತಿದ್ದರು. ॥೨೮॥

ಸಖಿಯರ ಕಾಲುಕಡಗ ಮತ್ತು ಕೈಕಡಗ ಇವುಗಳು ಘಣಘಣವೆಂದು ಶಬ್ದ ಮಾಡುತ್ತಿದ್ದವು. ದೊಡ್ಡ ದೊಡ್ಡ ಕೆಂಪು, ರತ್ನಗಳಿಂದ ಹೊಳೆಯುತ್ತಿರುವ ಕುಸುಂಬದ (ಅಗ್ನಿಜ್ವಾಲೆ) ಕಾಂತಿಗೆ ಸಮಾನವಾದ ವಸ್ತ್ರವನ್ನುಟ್ಟು ಆ ಸಖಿಯರೂ ಶೋಭಿಸುತ್ತಿದ್ದರು. ॥೨೯॥

ದಿವ್ಯಾಂಗರಾಗಪುಷ್ಪೋದ್ಯತ್ಕಬರಾಃ ಕಮಲಾನನಾಃ ।
ಸೇವಂತ್ಯಃ ಪರಿತೋ ದೇವೀಂ ನಾನಾಸೇವಾವಿಶಾರದಾಃ ॥೩೦॥

ಗಣೇಶಪ್ರಮಥಾಧೀಶಾ ಯಕ್ಷೇಂದ್ರಫಣಿಭೂಷಣಾಃ ।
ರುದ್ರಾಶ್ಚಾಪಿ ಮಹೋದಾರಾಕಾಕೋದರಧರಾಸ್ತದಾ ॥೩೧॥

ವಿಬು(ಶು)ದ್ಧಚಂದ್ರಾರ್ಧಧರಾಃ ಕಪರ್ದವರಶೇಖರಾಃ ।
ಭಸ್ಮಭಾಸ್ವನ್ಮಹಾಕೋಪಾಸ್ತೇ ಸರ್ವೇ ಹ್ಯಹಿಮನ್ಯವಃ ॥೩೨॥

ಶಿವಾಪಾಂಗಪರಿಸ್ಪಂದಸಮಕಾಲಜಗದ್ಬಲಿಂ ।
ಗೃಹ್ಣಂತೋ ಗಣವೀರಾಸ್ತೇ ಮಹಾಪರಶುಪಾಣಯಃ ॥೩೩॥

ಶರಕಾರ್ಮುಕನಿಸ್ತ್ರಿಂಶಕುಠಾರಶರಪಾಣಯಃ ।
ಖಡ್ಗಹೇತಿಕುಠಾರೋದ್ಯತ್ಕರಾಃ ಕವಚಿನಸ್ತಥಾ ॥೩೪॥

---

ದಿವ್ಯವಾದ ಅಂಗರಾಗವನ್ನು ಹಚ್ಚಿಕೊಂಡು, ಒಳ್ಳೆಯ ಹೂಗಳನ್ನು ತಲೆಯಲ್ಲಿ ಮುಡಿದು, ಕಮಲದಂತೆ ಸುಂದರವಾದ ಮುಖವುಳ್ಳ ಆ ಸಖಿಯರು ನಾನಾವಿಧವಾದ ಸೇವಾಕಾರ್ಯದಲ್ಲಿ ತೊಡಗಿದವರಾಗಿ ದೇವಿಯನ್ನು ಸರ್ವದಾ ಸೇವೆಮಾಡುತ್ತಿದ್ದರು. ॥೩೦॥

ಪ್ರಮಥಗಣಾಧಿಪತಿಗಳೂ, ಸರ್ಪಭೂಷಣರಾದ ಯಕ್ಷಶ್ರೇಷ್ಠರೂ, ದೊಡ್ಡ ದೊಡ್ಡ ಸರ್ಪಗಳನ್ನು ಧರಿಸಿರುವ ರುದ್ರರೂ, ಹಾಗೆಯೇ, ॥೩೧॥

ಶುಭ್ರವಾದ ಅರ್ಧಚಂದ್ರನನ್ನು ಧರಿಸಿ ಉತ್ತಮವಾದ ಜಡೆಗಳುಳ್ಳವರೂ, ಭಸ್ಮತ್ರಿಪುಂಡ್ರಗಳನ್ನು ಧರಿಸಿ ಮಹಾತೇಜಸ್ವಿಗಳಾಗಿ ಪ್ರಕಾಶಿಸುತ್ತಿರುವವರೂ, ಮತ್ತೂ ಸರ್ಪದಂತೆ ಉಗ್ರವಾದ ಕೋಪವುಳ್ಳವರೂ ಸಮೀಪದಲ್ಲಿ ಬರುತ್ತಿದ್ದರು. ಅವರೇ ಅಹಿಮನ್ಯುಗಳು. ॥೩೨॥

ಶಿವನ ಕಡೆಗಣ್ಣಿನ ಚಲನೆಯಾದ ಸಮಕಾಲದಲ್ಲಿಯೇ ಪ್ರಪಂಚವನ್ನೇ ಬಲಿ ತೆಗೆದುಕೊಳ್ಳುವ ಅನೇಕ ವೀರಗಣಗಳು ದೊಡ್ಡ ದೊಡ್ಡ ಕೊಡಲಿಗಳನ್ನು ಹಿಡಿದು ಶಿವನನ್ನು ಹಿಂಬಾಲಿಸುತ್ತಿದ್ದರು. ॥೩೩॥

ಬಿಲ್ಲು, ಬಾಣ, ಕತ್ತಿ, ಕೊಡಲಿ, ಬಾಣ, ಇವುಗಳನ್ನು ಧರಿಸಿರುವ ಗಣಗಳೂ, ಖಡ್ಗ, ಶಸ್ತ್ರ, ಕುಠಾರ, ಈ ಆಯುಧಗಳನ್ನು ಹಿಡಿದು, ಕವಚಧಾರಿಗಳಾದ ಗಣಗಳೂ ಶಿವನ ಸುತ್ತಲು ನೆರೆದಿದ್ದರು. ॥೩೪॥

ಮಹಾಬಲಾ ಮಹೋತ್ಸಾಹಾ ನಾನಾವರ್ಣಬಲೋತ್ಕಟಾಃ ।
ಕೇಚಿದ್ಧರಿಹಯಾಸಾರಮಾತಂಗವದನಾ ಗಣಾಃ ॥೩೫॥

ಮಯೂರಶುಕಭೇರುಂಡವ್ಯಾಲೀಶರಭವಕ್ತ್ರಕಾಃ ।
ಮಾರ್ಜಾರಕುಕ್ಕುಟೋಲೂಕತರಕ್ಷವೃಕವಕ್ತ್ರಕಾಃ ॥೩೬॥

ವಾತಾಯೂಪಮವಕ್ತ್ರಾಶ್ಚ ಕೃಶಾಸ್ಸ್ಥೂಲಾಃ ಪಿಚಂಡಿಲಾಃ ।
ಭೇಕವಾಯಸಗೋವಕ್ತ್ರಮಹಿಷಾಜಮುಖಾಸ್ತಥಾ ॥೩೭॥

ಮೂಷಿಕಾಸ್ಯಾಸ್ತಥಾ ಕೇಚಿನ್ನಿರ್ಮಾಂಸಸ್ನಾಯುಬಂಧನಾಃ ।
ಪಾರಾವತಾಸ್ಯಾಶ್ಚ ತಥಾ ಮಹಾಸ್ಥೂಲಾಃ ಪಿಚಂಡಿಲಾಃ ॥೩೮॥

ರಕ್ತಾ ವಲಕ್ಷಾಃ ಕರ್ಬುರಾಃ ಪೀತಾಶ್ಚ ಹರಿತಾ ಗಣಾಃ ।
ಕೋಕಿಲಾಸ್ಯಾಶ್ಶುಕಮುಖಾಃ ಕರಾಲವಿಕಟಾನನಾಃ ॥೩೯॥

---

ಈ ಗಣಗಳೆಲ್ಲರೂ ಮಹಾಬಲಶಾಲಿಗಳು. ತುಂಬಾ ಉತ್ಸಾಹವುಳ್ಳವರು. ನಾನಾಬಣ್ಣ ಮತ್ತು ನಾನಾಶಕ್ತಿ ಇವುಗಳಿಂದ ಕೊಬ್ಬಿದವರು. ಇವರಲ್ಲಿ ಕೆಲವರು ಸಿಂಹ, ಕುದುರೆ, ಆನೆ ಇವುಗಳಂತೆ ಮುಖವುಳ್ಳವರಾಗಿದ್ದರು. ||೩೫||

ಕೆಲವರು ನವಿಲು, ಗಿಳಿ, ಗಂಡಭೇರುಂಡ, ಹುಲಿ, ಶರಭ ಇವುಗಳ ಮುಖದಂತೆ ಮುಖವುಳ್ಳವರಾಗಿದ್ದರು. ಇನ್ನು ಕೆಲವರು, ಬೆಕ್ಕು, ಕೋಳಿ, ಗೂಬೆ, ಚಿಟ್ಟಹುಲಿ (ಶಿವಂಗಿ) ತೋಳ, ಈ ಪ್ರಾಣಿಗಳಂತೆ ಮುಖವುಳ್ಳವರು. ||೩೬||

ಮತ್ತು ಜಿಂಕೆಯಂತೆ ಮುಖವುಳ್ಳವರೂ, ಕೃಶಾಂಗರೂ, ಸ್ಥೂಲದೇಹಿಗಳೂ ಹೊಟ್ಟೆ ಮಾತ್ರ ದಪ್ಪವಾಗಿರುವವರೂ, ಕಪ್ಪೆ, ಕಾಗೆ, ಹಸು, ಎಮ್ಮೆ, ಆಡು, ಇವುಗಳಂತೆ ಮುಖವುಳ್ಳವರೂ ಅನೇಕ ಮಂದಿ ಇದ್ದರು. ||೩೭||

ಅಲ್ಲದೆ, ಕೆಲವರು ಇಲಿಮುಖವುಳ್ಳವರು. ಕೆಲವರು ಮಾಂಸವಿಲ್ಲದೆ ಕೇವಲ ನರಗಳ ಬಂಧನದಿಂದ ಕೂಡಿರುವವರು. ಹಲವರು ಪಾರಿವಾಳದ ಮುಖವುಳ್ಳವರು; ಮತ್ತು ಕೆಲವರು ಸ್ಥೂಲರಾಗಿಯೂ, ದಪ್ಪಹೊಟ್ಟೆಯುಳ್ಳವರಾಗಿಯೂ ಇದ್ದರು. ||೩೮||

ಕೆಲವರು ಕೆಂಪು, ಬಿಳುಪು, ಚಿತ್ರಬಣ್ಣ, ಹಳದಿ, ಹಸುರು ಈ ಬಣ್ಣಗಳಿಂದ ರಂಜಿಸುತ್ತಿದ್ದರು. ಇವರಲ್ಲಿ ಕೆಲವರು, ಕೋಗಿಲೆಯಂತೆಯೂ ಗಿಣಿಯಂತೆಯೂ

ದಂಷ್ಟ್ರಾನಿವೃತ್ತದಶನಾ ಲೇಲಿಹಾನಾಸ್ತದೋಷ್ಠಕೇ ।
ಸೃಕ್ಕಣೀ ಕೃಕಣೀನಿರ್ಯನ್ಮಹಾಜಿಹ್ವೋರುನಾಸಿಕಾ ॥೪೦॥

ಗಣಾನಾಂ ಕೋಟಿಯಸ್ತತ್ರ ದೇವಸ್ಯ ಪುರತೋ ಯಯುಃ ।
ರುದ್ರಾಣೀಕರಪುಷ್ಪೈಶ್ಚ ಲಾಜಾವರ್ಷೈರ್ಮಹೇಶ್ವರಃ ॥೪೧॥

ಕೈಲಾಸಮೌಲಿಪ್ರಾಕಾರಮಧ್ಯಸ್ಥಾಸ್ತಟಿತೋ ಯಥಾ ।
ವಿಕಿರಂತಿ ತಥಾ ದೇವ್ಯೋ ಮುಕ್ತಾಪುಷ್ಪೈರ್ಮಹೇಶ್ವರಂ ॥೪೨॥

ಕೇಚಿತ್ಸುಗಂಧಕರ್ಪೂರೈಃ ಪಾಟೀರಸಲಿಲೈಃ ಶಿವಂ ।
ವರ್ಷಂತಿ ಶೈಲಮೌಲಿಸ್ಥಾ ಧಾರಾಪಾತ್ರೈಸ್ಸದಾ ಶಿವೌ ॥೪೩॥

---

ಮುಖವುಳ್ಳವರಾಗಿದ್ದರು. ಕೆಲವರ ಮುಖವು ಭಯಂಕರವಾಗಿ ವಿಕಾರವಾಗಿರುವುದು. ॥೩೯॥

ಕೆಲವರ ವಕ್ರವಾದ ಕೋರೆದಾಡೆ, ಮತ್ತು ಹಲ್ಲು ಇವುಗಳು ಅವರ ತುಟಿಗಳ ಮೇಲೆ ಚಾಚಿಕೊಂಡಿದ್ದುವು; ಕೆಲವರು ತಮ್ಮ ದೊಡ್ಡ ನಾಲಿಗೆಯನ್ನು ನೀಡಿ, ಗಂಟುಕಟ್ಟಿ ದಪ್ಪವಾಗಿರುವ ಮೂಗಿನಿಂದ ಭಯಂಕರರಾಗಿ ಕಾಣುತ್ತಿದ್ದರು. ॥೪೦॥

ಈ ರೀತಿಯಾದ ಕೋಟ್ಯಂತರ ಗಣಗಳು ಮಹಾದೇವನ ಮುಂದೆ ಪ್ರಯಾಣಮಾಡುತ್ತಿದ್ದುವು. ರುದ್ರಾಣಿಯರು ತಮ್ಮ ಕೈಯ್ಯಲ್ಲಿ ಹೂವು ಮತ್ತು ಅರಳು ಇವುಗಳನ್ನು ತೆಗೆದುಕೊಂಡು ಮಳೆಗರೆಯುತ್ತಿದ್ದರು. ಕೆಲವು ದೇವತಾ ಸ್ತ್ರೀಯರು ಕೈಲಾಸಪರ್ವತದ ಶಿಖರದ ಪ್ರಾಕಾರದಲ್ಲಿ ನಿಂತು ಮಿಂಚಿನಂತೆ ಹೊಳೆಯುತ್ತಾ ಮುಕ್ತಾಮಣಿಮಯವಾದ ಹೂವುಗಳನ್ನು ಮಹೇಶ್ವರನ ಮೇಲೆ ಎರಚುತ್ತಿದ್ದರು. ॥೪೧-೪೨॥

ಪರ್ವತಶಿಖರದಲ್ಲಿ ನಿಂತು ಕೆಲವರು, ಪನ್ನೀರುದಾನಿಗಳಲ್ಲಿ ಸುಗಂಧಮಯವಾದ ಪಚ್ಚಕರ್ಪೂರದ ನೀರನ್ನೂ, ಗಂಧೋದಕವನ್ನೂ ತುಂಬಿಕೊಂಡು ಉಮಾಮಹೇಶ್ವರರ ಮೇಲೆ ಸದಾ ಮಳೆಗರೆಯುತ್ತಿದ್ದರು. ॥೪೩॥

ವರ್ಷಾಸು ಮೇಘಗಣವದ್ರುದ್ರಾಣ್ಯೋ ನವಯೌವನಾಃ ।
ಪಶ್ಯಂತಸ್ಸ್ವಕೈಲಾಸಮಹಾಲಿಂಗಸೌಧೋರುಶೃಂಗಕಂ ॥೪೪॥

ಲಿಂಗಾಲಯಗಣಾಂಶ್ಚೈವ ಹೀರಕುಂಭೋರುಭಾಸುರಂ ।
ವೃಷೇಂದ್ರಂ ಚ ಸಮಾರುಹ್ಯ ಸಿಂಹಾಸನವರೇ ಸ್ಥಿತೌ ॥೪೫॥

ರೇಜತುಃ ಪ್ರಮಥೋದಾರೈಸ್ಸಹ ದೇವಾದರೈಸ್ಸಹ ।
ಉದಾರೈರ್ಗಣವೃಂದೈಶ್ಚ ರುದ್ರಾಣೀಗಣಕೋಟಿಭಿಃ ॥೪೬॥

ಆರುಹ್ಯ ಶಾಂಕರಂ ದಿವ್ಯಂ ರತ್ನಘಂಟಾಲಸದ್ಗಲಂ ।
ವಾಮಭಾಗಸ್ಥಯಾ ದೇವ್ಯಾ ವೃಷಾಧಿಪತಿಕಲ್ಪಿತೇ ॥೪೭॥

ಸಿಂಹಾಸನವರೇ ದೇವೌ ಪ್ರಭಾಮಂಡಲಶೋಭಿತೇ ।
ಛತ್ರಾಪಾರಛನ್ನಮುಖಚಾಮರಾಕಲಿಕಾಲಕಃ ॥೪೮॥

---

ದೊಡ್ಡ ಹೀರಮಣಿಗಳಿಂದ ಅಲಂಕೃತವಾಗಿ ಪ್ರಕಾಶಮಾನವಾಗಿರುವ ವೃಷಭರಾಜನಮೇಲೆ ಸಿದ್ಧಪಡಿಸಿರುವ ಶ್ರೇಷ್ಠವಾದ ಸಿಂಹಾಸನದಲ್ಲಿ ಮಂಡಿಸಿರುವ ಶಿವಪಾರ್ವತಿಯರು, ಮಳೆಗಾಲದ ಮೇಘಪಂಕ್ತಿಗಳಂತೆ ನವಯೌವನದಿಂದ ತುಂಬಿ ತುಳುಕುತ್ತಿರುವ ರುದ್ರಾಣಿಯರನ್ನು ನೋಡಿ ಸಂತೋಷಪಡುತ್ತಿದ್ದರು. ಅಲ್ಲದೆ, ಪ್ರಯಾಣಮಾಡುವಾಗ ತಮ್ಮ ನಿಜಭವನವಾದ ಕೈಲಾಸವನ್ನೂ, ಮಹಾಲಿಂಗಗಳಿಂದ ಕಿಕ್ಕಿರಿದ ದೊಡ್ಡ ಶೃಂಗವನ್ನೂ ಆ ಲಿಂಗಾಲಯದಲ್ಲಿರುವ ಶಿವಗಣಗಳನ್ನೂ ನೋಡಿ ಸಂತೋಷಹೊಂದುತ್ತಿದ್ದರು. ॥೪೪-೪೫॥

ರತ್ನಖಚಿತವಾದ ಗಂಟೆಯನ್ನು ಕೊರಳಲ್ಲಿ ಹೊಂದಿ, ಪ್ರಕಾಶಿಸುತ್ತಾ ಅತ್ಯಂತ ಭಕ್ತನೆನಿಸಿದ ವೃಷಭರಾಜನನ್ನೇರಿ, ವೃಷಭರಾಜನಿಂದಲೇ ರಚಿಸಲ್ಪಟ್ಟಿರುವ ದಿವ್ಯಕಾಂತಿಯುಕ್ತವಾದ ಸಿಂಹಾಸನದ ಮೇಲೆ ಕುಳಿತು, ದೇವಿಯನ್ನು ತನ್ನ ಎಡಭಾಗದಲ್ಲಿ ಕುಳ್ಳಿರಿಸಿಕೊಂಡು ಪ್ರಯಾಣಮಾಡುತ್ತಿರುವ ಪರಮೇಶ್ವರನು, ಪ್ರಮಥಗಣಗಳಿಂದಲೂ, ಆದರಿಸುತ್ತಿರುವ ದೇವತೆಗಳಿಂದಲೂ ಉದಾರಸ್ವಭಾವವುಳ್ಳ ಗಣಸಮೂಹದಿಂದಲೂ, ಕೋಟ್ಯಂತರ ರುದ್ರಾಣಿಯರಿಂದಲೂ ಕೂಡಿ ಪ್ರಕಾಶಿಸುತ್ತಿದ್ದನು. ॥೪೬-೪೭॥

ಅನೇಕ ಸೇವಕರು ಅಪಾರವಾದ ಛತ್ರಿಗಳನ್ನು ಹಿಡಿದಿರಲು ಮಹೇಶ್ವರನ ಮುಖವು ಕಾಣದಂತೆ ಮುಚ್ಚಿಕೊಂಡಿದ್ದಿತು. ಅನೇಕರು ಚಾಮರಗಳನ್ನು

ಪತಾಕಸಂಘನಿಬಿಡವಾಯುಘೋಷೈಕಭಾಸುರಃ ।
ಮುಕುಟೇನಾವೃತಮುಖಶ್ಶರಚ್ಚಂದ್ರಾಂಶುಲಾಂಛನಃ ॥೪೯॥

ದಿವ್ಯಾಂಗರಾಗಸುಭಗಗಂಧಾಮೋದಿತದಿಕ್ತಟಃ ।
ತ್ರಿಣೇತ್ರವಿಲಸತ್ಫಾಲತ್ರಿಪುಂಡ್ರಾವಲಿಭಾಸುರಃ ॥೫೦॥

ತಥಾಲಿನೀಲಸುಗತಾಲಂಬಿರತ್ನೋರುಹಾರಕಃ ।
ಕುಂಡಲೀಶಫಣಾರತ್ನರಿಂಖತ್ಸಾಂದ್ರೋಜ್ಜ್ವಲನ್ಮುಖಃ ॥೫೧॥

ಮೃಗಟಂಕವರಾಭೀತಿವೃತ್ತಬಾಹುಚತುಷ್ಟಯಃ ।
ರತ್ನಮುಕ್ತಾಫಲಾಪಾರಮಾಲಾಜಾಲೈಕಸುಂದರಃ ॥೫೨॥

---

ಎಡಬಿಡದೆ ಬೀಸುತ್ತಿದ್ದರು. ನಿಬಿಡವಾದ ಪತಾಕೆಗಳ ಸಮೂಹವು ವಾಯುವಿನಿಂದ ಉದ್ಘೋಷಿಸುತ್ತಿತ್ತು. ಅವರ ಮಧ್ಯದಲ್ಲಿ ಕಿರೀಟಧಾರಿಯಾದ ಮಹೇಶ್ವರನು ಶರತ್ಕಾಲದ ಚಂದ್ರನಂತೆ ಶುಭ್ರವಾದ ಲಾಂಛನವನ್ನು ಹಣೆಗಿಟ್ಟುಕೊಂಡಿದ್ದನು. ॥೪೮-೪೯॥

ಮಹೇಶ್ವರನು ಹಚ್ಚಿಕೊಂಡಿದ್ದ ದಿವ್ಯವಾದ ಅಂಗರಾಗದ ಸೌಗಂಧ್ಯವು ಎಲ್ಲಾ ದಿಕ್ಕುಗಳಲ್ಲಿಯೂ ಸುವಾಸನೆಯನ್ನುಂಟುಮಾಡುತ್ತಿದ್ದಿತು. ಮೂರು ಕಣ್ಣುಗಳಿಂದ ವಿರಾಜಿಸುತ್ತಿರುವ ಹಣೆಯಲ್ಲಿ ಭಸ್ಮತ್ರಿಪುಂಡ್ರವು ಶೋಭಿಸುತ್ತಿದ್ದಿತು. ॥೫೦॥

ದುಂಬಿಯಂತೆ ಕಪ್ಪಾದ ನೀಲಮಣಿಗಳ ದೊಡ್ಡ ಹಾರವು ಕೊರಳಿನಲ್ಲಿ ಸುಂದರವಾಗಿ ಕಾಣುತ್ತಿದ್ದಿತು. ಸರ್ಪವನ್ನು ಜಡೆಯಲ್ಲಿ ಕಟ್ಟಿರುವನಾದುದರಿಂದ ಆ ನಾಗಮಣಿಯ ಕಾಂತಿಯು ಮಹೇಶ್ವರನ ಮುಖವನ್ನು ಪ್ರಜ್ವಲಿಸುವಂತೆ ಮಾಡುತ್ತಿದ್ದಿತು. ॥೫೧॥

ಮಹೇಶ್ವರನು ತನ್ನ ದುಂಡಾದ ನಾಲ್ಕು ತೋಳುಗಳಲ್ಲಿಯೂ ಕ್ರಮವಾಗಿ ಜಿಂಕೆ, ಟಂಕ (ತ್ರಿಶೂಲ) ವರದಾಭಯಮುದ್ರೆಗಳು ಇವುಗಳನ್ನು ಧರಿಸಿದ್ದನು. ರತ್ನಮಯವಾದ ಮುತ್ತಿನಹಾರದ ಸಮೂಹಗಳನ್ನು ಧರಿಸಿ ಅತ್ಯಂತ ಸುಂದರನಾಗಿ ತೋರುತ್ತಿದ್ದನು. ॥೫೨॥

ದಿವ್ಯಾಂಬರಧರೋ ಭಾಭಿಃ ಕಟೀತಟವಿರಾಜಿತಃ ।
ರಣನ್ಮಂಜೀರನಿನದಕಾಂಚೀಕಾಂಚಿತಮಧ್ಯಮಃ ॥೫೩॥

ಸುರಾಸುರೇಂದ್ರಮುಕುಟರತ್ನನೀರಾಜಿತಾಂಘ್ರಿಕಃ ।
ಉದ್ಯಚ್ಛಶಾಂಕಧವಲಸುಂದರಾಮಲವಿಗ್ರಹಃ ॥೫೪॥

ವಾಮಭಾಗಸ್ಥಯಾ ದೇವ್ಯಾ ಹರಿನ್ಮಣಿನಿಭಾಚ್ಛಯಾ ।
ವಿದ್ರುಮಾಭರಣಚ್ಛಾಯಾವಿರಸಾಧರಬಿಂಬಯಾ ॥೫೫॥

ಕಚವೇಣೀಧೃತಾಪಾರರತ್ನಚೂಡಾಮಣಿವ್ರಜೈಃ ।
ತಿಲಕೋಜ್ವಲಸದ್ವೃತ್ತಸೋಮಮಂಡಲವಕ್ತ್ರಯಾ ॥೫೬॥

---

ದಿವ್ಯವಾದ ವಸ್ತ್ರಗಳನ್ನು ಉಟ್ಟಿರುವುದರಿಂದ ಶಂಕರನ ದೇಹಕಾಂತಿಯು ಮತ್ತಷ್ಟು ಹೊಳೆಯುತ್ತಿರುವುದು. ಧ್ವನಿಮಾಡುತ್ತಿರುವ ಗೆಜ್ಜೆಯ ಸಾಲುಳ್ಳ ಸೊಂಟಪಟ್ಟಿಯು ಮಹೇಶ್ವರನ ಸೊಂಟದಲ್ಲಿ ಶೋಭಿಸುತ್ತಿದ್ದಿತು. ॥೫೩॥

ದೇವದಾನವರು ತಲೆಬಾಗಿ ಮಹೇಶ್ವರನಿಗೆ ನಮಸ್ಕಾರ ಮಾಡುತ್ತಿರಲು ಅವರ ಕಿರೀಟದ ರತ್ನಗಳು ಶಿವನ ಪಾದದಲ್ಲಿ ಬೆಳಗುತ್ತಿದ್ದುವು. ಉದಯಿಸುತ್ತಿರುವ ಚಂದ್ರನಂತೆ ಮಹೇಶ್ವರನ ಶರೀರವು ಶುಭ್ರವೂ, ಸುಂದರವೂ ಮತ್ತು ಪರಿಶುದ್ಧವೂ ಆಗಿದ್ದಿತು. ॥೫೪॥

ಮಹಾದೇವನ ಎಡಭಾಗದಲ್ಲಿ ಕುಳಿತಿರುವ ಗಿರಿಜಾದೇವಿಯಾದರೋ ಪಚ್ಚೆಮಣಿಯಂತೆ ಶುಭ್ರವಾದ ಕಾಂತಿಯಿಂದ ಕೂಡಿದ್ದಳು. ಹವಳದ ಆಭರಣ ಕಾಂತಿಯನ್ನು ಧಿಕ್ಕರಿಸುವ ಅಧರಕಾಂತಿಯು ದೇವಿಯನ್ನು ಅತಿಶಯ ಶೋಭಾ ಯುಕ್ತಳನ್ನಾಗಿ ಮಾಡುತ್ತಿದ್ದಿತು. ॥೫೫॥

ಜಡೆಯಲ್ಲಿ ಅಪಾರವಾದ ರತ್ನಖಚಿತಚೂಡಾಮಣಿಗಳನ್ನು ಧರಿಸಿದ್ದಳು. ಚಂದ್ರಮಂಡಲದಂತೆ ದುಂಡಾದ ದೇವಿಯ ಮುಖಕಮಲದಲ್ಲಿ ತಿಲಕವು ಹೊಳೆಯುತ್ತಿದ್ದಿತು. ॥೫೬॥

ಕಿರೀಟರತ್ನಗಣಜಧಾರಾಸಾರೇಂದುಭೂಷಯಾ ।
ಸುಮನಾಮೋದಸುಭಗಧಮ್ಮಿಲ್ಲಾಲಕಯಾ ತದಾ ॥೫೭॥

ದಿವ್ಯಕಂಠಸರಾಪಾರಲಲತ್ಪದಕಯಾ ತದಾ ।
ರತ್ನಗ್ರೈವೇಯಚಿಂತಾಕಲಲದ್ಧಾರಲತಾಶತೈಃ ॥೫೮॥

ದಿವ್ಯಶುಕ್ರೋದಯಾಕಾರಮುಕ್ತಾನಾಸೋರುಧಾರಯಾ ।
ರತ್ನತಾಟಂಕವಿಲಸತ್ಕಪೋಲತಟಭಾಸಯಾ ॥೫೯॥

ದಿವ್ಯಬಾಹುಲತಾಲೋಲಭೂಷಿತಾನೇಕಭೂಷಯಾ ।
ನಿಚೋಲಕೀಲಿತಾಪಾರವರಮುಕ್ತಾಸರಾಶ್ರಯಾ ॥೬೦॥

---

ಕಿರೀಟದಲ್ಲಿ ಖಚಿತವಾಗಿರುವ ರತ್ನಗಳ ಕಾಂತಿಧಾರೆಯೂ ಚಂದ್ರಲೇಖೆಯೂ ದೇವಿಯ ಕಾಂತಿಗೆ ಹೊಳಪನ್ನುಂಟುಮಾಡುತ್ತಿದ್ದುವು. ಸುಂದರವೂ ಸುವಾಸನೆಯೂ ಆದ ಒಳ್ಳೆಯ ಹೂವುಗಳನ್ನು ತನ್ನ ಕಟ್ಟಿದ ಕೇಶರಾಶಿಯಲ್ಲಿ ಮುಡಿದಿದ್ದಳು. ॥೫೭॥

ದೇವಿಯ ಕೊರಳಿಗೆ ಹಾಕಿರುವ ಕಂಠಸರದಲ್ಲಿ ದಿವ್ಯವಾದ ಪದಕವು ಜೋಲಾಡುತ್ತಿದ್ದಿತು. ರತ್ನಖಚಿತವಾದ ಕಂಠೀಹಾರ ಮತ್ತು ಚಿಂತಾಕವೆಂಬ ಕಂಠಾಭರಣ, ಮತ್ತು ನೂರಾರು ಲತಾಸದೃಶವಾದ ಹಾರಗಳು ಇವೆಲ್ಲವೂ ದೇವಿಯ ಕೊರಳಲ್ಲಿ ಪ್ರಕಾಶಿಸುತ್ತಿದ್ದುವು. ॥೫೮॥

ದೇವಿಯು, ಉದಯವಾಗುವ ಶುಕ್ರಗ್ರಹದಂತೆ ಪ್ರಕಾಶಮಾನವಾಗಿರುವ ಮುತ್ತಿನ ಮೂಗುತಿಯನ್ನು ಧರಿಸಿದ್ದಳು. ಇದರ ಕಾಂತಿಧಾರೆಗಳು ಮೂಗಿನ ಸೌಂದರ್ಯವನ್ನು ಇಮ್ಮಡಿಮಾಡಿದ್ದುವು. ದೇವಿಯು ಧರಿಸಿರುವ ರತ್ನದ ಓಲೆಗಳು ಕಪೋಲಪ್ರದೇಶಗಳನ್ನು ಕಾಂತಿಯುಕ್ತವನ್ನಾಗಿ ಮಾಡಿದ್ದುವು. ॥೫೯॥

ದೇವಿಯ ಲತಾಸದೃಶವಾದ ಬಾಹುಗಳಲ್ಲಿ ಧರಿಸಿರುವ ಆಭರಣಗಳು ಅಸಂಖ್ಯಾತವಾಗಿದ್ದುವು. ದೇವಿಯು ಹೊದ್ದುಕೊಂಡಿರುವ ಮೇಲು ಹೊದಿಕೆಯಲ್ಲಿ ಅಪಾರವಾದ ಮುತ್ತಿನ ಸರಗಳು ಆಶ್ರಯಹೊಂದಿದ್ದುವು. ॥೬೦॥

ಹಸ್ತಭ್ರಾಜನ್ನಾಗಬಂಧರತ್ನವಂಕಿಕಯಾ ತದಾ ।
ಮಣಿಬಂಧಘನಭ್ರಾಜಿರತ್ನಕಲ್ಪೈಕಭೂಷಯಾ ॥೬೦॥

ಕಟೀವಸನನೀವ್ಯಾಢ್ಯರತ್ನಕಾಂಚೀಜ್ವಲಚ್ಛ್ರಿಯಾ ।
ಪದಮಂಜೀರಶಿಂಜಾನರಣದಾಲಕ್ತಪಾದಯಾ ॥೬೧॥

ಸುರೇಂದ್ರಮುಕುಟೀಕೋಟಿನಮತ್ಕಿಣಪದದ್ವಯಾ ।
ನಖಾಮಲಸುರತ್ನಾಚ್ಛವೃತ್ತಚಂದ್ರಜಿತಶ್ರಿಯಾ ॥೬೨॥

ದೇವ್ಯಾ ಯುತೋ ಹಿ ಭಗವಾನಂಬಿಕಾಪತಿರೀಶ್ವರಃ ।
ಕೈಲಾಸಶಿಖರಾದ್ದೇವೋ ಯಯೌ ವೃಷಭಕೇತನಃ ॥೬೪॥

---

ಭುಜದಲ್ಲಿ ನಾಗಬಂಧವುಳ್ಳ ವಂಕಿಯು ಹೊಳೆಯುತ್ತಿದ್ದಿತು. ನಿಬಿಡವಾದ ಮಣಿಗಳ ಬಂಧದಿಂದ ಖಚಿತವಾದ ರತ್ನಾಭರಣಗಳು ಮಣಿಕಟ್ಟಿನಲ್ಲಿ ಶೋಭಿಸುತ್ತಿದ್ದವು. ॥೬೦॥

ಸೊಂಟದಲ್ಲಿ ಕಂಡುಬರುವ ನೀವೀಬಂಧದ ಮೇಲೆ ರತ್ನಮಯವಾದ ಡಾಬನ್ನು ಧರಿಸಿದ್ದುದರಿಂದ ದೇವಿಯ ಸೊಂಟವು ಕಾಂತಿಯುಕ್ತವಾಗಿ ಶೋಭಿಸುತ್ತಿತ್ತು. ಕಾಲುಗಳಲ್ಲಿ ಲಾಕ್ಷಾರಾಗವು ರಂಜಿಸುತ್ತಿತ್ತು. ಕಾಲುರುಳಿಯ ಧ್ವನಿಯು ಮನೋಹರವಾಗಿದ್ದಿತು. ॥೬೧॥

ಇಂದ್ರಾದಿ ದೇವತೆಗಳು ದೇವಿಗೆ ನಮಸ್ಕಾರಮಾಡುವಾಗ ತಲೆಬಾಗಿಸುವುದರಿಂದ ಆ ದೇವತೆಗಳ ಕಿರೀಟದ ತುದಿಭಾಗವು ದೇವಿಯ ಪಾದಗಳಿಗೆ ಒತ್ತಿ ಅಲ್ಲಿ ಜಡ್ಡುಗಟ್ಟಿದ್ದಿತು. ನಿರ್ಮಲವಾದ ರತ್ನದಂತೆ ಶುಭ್ರವಾದ ಉಗುರಿನ ಕಾಂತಿಯು, ಪೂರ್ಣಚಂದ್ರನ ಕಾಂತಿಯನ್ನೂ ಜಯಿಸಿದ್ದಿತು. ॥೬೩॥

ಈ ರೀತಿ ಕಾಂತಿಯುಕ್ತಳಾದ ದೇವಿಯೊಡನೆ, ವೃಷಭಧ್ವಜನಾಗಿರುವ ಅಂಬಿಕೇಶ್ವರನು, ಕೈಲಾಸಪರ್ವತದ ಶಿಖರದಿಂದ ಮೇರುಪರ್ವತದ ಶಿಖರಕ್ಕೆ ಪ್ರಯಾಣಮಾಡಿದನು. ॥೬೪॥

ದೇವ್ಯಾ ಪ್ರಸೀದೇತಿ ತದಾ ಪ್ರಾಂಜಲ್ಯಾ ಪ್ರಾರ್ಥಿತೋ ಹರಃ ।
ಕ್ಷಣಂ ತತ್ರ ಸ್ಥಿತೋ ಮೇರೋರ್ಮೂರ್ಧ್ನಿ ದೇವಮುಮಾಧವಃ ॥೬೫॥

ದೃಷ್ಟ್ವಾ ತಾದೃಕ್ಷಮೀಶಾನಂ ಮಹೋಕ್ಷವರವಾಹನಂ ।
ತ್ರ್ಯಕ್ಷಂ ದಕ್ಷಸುತಾಯುಕ್ತಂ ಮೇರುಮೂರ್ಧ್ನಿ ಸುರಾಸುರಾಃ ॥೬೬॥

ಮುನಯೋ ದೇವಸಂಘಾಶ್ಚ ದಿಕ್ಪಾಲಾಸ್ಸಮರುದ್ಗಣಾಃ ।
ಋತವಃ ಪಿತರಶ್ಚೈವ ಮಾತರಶ್ಚ ಗ್ರಹಾಶ್ಚ ಭಾಃ ॥೬೭॥

ದಂಡಪ್ರಣಾಮಾಂಜಲಿಭಿರ್ಮುಕುಟೀಕೋಟಿಶೋಭಿತೈಃ ।
ಜಯೇತಿ ಚ ಪ್ರಸೀದೇತಿ ಶಿವೇ ಪಾಹೀತಿ ತೇ ಸುರಾಃ ॥೬೮॥

ಪ್ರಣಮ್ಯ ಬದ್ಧಾಂಜಲಯಃ ಕ್ಷಣಂ ತತ್ರ ಸ್ಥಿತಾಸ್ತದಾ ।
ನಂದೀ ವಿಜ್ಞಾಪಯಾಮಾಸ ಪ್ರಾಂಜಲಿರ್ವಿನಯಾನ್ವಿತಃ ॥೬೯॥

---

ಹೀಗೆ ಪ್ರಯಾಣಮಾಡಿದ ಮೇಲೆ ಮೇರುಪರ್ವತವು ಸಮೀಪಗತವಾಗಲು, ಆಗ ದೇವಿಯು ಮಹೇಶ್ವರನನ್ನು ಕುರಿತು, ಇಲ್ಲಿ ಸ್ವಲ್ಪ ಹೊತ್ತು ನಿಲ್ಲಬೇಕೆಂದು ಪ್ರಾರ್ಥಿಸಿದಾಗ, ಉಮಾಕಾಂತನಾದ ಮಹಾದೇವನು ದೇವಿಯ ಮಾತಿನಂತೆಯೇ ಒಂದುಕ್ಷಣಕಾಲ, ಆ ಮೇರುಪರ್ವತದ ಶಿಖರದಲ್ಲಿ ನಿಂತನು. ॥೬೫॥

ಮೇರುಶಿಖರದಲ್ಲಿ ದಕ್ಷಕನ್ಯೆಯಾದ ಗಿರಿಜೆಯೊಡನೆ, ಮಹಾವೃಷಭರಾಜನನ್ನೇರಿ ಬಂದು ನಿಂತಿರುವ ಮುಕ್ಕಣ್ಣನಾದ ಆ ಮಹಾದೇವನನ್ನು ದೇವದಾನವರೆಲ್ಲರೂ ನೋಡಿದರು. ॥೬೬॥

ಸಪ್ತರ್ಷಿಗಳೂ, ದೇವತಾಸಮೂಹವೂ, ಅಷ್ಟದಿಕ್ಪಾಲಕರೂ, ಸಪ್ತ ಮರುದ್ಗಣಗಳೂ, ಷಡೃತುಗಳೂ, ಪಿತೃದೇವತೆಗಳೂ, ಮಾತೃಗಣಗಳೂ, ನವಗ್ರಹಗಳೂ, ದ್ವಾದಶರಾಶಿಗಳೂ ಮತ್ತು ಇಪ್ಪತ್ತೇಳು ನಕ್ಷತ್ರಗಳೂ ಮಹೇಶ್ವರನನ್ನು ನೋಡಿ, ದಂಡಪ್ರಣಾಮಪೂರ್ವಕ ನಮಸ್ಕಾರಗಳನ್ನು ಮಾಡಿದರು. ಎಲ್ಲರೂ ಮಹಾದೇವ! ನಿನಗೆ ಜಯವಾಗಲಿ, ಪ್ರಸನ್ನನಾಗು! ಮಹಾದೇವಿ! ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸುತ್ತಾ ಕ್ಷಣಕಾಲ ಕೈಜೋಡಿಸಿ ನಿಂತುಕೊಂಡಿದ್ದರು. ॥೬೭-೬೮॥

ಅನಂತರ ನಂದಿಕೇಶ್ವರನು ವಿನಯದಿಂದ ಕೈಜೋಡಿಸಿ ಮಹೇಶ್ವರನನ್ನು ಕುರಿತು ಹೀಗೆಂದನು. ಮಹಾದೇವ! ಇವನು ವಿಷ್ಣುವು, ಇವನು ಬ್ರಹ್ಮನು,

ಏಷವಿಷ್ಣುರಯಂ ಬ್ರಹ್ಮಾ ರುದ್ರೋಽಯಂ ಚ ಶತಕ್ರತುಃ ।
ಸೂರ್ಯಾಚಂದ್ರಾವಿಮೌ ದೇವ ಮರುತೋ ವಸವೋಽಶ್ವಿನೌ ॥೨೦॥

ಆದಿತ್ಯಾಶ್ಚೈವ ದಿಕ್ಪಾಲಾಸ್ಸರ್ಷಿಸಂಘಾಸ್ಸುರಾಸುರಾಃ ।
ವೇದಾಶ್ಚೇಮೇಽಪಿ ಚತ್ವಾರಸ್ಸಾಂಗೋಪನಿಷದೋಽಖಿಲಾಃ ॥೨೧॥

ಗಿರೀಂದ್ರಾಶ್ಚ ತತೋ ನದ್ಯಃ ಪ್ರಜಾನಾಂ ಪತಯಸ್ತಥಾ ।
ಮನವೋ ಗ್ರಹಮುಖ್ಯಾಶ್ಚ ತಾರಾಜಾಲಂ ಚ ಕೃತ್ಸ್ನಶಃ ॥೨೨॥

ಪ್ರಣಾಮಮುಖರಾನ್‌ದೇವ ಕೃಪಾದೃಷ್ಟ್ಯಾ ವಿಲೋಕಯ ।
ತ್ವದಾಲೋಕನಮಾತ್ರೇಣ ಸಫಲಾನಮಲಾನ್ಕುರು ॥೨೩॥

---

ಇವನೇ ರುದ್ರನು. ಇವನು ಶತಕ್ರತುವನ್ನುಮಾಡಿದ ಇಂದ್ರನು. ಇವರಿಬ್ಬರೂ ಸೂರ್ಯಚಂದ್ರರು. ದೇವ! ಇಗೋ ಇಲ್ಲಿರುವವರು ಸಪ್ತಮರುತ್ತುಗಳು, ಅಷ್ಟವಸುಗಳು, ಮತ್ತು ಅಶ್ವಿನೀದೇವತೆಗಳು. ||೧೯-೨೦||

ಮಹೇಶ್ವರನೇ, ದ್ವಾದಶಾದಿತ್ಯರು ಇಲ್ಲಿ ನಿಂತಿರುವರು. ಅಷ್ಟದಿಕ್ಪಾಲಕರೂ, ಋಷಿಗಳ ಸಮೂಹವೂ, ದೇವದಾನವರೂ ಇಲ್ಲಿ ಕಾದಿರುವರು. ಇಗೋ, ಇವೇ ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳು. ಅಂಗಸಮೇತವಾದ ಸಕಲ ಉಪನಿಷತ್ತುಗಳೂ ಇಲ್ಲಿರುವುವು. ||೨೧||

ಈ ಪರ್ವತರಾಜರು ಮುಂದಿರುವರು. ನದಿಗಳು ಮತ್ತು ಪ್ರಜಾಪತಿಗಳು, (ಬ್ರಹ್ಮರು) ಅಷ್ಟಾದಶಮನುಗಳು, ಉತ್ತಮ ಗ್ರಹಗಳು, ನಕ್ಷತ್ರಜಾಲಗಳು; ಇವರೆಲ್ಲರೂ ನಿನ್ನನ್ನು ನಮಸ್ಕರಿಸುತ್ತಿರುವರು. ||೨೨||

ಮಹಾದೇವನೇ, ನಮಸ್ಕಾರಮಾಡುತ್ತಿರುವ ಇವರನ್ನು ದಯಾಪೂರ್ವಕವಾದ ನಿನ್ನ ದೃಷ್ಟಿಯಿಂದ ಒಂದು ಬಾರಿ ನೋಡು. ನಿನ್ನ ದರ್ಶನಮಾತ್ರದಿಂದಲೇ ಇವರೆಲ್ಲರೂ ಕೃತಕೃತ್ಯರಾಗಿ ಪವಿತ್ರರಾಗುವರು ಎಂದು ನಂದಿಯು ಪ್ರಾರ್ಥಿಸಿದನು. ||೨೩||

ಇತ್ಥಂ ನಂದೀಶ್ವರವಚೋ ನಿಶಮ್ಯ ಕರುಣಾರಸೈಃ ;
ಆಲೋಕಯದಥೇಶಾನೋ ದೇವಾನ್ಸಪ್ರಣಯಾನ್ಸ್ಥಿತಾನ್ ॥೭೪॥

ಜಯಯಾ ಪ್ರಾರ್ಥಿತಾ ದೇವೀ ದೇವಾನಾಲೋಕಯೇತಿ ಚ ॥೭೫॥

ಶಿವೌ ತದಾಲೋಕ್ಯ ಸುರಾಸುರವ್ರಜಂ
ದೃಷ್ಟ್ವಾ ಪ್ರಸಾದಮುಖರಾಯಿತಕೋಟಿದೃಷ್ಟ್ಯಾ ।
ವೇದೈಸ್ತಥೋಪನಿಷದಾಂ ಸ್ತುತದೇವಸಂಘೈಃ
ಸಂವರ್ಷಿತೌ ಸುಮನಸಾ ತ್ರಿಜಗಜ್ಜನಿತ್ರೌ ॥೭೬॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಶಿವಾಗಮನಂ ನಾಮ
ದಶಮೋಽಧ್ಯಾಯಃ

---

ದೇವಿಯ ಸಖಿಯಾದ ಜಯಾ ಎಂಬುವಳೂ ಆಗ ಗಿರಿಜಾಂಬಿಕೆಯನ್ನು ಕುರಿತು ದೇವಿ! ಒಂದು ಬಾರಿ ನಿನ್ನ ದಯಾಪೂರ್ವಕವಾದ ದೃಷ್ಟಿಯನ್ನು ದೇವತೆಗಳ ಮೇಲೆ ಬೀರು ಎಂದು ಪ್ರಾರ್ಥಿಸಿದಳು. ||೭೪||

ನಂದಿಕೇಶ್ವರ ಮತ್ತು ಜಯಾ (ಸಖಿ) ಇವರ ಪ್ರಾರ್ಥನೆಯಂತೆ ಪಾರ್ವತೀ ಪರಮೇಶ್ವರರು ಆಗ ತಮ್ಮ ದರ್ಶನಕ್ಕಾಗಿ ಬಂದು ಕಾದಿರುವ ದೇವತಾ ಸಮೂಹವನ್ನೆಲ್ಲಾ ನೋಡಿ, ಅವರ ಮೇಲೆ ತಮ್ಮ ಅನುಗ್ರಹಪೂರ್ವಕವಾದ ದೃಷ್ಟಿಯನ್ನು ಬೀರಿದರು. ಇದರಿಂದ ಸಂತುಷ್ಟರಾದ ದೇವತೆಗಳು ವೇದ ಮತ್ತು ಉಪನಿಷತ್ತು ಇವುಗಳನ್ನು ಹೇಳುತ್ತಾ, ಪ್ರಪಂಚ ಮಾತಾಪಿತೃಗಳಾದ ಉಮಾ ಮಹೇಶ್ವರರನ್ನು ಸ್ತೋತ್ರಮಾಡಿ ಅವರ ಮೇಲೆ ಹೂಮಳೆಗರೆದರು. ||೭೬||

ಇಲ್ಲಿಗೆ ಶ್ರೀಶಿವರಹಸ್ಯದ ಭವಾಖ್ಯವಾದ ಎರಡನೆಯ ಅಂಶದಲ್ಲಿ
ಮೇರುಪರ್ವತಗಮನವೆಂಬ ಹತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಏಕಾದಶೋಽಧ್ಯಾಯಃ

|| ಸೂತ ಉವಾಚ ||

ಪ್ರಣಮ್ಯ ಶ್ರೀಮಹಾದೇವಂ ಕೃತಾಂಜಲಿಪುಟಾಸ್ಸುರಾಃ ।
ತುಷ್ಟುವುಃ ಪ್ರಮಥಾಧೀಶಮಂಬಿಕೇಶಂ ಜಗದ್ಗುರುಂ ||೧||

ವಚನೈಸ್ಸುಪ್ರಸನ್ನೇನ ಮನಸಾ ಸಾಂಬಮೀಶ್ವರಂ ||೨||

ಹರ ಹರ ಪುರಹರ ವಿತರ ವಿಮುಕ್ತಿಂ
ಕುರು ಕರುಣಾಂ ಸುರಜಾಲೇ ।
ಶರಣಂ ಭವ ಭವ ಶರಣಂ ಭವ ಭವ
ಕುರು ಕರುಣಾಂ ಶಶಿಮೌಲೇ ||೩||

---

ಆಗ ದೇವತೆಗಳೆಲ್ಲರೂ ಮಹಾದೇವನಿಗೆ ನಮಸ್ಕಾರಮಾಡಿ, ಅನಂತರ ಕೈಜೋಡಿಸಿ, ನಿರ್ಮಲಮನಸ್ಸಿನಿಂದ, ಪ್ರಮಥಗಣಗಳಿಗೊಡೆಯನೂ, ಅಂಬಿಕಾಪತಿಯೂ ಜಗದ್ಗುರುವೂ ಆದ ಅಂಬಾಸಮೇತನಾದ ಮಹೇಶ್ವರನನ್ನು ಮೃದುವಾದ ನುಡಿಗಳಿಂದ ಈರೀತಿ ಸ್ತೋತ್ರಮಾಡಿದರು. ||೧-೨||

" ಪಾಪನಾಶಕನಾದ ಪರಮೇಶ್ವರನೇ, ನಮಗೆ ಮುಕ್ತಿಯನ್ನು ಕರುಣಿಸು. ತ್ರಿಪುರಾಸುರಧ್ವಂಸಕನಾದ ದೇವದೇವನೇ, ಈ ದೇವತಾಸಮೂಹದಮೇಲೆ ದಯೆಯಿಡು. ಜಗನ್ನಿರ್ಮಾಣಕರ್ತೃವಾದ ಚಂದ್ರಮೌಳಿಯೆ! ನಿನ್ನನ್ನು ಮೊರೆಹೊಕ್ಕಿರುವೆವು. ದೇವನೇ, ನಮ್ಮಮೇಲೆ ನಿನ್ನ ದಯೆಯಿರಲಿ. ನೀನು ನಮಗೆ ರಕ್ಷಕನಾಗು. ||೩||

ಮುರಹರನಯನಾರ್ಚಿತಪದ ಶಂಕರ
ವಿಧಿಹರ ಯಮಹರ ಶಂಭೋ ।
ಶರಣಂ ಭವ ಭವ ಶರಣಂ ಭವ ಭವ
ಕುರು ಕರುಣಾಂ ಶಶಿಮೌಲೇ ॥೪॥

ಪರಿಹರ ಘೋರಭವಾಂಬುಧಿದುಃಖಂ
ಜನಿನಾಶೋದ್ಯತವಿಶಾಶ ।
ಶರಣಂ ಭವ ಭವ ಶರಣಂ ಭವ ಭವ
ಕುರು ಕರುಣಾಂ ಶಶಿಮೌಲೇ ॥೫॥

ನಿಗಮಾಯಿತತುರಗೋತ್ತಮ ಶಂಕರ
ಹರಿಶರ ಪುರಹರ ಶಂಭೋ ।
ಶರಣಂ ಭವ ಭವ ಶರಣಂ ಭವ ಭವ
ಕುರು ಕರುಣಾಂ ಶಶಿಮೌಲೇ ॥೬॥

---

ಶಂಕರನೇ, ಹಿಂದೆ ಮುರಹರನಾದ (ಮುರಾಸುರಧ್ವಂಸಕನಾದ) ವಿಷ್ಣುವು ಸಹಸ್ರಕಮಲಗಳಿಂದ ನಿನ್ನ ಪಾದಕಮಲವನ್ನು ಪೂಜೆಮಾಡಬೇಕೆಂದು ಸಂಕಲ್ಪಿಸಿದಾಗ, ಎಷ್ಟು ಪ್ರಯತ್ನಪಟ್ಟರೂ ನಿನ್ನ ಲೀಲೆಯಿಂದ ಒಂದು ಕಮಲ ಸಾಲದೇ ಹೋಗಲು ಆಗ ಮಹಾವಿಷ್ಣುವು ತಾನೇ ಪುಂಡರೀಕಾಕ್ಷನಾದುದರಿಂದ ತನ್ನ ಒಂದು ಕಣ್ಣನ್ನೇ ಕಿತ್ತು ನಿನ್ನ ಪಾದಪೂಜೆಮಾಡಿರುವನು. ಪಾರ್ವತಿಯ ಭ್ರಾಂತಿನಿವಾರಣೆಗೋಸ್ಕರ ಬ್ರಹ್ಮನ ಒಂದು ತಲೆಯನ್ನೇ ಕತ್ತರಿಸಿದ ಶಂಭುವೇ! ಭಕ್ತಮಾರ್ಕಂಡೇಯನನ್ನು ಸೆಳೆದ ಯಮನನ್ನು ಗರ್ವಭಂಗಮಾಡಿದ ನಿನ್ನನ್ನು ನಾವು ಮೊರೆಹೊಕ್ಕಿರುವೆವು. ಚಂದ್ರಮೌಳಿಯೇ, ನಮ್ಮನ್ನು ನಿನ್ನ ದಯಾದೃಷ್ಟಿಯಿಂದ ಸಲಹು. ॥೪॥

ಈಶ್ವರನೇ! ಜನನಮರಣರೂಪವಾದ ಈ ಘೋರ ಸಂಸಾರವೆಂಬ ಸಮುದ್ರದಿಂದ ಆಗಾಗ ಒದಗುವ ದುಃಖವನ್ನು ಹೋಗಲಾಡಿಸು. ಮಹೇಶ್ವರನೇ, ಇದೋ ನಿನ್ನನ್ನು ಶರಣುಹೊಂದಿರುವೆವು. ಚಂದ್ರಶೇಖರನೇ! ನಮ್ಮಮೇಲೆ ದಯೆಯಿಡು.॥೫॥

ಶಂಕರನೇ! ತ್ರಿಪುರಾಸುರರನ್ನು ಧ್ವಂಸಮಾಡುವ ಕಾಲದಲ್ಲಿ ನಿನಗೆ ಚತುರ್ವೇದಗಳೇ ಕುದುರೆಗಳಾಗಿದ್ದುವು. ಮಹಾವಿಷ್ಣುವು ಬಾಣವಾಗಿದ್ದನು.

ಕರಿವರಹರಿವರಚರ್ಮವಸಾನ
ಸುರವರಪೋಷಕ ಶಂಭೋ ।
ಶರಣಂ ಭವ ಭವ ಶರಣಂ ಭವ ಭವ
ಕುರು ಕರುಣಾಂ ಶಶಿಮೌಲೇ ॥೭॥

ತರುಣೇಂದುದ್ಯುತಿಶೋಭಿತ
ಗಂಗಾಮುಕುಟೀಜಟಿತಟ ಶಂಭೋ ।
ಶರಣಂ ಭವ ಭವ ಶರಣಂ ಭವ ಭವ
ಕುರು ಕರುಣಾಂ ಶಶಿಮೌಲೇ ॥೮॥

ಅತಿದರ್ಪೋದ್ಧತಯಮಮದಖಂಡನ
ಪಾಲಿತದ್ವಿಜವರಪೋತ ।
ಶರಣಂ ಭವ ಭವ ಶರಣಂ ಭವ ಭವ
ಕುರು ಕರುಣಾಂ ಶಶಿಮೌಲೇ ॥೯॥

---

ಅಂತಹ ಮಹಾಮಹಿಮನಾದ ಶಂಭುವೆ! ನಮ್ಮನ್ನು ರಕ್ಷಿಸು. ನಿನ್ನ ಮೊರೆ ಹೊಕ್ಕಿರುವೆವು. ಚಂದ್ರಚೂಡನೇ, ನಿನ್ನ ದಯೆಯು ನಮ್ಮ ಮೇಲಿರಲಿ. ॥೬॥

ಉತ್ತಮವಾದ ಆನೆ ಮತ್ತು ಸಿಂಹ ಇವುಗಳ ಚರ್ಮಗಳನ್ನು ಹೊದಿಯುವ ಸ್ವಾಮಿಯೇ! ನೀನು ಸಕಲ ದೇವತೆಗಳನ್ನೂ ಕಾಪಾಡುವವನು. ಶಂಭೋ! ಶರಣಾಗತರಾಗಿರುವ ನಮ್ಮನ್ನು ಸಲಹು. ಚಂದ್ರಮೌಳಿಯೇ! ದಯಾದೃಷ್ಟಿಯನ್ನು ನಮ್ಮಮೇಲಿಡು. ॥೭॥

ಬಾಲಚಂದ್ರನಿಂದ ಶೋಭಿಸುತ್ತಿರುವ ಶಂಕರನೇ, ನಿನ್ನ ಜಡೆಯ ತುದಿಯಲ್ಲಿ ಗಂಗೆಯು ಬಂಧಿತಳಾಗಿ ನಿಂತಿರುವಳಲ್ಲವೆ! ಚಂದ್ರಶೇಖರನೇ, ನಿನ್ನನ್ನು ಮೊರೆ ಹೊಕ್ಕಿರುವೆವು. ಇದೋ ನೀನೇ ನಮಗೆ ರಕ್ಷಕನು. ನಮ್ಮಲ್ಲಿ ಕರುಣೆಯಿಡು. ॥೮॥

ಅತ್ಯಂತ ಕೊಬ್ಬಿದ ಯಮನ ಗರ್ವವನ್ನು ಮುರಿದು, ವಿಪ್ರೋತ್ತಮನಾದ ಮೃಕಂಡುಮಹರ್ಷಿಕುಮಾರ ಮಾರ್ಕಂಡೇಯನನ್ನು ಕಾಪಾಡಿದ ಸ್ವಾಮಿಯೇ! ನಿನ್ನ ಮರೆಬಿದ್ದಿರುವ ನಮ್ಮನ್ನು ರಕ್ಷಿಸು. ಚಂದ್ರಮೌಳಿಯೇ! ದಯೆಯಿಟ್ಟು ನಮ್ಮನ್ನುದ್ಧಾರಮಾಡು." ॥೯॥

ದೇವಾನಾಂ ಚ ಸ್ತುತಿಂ ಶ್ರುತ್ವಾ ಭಗವಾನಿಂದುಭೂಷಣಃ ।
ಉದ್ಯತ್ಸುಧಾಕರಜ್ಯೋತ್ಸ್ನಾಪ್ರಕಾಶಮುಖಸುಂದರಃ ॥೧೦॥

ಪ್ರಾಹ ತಾನ್ ಪ್ರಮಥಾಧೀಶೋ ವಿಷ್ಣುಬ್ರಹ್ಮೇಂದ್ರಪೂರ್ವಕಾನ್ ।
ಪ್ರಣತಾನ್ ದಂಡವದ್ಭೂಮೌ ದೇವದೇವಃ ಕೃಪಾನಿಧಿಃ ॥೧೧॥

ಪ್ರಸಾರ್ಯ ದಕ್ಷಿಣಂ ಹಸ್ತಂ ಮಾಭೈಷ್ಟೇತಿ ವದಞ್ಛಿವಃ ।
ಉತ್ತಿಷ್ಠತೇತಿ ತಾನಾಹ ವಿನಯಾನತಕಂಧರಾನ್ ॥೧೨॥

॥ ಈಶ್ವರ ಉವಾಚ ॥

ತುಷ್ಟೋಽಹಂ ಭವತಾಂ ಸ್ತುತ್ಯಾ ಸುರೇಶಾ ವಿಷ್ಣುಪೂರ್ವಕಾಃ ।
ಭವತಾಂ ಭಯಜಾಲಾನಿ ನಾಶಯಾಮಿ ಕ್ಷಣಾತ್ಸುರಾಃ ॥೧೩॥

ಮನಾಗಪಿ ನ ಚಿಂತಾ ವೋ ಕಾರ್ಯಾ ಕ್ವಾಪಿ ಕದಾಚನ ।
ಯೂಯಂ ಮದರ್ಚಕಾ ನಿತ್ಯಮನನ್ಯಶರಣಾಸ್ಸುರಾಃ ॥೧೪॥

---

ಉದಯಿಸುತ್ತಿರುವ ಚಂದ್ರನ ಬೆಳದಿಂಗಳಿನಂತೆ ಪ್ರಕಾಶಿಸುತ್ತಿರುವ ಸುಂದರ ಮುಖವುಳ್ಳವನೂ, ಚಂದ್ರಭೂಷಣನೂ, ಪ್ರಮಥಗಣಾಧಿಪತಿಯೂ ಆದ ಭಗವಂತನು ಈರೀತಿ ದೇವತೆಗಳ ಸ್ತೋತ್ರವನ್ನು ಕೇಳಿ, ವಿಷ್ಣು, ಬ್ರಹ್ಮ, ದೇವೇಂದ್ರ ಇವರೇ ಮುಂತಾದ ದೇವತೆಗಳನ್ನು ಕುರಿತು ಮುಂದೆ ಹೇಳುವಂತೆ ನುಡಿದನು. ॥೧೦॥

ಆಗ ದೇವತೆಗಳು ದಂಡಪ್ರಣಾಮಮಾಡಿ ವಿನಯದಿಂದ ತಲೆಬಾಗಿ ನಿಂತು ಕೊಂಡಿದ್ದರು. ಆ ಸಮಯದಲ್ಲಿ ದೇವದೇವನೂ, ಕೃಪಾನಿಧಿಯೂ ಆಗಿರುವ ಮಹೇಶ್ವರನು ಆ ದೇವತೆಗಳ ಮೇಲೆ ತನ್ನ ಬಲಗೈ ನೀಡಿ, ಎಬ್ಬಿಸಿ, ಭಯಪಡ ಬೇಡಿ ಎಂದು ಹಿತವಚನವನ್ನು ನುಡಿಯುತ್ತಾ ಅವರನ್ನು ಕುರಿತು ಹೀಗೆಂದನು. ॥೧೧-೧೨॥

“ ಓ ವಿಷ್ಣ್ವಾದಿದೇವತೆಗಳಿರಾ! ನಿಮ್ಮ ಸ್ತೋತ್ರದಿಂದ ನನಗೆ ಬಹಳ ಸಂತೋಷವಾಯಿತು. ಕ್ಷಣಕಾಲದಲ್ಲಿಯೇ ನಿಮಗುಂಟಾಗಿರುವ ಭಯಸಮೂಹವನ್ನು ನಿವಾರಣೆಮಾಡುತ್ತೇನೆ. ॥೧೩॥

ನೀವು ಸ್ವಲ್ಪವೂ, ಯಾವ ರೀತಿಯಾಗಿಯೂ ಯೋಚನೆಮಾಡಬೇಡಿರಿ. ನನ್ನನ್ನೇ ಅನನ್ಯಭಾವನೆಯಿಂದ ನೀವು ಪೂಜಿಸುತ್ತಿರುವಿರಿ. ನಿಮ್ಮ ಭಕ್ತಿಭಾವನೆಗೆ

ಭವದ್ಭಾವಹೃತಾತ್ಮಾಹಂ ಭವತ್ಸು ಪರಿತೋಷಕೃತ್ ।
ಯಾತ ಸ್ಥಾನಾನಿ ಸದಯೋ ಮಯಿ ತಿಷ್ಠತಿ ಶಂಕರೇ ॥೧೫॥

ವಿಜ್ಞ್ವರಾಸ್ಸ್ಥ ಸದಾ ದೇವಾ ಲೋಕಪಾಲಾಸ್ಸವಾಸವಾಃ ।
ವಿಧೇ ಸೃಜ ಜಗಜ್ಜಾಲಂ ಸದೇವಾಸುರಮಾನುಷಂ ॥೧೬॥

ವಿಷ್ಣೋ ಪಾಲಯ ದೇವಾಂಸ್ತ್ವಂ ದೈತ್ಯೇಭ್ಯಸ್ಸರ್ವದಾ ಹರೇ ।
ಮದ್ದತ್ತಚಕ್ರಧಾರಾಭಿಸ್ಸದೈವಾಜೌ ನಿಪಾತ್ಯ ತಾನ್ ॥೧೭॥

ಸಂಹರಾಂತೇ ಜಗಜ್ಜಾಲಂ ರುದ್ರ ಶೂಲಾಗ್ರಧಾರಯಾ ।
ಅನ್ಯೋನ್ಯಸಕ್ತಮೋಹಾಶ್ಚ ಯೂಯಂ ಮದ್ವಚನಾತ್ಸುರಾಃ ॥೧೮॥

ಪರಸ್ಪರಾನುರಕ್ತಾಶ್ಚ ಪರಸ್ಪರಹಿತೇ ರತಾಃ ।
ತ್ರಿವಿಷ್ಟಪೇ ವಸ ತ್ವಂ ಹಿ ವಾಸವಾಥ ಸದಾ ಮುದಾ ॥೧೯॥

---

ಪರವಶನಾಗಿರುವ ನಾನು ನಿಮಗೆ ಸಂತೋಷವನ್ನುಂಟುಮಾಡುವೆನು. ಮಂಗಳಕರನೂ ದಯಾಶಾಲಿಯೂ ಆದ ನಾನು ನಿಮ್ಮನ್ನು ರಕ್ಷಣೆಮಾಡುತ್ತಿರಲು ನೀವೇಕೆ ಹೆದರುವಿರಿ? ನೀವೆಲ್ಲರೂ ನಿಮ್ಮ ನಿಮ್ಮ ಸ್ಥಾನಗಳಿಗೆ ಹಿಂದಿರುಗಿರಿ. ಓ ಇಂದ್ರಾದಿ ಲೋಕಪಾಲಕರುಗಳಿರಾ! ಇನ್ನು ಯಾವ ಭೀತಿಯೂ ಇಲ್ಲದೆ ನಿಮ್ಮ ಕಾರ್ಯದಲ್ಲಿ ನೀವು ಆಸಕ್ತರಾಗಿರಿ. ॥೧೪-೧೫॥

ಎಲೈ ಬ್ರಹ್ಮನೇ! ದೇವ, ರಾಕ್ಷಸ, ಮನುಷ್ಯ ಮಯವಾದ ಈ ಪ್ರಪಂಚ ಜಾಲವನ್ನು ನೀನು ಸರಿಯಾಗಿ ಸೃಷ್ಟಿಮಾಡು? ಓ ವಿಷ್ಣು! ನೀನು ನಾನು ಕೊಟ್ಟಿರುವ ಚಕ್ರದ ಧಾರೆಯಿಂದ ರಾಕ್ಷಸರನ್ನು ಯುದ್ಧದಲ್ಲಿ ಸಂಹರಿಸಿ, ಯಾವಾಗಲೂ ಲೋಕಕ್ಕೆ ರಾಕ್ಷಸರ ಬಾಧೆಯಿಲ್ಲದಂತೆ ದೇವತೆಗಳನ್ನು ಕಾಪಾಡು. ॥೧೬-೧೭॥

ರುದ್ರನೇ, ನೀನು ಪ್ರಳಯ ಕಾಲದಲ್ಲಿ ನಿನ್ನ ಶೂಲಾಯುಧದ ತುದಿಯ ಧಾರೆಗಳಿಂದ ಈ ಪ್ರಪಂಚವನ್ನೆಲ್ಲಾ ಸಂಹಾರಮಾಡು.

ದೇವತೆಗಳಿರಾ! ನೀವೆಲ್ಲರೂ ಪರಸ್ಪರ ಪ್ರೀತಿ, ಅನುರಾಗಗಳಿಂದ ಅನ್ಯೋನ್ಯ ಹಿತಾಭಿಲಾಷಿಗಳಾಗಿ ಸುಖಪಡೆಯಿರಿ. ॥೧೮॥

ದೇವೇಂದ್ರನೇ, ನೀನು ಸ್ವರ್ಗದಲ್ಲಿ ಸುಖವಾಗಿ ಮೂವತ್ತುಮೂರುಕೋಟಿ ದೇವತೆಗಳು, ಸಪ್ತಮರುತ್ತುಗಳು, ಷಡೃತುಗಳು ಮತ್ತು ದ್ವಾದಶಾದಿತ್ಯರು ಇವರೇ

**ದೇವೈರ್ಮರುದ್ಭಿಃ ಋತುಭಿರಶ್ವಿಭ್ಯಾಮಾದಿತೇಯಕೈಃ ।**
**ಸ್ವರ್ಗಿಣಾಂ ಶಾಶ್ವತಂ ಭೋಗಂ ದದಸ್ವ ತ್ವಂ ಮದಾಜ್ಞಯಾ ॥೨೦॥**

**ವಹ್ನೇ ವಹ ತ್ವಂ ದೇವಾನಾಂ ಹವ್ಯಂ ಕವ್ಯಂ ಪಿತೃಷ್ವಪಿ ।**
**ಮಖೇಷು ಸೋಮಂ ದೇವಾನಾಮಾಹೂತೋ ವಿಪ್ರಸತ್ತಮೈಃ ॥೨೧॥**

**ತಪನ ಸ್ವಕರೋತ್ಸಾರೈಃ ಕುರ್ವನ್ನಸ್ತಮಯೋದಯಂ ।**
**ವಿಪ್ರಾಣಾಂ ಕಾಲಕಲನೇ ವ್ರಜ ಮಾ ತಂದ್ರಿತೋ ಭವ ॥೨೨॥**

**ಸೋಮ ತ್ವಂ ತು ನಿಶೀಥೇಷು ಸ್ವಾಂಶುಭಿಃ ಪೋಷಯನ್ ಜಗತ್ ।**
**ಓಷಧೀಷು ರಸಂ ಬಿಭ್ರನ್ವಸ ಮಾ ಸಂಭ್ರಮೋ ಭವ ॥೨೩॥**

**ವರುಣ ತ್ವಂ ಸದಾ ಪಾಶೈಃ ಪಾಶಯನ್ಪಾಪಿಜಾಲಕಂ ।**
**ದೈತ್ಯೇಂದ್ರೈಸ್ಸಂವಸ ತ್ವಂ ವೈ ಹ್ಯರ್ಣವಾಂತರ್ಜಲೇಶಯಃ ॥೨೪॥**

---

ಮುಂತಾದವರೊಡನೆ ವಾಸಮಾಡುತ್ತಾ, ನನ್ನಪ್ಪಣೆಯಂತೆ ಸ್ವರ್ಗವಾಸಿಗಳಾದ ದೇವತೆಗಳಿಗೆ ಶಾಶ್ವತವಾದ ಭೋಗವನ್ನುಂಟುಮಾಡು. ॥೧೯-೨೦॥

ಅಗ್ನಿಪುರುಷನೇ, ನೀನು ಪಿತೃಯಜ್ಞ, ದೇವಯಜ್ಞಾದಿಗಳಲ್ಲಿ ಬ್ರಾಹ್ಮಣೋತ್ತಮರಿಂದ ಆಹ್ವಾನಿಸಲ್ಪಟ್ಟು, ದೇವತೆಗಳಿಗೆ ಸೋಮರಸಾದಿ ಹವಿರ್ಭಾಗಗಳನ್ನೂ, ಪಿತೃಗಳಿಗೆ ಕವ್ಯವನ್ನೂ ತಲಪಿಸು. ॥೨೧॥

ಸೂರ್ಯದೇವನೇ, ನೀನು ನಿನ್ನ ಕಿರಣಪ್ರಸಾರದಿಂದ ಕ್ರಮವಾಗಿ ಉದಯಾಸ್ತಗಳನ್ನುಂಟುಮಾಡುತ್ತಾ ಬ್ರಾಹ್ಮಣರಿಗೆ ಕಾಲನಿಯಮವನ್ನುಂಟುಮಾಡು ? ಉದಾಸೀನನಾಗಬೇಡ. ॥೨೨॥

ಚಂದ್ರನೇ, ನೀನು ತಂಪಾದ ನಿನ್ನ ಕಿರಣಗಳಿಂದ ರಾತ್ರಿವೇಳೆಗಳಲ್ಲಿ ಈ ಜಗತ್ತನ್ನು ಪಾಲಿಸುತ್ತಾ ವನಸ್ಪತಿಗಳಿಗೆ ರಸವನ್ನು ಒದಗಿಸುವವನಾಗು. ಸಂಭ್ರಮಪಡಬೇಡ. ॥೨೩॥

ಎಲೈ ವರುಣನೇ! ನೀನು ಯಾವಾಗಲೂ ನಿನ್ನ ಪಾಶಾಯುಧದಿಂದ ಪಾಪಿಗಳ ಸಮೂಹವನ್ನು ಕಟ್ಟಿಹಾಕುತ್ತಾ ರಾಕ್ಷಸಶ್ರೇಷ್ಠರೊಡನೆ ಸಮುದ್ರಮಧ್ಯದಲ್ಲಿ ವಾಸಮಾಡು. ॥೨೪॥

ಯಮ ತ್ವಂ ನಾರಕಾನ್ ಸರ್ವಾನ್ ದುಃಖಪಾತೇಷು ಪಾತಯ ।
ಅಸಿಪತ್ರೇ ಕುಂಭಿಪಾಕೇ ಮಹಾರೌರವಕಾದಿಷು ॥೨೫॥

ಸಂತಪ್ತಾನ್ ಶ್ರಾಂತಕಾಲೇಷು ತಪ್ತಭೂಮಿವಿಲುಂಠನೈಃ ।
ಭಸ್ಮರುದ್ರಾಕ್ಷಹೀನಾಂಗಾನ್ ಲಿಂಗಾರ್ಚನವಿವರ್ಜಿತಾನ್ ॥೨೬॥

ರುದ್ರಪಂಚಾಕ್ಷರಾವೃತ್ತ್ಯಾ ವರ್ಜಿತಾಂಸ್ತರ್ಜಿತಾನ್ ಕುರು ।
ಮಾಂ ಚ ವಿಷ್ಣ್ವಾದಿಭಿಸ್ಸಾಕಂ ಪೂಜಕಂ ಮೋಹತೋ ಯಮ ॥೨೭॥

ಊರ್ಧ್ವಪುಂಡ್ರಾಂಕನಧರಂ ತಪ್ತಚಕ್ರಾದಿಚಿಹ್ನಿತಂ ।
ಸಂತಾಪಯಾಶು ಶನಕೈಃ ಪಾದೈಸ್ತಪ್ತಾಯಸೋದ್ಭವೈಃ ॥೨೮॥

ತನ್ಮುಖಂ ವಿಷ್ಟಯಾಪೂರ್ಯ ಹೃಷ್ಟೋ ಭವ ಸದಾ ಯಮ ।
ಅಶೈವೇಷ್ವತಿಪಾಪೇಷು ಮಾ ದಯಾಂ ಕುರು ಸರ್ವದಾ ॥೨೯॥

---

ಯಮನೇ, ನೀನು ನರಕಭಾಗಿಗಳಾದ ಪಾಪಿಗಳನ್ನೆಲ್ಲಾ ದುಃಖಜನಕವಾದ ಅಸಿಪತ್ರ, ಕುಂಭೀಪಾಕ, ಮಹಾರೌರವಾದಿ ನರಕಗಳಲ್ಲಿ ಸೇರಿಸು. ಅಲ್ಲದೆ ಖಡ್ಗಧಾರೆಗಳ ಮೇಲೂ, ಕಾದ ಭೂಮಿಗಳ ಮೇಲೂ ಹೊರಳಾಡಿಸಿ ಸಂತಾಪಗೊಳಿಸು. ಪುನಃ ಪುನಃ ಅವರು ಚೇತರಿಸಿಕೊಂಡ ಹಾಗೆಲ್ಲಾ ಅವರಿಗೆ ತುಂಬಾ ದುಃಖವನ್ನುಂಟು ಮಾಡು. ಮತ್ತು ಭಸ್ಮ, ರುದ್ರಾಕ್ಷಮಾಲೆ ಇವುಗಳಿಲ್ಲದೆ, ಲಿಂಗಾರ್ಚನೆ ಮಾಡದೇ ಇರುವವರನ್ನೂ, ಮತ್ತು ರುದ್ರಪಂಚಾಕ್ಷರಮಂತ್ರಪುರಶ್ಚರಣೆ ಮಾಡದವರನ್ನೂ ಗದರಿಸಿ ಅವರಿಗೆ ಶಿಕ್ಷೆಯನ್ನು ವಿಧಿಸು. ॥೨೫-೨೬॥

ಯಮಧರ್ಮರಾಜನೇ, ಅಜ್ಞಾನದಿಂದ ನನ್ನನ್ನು ವಿಷ್ಣ್ವಾದಿದೇವತೆಗಳಿಗೆ ಸಮನೆಂದು ತಿಳಿದು ಪೂಜೆಮಾಡುವವರನ್ನೂ ಮೆಲ್ಲಮೆಲ್ಲಗೆ, ಕಾದ ಕಬ್ಬಿಣದ ಸಲಾಕಿ ಮತ್ತು ಪಾದುಕೆಗಳಮೇಲೆ ನಿಲ್ಲಿಸಿ ಸಂತಾಪಗೊಳಿಸು. ॥೨೭-೨೮॥

ಯಮನೇ, ವಿಷ್ಣ್ವಾದಿ ದೇವತೆಗಳೊಡನೆ ನನ್ನನ್ನು ಪೂಜಿಸುವರ ಮುಖದಲ್ಲಿ ವಿಷ್ಟೆಯನ್ನು (ಅಶುಚಿವಸ್ತು) ಹಾಕಿ ಸಂತೋಷ ಹೊಂದು! ಈಶ್ವರಭಕ್ತಿರಹಿತರಾದವರೆಲ್ಲಾ ಪಾಪಿಗಳಾದುದರಿಂದ ಅವರಲ್ಲಿ ಎಂದಿಗೂ ದಯೆ ತೋರಿಸಬೇಡ. ॥೨೯॥

ಅಶೈವಭವನಂ ಪ್ರೋಕ್ತಂ ನರಕಾಲಯಮುತ್ಕಟಂ ।
ಅಶೈವಯಾತನಾರ್ಥಾಯ ಸೃಷ್ಟಸ್ತ್ವಂ ಸೂರ್ಯನಂದನ ॥೩೦॥

ಮಾ ವಿಲೋಕಯ ತಾನ್ ಶೈವಾನ್ ಭಸ್ಮರುದ್ರಾಕ್ಷಚಿಹ್ನಿತಾನ್ ।
ತ್ರಿಪುಂಡ್ರಫಾಲಾನಮಲಾನ್ರುದ್ರಾಕ್ಷವರಕಂಕಣಾನ್ ॥೩೧॥

ರುದ್ರಸೂಕ್ತಜಪಾಸಕ್ತಾನ್ರುದ್ರಲಿಂಗಾರ್ಚನೇ ರತಾನ್ ।
ಬಿಲ್ವಪತ್ರೈಃ ಪ್ರದೋಷೇಷು ಸೋಮವಾರೇ ತ್ರಿಸಂಧ್ಯಕಂ ॥೩೨॥

ಅನನ್ಯಭಾವಾನ್ ಸತತಂ ಪಂಚಾಕ್ಷರಜಪಾದರಾನ್ ।
ಶಿವಕ್ಷೇತ್ರೈಕವಸತೀನನ್ಯಕ್ಷೇತ್ರಪರಾಙ್ಮುಖಾನ್ ॥೩೩॥

ಮತ್ಪುಂಡ್ರನಿರತಾನ್ ಶೈವಾನನ್ಯಕ್ಷೇತ್ರಪರಾಙ್ಮುಖಾನ್ ।
ಅವಿಮುಕ್ತೇ ಪುಂಡರೀಕೇ ರುದ್ರಕೋಟೌ ಮಹಾಲಯೇ ॥೩೪॥

---

ಸೂರ್ಯಪುತ್ರನೇ, ಈ ಘೋರವಾದ ನರಕವು ಶಿವನ ಭಕ್ತರಲ್ಲದವರಿಗೆ ಆಶ್ರಯವಾಗಿರುವುದು. ಇಂತಹ ಈಶ್ವರನ ಭಕ್ತರಲ್ಲದವರನ್ನು ಶಿಕ್ಷಿಸಮಾಡುವುದಕ್ಕಾಗಿಯೇ ನೀನು ಸೃಷ್ಟಿಮಾಡಲ್ಪಟ್ಟಿರುವೆ. ॥೩೦॥

ಭಸ್ಮ ಮತ್ತು ರುದ್ರಾಕ್ಷಗಳನ್ನು ಧರಿಸಿ, ಶುಭ್ರವಾದ ತ್ರಿಪುಂಡ್ರಗಳಿಂದ ಶೋಭಿಸುತ್ತಿರುವ ಹಣೆಯುಳ್ಳ ರುದ್ರಾಕ್ಷಕಂಕಣರಾದ ಶೈವರನ್ನು ಮಾತ್ರ ನೀನು ತೊಂದರೆಪಡಿಸಬೇಡ. ಸದಾ ರುದ್ರಸೂಕ್ತಜಪಮಾಡುವುದರಲ್ಲಿಯೇ ಆಸಕ್ತರಾಗಿರುವವರನ್ನೂ, ಸೋಮವಾರ ಪ್ರಾತರ್ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ಮೂರು ಸಂಧ್ಯಾಕಾಲಗಳಲ್ಲಿಯೂ, ಪ್ರದೋಷವೇಳೆಯಲ್ಲಿಯೂ, ಬಿಲ್ವಪತ್ರೆಗಳಿಂದ ಶಿವಲಿಂಗವನ್ನು ಪೂಜೆಮಾಡುವ ಜನಗಳನ್ನೂ ನೀನು ಹಿಂಸಿಸಬೇಡ. ॥೩೧-೩೨॥

ಅನ್ಯತ್ರ ಮನಸ್ಸಿಡದೇ ಯಾವಾಗಲೂ ಶಿವಪಂಚಾಕ್ಷರೀಜಪದಲ್ಲಿಯೇ ತತ್ಪರರಾಗಿರುವವರನ್ನೂ, ಇತರ ಯಾವ ಕ್ಷೇತ್ರದಲ್ಲಿಯೂ ವಾಸಮಾಡದೇ ಕೇವಲ ಶಿವಕ್ಷೇತ್ರನಿವಾಸಿಗಳಾಗಿರುವರನ್ನೂ, ಮತ್ತು ನನ್ನಂತೆಯೇ ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲಾದಿ ಚಿಹ್ನೆಗಳಿಂದ ಯುಕ್ತರಾಗಿ ಇತರ ಊರ್ಧ್ವಪುಂಡ್ರಾದಿಗಳನ್ನು ಧರಿಸದೇ ಇರುವ ನನ್ನ ಭಕ್ತರನ್ನೂ ನೀನೆಂದಿಗೂ ಕಷ್ಟಪಡಿಸಬೇಡ. ॥೩೩॥

ಅವಿಮುಕ್ತ, (ಕಾಶಿ) ಪುಂಡರೀಕ, ರುದ್ರಕೋಟಿ, ಮಹಾಲಯ, ಪ್ರಭಾಸ,

ಪ್ರಭಾಸೇ ಪುಷ್ಕರೇ ಚೈವ ರುದ್ರಕೋಟೌ ಪ್ರಯಾಗಕೇ ।
ವೃದ್ಧಾಚಲೇಽರುಣಾದ್ರೌ ಚಾಪ್ಯೋಂಕಾರೇ ಭೃಗುತುಂಗಕೇ ॥೩೫॥

ತ್ರಿಯಂಬಕೇ ಗಂಡಕಾಯಾಂ ಪುಣ್ಯೇ ಸೋಮೇಶ್ವರೇ ತಥಾ ।
ಶ್ರೀಶೈಲೇ ಚ ಕುರುಕ್ಷೇತ್ರೇ ಪಿಂಡಾರಕಕುರಂಟಕೇ ॥೩೬॥

ನರ್ಮದಾಯಾಂ ಶರ್ಮದಾಯಾಂ ತಥೈವಾಮರಕಂಟಕೇ ।
ಗೋಕರ್ಣೇ ನೈಮಿಷಾರಣ್ಯೇ ಬದರ್ಯಾಂ ಕುಬ್ಜಶೈಲಕೇ ॥೩೭॥

ಶ್ರೀಮದ್ದಕ್ಷಿಣಕೈಲಾಸೇ ಕಾಂಚ್ಯಾಂ ಮಧ್ಯಾರ್ಜುನೇ ತಥಾ ।
ಕುಂಭಕೋಣೇಽಥ ಮಾಯೂರೇ ಶ್ವೇತಾರಣ್ಯೇ ದ್ರುತಿಸ್ಥಲೇ ॥೩೮॥

ಜಪ್ಯೇಶೇ ಜಂಬುವಿಪಿನೇ ತೃಣಾವರ್ತೇ ಶೃತೀಶ್ವರೇ ।
ಶ್ರೀಕಂಠೇ ಸಹ್ಯಮೌಲೌ ಚ ಹಾಲಾಸ್ಯೇ ಗಂಧಮಾದನೇ ॥೩೯॥

ದಕ್ಷಿಣಾಂಭೋನಿಧೇಃ ಕೋಟೌ ತಥಾ ಚ ಶೃತಿಕಾನನೇ ।
ಕಮಲಾವಸತೌ ಚಾಪಿ ಸಹ್ಯಜಾಪುಣ್ಯರೋಧಸಿ ॥೪೦॥

---

ಪುಷ್ಕರ, ಪ್ರಯಾಗ, ವೃದ್ಧಾಚಲ, ಅರುಣಾದ್ರಿ, ಓಂಕಾರ (ಕ್ಷೇತ್ರ), ಭೃಗುತುಂಗ, ಈ ಕ್ಷೇತ್ರಗಳಲ್ಲಿಯೂ ಮತ್ತು ; ||೩೪-೩೫||

ತ್ರಿಯಂಬಕ, ಗಂಡಕೀನದಿ, ಪುಣ್ಯಕರವಾದ ಸೋಮೇಶ್ವರಕ್ಷೇತ್ರ, ಶ್ರೀಶೈಲ, ಕುರುಕ್ಷೇತ್ರ, ಪಿಂಡಾರಕ ಮತ್ತು ಕುರಂಟಕಕ್ಷೇತ್ರಗಳು, ಸುಖಕರವಾದ ನರ್ಮದಾ ನದಿಗಳು, ಅಮರಕಂಟಕ, ಗೋಕರ್ಣ, ನೈಮಿಷಾರಣ್ಯ, ಬದರಿಕಾಶ್ರಮ, ಕುಬ್ಜಶೈಲ, ಈ ಕ್ಷೇತ್ರಗಳಲ್ಲಿಯೂ ; ||೩೬-೩೭||

ಸಂಪದ್ಯುಕ್ತವಾದ ದಕ್ಷಿಣಕೈಲಾಸ, ಕಾಂಚೀ, ಮಧ್ಯಾರ್ಜುನಕ್ಷೇತ್ರ, ಕುಂಭಕೋಣ, ಮಯೂರಕ್ಷೇತ್ರ, ಶ್ವೇತಾರಣ್ಯ, ದ್ರುತಿಸ್ಥಲ, ಜಪ್ಯೇಶ, ಜಂಬುಕಾರಣ್ಯ (ಜಂಬುವಿಪಿನ), ತೃಣಾವರ್ತ, ಶೃತೀಶ್ವರಕ್ಷೇತ್ರ, ಶ್ರೀಕಂಠಕ್ಷೇತ್ರ, ಸಹ್ಯಪರ್ವತಶಿಖರಗಳು, ಹಾಲಾಸ್ಯ, ಗಂಧಮಾದನಪರ್ವತ, ಈ ಕ್ಷೇತ್ರಗಳಲ್ಲಿಯೂ ; ||೩೮-೩೯||

ದಕ್ಷಿಣಸಮುದ್ರದತೀರ, ಶೃತಿಕಾನನ, ಕಮಲಾವಸತಿ (ಲಕ್ಷ್ಮಿಯು ವಾಸ ಮಾಡುತ್ತಿರುವ ಕ್ಷೇತ್ರ) ಸಹ್ಯಪರ್ವತ ಪುತ್ರಿಯಾದ ಕಾವೇರೀನದಿಯ ದಡ, ಇವೇ

ಯೇ ಶಿವಕ್ಷೇತ್ರನಿರತಾ ಮದ್ಭಕ್ತಾಸ್ಸಂಯತಾ ಯಮ ।
ಅಪಿ ಪಾಪಾನ್ವಿತಾಂಶ್ಚಾಪಿ ತಾನ್ವಿವರ್ಜಯ ವರ್ಜಯ ॥೪೧॥

ಅಂತ್ಯಜಾ ವಾ ತಥಾ ಶೂದ್ರಾಸ್ಸಂಕರಾ ವಾ ದ್ವಿಜಾ ಅಪಿ ।
ಶೈವಾ ಯೇಽದ್ಯಾಪಿ ತೇ ಸರ್ವೇ ತ್ವಯಾ ಪೂಜ್ಯಾಸ್ಸದಾ ಯಮ॥೪೨॥

ಗೋಘ್ನಾನ್ಕೃತಘ್ನಾನ್ಗರದಾನ್ಪಿಶುನಾನ್ಪಾರದಾರಿಕಾನ್ ।
ವಿಶ್ವಾಸಘಾತುಕಾನ್ದುಷ್ಟಾನ್ದ್ವಿಜನಿಂದಾಪರಾಯಣಾನ್ ॥೪೩॥

ಪಂಚಪಾಪೋಪಪಾಪೌಘೈರ್ಯುತಾನ್ನಿತ್ಯಂ ಪ್ರಶಾಸಯ ।
ಇತ್ಯುಕ್ತ್ವಾ ಗಿರಿಜಾಜಾನಿಃ ಕುಬೇರಂ ಪ್ರಾಹ ಶಂಕರಃ ॥೪೪॥

ಕುಬೇರ ತ್ವಂ ನಿಧೀಶಾನೋ ಮದಾಜ್ಞಾತೋಽನುಪಾಲಯ ।
ಈಶಾನ ರುದ್ರವೃಂದೈಸ್ತ್ವಂ ದಿವ್ಯಂತರಜಭೂಚರೈಃ ॥೪೫॥

---

ಮುಂತಾದ ಶಿವಕ್ಷೇತ್ರಗಳಲ್ಲಿ ಸದಾ ನನ್ನನ್ನೇ ಭಜನೆಮಾಡುತ್ತಿರುವ ಜಿತೇಂದ್ರಿಯರಾದ ನನ್ನ ಭಕ್ತರು, ಪಾಪಮಾಡಿದ್ದರೂ ಅವರನ್ನು ಸ್ವಲ್ಪವೂ ಹಿಂಸಿಸದೆ ರಕ್ಷಿಸು. ॥೪೦-೪೧॥

ಅಂತ್ಯಜರಾಗಲಿ, ಶೂದ್ರರಾಗಲಿ, ಸಂಕರಜಾತಿಯವರಾಗಲೀ ಅಥವಾ ಬ್ರಾಹ್ಮಣರಾದರೂ ಸರಿಯೇ, ಇವರು ಮೊದಲಿನಿಂದ ಶಿವನಲ್ಲಿ ಭಕ್ತಿಯಿಡದೇ ಉಪದೇಶದಿಂದ ಶಂಕರನ ಭಕ್ತರಾಗಿ, ಶಿವಭಜನನಿರತರಾಗಿದ್ದರೆ ಅವರನ್ನೂ ನೀನು ಸದಾ ಪೂಜಿಸಬೇಕು. ॥೪೨॥

ಗೋಹತ್ಯಮಾಡಿದವರು, ಕೃತಘ್ನರು, ವಿಷವನ್ನು ಹಾಕುವವರು, ದುಷ್ಟರು, ಪರದಾರಗಮನಮಾಡುವವರು, ವಿಶ್ವಾಸಘಾತುಕರು (ನಂಬಿದವರನ್ನು ನಾಶಮಾಡುವ ಜನಗಳು), ದುರ್ಜನರು, ಬ್ರಾಹ್ಮಣನಿಂದೆಮಾಡುವವರು, ಬ್ರಹ್ಮಹತ್ಯಾ, ಸುರಾಪಾನ, ಸ್ವರ್ಣಸ್ತೇಯ, ಈ ಮಹಾಪಾತಕವನ್ನೂ ಇತರ ಉಪಪಾತಕಗಳನ್ನೂ ಮಾಡಿರುವ ಜನಗಳನ್ನೆಲ್ಲಾ ನಿತ್ಯವೂ ಬಿಡದೇ ಶಿಕ್ಷೆಮಾಡು. ಎಂದು ಗಿರಿಜಾರಮಣನಾದ ಶಂಕರನು ಯಮನಿಗೆ ಆಜ್ಞೆಮಾಡಿ, ಇತ್ತ ಕುಬೇರನನ್ನು ಕುರಿತು ಇಂತೆಂದನು. ॥೪೩-೪೪॥

ಕುಬೇರನೇ, ನೀನು ನವನಿಧಿಗಳಿಗೂ ಒಡೆಯನಾಗಿ ನನ್ನಪ್ಪಣೆಯಂತೆ ಅವುಗಳನ್ನು ರಕ್ಷಿಸು. ಈಶಾನನೇ, ನೀನು ಸ್ವರ್ಗ, ಅಂತರಿಕ್ಷ, ಭೂಮಿ, ಈ ಮೂರು

ವಸುರುದ್ರಗಣೈಸ್ಸಾರ್ಧಂ ನಿಹತಾರಿಸ್ಸದೈವ ಹಿ ।
ಮತ್ಸಾರೂಪ್ಯಮನುಪ್ರಾಪ್ನೋ ಮತ್ಪದಾಂಬುಜಭಕ್ತಿತಃ ॥೪೬॥

ಯೇ ಶೈವಾ ನಿಯತಾಸ್ಸರ್ವೇ ತ್ವತ್ಕೈಲಾಸವರೇ ಸ್ಥಿತಾಃ ।
ತ್ವಯಾ ಸಹೈವ ಕಲ್ಪಾಂತೇ ಮಾಮೇಷ್ಯಂತ್ಯಪುನರ್ಭವಾಃ ॥೪೭॥

ನಿರ್‍ಋತೇ ನೈರುತಗಣೈರ್ವಸ ನಿತ್ಯಮನುದ್ಧತಃ ।
ವಾಯೋ ತ್ವಂ ಸರ್ವಗಸ್ಸಾಧುರ್ವಸ ನಿತ್ಯಂ ಸ್ವಲೋಕಗಃ ॥೪೮॥

ಗ್ರಹಾಃ ಕಾವ್ಯೋಽಂಗಿರಾ ಭೂಜಸ್ಸೌರಿಃ ಕೇತುರ್ವಿಧುಂತುದಃ ।
ಮದಾಜ್ಞಯೈವ ಸತತಂ ದರ್ಶಯಂತಶ್ಚರೈಸ್ಸ್ವಕೈಃ ॥೪೯॥

ಶುಭಾಶುಭಂ ಹಿ ಸರ್ವೇಷಾಂ ಮದಾಜ್ಞಾವಶತಸ್ಸದಾ ।
ಋಕ್ಷೈಸ್ಸಂವತ್ಸರಗಣೈರ್ಧ್ರುವಾಧಾರಾ ಕೃತಾ ಮಯಾ ॥೫೦॥

---

ಕಡೆಗಳಲ್ಲಿಯೂ ಸಂಚರಿಸುವ ಸಾಮರ್ಥ್ಯವುಳ್ಳ ರುದ್ರಗಣಗಳೊಡನೆಯೂ, ವಸುಗಣಗಳೊಡನೆಯೂ ಸದಾ ಶತ್ರುಗಳನ್ನು ನಾಶಪಡಿಸುತ್ತಾ, ನನ್ನ ಪಾದಕಮಲಭಕ್ತಿಯಿಂದ ಶಿವಸಾರೂಪ್ಯವನ್ನು ಪಡೆ. ॥೪೫-೪೬॥

ಓ ಈಶ್ವರ! (ಈಶಾನ!) ನಿನ್ನ ಕೈಲಾಸಪರ್ವತದಲ್ಲಿ ನಿಯಮದಿಂದಿರುವ ಶಿವಪೂಜಕರೆಲ್ಲರೂ ಕಲ್ಪದ ಕೊನೆಯಲ್ಲಿ ಪುನರ್ಜನ್ಮರಹಿತರಾಗಿ ನನ್ನ ಸಮೀಪಕ್ಕೆ ಬಂದು, ನನ್ನಲ್ಲಿ ನಿನ್ನೊಡನೆ ಐಕ್ಯರಾಗುವರು. ಆಗ ನೀನೂ ಶಿವಸಾರೂಪ್ಯವನ್ನು ಪಡೆಯುವೆ. ॥೪೭॥

ಎಲೈ ನಿರ್‍ಋತಿಯೇ, ನೀನು ನಿನ್ನ ನೈರುತಗಣಗಳೊಡನೆ ಅಹಂಕಾರಪಡದೇ ವಿನಯದಿಂದ ವರ್ತಿಸು. ವಾಯುವೇ, ಸಾಧುವಾಗಿ ನೀನು ನಿತ್ಯವೂ ಎಲ್ಲಾ ಕಡೆಯಲ್ಲಿಯೂ ಸಂಚರಿಸುತ್ತಾ ನಿನ್ನ ಲೋಕದಲ್ಲಿ ವಾಸಮಾಡು. ॥೪೮॥

ಶುಕ್ರ, ಬೃಹಸ್ಪತಿ, ಅಂಗಾರಕ, ಶನಿ, ಕೇತು, ರಾಹು ಮುಂತಾದ ಗ್ರಹಗಳಿರಾ! ನೀವು ನನ್ನನುಜ್ಞೆಯಂತೆಯೇ ಯಾವಾಗಲೂ ಸಂಚರಿಸುತ್ತಾ ನನ್ನಪ್ಪಣೆಯಂತೆ ಎಲ್ಲರಿಗೂ ಶುಭಾಶುಭ ಫಲಗಳನ್ನು ಕೊಡಿರಿ. ನಿಮ್ಮನ್ನು ರಾಶಿಗಳು, ಸಂವತ್ಸರ ಗಣ, ಇವುಗಳೊಡನೆ ಧ್ರುವಮಂಡಲವನ್ನು ಆಧಾರವನ್ನಾಗಿ ಮಾಡಿಕೊಂಡಿರುವಂತೆ ನಾನು ನಿರ್ಮಿಸಿರುವೆನು. ಅದರಂತೆ ನೀವು ಅವುಗಳಿಗೆ ಆಶ್ರಿತರಾಗಿ ಲೋಕೋಪಕಾರಮಾಡಿರಿ. ॥೪೯-೫೦॥

ವಸಿಷ್ಠೋ ಗೌತಮೋಽತ್ರಿಶ್ಚ ಜಮದಗ್ನಿಶ್ಚ ಕಾಶ್ಯಪಃ ।
ವಿಶ್ವಾಮಿತ್ರೋ ಭರದ್ವಾಜಶ್ಚೈತೇ ಸಪ್ತರ್ಷಯೋ ಮಮ ॥೫೧॥

ಶಾಸನಾದ್ದೇವರಾಜ್ಯಸ್ಯ ಭ್ರಮಂತೋ ಮೇರುಮೌಲಿಗಾಃ ।
ಹಿತಾಹಿತಂ ಚ ಜಗತಾಂ ಕುರ್ವಂತೋಽಥ ವಸಂತು ಚ ॥೫೨॥

ವಸವೋ ಯೂಯಮಾಯಾತ ಪ್ರತಿಕಲ್ಪೇಷು ಸರ್ವಶಃ ।
ಮದಾಜ್ಞಯಾ ಲೋಕಸೃಷ್ಟಿಂ ಸೃಜಧ್ವಂ ನೃಪಸತ್ತಮಾನ್ ॥೫೩॥

ಶೇಷಾಽಶೇಷಫಣಾಜಾಲೈರ್ಭುವೋ ಭಾರಂ ವಹಸ್ವ ಸ ।
ದಿಗ್ಗಜಾಸ್ಸರಿತಶ್ಶೈಲಾಸ್ಸಾಗರಾಶ್ಚಾಪ್ಸರೋವರಾಃ ॥೫೪॥

ಗಂಧರ್ವಾಃ ಕಿನ್ನರಾ ಯಕ್ಷಾಸ್ಸುಪರ್ಣಾಸ್ಸಿದ್ಧಚಾರಣಾಃ ।
ಸ್ವಸ್ವಕಾಲೋಚಿತಾಂ ವೃತ್ತಿಂ ವಹನ್ತು ಮದನುಗ್ರಹಾತ್ ॥೫೫॥

---

ವಸಿಷ್ಠ, ಗೌತಮ, ಅತ್ರಿ, ಜಮದಗ್ನಿ, ಕಾಶ್ಯಪ, ವಿಶ್ವಾಮಿತ್ರ, ಭರದ್ವಾಜರೆಂಬ ಸಪ್ತರ್ಷಿಗಳೇ! ನೀವು ನನ್ನ ಅಪ್ಪಣೆಯಂತೆ ದೇವತೆಗಳ ರಾಜ್ಯವನ್ನು ರಕ್ಷಿಸುತ್ತಾ, ಮೇರುಪರ್ವತ ಶಿಖರಗಳಲ್ಲಿ ಸಂಚರಿಸಿ ಈ ಪ್ರಪಂಚದ ಜನಗಳಿಗೆ ಶುಭಾಶುಭ ಫಲಗಳನ್ನುಂಟುಮಾಡುತ್ತಾ ವಾಸಮಾಡಿರಿ. ॥೫೧-೫೨॥

ಅಷ್ಟವಸುಗಳಿರಾ! ನೀವು ಪ್ರತಿಯೊಂದು ಕಲ್ಪದಲ್ಲಿಯೂ ನನ್ನಪ್ಪಣೆ ಪಡೆದು ಲೋಕರಕ್ಷಣೆಗಾಗಿ ಉತ್ತಮರಾದ ರಾಜರನ್ನು ನಿರ್ಮಾಣಮಾಡಿರಿ. ॥೫೩॥

ಆದಿಶೇಷನೇ, ನೀನು ನಿನ್ನ ಅನಂತ ಹೆಡೆಗಳ ಸಮೂಹಗಳಿಂದ ಭೂಭಾರವನ್ನು ಧರಿಸು.

ಅಷ್ಟದಿಗ್ಗಜಗಳು, ನದಿಗಳು, ಸಪ್ತಕುಲಪರ್ವತಗಳು, ಸಪ್ತಸಾಗರಗಳು, ಅಪ್ಸರಶ್ರೇಷ್ಠರು, ಗಂಧರ್ವರು, ಕಿನ್ನರರು, ಯಕ್ಷರು, ಸುಪರ್ಣರು, ಸಿದ್ಧರು ಮತ್ತು ಚಾರಣರು ಆದ ನೀವೆಲ್ಲರೂ ನನ್ನ ಅನುಗ್ರಹದಿಂದ ನಿಮ್ಮ ನಿಮ್ಮ ಕರ್ತವ್ಯಗಳನ್ನು ಕಾಲೋಚಿತವಾಗಿ ನಡೆಸಿರಿ. ॥೫೪-೫೫॥

ಭೂಧರಾಸ್ಸಿಂಧುರಾಶ್ಚಾಪ್ಯೌ ನದ್ಯಸ್ಸ್ಪಂದತ ಶೀಘ್ರತಃ ।
ಸಾಗರಾಶ್ಚಾಪ್ಯನುದ್ವೇಲಾ ಹ್ಯಗಾ ಯೂಯಂ ಗಿರೀಶ್ವರಾಃ ॥೫೬॥

ಇತ್ಯನುಗ್ರಾಹ್ಯ ತಾನ್ದೇವಾನ್ಸ ಜಗಾಮ ವೃಷಧ್ವಜಃ ॥೫೭॥

ಬ್ರಹ್ಮಾ ವಿಷ್ಣುರಥೋ ಮಹೇಶ್ವರಪದನ್ನತ್ವಾಭಿಯಾತಾಸ್ಸುಖಂ
ದೇವಾಸ್ಸರ್ಷಿಗಣಾ ಗಿರೀಂದ್ರಜಗಣಾ ಹೃಷ್ಟಾಽಷ್ಟಮೂರ್ತೇಃ ಪದಂ ।
ಧ್ಯಾತ್ವಾ ತದ್ಧೃದಯಾಂಬುಜೇ ಸುಖಯುತಾಃಭೂವನ್ಯಯುಶ್ಚಾಪಿ ತೇ
ಲೋಕಾನ್ಸ್ವಾನಗಜಾಪತಿಪ್ರಕಥಿತಾಪಾರಾರ್ಥಸಾರಾದರಾಃ ॥೫೮॥

ಕುರ್ವನ್ತಸ್ಸ್ಥಿತಿಮುತ್ತಮಾಂ ಚ ಜಗತೋ ಲೋಕೇಷು ತೇ ವೈ ಸುರಾಃ॥೫೯॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ದೇವಾನುಗ್ರಹೋ
ನಾಮ ಏಕಾದಶೋಽಧ್ಯಾಯಃ

---

ಅಷ್ಟದಿಗ್ಗಜಗಳಿರಾ! ನೀವು ಭೂಮಿಯನ್ನು ದೃಢವಾಗಿ ಹೊತ್ತುಕೊಂಡಿರಿ. ನದಿಗಳೇ! ನೀವು ಶೀಘ್ರವಾಗಿ ಹರಿಯಿರಿ. ಸಾಗರಗಳಿರಾ! ನೀವು ಎಲ್ಲೆಮೀರ ಬೇಡಿ. ಪರ್ವತಗಳಿರಾ! ನೀವು ಸ್ಥಿರವಾಗಿರಿ. ಎಂದು ಆ ದೇವತೆಗಳಿಗೆಲ್ಲಾ ಕ್ರಮವಾಗಿ ಅನುಗ್ರಹಮಾಡಿ ವೃಷಭಧ್ವಜನಾದ ಮಹೇಶ್ವರನು ಅಲ್ಲಿಂದ ಮುಂದೆ ಪ್ರಯಾಣಮಾಡಿದನು. ॥೫೬-೫೭॥

ಬ್ರಹ್ಮ, ವಿಷ್ಣು ಮುಂತಾದ ದೇವತಾಸಂಘವೂ, ಸಪ್ತರ್ಷಿಸಮೂಹವೂ, ಪರ್ವತರಾಜನಗಣಗಳೂ, ಇವರೆಲ್ಲರೂ ಮಹೇಶ್ವರನ ಪಾದಗಳಿಗೆ ನಮಸ್ಕಾರಮಾಡಿ, ಸುಖವಾಗಿ ಅಲ್ಲಿಂದ ಹೊರಟು, ತಮ್ಮ ಹೃದಯಕಮಲದಲ್ಲಿ ಅಷ್ಟಮೂರ್ತಿಯಾದ ಮಹೇಶ್ವರನ ಪಾದಾಂಬುಜವನ್ನೇ ಸದಾ ಧ್ಯಾನಮಾಡುತ್ತಾ, ಗಿರಿಜಾರಮಣನು ತಮಗೆ ವಿಧಿಸಿದಂತೆ ತಮ್ಮ ತಮ್ಮ ಲೋಕಗಳಿಗೆ ಹಿಂದಿರುಗಿ ಅಲ್ಲಿ ಮಹೇಶ್ವರನ ಆಪ್ಪಣೆಯನ್ನು ಪಾಲಿಸುತ್ತಾ ಲೋಕರಕ್ಷಣಾದಿ ಕಾರ್ಯಗಳನ್ನು ನಡೆಸುತ್ತಿದ್ದರು. ॥೫೮-೫೯॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಭವಸಂಜ್ಞಕವಾದ ಎರಡನೆಯ ಅಂಶದಲ್ಲಿ
ಮಹಾದೇವನ ಅನುಗ್ರಹವೆಂಬ ಹನ್ನೊಂದನೆಯ ಅಧ್ಯಾಯವು ಮುಗಿಯಿತು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ದ್ವಾದಶೋಽಧ್ಯಾಯಃ

### ಮಣಿದ್ವೀಪವರ್ಣನಂ

—○○※○○—

|| ಸ್ಕಂದ ಉವಾಚ ||

ಗತೇಷು ದೇವಸಂಘೇಷು ಭಗವನ್ಭಗನೇತ್ರಹಾ ।
ದೇವೋ ದೇವೀಸಖೀಭಿಶ್ಚ ಗಣೇಂದ್ರೈಶ್ಚಾಪ್ಯನುವ್ರತಃ ||೧||

ತತಸ್ಸ್ವಾನೇಷು ಚಾಪ್ಯನ್ಯಾನ್ಗಣಾನ್ರುದ್ರಾನ್ಮಹೇಶ್ವರಃ ।
ಯೋಗಿನೀರ್ಭೈರವಾಂಶ್ಚಾಪಿ ಡಾಕಿನೀಶ್ಚೈವ ಶಾಕಿನೀಃ ||೨||

ಅನುಜ್ಞಾಪ್ಯ ಪ್ರಯಾತೇ ಚ ತತ್ಸ್ವಾನೇಽಸ್ಮಿನ್ಸದಾಶಿವೌ ।
ಪ್ರಹೃಷ್ಟೌ ತೌ ಮಹಾದೇವೌ ಮಹೋಕ್ಷೇಂದ್ರೇಣ ಗಾಮಿನೌ ||೩||

---

## ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಹನ್ನೆರಡನೆಯ ಅಧ್ಯಾಯ

ಹೀಗೆ ದೇವತಾಸಮೂಹವೆಲ್ಲವೂ ಮಹಾದೇವನ ಅನುಗ್ರಹ ಪಡೆದು ಹಿಂದಿರುಗಿದಮೇಲೆ ಭಗನೇತ್ರಧ್ವಂಸಕನಾದ ಭಗವಂತನು ದೇವಿಯೊಡನೆಯೂ, ಸಖಿಯರೊಡನೆಯೂ ತನ್ನ ಗಣಶ್ರೇಷ್ಠರೊಡನೆಯೂ ಪರಿವೃತನಾಗಿ ; ||೧||

ಇತರ ರುದ್ರಗಣಗಳನ್ನೂ, ಯೋಗಿನೀಗಣ, ಭೈರವಗಣಗಳನ್ನೂ, ಮತ್ತು ಡಾಕಿನೀ ಶಾಕಿನೀ ಗಣಗಳನ್ನೂ, ಅವರವರ ಸ್ಥಾನಗಳಲ್ಲಿರುವಂತೆ ಅನುಜ್ಞೆಕೊಟ್ಟು, ಅಲ್ಲಿಂದ ಮಹಾವೃಷಭರಾಜನನ್ನೇರಿ ಸಂತೋಷದಿಂದ ಪ್ರಯಾಣಮಾಡಿದನು.||೨-೩||

ಉಲ್ಲೋಲತರಕಲ್ಲೋಲಸುಧಾಸಾಗರತೀರಗಂ ।
ಪ್ರಾಪ್ಯೇತೌ ಗಣಮುಖ್ಯೈಶ್ಚಾಪ್ಯುಕ್ಷೇಂದ್ರೇಣಾತಿರಾಜತಾ ॥೪॥

ರಜತಾದ್ರಿನಿಭೇನಾಚ್ಛಛಾಯಾಧವಲಿತೇನ ಚ ।
ಮಣಿದ್ವೀಪಂ ಶಿವೌ ಯಾತೌ ಕಾಂತಿವಿದ್ಯೋತದಿಙ್ಮುಖಂ ॥೫॥

ಸುಧಾಂಬುಧೇರ್ಜಲಂ ತಸ್ಯ ಜಾನುದಘ್ನಂ ವೃಷಸ್ಯ ಹಿ ।
ಗಣೇಂದ್ರೈರ್ನಂದಿಮುಖ್ಯೈಶ್ಚ ಮಯಾ ಚ ಗಣಪೇನ ಚ ॥೬॥

ಜಾನುದಘ್ನೋಽಭವಚ್ಚಾಬ್ಧಿಶ್ಶಂಕರಸ್ಯ ಪ್ರಸಾದತಃ ।
ದೇವ್ಯಾಸ್ಸಖೀಗಣಾನಾಂ ಚ ತ್ರಿಣೇತ್ರದಯಯಾ ದ್ವಿಜಾಃ ॥೭॥

ತದ್ದ್ವೀಪಮೀಕ್ಷ್ಯ ತ್ರ್ಯಕ್ಷೋಽಪಿ ದೇವೀ ಸಾಪಿ ಮಹೇಶ್ವರೀ ।
ಗಣಾಶ್ಚಾಹಂ ತಥೇಶಶ್ಚ ದೇವ್ಯಾಶ್ಚೈವ ಸಖೀಗಣಂ ॥೮॥

---

ಅನಂತರ ರಜತಾದ್ರಿಗೆ ಸಮಾನವಾಗಿ ಬಿಳಿಯ ಛಾಯೆಯಿಂದ ಪ್ರಕಾಶಮಾನವಾಗಿರುವ ವೃಷಭರಾಜನಮೇಲೆ ಕುಳಿತು, ಉತ್ತಮವಾದ ತನ್ನ ಗಣಗಳೊಡನೆ ಉಮಾಮಹೇಶ್ವರರು ಉಕ್ಕಿಬರುವ ಅಲೆಗಳಿಂದ ಅಲಂಕೃತವಾದ ಸುಧಾಸಾಗರದ ದಡಕ್ಕೆ ಬಂದರು. ಅಲ್ಲಿಂದ ಆ ಸುಧಾಸಾಗರದ ಮಧ್ಯಭಾಗದಲ್ಲಿ ತನ್ನ ಕಾಂತಿಯಿಂದ ಎಲ್ಲಾ ದಿಕ್ಕುಗಳನ್ನೂ ಪ್ರಕಾಶಪಡಿಸುತ್ತಿರುವ, ಮಣಿದ್ವೀಪಕ್ಕೆ ಪ್ರಯಾಣಮಾಡಿದರು. ||೪-೫-೬||

ಜೈಗೀಷವ್ಯಾದಿ ವಿಪ್ರೋತ್ತಮರೆ! ಮಹಾದೇವನ ಅನುಗ್ರಹದಿಂದ ಆ ವೃಷಭಕ್ಕೆ ಸುಧಾಸಾಗರದ ಅಗಾಧವಾದ ನೀರು ಮೊಳಕಾಲು ಮುಳುಗುವಷ್ಟಾಗಿ ಪ್ರಯಾಣಕ್ಕನುಕೂಲವಾಯಿತು. ಹಾಗೆಯೇ ಗಣಶ್ರೇಷ್ಠರಿಗೂ, ನನಗೂ, ಗಣಪತಿ, ಮತ್ತು ದೇವಿಯ ಸಖೀಗಣಗಳಿಗೂ ಮಹಾದೇವನ ದಯೆಯಿಂದ ನೀರು ಮೊಳಕಾಲುಮಟ್ಟಕ್ಕೆ ಬರುವಷ್ಟಾಯಿತು. ಹೀಗೆ ನಾವೂ ಸುಖವಾಗಿ ಮಣಿದ್ವೀಪವನ್ನು ಸೇರಿದೆವು. ||೬-೭||

ಆಗ ತ್ರಿನಯನನಾದ ಮಹಾದೇವನೂ, ಮಹೇಶ್ವರಿಯಾದ ದೇವಿಯೂ, ರುದ್ರಗಣಗಳೂ ಮತ್ತು ದೇವಿಯ ಸಖೀಗಣವೂ, ಎಲ್ಲರೂ ಆ ದ್ವೀಪವನ್ನು ನೋಡಿದೆವು. ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುತ್ತಿರುವ ಆ ದ್ವೀಪಮಧ್ಯಕ್ಕೆ ನಮ್ಮೆಲ್ಲ

ದ್ವೀಪಮಧ್ಯಂ ತದಾ ಪ್ರಾಪ್ಯ ಸರ್ವೇಷಾಂ ವಿಸ್ಮಯಾವಹಂ ।
ವಿಸ್ಮಯಂತೀಂ ತದಾ ದೇವೀಂ ಪ್ರಾಹ ದೇವೋ ವೃಷಧ್ವಜಃ ॥೯॥

ವೃಷಾರೂಢಶ್ಶಿವಾಪಾರ್ಶ್ವಸ್ಸಂಚರನ್ವೃಷಭಧ್ವಜಃ ।
ಪಶ್ಯ ದ್ವೀಪಮಿದಂ ಭದ್ರೇ ಭದ್ರದಂ ದರ್ಶನೇನ ಚ ॥೧೦॥

ಸುಧಾಸಾಗರಮಧ್ಯಸ್ಥಂ ತತ್ಕಲ್ಲೋಲಾಗ್ರಘೋಷಿತಂ ।
ಘುರ್ಘುರೈರ್ಮಾರುತರವೈ ರವ್ಯೋತ್ತುಂಗಶಿಲಾತಲಂ ॥೧೧॥

ಮಣಿಚಾಲೈಕಪುಲಿನಂ ಮಣಿಕಾಂತಿಶತಾಧಿಕಂ ;
ಬಾಲಭಾನುಸಹಸ್ರಾಭಂ ಚಂದ್ರಕೋಟಿಪ್ರಭಾತತಂ ॥೧೨॥

---

ರೊಡನೆ ಮಹಾದೇವನು ಪ್ರಯಾಣ ಮಾಡಿದನು. ಆಗ ದೇವಿಯು ಆ ದ್ವೀಪದ ಸನ್ನಿವೇಶವನ್ನು ನೋಡಿ, ಬಹಳ ವಿಸ್ಮಯ ಹೊಂದಿರಲು, ವೃಷಭಧ್ವಜನಾದ ಮಹಾದೇವನು ದೇವಿಯುನ್ನು ಕುರಿತು ಹೀಗೆಂದನು. ॥೮-೯॥

ಮತ್ತು ವೃಷಭದ ಮೇಲೆ ದೇವಿಯೊಡನೆ ಆ ದ್ವೀಪದಲ್ಲಿ ಸಂಚರಿಸುತ್ತಾ ಮಂಗಳಾಂಗಿಯೇ, ಈ ದ್ವೀಪವನ್ನು ನೋಡು, ಇದರ ದರ್ಶನವೇ ಮಂಗಳಕರವಾಗಿರುವುದು. ॥೧೦॥

ದೇವಿ ! ಸುಧಾಸಾಗರ ಮಧ್ಯದಲ್ಲಿರುವ ಈ ದ್ವೀಪದಲ್ಲಿ ಸದಾ ಗಂಭೀರವಾದ ಅಲೆಗಳ ಘೋಷಣವು ಕೇಳಿಬರುತ್ತಿರುವುದು. ಇಲ್ಲಿರುವ ದೊಡ್ಡ ದೊಡ್ಡ ಬಂಡೆಗಳೂ, ಘರ್ ಘರ್ ಎಂದು ಶಬ್ದಮಾಡುತ್ತಿರುವ ಗಾಳಿಯೂ ಎಷ್ಟು ಮನೋಹರವಾಗಿರುವುದು ! ॥೧೧॥

ಇಲ್ಲಿನ ಮರಗಳೆಲ್ಲವೂ ಕೇವಲ ಮಣಿಮಯವಾಗಿರುವುವು. ಅಸಂಖ್ಯಾತವಾದ ರತ್ನಕಾಂತಿಗಳಿಂದ ಈ ದ್ವೀಪವು ಇತರ ಎಲ್ಲಾ ದ್ವೀಪಗಳಿಗಿಂತಲೂ ಉತ್ಕೃಷ್ಟವೆನಿಸಿರುವುದು. ಸಾವಿರ ಬಾಲಸೂರ್ಯರಂತೆ, ಕಾಂತಿಯುಳ್ಳ ಈ ದ್ವೀಪವು ಕೋಟಿ ಚಂದ್ರರ ಪ್ರಭೆಯಿಂದ ಬೆಳಗುತ್ತಿರುವುದು. ॥೧೨॥

ಉತ್ಫುಲ್ಲಪಂಕಜಾಕಾರಂ ಪದ್ಮರಾಗಸಮಾನಕಂ ।
ದ್ವೀಪಕಾಂತ್ಯಾ ಚ ಲೋಕಾಶ್ಚ ಸರ್ವೇ ಕಾಂತತರಾಶ್ಶಿವೇ ॥೧೩॥

ನ ಚಂದ್ರಸೂರ್ಯೌ ನೋ ವಿದ್ಯುನ್ನಾಗ್ನಿರ್ನೋ ತಾರಕಾಗಣಾಃ ।
ಏತಸ್ಯ ಭಾಸಾ ಕೋಟ್ಯಂಶಕೋಟ್ಯಂಶೇನಾಪಿ ನೋ ಸಮಾಃ ॥೧೪॥

ಕ್ವಚಿದ್ವಿದ್ರುಮಸಂಘಾಭಬಿಂಬಕಾಂತಿಶತಾಧಿಕಂ ।
ಕ್ವಚಿನ್ಮರಕತಚ್ಛಾಯಂ ವಿದ್ಯುದ್ಭಾನುಸಮಚ್ಛವಿ ॥೧೫॥

ಮಧ್ಯಾಹ್ನಭಾನುಕಿರಣಸದೃಶಂ ಕ್ವಚಿದೇವ ಹಿ ।
ಸಂಧ್ಯಾನಿಬಿಡರಕ್ತಾಚ್ಛರಾಗವಿದ್ಯೋತಿತಂ ಕ್ವಚಿತ್ ॥೧೬॥

ಇಂದ್ರನೀಲಮಣಿಶ್ಯಾಮಮೇಘಗರ್ಭಸಮಂ ಕ್ವಚಿತ್ ।
ಕ್ವಚಿತ್ಸಿಂಧೂರಮಾಣಿಕ್ಯಜಪಾದಾಡಿಮವರ್ಣಕಂ ॥೧೭॥

---

ಪಾರ್ವತಿಯೇ, ಅರಳಿದ ಕಮಲದಂತೆ ಆಕಾರವುಳ್ಳ ಈ ದ್ವೀಪದ ಕಾಂತಿಯು ಪದ್ಮರಾಗಮಣಿಯಂತೆ ಹೊಳೆಯುತ್ತಿರುವುದು. ಈ ದ್ವೀಪದ ಕಾಂತಿಯಿಂದಲೇ ಇತರ ಎಲ್ಲಾ ಲೋಕಗಳೂ ಪ್ರಕಾಶಮಾನವಾಗಿರುವುವು. ||೧೩||

ಸೂರ್ಯಚಂದ್ರರೂ, ಮಿಂಚು ಮತ್ತು ನಕ್ಷತ್ರಸಮೂಹ, ಇವೆಲ್ಲವೂ ಈ ದ್ವೀಪ ಕಾಂತಿಯ ಕೋಟ್ಯಂಶದಲ್ಲಿ ಕೋಟ್ಯಂಶಕ್ಕೂ ಸರಿ ತೂಗಲಾರದು. ||೧೪||

ಈ ದ್ವೀಪದಲ್ಲಿ ಕೆಲವು ಕಡೆ, ಹವಳ ಸಮೂಹಕ್ಕೆ ಸಮಾನವಾದ ನೂರಾರು ಬಿಂಬಗಳು ರಂಜಿಸುತ್ತಿರುವುವು. ಕೆಲವೆಡೆ ಮರಕತಮಣಿಯಂತೆಯೂ, ಇನ್ನು ಕೆಲವು ಸ್ಥಳಗಳಲ್ಲಿ, ಮಿಂಚು ಮತ್ತು ಸೂರ್ಯ ಇವರಂತೆಯೂ ಹೊಳೆಯುವ ಪ್ರದೇಶವಿರುವುದು. ||೧೫||

ಮಧ್ಯಾಹ್ನಕಾಲದ ಸೂರ್ಯನ ಕಿರಣಕ್ಕೆ ಸಮಾನವಾದ ಕಾಂತಿಯೂ, ಕೆಲವೆಡೆ ಸಂಧ್ಯಾಕಾಲದ ಸೂರ್ಯನಂತೆ ಸಾಂದ್ರವಾದ ಅಚ್ಚಕೆಂಪು ಬಣ್ಣವೂ ಹೊಳೆಯುತ್ತಿರುವುದು. ||೧೬||

ಕೆಲವು ಕಡೆ, ಇಂದ್ರನೀಲಮಣಿಯಂತೆ ಕಪ್ಪಾದ ಮೇಘದ ಒಳಕಾಂತಿಯೂ, ಕೆಲವೆಡೆ ಅರಿಸಿನ, ಮಾಣಿಕ್ಯ, ಜಪಾಕುಸುಮ, ಮತ್ತು ದಾಳಿಂಬೇಹಣ್ಣು ಇವುಗಳ ಕಾಂತಿಯೂ ಕಂಡುಬರುತ್ತಿರುವುದು. ||೧೭||

**ನಿಷ್ಟಪ್ತಹೇಮಭಾಸಂ ಚ ಪಶ್ಯ ತತ್ಕ್ವಚಿದದ್ರಿಜೇ।**
**ವಿದ್ಯುತ್ಕೋಟಿಮಹಾಧಾರಾಸಾರಕಾಂತಿತತಂ ಕ್ವಚಿತ್ ॥೧೮॥**

**ಪ್ರೋಜ್ಜ್ವಲದ್ವಡವಾವಹ್ನಿಜ್ವಾಲಾಜಾಲವಿಭಾಸುರಂ ।**
**ಪುಷ್ಪರಾಗಮಣಿಪ್ರೋದ್ಯತ್ತ್ವಿಷಾಪಾರಂ ಕ್ವಚಿಚ್ಛಿವೇ ॥೧೯॥**

**ಹೀರಸಾರಮಹಾಗರ್ಭಧಗದ್ಧಗಿತದಿಕ್ತಟಂ ।**
**ಗೋಮೇದಮೇದಗರ್ಭಾಚ್ಛಂ ಕ್ವಚಿದ್ವೈಢೂರ್ಯಸಪ್ರಭಂ ॥೨೦॥**

**ವೈಡೂರ್ಯಕಾಂತಿಸೂತ್ರೋತ್ಥಧಾರಾಸಾರೈಕಭಾಸುರಂ ।**
**ರಮ್ಯಮುಕ್ತಾಸುವೃತ್ತೋರುಸ್ವಚ್ಛಕಾಂತ್ಯಧಿಕಂ ಕ್ವಚಿತ್ ॥೨೧॥**

---

ನಗರಾಜಪುತ್ರಿ ! ನೋಡು ; ಕೆಲವು ಭಾಗಗಳಲ್ಲಿ ಕಾದ ಚಿನ್ನದ ಕಾಂತಿಯಂತೆ ಈ ದ್ವೀಪದ ಬಣ್ಣವು ತೋರುತ್ತಿರುವುದು. ಮತ್ತೊಂದು ಕಡೆ ಧಾರಾಕಾರವಾಗಿ ಕೋಟಿಮಿಂಚುಗಳು ಒಟ್ಟಿಗೆ ಪ್ರಕಾಶಿಸಿದರೆ ಹೇಗೋ ಅದರಂತೆ ದ್ವೀಪಕಾಂತಿ ಯೇರ್ಪಟ್ಟಿರುವುದು. ॥೧೮॥

ದೇವಿಯೇ, ಒಂದುಕಡೆ ಈ ದ್ವೀಪವು ಉರಿಯುತ್ತಿರುವ ಬಡಬಾಗ್ನಿಯ ಜ್ವಾಲಾಸಮೂಹದಂತೆ ಹೊಳೆಯುತ್ತಿರುವುದು. ಬೇರೇ ಕಡೆ ನೋಡಲು ಪುಷ್ಪರಾಗ ಮಣಿಯಂತೆ ಅಪಾರ ಕಾಂತಿಯಲ್ಲಿ ವಿಜೃಂಭಿಸುತ್ತಿರುವುದು. ॥೧೯॥

ದೊಡ್ಡ ದೊಡ್ಡ ಹೀರಮಣಿಗಳು ಈ ದ್ವೀಪದ ಗರ್ಭದಲ್ಲಡಗಿರುವುದರಿಂದ ಅದರ ಕಾಂತಿಯು ದಿಕ್ಪ್ರದೇಶಗಳನ್ನೆಲ್ಲಾ ಧಗಧಗನೆ ಉರಿಯುವಂತೆ ಮಾಡುತ್ತಿದೆ. ಕೆಲವು ಕಡೆ, ಗೋಮೇದಕರತ್ನಗಳ ಗರ್ಭಕಾಂತಿಯಂತೆ ಶುಭ್ರವರ್ಣವೇರ್ಪ ಟ್ಟಿರುವುದು. ಇನ್ನು ಕೆಲವು ಕಡೆ, ವೈಡೂರ್ಯಮಣಿಗೆ ಸಮಾನವಾದ ಕಾಂತಿಯೇ ತೋರುತ್ತಿರುವುದು. ॥೨೦॥

ವೈಡೂರ್ಯರತ್ನಗಳ ಕಾಂತಿಸೂತ್ರದಿಂದ ಉಂಟಾದ ಧಾರಾರೂಪವಾದ ಬೆಳಕೇ ಕೆಲವು ಕಡೆ ಬೆಳಗುತ್ತಿರುವುದು. ಮನೋಹರವಾಗಿ ದುಂಡಾಗಿರುವ ದೊಡ್ಡ ದೊಡ್ಡ ಮುತ್ತಿನ ಕಾಂತಿಗಳಿಗಿಂತಲೂ ಅಧಿಕವಾದ ಕಾಂತಿಯು ಕೆಲವು ಕಡೆ ಈ ದ್ವೀಪದಲ್ಲಿ ಶೋಭಿಸುತ್ತಿರುವುದು. ॥೨೧॥

ಕುರುವಿಂದಮಣಿಚ್ಛಾಯಾಪ್ರಭಾತತಿಯುತಂ ಕ್ವಚಿತ್ ।
ಚಂದ್ರೋಜ್ವಲಾಚ್ಛಸ್ಫಟಿಕತಲೋತ್ಥಧವಲಂ ಕ್ವಚಿತ್ ॥೨೨॥

ಮಿಶ್ರರಾಗಯುತಂ ಚಾಪಿ ಕಪೋತಕುಲಸಪ್ರಭಂ ।
ಮಯೂರಕಂಠವರ್ಣಾಚ್ಛತಲವಿದ್ಯೋತಿತಂ ಕ್ವಚಿತ್ ॥೨೩॥

ಪಂಚಾಶಲ್ಲಕ್ಷಮಾಯಾಮಂ ದ್ವೀಪರತ್ನಮಿದಂ ಶಿವೇ ।
ಪೂರ್ವಂ ಕ್ರೀಡಾವಿನೋದಾಯ ಕಲ್ಪಿತೋ ಮನಸಾ ಮಯಾ ॥೨೪॥

ಸುಧಾಸಾಗರಜೋತ್ತುಂಗತರಂಗಸ್ಪೃಷ್ಟಪೀಠಭೂಃ ।
ನಾತ್ರ ದೇವಾ ನ ಗಂಧರ್ವಾ ನ ಪಿಶಾಚಾ ಮರುದ್ಗಣಾಃ ॥೨೫॥

---

ಕೆಲವು ಕಡೆ ಕುರುವಿಂದಮಣಿಗಳ ಪ್ರಭಾರಾಶಿಯ ಸಮೂಹವೂ, ಕೆಲವು ಕಡೆ ಉಜ್ಜ್ವಲಚಂದ್ರನಂತೆ, ಶುಭ್ರವಾದ ಸ್ಫಟಿಕಮಣಿಖಚಿತವಾಗಿ ರಂಜಿಸುವ ಕಾಂತಿಯೂ ತೋರುತ್ತಿರುವುದು. ॥೨೨॥

ಕೆಲವು ಕಡೆ ಮಿಶ್ರವರ್ಣಯುಕ್ತವಾಗಿಯೂ, ಕೆಲವು ಕಡೆ ಕಪೋತಪಕ್ಷಿಗಳ (ಪಾರಿವಾಳಗಳ) ಗುಂಪಿನಂತೆ ಕಾಂತಿಯುಳ್ಳದ್ದಾಗಿಯೂ, ಕೆಲವು ಕಡೆ ನವಿಲಿನ ಕುತ್ತಿಗೆಯ ಬಣ್ಣದಂತೆ ನಿರ್ಮಲವಾಗಿಯೂ ಭೂಕಾಂತಿಯು ಪ್ರಕಾಶಿಸುತ್ತಿರುವುದು. ॥೨೩॥

ದೇವಿಯೇ, ಈ ದ್ವೀಪರತ್ನವು ಐವತ್ತುಲಕ್ಷಯೋಜನ ವಿಸ್ತಾರವಾಗಿರುವುದು. ಹಿಂದೆಯೇ ನಾನು ಕ್ರೀಡಾವಿಹಾರಕ್ಕೋಸ್ಕರ ಈ ದ್ವೀಪವನ್ನು ಸಂಕಲ್ಪಮಾತ್ರ ದಿಂದಲೇ ನಿರ್ಮಿಸಿರುವೆನು. ॥೨೪॥

ದೇವಿಯೇ, ಈ ದ್ವೀಪಕ್ಕೆ ಪೀಠಸ್ಥಾನೀಯವಾದ ಭೂಪ್ರದೇಶದಲ್ಲಿ ಸುಧಾ ಸಮುದ್ರದ ದೊಡ್ಡ ದೊಡ್ಡ ಅಲೆಗಳು ಬಂದು ಹೊಡೆಯುತ್ತಿರುವುವು. ಈ ದ್ವೀಪ ದಲ್ಲಿರುವ ವಿಚಿತ್ರವಸ್ತುಗಳು, ದೇವತೆಗಳಿಗೂ, ಗಂಧರ್ವರಿಗೂ, ಪಿಶಾಚರಿಗೂ, ಮರುದ್ಗಣಗಳು, ಗಣಶ್ರೇಷ್ಠರು ಮತ್ತು ಪ್ರಮಥಗಣಾಧಿಪತಿಗಳು ಇವರಾರಿಗೂ ಗೋಚರವಾಗಲಾರವು. ॥೨೫॥

ಗಣೇಂದ್ರಾಃ ಪ್ರಮಥೇಂದ್ರಾ ವಾ ನಾಪ್ನುವಂತ್ಯದ್ಭುತಂ ಶಿವೇ ।
ಪಶ್ಯ ರತ್ನಗಿರೀಂಶ್ಚಾಪಿ ನಾನಾರತ್ನೈಕಭಾಸುರಾನ್ ॥೨೬॥

ನಾನಾರತ್ನಗಣಾತ್ಯಚ್ಛವೃಕ್ಷಚ್ಛಾಯಾಸುಮೌಲಿಕಂ ।
ಚಂದನೈಸ್ತಿಲಕೈಸ್ಸಾಲೈರಶೋಕೈಃ ಪಾರಿಜಾತಕೈಃ ॥೨೭॥

ತಗರೈರಗರೈಶ್ಚೈವ ಕೋವಿದಾರೈಸ್ಸುರಾದನೈಃ ।
ದೇವದಾರುಸುಗಂಧೋದ್ಯಚ್ಚಂದನಾನಂದಿಶೃಂಗಕಂ ॥೨೮॥

ಸಾಲತಾಲತಮಾಲೈಶ್ಚ ಕೃತಮಾಲೈಶ್ಚ ಪಿಪ್ಪಲೈಃ ।
ತಕ್ಕೋಲಾಂಕೋಲಹಿಂತಾಲರಸಾಲಪನಸಾವೃತಂ ॥೨೯॥

ಪ್ರತ್ಯಗ್ರಕೇತಕೀಫುಲ್ಲಕುರಂದಕುಟಜಾವೃತಂ ।
ವಿಭೀತಕಹರೀತಕ್ಯೈರ್ಮಧೂಕೈಃ ಸುಕಪಿತ್ಥಕೈಃ ॥೩೦॥

---

ಪ್ರಿಯೇ, ನಾನಾರತ್ನಗಳಿಂದ ವಿಶೇಷವಾಗಿ ಹೊಳೆಯುತ್ತಿರುವ ರತ್ನಗಿರಿಗಳನ್ನು (ರತ್ನಪರ್ವತಗಳನ್ನು) ನೋಡು. ಇಗೋ ಇತ್ತಲಾಗಿ ಅನೇಕ ರತ್ನಗಳ ಸಮೂಹದಿಂದ ಅತ್ಯಂತ ಶುಭ್ರವಾಗಿ ಕಾಣುತ್ತಿರುವ ಮರಗಳ ಗುಂಪನ್ನು ನೋಡು. ಎಷ್ಟು ಚೆನ್ನಾಗಿ ನೆರಳನ್ನು ಕೊಡುತ್ತಿರುವುವು! ಈ ವನಸಮೂಹಗಳಲ್ಲಿ ಚಂದನ, ತಿಲಕ, ಸಾಲ, ಅಶೋಕ, ಪಾರಿಜಾತ ಈ ವೃಕ್ಷಗಳು ನಿಬಿಡವಾಗಿ ಬೆಳೆದಿರುವುವು. ||೨೬-೨೭||

ತಗರದ ಮರ, ಅಗುರುವೃಕ್ಷ, ಕೋವಿದಾರ, ದೇವದಾರು, ಶ್ರೀಗಂಧ, ಚಂದನ ಇವೇ ಮೊದಲಾದ ಮರಗಳಿಂದ ರಮ್ಯವಾಗಿರುವ ಈ ಶಿಖರವನ್ನು ನೋಡು. ಪ್ರೇಯಸಿ! ಸಾಲುಸಾಲಾಗಿ ಇರುವ ಸರ್ಜ, ತಾಳೆ, ಹೊಂಗೆ, ಹಿಪ್ಪಲಿ, ತಕ್ಕೊಲ, ಅಂಕೋಲ, ಹಿಂತಾಲ, ಮಾವು, ಹಲಸು ಇಂತಹ ಮರಗಳಿಂದ ಒಪ್ಪುವ ಆ ಶಿಖರವನ್ನು ನೋಡು! ಹೊಸದಾದ ಕೇದಿಗೆ, ಅರಳಿದ ಕುರಂದ, ಗೊರವಂಟಿಕೆ ಹೂಗಳಿಂದಲೂ, ಮತ್ತು ವಿಭೀತಕ, ಅಳಲೆ, ಮಧೂಕ, ಸೀಬೆ ಈ ವೃಕ್ಷಗಳಿಂದಲೂ, ಕಂಗೊಳಿಸುವ ಆ ಪರ್ವತದ ಕೋಡು ಎಷ್ಟು ಚೆನ್ನಾಗಿದೆ ನೋಡು. ||೨೮-೨೯-೩೦||

ಭಲ್ಲಾತಕಶಮೀಭಲ್ಲಶಿಂಶುಪಾಲೋದ್ಧ್ರಜಾಂಬವ್ಯೈಃ ।
ಮಂದಾರಕರ್ಣಿಕಾರೈಶ್ಚ ದಾಡಿಮೀನಾಗಕೇಸರೈಃ ॥೩೦॥

ಖರ್ಜೂರಸರ್ಜಸರಸನಾಗಾರ್ಜುನಶಿಲೋದ್ಧ್ರಕೈಃ ।
ಶ್ರೀಬಿಲ್ವಾಮಲಕಾದ್ಯೈಶ್ಚ ಛತ್ರಾಕ್ಯೈಃ ಕಮ್ರಕ್ಯೈಂಗುದೈಃ ॥೩೨॥

ಕದಂಬೈಶ್ಚಂಪಕೈಃ ಫುಲ್ಲೈಃ ಪುನ್ನಾಗೈರ್ಬಕುಳೈರ್ಧವೈಃ ।
ಬದರೈಃ ಖದಿರೈಶ್ಚೈವ ತರಗೈಃ ಪಾಟಲೈಸ್ತಥಾ ॥೩೩॥

ಸೀತಾಫಲೈ ರಾಮಫಲೈ ರ್ಪೂತಕೀಗಣಸುಂದರೈಃ ।
ಕರಂಜೈಃ ಕೃಕಲೈರ್ನೀಪೈಃ ಕಾಶ್ಮೀರಾಲಕ್ತಶೋಭಿತಂ ॥೩೪॥

ವಂಶೋದ್ದಾಮಮಹಾರಾವವನಘರ್ಘರಮಾರುತಂ ।
ರತ್ನಪತ್ರೈಃ ರತ್ನಫಲೈರತ್ನಶುದ್ಧೈಶ್ಚ ಗಂಧಿತೈಃ ॥೩೫॥

---

ಭಲ್ಲಾತಕ, ಶಮೀ (ಬನ್ನೀ), ಭಲ್ಲ, ಶಿಂಶುಪಾಲ, ಹಿಪ್ಪೆ, ನೇರಿಳೆ, ಮಂದಾರ, ಕಣಿಗಲು, ದಾಳಿಂಬೆ, ನಾಗಸಂಪಿಗೆ, ಈ ಪುಷ್ಪಭರಿತವಾದ ಗಿಡಗಳಿಂದ ಶೋಭಿಸುವ ಶೃಂಗವನ್ನು ನೋಡು. ರಮಣಿಯೇ! ಖರ್ಜೂರ, ಸಜ್ಜ, ಸರಸ, ನಾಗಾರ್ಜುನ, ಶಿಲೋದ್ಧ್ರಕ, ಬಿಲ್ವ, ನೆಲ್ಲಿ, ಇಂಗಳದಮರ, ಛತ್ರಿಯಮರ ಇವುಗಳಿಂದ ಸುಂದರವಾದ ಈ ಪರ್ವತಶಿಖರವನ್ನು ನೋಡು. ॥೩೧-೩೨॥

ಎಲೌ ಭಾಮಿನಿ! ಇಗೋ ಇಲ್ಲಿ ನೋಡು. ಈಚಲು, ಸಂಪಿಗೆ, ಅರಳಿದ ಪುನ್ನಾಗ, ವಕುಲ, ಧವ, ನೆಲ್ಲಿ, ಖದಿರ, ತರಗ, ಪಾಟಲ ಇಂತಹ ವೃಕ್ಷಗಳಿಂದ ಮೆರೆಯುವ ಆ ಶಿಖರವು ಎಷ್ಟು ಚೆನ್ನಾಗಿದೆ. ಇಗೋ ಇತ್ತ ಸೀತಾಫಲ, ರಾಮಫಲ, ರಮಣೀಯಗಳಾದ ರಸಜಾತಿಯ ವೃಕ್ಷಗಳ ಸಮುದಾಯ, ಹಾಗೂ ಕರಂಜ, ಕೃಕಲ, ನೀಪ, ಕಾಶ್ಮೀರರಾಗ ಇಂತಹ ಮರಗಳಿಂದ ಕೂಡಿದ ಆ ಶೃಂಗವು ಎಷ್ಟು ಸುಂದರವಾಗಿದೆ! ನೋಡು. ॥೩೩-೩೪॥

ಎಲೌ ಕಾಂತೆಯೇ, ಗಟ್ಟಿಯಾಗಿ ಶಬ್ದಮಾಡುವ ಬಿದಿರುಮೆಳೆಗಳಲ್ಲಿನ ಗಾಳಿಯು ಘರಘರನೆ ಶಬ್ದಮಾಡುತ್ತಿದೆ. ರತ್ನಮಯಗಳಾದಂತಿರುವ ಎಲೆ, ಹಣ್ಣು ಇವುಗಳಿಂದ ಒಪ್ಪುತ್ತಾ ರತ್ನದಂತೆ ಕಾಂತಿಯುಕ್ತಗಳಾದ ವೃಕ್ಷಗಳು ಆ ಶಿಖರದಲ್ಲಿ

ನೃತ್ಯನ್ಮಯೂರಸಂಘೈಶ್ಚ ಕಪೋತರಣಿತೋಜ್ವಲಂ ।
ನದದ್ದಾತ್ಯೂಹಸಂಚಾರಿಸಾರಸಾರಾವಸುಂದರಂ ॥೩೬॥

ಕೋಕಿಲಾಕಾಕಲೀಲಾಪಶುಕಾಲಾಪೈಕಭಾಸುರಂ ।
ಕುರರೀರಾವಸಂಕೂಜದ್ಗುಹಾಮುಖಶತಾನ್ವಿತಂ ॥೩೭॥

ಸುರಮ್ಯರಮಣೀಯಾಂಬುಸರೋವರಶತಾವೃತಂ ।
ತನ್ಮಧ್ಯಭಾಗವಿಲಸತ್ಫುಲ್ಲರಕ್ತಸುಪಂಕಜೈಃ ॥೩೮॥

ಹಲ್ಲಕೋತ್ಫುಲ್ಲಸಂಘೈಶ್ಚ ನೀಲೋತ್ಪಲಕುಲೈರಪಿ ।
ತದ್ಗಂಧಬಂಧಸುಭಗಮಾರುತಾನೋದತೀರಕಂ ॥೩೯॥

ರತ್ನವಾಲುಕಯಾಚ್ಛನ್ನಂ ವೃಕ್ಷಚ್ಛಾಯಾಸುಖಂ ಶಿವೇ ।
ತ್ರಿವಿಷ್ಟಪೇ ನ ವೈಕುಂಠೇ ಸತ್ಯಲೋಕೇಪಿ ತಾದೃಶಂ ॥೪೦॥

---

ತುಂಬಿವೆ. ನೋಡು ಪ್ರಿಯಳೇ, ನವಿಲುಗಳ ನಾಟ್ಯದಿಂದ, ಗುಬ್ಬಚ್ಚಿಗಳ ಚಿಲಿಪಿಲಿ ಶಬ್ದದಿಂದ ತುಂಬಿರುವ ಆ ಶಿಖರವನ್ನು ನೋಡು. ಹಾಗೂ ಇತ್ತಕಡೆಯ ಶಿಖರದಲ್ಲಿ ಕಾಲಕಂಟಕ ಮತ್ತು ಸಾರಸಪಕ್ಷಿಗಳು ಅವ್ಯಕ್ತ ಮಧುರವಾಗಿ ಶಬ್ದಮಾಡುತ್ತಿವೆ. ನೋಡು. ॥೩೫-೩೬॥

ಎಲೌ ಪ್ರಾಣೇಶ್ವರಿಯೇ, ಕೋಗಿಲೆಯ "ಕೂ ಕೂ" ಗಾನ, ಗಿಳಿಯ ಇಂಪಾದ ಕೂಗು, ಜಿಂಕೆಯ ಧ್ವನಿ ಇವುಗಳಿಂದ ತುಂಬಿ, ಗುಹೆಗಳಿಂದ ಕಂಗೊಳಿಸುವ ಪರ್ವತಶಿಖರವು ಎಷ್ಟು ಚೆನ್ನಾಗಿದೆ ನೋಡು. ಈ ಕಡೆಯ ಶಿಖರದಲ್ಲಿ, ತಿಳಿಯಾದ ನೀರು ತುಂಬಿದ ರಮಣೀಯವಾದ ಸರೋವರಗಳು ಅನೇಕವಾಗಿವೆ. ಅವುಗಳ ಮಧ್ಯಗಳಲ್ಲಿ ಕೆಂದಾವರೆ, ಕಮಲ, ಸೌಗಂಧಿಕ, ಅರಳಿದ ನೈದಿಲೆ ಇಂತಹ ಕಮಲ ಜಾತಿಯ ಹೂಗಳು ತುಂಬಿ ತುಳುಕುತ್ತಿವೆ. ಅವುಗಳ ಮೇಲೆ ಬೀಸಿ ಕಮಲಗಳ ಪರಿಮಳಗಳನ್ನು ಧರಿಸಿದ ಮಂದಮಾರುತವು ತೀರಪ್ರದೇಶಗಳಲ್ಲಿ ಬೀಸುತ್ತಿರುವುದು. ॥೩೭-೩೮-೩೯॥

ಎಲೌ ಪಾರ್ವತಿ, ಈ ಸರೋವರಪ್ರಾಂತದಲ್ಲಿರುವ ಮರಳು ರತ್ನಮಯವಾಗಿದೆ. ಇಂತಹ ಮರಳಿನ ಮೇಲೆ ವೃಕ್ಷಗಳ ಸೊಂಪಾದ ನೆರಳಿನಿಂದ ಉಂಟಾಗುವ

ಕ್ಷಣಮಾತ್ರೇ ಮಣಿದ್ವೀಪಸರಸ್ತೀರ[1]ನಿವಾಸಿನೀಂ ।
ರಮ್ಯಸೋಪಾನಪಂಙ್ಕ್ತಿಭಿಃ ಮಣಿಮಂಟಪಪಂಙ್ಕ್ತಿಭಿಃ ॥೪೧॥

ಪರ್ಯಂತವಲ್ಲೀಲೋಲಾಚ್ಛಪುಷ್ಪಗುಚ್ಛವಿರಾಜಿತಃ ।
ತಿರ್ಯಗ್ರತ್ನಮಹಾಭಾಗವಲಭೀವಲಯೈರಪಿ ॥೪೨॥

ತತ್ರತ್ಯಗೋಪುರಾಪಾರಪ್ರಾಕಾರೈರ್ವಿತತಾಂಬರೈಃ ।
ತತ್ರಾಖಂಡಮಣಿಸ್ತಂಭತೋರಣೋದ್ಯತ್ಪ್ರಭಾರಸೈಃ ॥೪೩॥

ತತ್ರೈವ ಪಶ್ಯ ಶಿಖರಂ ಮಣಿದ್ವೀಪೇಶ್ವರಸ್ಯ ಚ ।
ದ್ರಾಕ್ಷೈಲಾಪಿಪ್ಪಲೀಮಲ್ಲೀಮುಲ್ಲೀಕುಂದಾಚ್ಛವಲ್ಲಿಭಿಃ ॥೪೪॥

---

ಆನಂದಾನುಭವವು ಸ್ವರ್ಗಲೋಕದಲ್ಲಿಯಾಗಲೀ, ವೈಕುಂಠದಲ್ಲಿಯಾಗಲೀ, ಸತ್ಯಲೋಕದಲ್ಲಿಯಾಗಲೀ ಸಿಗಲಾರದು. ॥೪೦॥

ಎಲೌ ಪ್ರಾಣಪ್ರಿಯೇ, ಕೊಂಚಕಾಲ ಈ ಕಡೆ ನೋಡು. ಈ ಮಣಿದ್ವೀಪದ ಸರಸ್ತೀರಗಳಲ್ಲಿ ಸಾಲುಸಾಲಾಗಿರುವ ಮೆಟ್ಟಲುಗಳೂ, ಸಾಲುಸಾಲಾಗಿ ಮಣಿಖಚಿತಗಳಾದ ಮಂಟಪಗಳೂ ಹೇಗೆ ಶೋಭಿಸುತ್ತಿವೆ. ನೋಡು ! ಸುತ್ತಲೂ ಹಬ್ಬಿರುವ ಬಳ್ಳಿಗಳ ತುಂಬಾ ಮುಚ್ಚಿರುವ ಸ್ವಚ್ಛ ಹೂಗೊಂಚಲುಗಳು ಎಂತಹ ಆನಂದವನ್ನುಂಟುಮಾಡುವುವು ! ಕಾಂತೆಯೇ, ಇಲ್ಲಿ ವಾಸಿಸುವವರ ಮನೆಯ ಮೇಲ್ಛಾವಣಿಗಳೂ ಕೂಡ ರತ್ನಖಚಿತಗಳಾಗಿಯೇ ಇವೆ. ॥೪೧-೪೨॥

ಎಲೌ ಉಮೆಯೇ, ಇಲ್ಲಿನ ಹೆಬ್ಬಾಗಿಲುಗಳೂ, ಕೋಟೆಗಳೂ ಕೂಡ ಆಕಾಶವನ್ನು ಚುಂಬಿಸುವುವು. ಮತ್ತು ಅಖಂಡವಾದ ರತ್ನಮಯಕಂಬವೂ, ಹೊರಬಾಗಿಲೂ ಕೂಡ ವಿವಿಧ ಪ್ರಭೆಗಳಿಂದ ಹೊಳೆಯುತ್ತಿದೆ. ಇಗೋ ಇದೇ ಮಣಿದ್ವೀಪೇಶ್ವರನ ಗುಡಿಯ ಶಿಖರ. ಈ ಶಿಖರವಾದರೋ ದ್ರಾಕ್ಷಿ, ಏಲಕ್ಕಿ, ಹಿಪ್ಪಲಿ, ಮಲ್ಲಿಗೆ, ಮುಲ್ಲಿ, ಕುಂದ ಮೊದಲಾದ ಬಳ್ಳಿಗಳಿಂದ ತುಂಬಿ ನೋಡಲು ರಮಣೀಯವಾಗಿ ಕಾಣುತ್ತಿರುವುದು. ॥೪೩-೪೪॥

---

1 ನಿವಾಸಿನಾಂ ಇತಿ ಪಾಠಃ—ಸಾಧುಃ

ಚಂದ್ರಿಕಾರತ್ನಿಕಾಪೀತಿಸಾಯಂರಾಗಾಚ್ಛಗುಲ್ಮಕೈಃ ।
ರತ್ನವಲ್ಯೋ ರತ್ನಕಾಂಡಾಃ ರತ್ನಪುಷ್ಪಫಲಾವೃತಾಃ ॥೪೫॥

ಗಿರಿಮೌಲಿಸ್ಥಿತಂ ಲಿಂಗಂ ಪಶ್ಯ ದಿವ್ಯಮಿದಂ ಶಿವೇ ।
ರಮ್ಯೋತ್ತಮಮಣಿಸ್ವಚ್ಛಭೂಧರಾಕಾರಗೋಪುರಂ ॥೪೬॥

ತತ್ರಾಂತರ್ಗೃಹಮಧ್ಯಸ್ಥಂ ಮಂಟಪೋಜ್ಜ್ವಲಕಾಂತಿಭಿಃ ।
ನಾನಾಸಹಸ್ರಸ್ತಂಭೋತ್ಥಮಂಟಪಾವಲಿಭಾಸುರಂ ॥೪೭॥

ರುದ್ರಾವತಾರಚರಿತಂ ವೃಷಗೋಪುರಕುಂಭಕಂ ।
ಪ್ರಾಕಾರವರಸಂಯುಕ್ತಂ ಮಣಿಮಾಣಿಕ್ಯಭೂಷಿತಂ ॥೪೮॥

ನಾನಾವೃಕ್ಷಗಣೋದ್ಭಾಸಿ ಭಾಸಿತಾಮಲದಿಕ್ತಟಂ ।
ಹರಿನ್ಮಣಿನಿಭಂ ಕ್ವಾಪಿ ಹೀರಸಾರೈಕಭಾಸುರಂ ॥೪೯॥

---

ಎಲೌ ಗಿರಿಜೆಯೇ, ಈ ಶಿಖರದಲ್ಲಿರುವ ಪೊದೆಗಳು ರತ್ನಖಚಿತಗಳಾಗಿವೆ. ಅವುಗಳ ಮೇಲೆ ಬಿದ್ದಿರುವ ಬೆಳದಿಂಗಳು ಸಾಯಂಕಾಲದ ಹೊಂಬಣ್ಣದ ಹೋಲಿಕೆ ಹೊಂದಿರುವುದನ್ನು ನೋಡು. ಹಾಗೂ ಅಲ್ಲಿನ ರತ್ನಬಳ್ಳಿಗಳ ದಂಟು, ಹೂ, ಹಣ್ಣುಗಳೂ ಕೂಡ ರತ್ನಮಯಗಳಾಗಿಯೇ ಇವೆ. ಇಂತಹ ಬಳ್ಳಿಗಳಿಂದ ಆ ಶಿಖರವು ರಂಜಿಸುತ್ತಿರುವುದು. ಇಂತಹ ಈ ಪರ್ವತಶಿಖರ ಮಧ್ಯದಲ್ಲಿರುವ ದಿವ್ಯವಾದ ಈ ಲಿಂಗವನ್ನು ನೋಡು. ॥೪೫-೪೬॥

ಪ್ರಿಯೇ! ಈ ಶಿಖರದಲ್ಲಿ ರಮಣೀಯವಾಗಿ ಬೆಟ್ಟದಾಕಾರದಂತಿರುವ ಮಣಿಸ್ವಚ್ಛವಾದ ಒಂದು ಹೆಬ್ಬಾಗಿಲಿದೆ. ಅಲ್ಲಿಯೇ ಒಂದು ಗರ್ಭಗೃಹವು ಕಾಣುತ್ತಿರುವುದು ನೋಡು. ಅಲ್ಲಿ ಸಾವಿರ ರತ್ನಸ್ತಂಬಗಳಿಂದ ಕೂಡಿದ ಮನೋಹರವಾದ ಒಂದು ಮಂಟಪವಿದೆ. ಆ ಮಂಟಪದಲ್ಲಿ ರುದ್ರನ ಅವತಾರಗಳನ್ನು ತಿಳಿಸುವ ಚಿತ್ರಗಳಿವೆ. ಬಸವನ ವಿಗ್ರಹಗಳಿಂದ ತುಂಬಿದ ಗೋಪುರವೂ, ಕಲಶವೂ ಅಲ್ಲಿ ವಿರಾಜಿಸುತ್ತಿರುವುದು. ಮತ್ತು ಅದು ಉತ್ತಮವಾದ ಕೋಟೆಕೊತ್ತಳಗಳಿಂದ ತುಂಬಿದೆ. ರತ್ನಮಾಣಿಕ್ಯರಾಶಿಯಿಂದ ಆವೃತವಾಗಿದೆ. ॥೪೭-೪೮॥

ಪ್ರಾಣನಾಥೆ! ಇಗೋ ನೋಡು! ಆ ಶಿಖರದ ಸುತ್ತಲೂ ಅನೇಕ ವೃಕ್ಷರಾಶಿಗಳು ದಿಕ್ಕುಗಳನ್ನು ಬೆಳಗಿಸುತ್ತಿವೆ. ದಿಕ್ಕುಗಳೆಲ್ಲಾ ಆ ವೃಕ್ಷಸಮೂಹಗಳಿಂದ

ಇಂದ್ರನೀಲಕಗೋಮೇದಪುಷ್ಪರಾಗವಿದೂರಕೈಃ ।
ಪ್ರವಾಲಪದ್ಮರಾಗೋತ್ಥಕುರುವಿಂದಮಣಿಪ್ರಭಂ ॥೫೦॥

ನಾನಾಕಾರಮಿದಂ ಭಾತಿ ಕಾಂತಿಕಾಂಚಿತಪರ್ವತಂ ।
ಅತ್ರ ಲಿಂಗಮಿದಂ ಪಶ್ಯ ರತ್ನಗರ್ಭಗೃಹಾಂತರೇ ॥೫೧॥

ಲಿಂಗಂ ಭುಜಂಗಾಭರಣಂ ಬಿಲ್ವಪಲ್ಲವಪೂಜಿತಂ ।
ಆಲೇಪಿತಾಪೀಠತಲಂ ಕರ್ಪೂರವರಚಂದನೈಃ ॥೫೨॥

ಧೂಪಿತಂ ತಗರಾಮೋದೈರ್ಮಣಿದ್ವೀಪೋದ್ಯತಂ ಸದಾ ।
ಸ್ನಾಪಿತಂ ತನ್ಮಹೇಶಾನಿ ಸುಧಾಸಾಗರವಾರಿಭಿಃ ॥೫೩॥

ಲಿಂಗಸ್ಯಾಶ್ರಯಣಾದೇವ ದ್ವೀಪೋಽಯಂ ಪಾವನೋ ಮತಃ ।
ಏಹಿ ಪಶ್ಯಾವ ತಲ್ಲಿಂಗಂ ಪೂಜಯಾವ ಚ ಶೈಲಜೇ ॥೫೪॥

ಇತ್ಯುಕ್ತ್ವಾ ಗಿರಿಜೋತ್ಫುಲ್ಲಪಂಕಜಾಮಲಸುಂದರಂ ।
ಹಸ್ತಮಾಲಂಬ್ಯ ಭಗವಾನ್ ಪಶ್ಯನ್ ರತ್ನಗಿರಿಂ ಶಿವಾಂ ॥೫೫॥

---

ಸ್ವಚ್ಛವಾಗಿ ಕಾಣುವುವು. ಎಲ್ಲೆಲ್ಲಿಯೂ ನೀಲಮಣಿ, ಗೋಮೇದ, ಪುಷ್ಯರಾಗ, ವಿದೂರಕ, ಹವಳ, ಪದ್ಮರಾಗ, ಕುರುವಿಂದ ಮೊದಲಾದ ರತ್ನಜಾತಿಗಳ ಕಾಂತಿಗಳಿಂದ ಕಂಗೊಳಿಸುವ ಈ ಪರ್ವತಶಿಖರವನ್ನು ನೋಡು. ||೪೯-೫೦||

ಭಾಮಿನಿಯೇ! ಈ ಶಿಖರವು ಅನೇಕ ಆಕಾರಗಳಿಂದ ಬಹಳ ಮನೋಹರವಾಗಿದೆ. ಇಲ್ಲಿರುವ ರತ್ನಮಯವಾದ ಅಂತರ್ಗೃಹದಲ್ಲಿ ಶೋಭಿಸುತ್ತಿರುವ ಈ ಲಿಂಗವನ್ನು ನೋಡು. ಇದು ನಾಗಾಭರಣದಿಂದಲೂ ಬಿಲ್ವಚಿಗುರುಗಳಿಂದಲೂ, ಅಲಂಕೃತವಾಗಿದೆ. ಕರ್ಪೂರ, ಚಂದನ ಇವುಗಳನ್ನು ಪೀಠದವರೆಗೂ ಲೇಪಿಸಿರುವ ಈ ಲಿಂಗವನ್ನು ನೋಡು. ||೫೧-೫೨||

ಮಹೇಶ್ವರಿ! ಯಾವಾಗಲೂ ಮಣಿದ್ವೀಪದಲ್ಲಿ ಪ್ರಕಾಶಿಸುತ್ತಿರುವ ಈ ಲಿಂಗಕ್ಕೆ ತಗರುಧೂಪವನ್ನು ಹಾಕಿದ್ದಾರೆ. ಸುಧಾಸಮುದ್ರದ ಜಲದಿಂದಲೇ ಅಭಿಷೇಕ ಮಾಡಿದ್ದಾರೆ. ಈ ಲಿಂಗದ ಆಶ್ರಯಮಾತ್ರದಿಂದಲೇ ಮಣಿದ್ವೀಪವಾದ

ಪ್ರದರ್ಶಯನ್ ಪರಾಂ ಪ್ರೀತಿಂ ಜಗಾಮ ಶಶಿಶೇಖರಃ ॥೫೬॥

ಪಶ್ಯೇಂದ್ರನೀಲಮಣಿಕಲ್ಪಿತಚಾರುಶುಂಡಾ
ದಂಡಾವಿರಾಜಿತಗಜಾಃ ಪರಿತೋ ಭ್ರಮಂತಿ ।
ಆಲೂನಶಾಖಿವರಮುಕ್ತಭುಜಾಭಿರಾಮಾ
ರಮ್ಯೇ ಗಿರೌ ಕರಿವರಾಃ ಕರಿಣೀಯುತಾಶ್ಚ ॥೫೭॥

ಉತ್ಪುಚ್ಛಚಾಮರಮಿದಂ ಮೃಗಯೂಥಮೇತತ್
ಉಡ್ಡೀನಮೇಣಿಕುಲಪೋತಮುಖಾಭಿರಾಮಂ ।
ದೂರ್ವಾಂಕುರೋದ್ಧೃತಮುಖಂ ಪರಿಪಶ್ಯತೀದಂ
ಶಾರ್ದೂಲರಾವಘನಭೀತಿಯುತಂ ಗಿರೀಂದ್ರೇ ॥೫೮॥

---

ಇದು ಪವಿತ್ರವೆನಿಸಿದೆ. ಗಿರಿಜೆಯೇ, ನಾವಿಬ್ಬರೂ ಹೋಗಿ ಅದನ್ನು ಈಗ ಪೂಜೆ ಮಾಡೋಣ ಎಂದು ಹೇಳುತ್ತಾ ಪೂಜ್ಯನಾದ ಪರಮೇಶ್ವರನು ಅರಳಿದ ತಾವರೆ ಹೂವಿನಂತೆ ಸುಂದರವಾದ ಗಿರಿಜೆಯ ಕೈಯನ್ನು ಹಿಡಿದುಕೊಂಡು ಆಕೆಗೆ ಆ ಗಿರಿಯನ್ನು ತೋರಿಸುತ್ತಾ ಮುಂದುವರಿದನು. ॥೫೩-೫೪-೫೫-೫೬॥

ಪ್ರಿಯೆ, ಇಲ್ಲಿ ನೋಡು. ಇಂದ್ರನೀಲಮಣಿಯಿಂದ ಅಲಂಕೃತವಾದ ಸೊಂಡಿಲುಳ್ಳ ಆನೆಗಳು ಸುತ್ತಲೂ ಸುತ್ತುತ್ತಿವೆ. ಮತ್ತು ಈ ಮನೋಹರವಾದ ಪರ್ವತದಲ್ಲಿ ಸೊಂಡಲಿನಿಂದ ಮುರಿದ ಮರದ ಕೊಂಬೆಗಳನ್ನು ಹೊತ್ತುಕೊಂಡು ಗಂಡಾನೆಗಳು ಹೆಣ್ಣಾನೆಗಳೊಂದಿಗೆ ಎಲ್ಲೆಲ್ಲಿಯೂ ಅಡ್ಡಾಡುತ್ತಿರುವುವು. ಇದು ಎಷ್ಟು ಮುದ್ದಾಗಿದೆ! ॥೫೭॥

ಈ ಬೆಟ್ಟದಲ್ಲಿ ಜಿಂಕೆಗಳ ಗುಂಪು ಚಾಮರದಂತಿರುವ ತಮ್ಮ ಬಾಲವನ್ನು ಮೇಲಕ್ಕೆ ಎತ್ತಿಕೊಂಡು ಹೇಗೆ ನೆಗೆಯುತ್ತಿವೆ! ಗುಂಪುಗಳ ಮಧ್ಯೆ ಹಾರಿ ಹಾರಿ ಹೋಗುತ್ತಿರುವ ಚಿಕ್ಕ ಚಿಕ್ಕ ಜಿಂಕೆ ಮರಿಗಳ ಮುಖಗಳು ಎಷ್ಟು ಅಂದವಾಗಿವೆ! ಪ್ರಿಯಳೇ, ಗರಿಕೆಯನ್ನು ಬಾಯಿಂದ ಕಚ್ಚಿಕೊಂಡಿರುವ ಈ ಮೃಗಸಮೂಹವು ಭಯಂಕರವಾದ ಹುಲಿಗಳ ಕೂಗನ್ನು ಕೇಳಿದೊಡನೆ ಹೆದರಿ ಈ ಕಡೆಯೇ ನೋಡುತ್ತಿದೆ. ॥೫೮॥

ನೃತ್ಯಂತಿ ರತ್ನಗಿರಿಮೌಲಿಕಲಾಕಲಾಪಿಜಾಲೈಕ
ಪಕ್ಷಹತಿನೃತ್ತಶಿಖಂಡಿಸಂಘೈಃ ।
ಕೋಕಾಃ ಕಪೋತಕಕುಲಂ ಮಣಿಪಾದಪಾಶೇ
ಪುಂಸ್ಕೋಕಿಲಾಕುಲಮಿದಂ ವರಹಂಸಜಾಲಂ ॥೫೯॥

ಗವಾಂ ಗಣಂ ಪಶ್ಯ ನಗೇಂದ್ರಮೌಲೌ
ಸ್ನೋಧೋಭರೇಣ ಮಹತಾ ಪಯಸೋರುಧಾರಂ ।
ವತ್ಸಾನುಗಂ ಗಿರಿತಟೇ ತೃಣತೃಪ್ತಪಾಶೇ
ಧಾವದ್ಗಜೇಂದ್ರಹರಿಣೀ ಪರಿಧಾವತೀದಂ ॥೬೦॥

ಸಿಂಹಾರವೋದ್ಬೋಧಿತಸಿಂಧುರೇಂದ್ರಾ
ಧಾವತ್ಕುರಂಗನಿಕರೈರ್ವನವಾತಪೋತೈಃ ।
ಉತ್ಪುಚ್ಛಚಾಮರಸುಖಡ್ಗಲುಲಾಯಶೃಂಗ
ಲೀಲಾಚ್ಛಟಾರವವಿಭಿನ್ನಗುಹಾದಿವಕ್ತ್ರಂ ॥೬೧॥

---

ಈ ರತ್ನಗಿರಿಯಲ್ಲಿ ಚಂದವಾದ ಗರಿಗಳುಳ್ಳ ನವಿಲಿನ ಗುಂಪು ಅನ್ಯೋನ್ಯವಾಗಿ ರಕ್ಕೆಗಳಿಂದ ಹೊಡೆಯುತ್ತಾ ಕುಣಿಯುತ್ತಿವೆ. ಹಾಗೆಯೇ ಚಕ್ರವಾಕ, ಪಾರಿವಾಳ, ಪುಂಸ್ಕೋಗಿಲೆ, ಒಳ್ಳೆಯ ರಾಜಹಂಸ ಇವುಗಳ ತಂಡವು ಸಂತೋಷದಿಂದ ಕುಣಿಯುತ್ತಿದೆ. ॥೫೯॥

ಈ ಬೆಟ್ಟದಲ್ಲಿ ಗೋಸಮೂಹವು ಹುಲ್ಲನ್ನು ತೃಪ್ತಿಯಾಗುವಷ್ಟು ತಿಂದು ತಮ್ಮ ಕರುಗಳ ಸ್ಮರಣೆಯಿಂದಲೇ ಕೆಚ್ಚಲು ತುಂಬಾ ತುಂಬಿ ಉಕ್ಕುವ ಹಾಲಿನ ಧಾರೆಗಳನ್ನು ಸುರಿಸುತ್ತಾ, ಕರುಗಳನ್ನು ನೆನೆದು ಹೇಗೆ ಓಡುತ್ತಿರುವುದು ! ಆಹಾ ! ಆನೆಗಳೂ, ಜಿಂಕೆಗಳೂ ಈ ಕಡೆಯೇ ಓಡುತ್ತಿವೆಯಲ್ಲಾ ! ॥೬೦॥

ಆಹಾ ! ಅಲ್ಲಿ ಸಿಂಹಗಳ ಗರ್ಜನೆಯನ್ನು ಕೇಳಿ ಹೆದರಿ ಎಚ್ಚೆತ್ತ ಆನೆಗಳು ಒಮ್ಮೆಲೆ ಓಡಿಹೋಗುತ್ತಿವೆ. ಹಾಗೆಯೇ ಆ ಸಿಂಹಗರ್ಜನೆಗೆ ಹೆದರಿದ ಜಿಂಕೆಯ ಚಿಕ್ಕಮರಿಗಳು ಅರಣ್ಯದಲ್ಲಿಯ ಗಾಳಿಯ ಮರಿಗಳೆನ್ನುವ ಹಾಗೆ ಹಾರುತ್ತಿವೆ. ಇಲ್ಲಿ ಬಾಲಗಳನ್ನು ಮೇಲಕ್ಕೆ ಎತ್ತಿಕೊಂಡು ಅರಚುವ ಖಡ್ಗಮೃಗ, ಕಾಡುಕೋಣ, ಶೃಂಗಮೃಗ ಇವುಗಳ ಗರ್ಜನೆಗಳಿಂದ ಗುಹೆಗಳ ಬಾಗಿಲುಗಳು ಬಿರಿಯುವ ಹಾಗೆ ತೋರುವುದು. ॥೬೧॥

ಕಸ್ತೂರೀಮೃಗನಾಭಿಘರ್ಷಣಮಹಾವೃಕ್ಷಾದಿಗಂಧಾಯಿತಂ
ರಮ್ಯೋದ್ಭಾಮಸುಪುಣ್ಯಶೇಖರತರೂದ್ಭಾಮೈಶ್ಚ ಸದ್ಗುಚ್ಛಕೈಃ ।
ಉತ್ಫುಲ್ಲೋತ್ತಮಕೇತಕೀಗತರಜೋಧೂಲೀಯುತೋ ವಾತಕಃ
ಪುಷ್ಣಾತ್ಯಂಗಮಿದಂ ಮದೀಯಮಗಜೇ ಪಶ್ಯಾಧುನಾ ಶೈಲಕಂ ॥೬೨॥

ಮುಸ್ತಾಮ್ರೇಡನಕೋಲದಂಷ್ಟ್ರವಿವೃತಾ ರತ್ನಾಚ್ಛಸ್ವಚ್ಛೋಪಲಾ
ಧಸ್ತಾದುತ್ಥಿತಸತ್ಫಣೀಂದ್ರಫಣಜೈ ರತ್ನೋಜ್ಜ್ವಲತ್ಕಾಂತಿಭಿಃ ।
ಯುಕ್ತಂ ಚಿತ್ರವಿಚಿತ್ರರತ್ನಜಮಹಾಸಾರೋಪಲಂ ಸುಂದರಂ
ರತ್ನಾದ್ರಿಂ ಪರಿಪಶ್ಯ ದೇವಿ ಸುಭಗೇ ಸಂಪೂಜಯಾವೋ ಹರಂ ॥೬೩॥

---

ಎಲೌ ಪಾರ್ವತಿ! ಇಲ್ಲಿ ಕಸ್ತೂರೀಮೃಗಗಳು ಮೈ ತಿಕ್ಕುವಾಗ ಅಂಟಿರುವ ಕಸ್ತೂರಿಯಿಂದ ಈ ವೃಕ್ಷಗಳೆಲ್ಲಾ ಪರಿಮಳವನ್ನು ಕೊಡುತ್ತಿವೆ. ಹಾಗೂ ಈ ಮರಗಳಲ್ಲಿ ಸುಂದರವೂ ಪವಿತ್ರವೂ ಆದ ಅತ್ಯುತ್ತಮ ಹೂಗೊಂಚಲುಗಳು ಮನೋಹರಗಳಾಗಿವೆ. ಆಹಾ! ಚೆನ್ನಾಗಿ ಅರಳಿರುವ ಕೇದಿಗೆ ಹೂಗಳ ಮೇಲೆ ಬೀಸಿ, ಅವುಗಳ ಪರಿಮಳವಾದ ಧೂಳನ್ನು ಹೊತ್ತು ತರುತ್ತಿರುವ ಈ ಸುಳಿಗಾಳಿಯು, ನನ್ನ ಅವಯವಕ್ಕೆ ಎಷ್ಟೊಂದು ಹಿತಕರವಾಗಿದೆ! ಇಂತಹ ಈ ಪರ್ವತವನ್ನು ಸಂತೋಷದಿಂದ ನೋಡು. ॥೬೨॥

ರತ್ನಮಯವಾದ ಈ ಪರ್ವತದಲ್ಲಿ ಕಾಡುಹಂದಿಗಳು ಪುನಃ ಪುನಃ ತಮ್ಮ ಕೋರೆದಾಡೆಗಳಿಂದ ಭದ್ರಮುಸ್ತಾಗೆಡ್ಡೆಗಳನ್ನು ಎಳೆದು ತಿಂದಿರುತ್ತವೆ. ಇಂತಹ ಮುಸ್ತಾಪ್ರಹಾರದಿಂದ ಪೊದರುಬಿಟ್ಟ ರತ್ನಶಿಲೆಗಳ ಸಂದುಗಳಿಂದ ಒಳ್ಳೇ ಜಾತಿಯ ಹಾವುಗಳು ಹೊರಕ್ಕೆ ಹೊರಟಿರುತ್ತವೆ. ಈ ಹಾವುಗಳ ಫಣಾರತ್ನಗಳ ಕಾಂತಿಗಳಿಂದ ಆ ಬಂಡೆಗಳು ಬಹಳ ಮನೋಹರವಾಗಿವೆ. ಮತ್ತು ಅನೇಕ ಬಣ್ಣಬಣ್ಣಗಳಿಂದ ಕೂಡಿದ ವಿಚಿತ್ರವಾದ ರತ್ನಶಿಲೆಗಳು ಇಲ್ಲಿ ತುಂಬಿರುವಂತೆ ಕಾಣುತ್ತಿವೆ. ಹೀಗೆ ಈ ರತ್ನಾದ್ರಿಯು ನೋಡಲು ಬಹು ಸೊಗಸಾಗಿದೆ. ಪ್ರಿಯೇ! ಬಾ! ನಾವೀರ್ವರೂ ಹೋಗಿ ಈ ಪರ್ವತದಲ್ಲಿರುವ ಪರಶಿವನನ್ನು ಪೂಜಿಸೋಣ. ॥೬೩॥

॥ ಸ್ಕಂದ ಉವಾಚ ॥

ಇತ್ಥಂಬಾಕರಪಂಕಜೇ ಸ್ವಕರಜಾಂಗುಷ್ಠೇನ ತುಷ್ಟಃ ಶಿವಃ
ದೃಷ್ಟ್ವಾ ಲಿಂಗಮಹೋ ದ್ವಿಜಾಃ ಕರತಲೈಃ ಸ್ಪೃಷ್ಟ್ವಾದ್ರಿಕನ್ಯಾಯುತಃ ।
ಸಂಸಿಚ್ಯಾಮಲಕುಂಭಸಂಭವಸುಧಾಧಾರಾಭಿರೇವೇಶ್ವರಃ
ಕ್ಷೀರಾಜ್ಯಾಮೃತಶರ್ಕರಾಮಧುರಸೈರ್ದಧ್ನಾ ಫಲಾನಾಂ ರಸೈಃ ॥೬೪॥

ಗಂಧಾಂಬುಪ್ರತಿವಾಸಿತೈಶ್ಚ ಕಲಶೈಃ ಸಂವೇಷ್ಟ್ಯ ವಾಸೋಭರೈ
ರಾಲಿಂಗ್ಯಾಮಲಗಂಧಸಾಂದ್ರಸರಸೈಃ ಪಾಟೀರಕರ್ಪೂರಜೈಃ ।
ಬಿಲ್ವೀಪಲ್ಲವಕೋಟಿಚಂಪಕಮಹಾಮಲ್ಲೀಭವೈಃ ಪಂಕಜೈಃ
ಮಂದಾರೈಃ ಕರವೀರಪದ್ಮಜಮಹಾಮಾಲಾದಿಭಿಶ್ಚಾಂಬಿಕಾ ॥೬೫॥

ಯುಕ್ತೈರ್ಧೂಪವಿಧೂಪನೈಸ್ತಗರಜೈರ್ದೀಪೈರ್ಮಣಿಪ್ರೋದ್ಯತೈಃ
ಅನ್ನಾನಾಂ ಪರಿಕಲ್ಪಿತೋತ್ತಮಮಹಾಸೂಪಾಜ್ಯಭಕ್ಷ್ಯೈರಪಿ ।

---

ಹೀಗೆ ಹೇಳುತ್ತಾ ಶಂಕರನು ಪಾರ್ವತಿಯ ಹಸ್ತಕಮಲವನ್ನು ತನ್ನ ಅಂಗುಷ್ಠದಿಂದ ಹಿಡಿದುಕೊಂಡು ಸುತ್ತುತ್ತಾ, ಪರಶಿವಲಿಂಗವನ್ನು ಕಂಡು ಸಂತೋಷದಿಂದ ಅದನ್ನು ಕೈಗಳಿಂದ ಮುಟ್ಟಿ, ಪಾರ್ವತಿಯೊಡಗೂಡಿ ಶುದ್ಧವಾದ ಕೊಡಗಳಲ್ಲಿರುವ ನೀರಿನಿಂದ ಆ ಶಿವಲಿಂಗಕ್ಕೆ ಅಭಿಷೇಕಮಾಡಿದನು. ಹಾಗೂ ಹಾಲು, ತುಪ್ಪ, ಸಕ್ಕರೆ, ಜೇನುತುಪ್ಪ, ಮೊಸರು, ಹಣ್ಣುಗಳರಸ ಇವೇ ಮೊದಲಾದ ಪಂಚಾಮೃತದ್ರವ್ಯಗಳಿಂದಲೂ ಅಭಿಷೇಕಮಾಡಿದನು. ॥೬೪॥

ಅನಂತರ ಪಾರ್ವತಿಯೂ ಸಹ ಕಲಶಗಳಲ್ಲಿ ತುಂಬಿರುವ ಪರಿಮಳಗಂಧೋದಕಗಳಿಂದ ಆ ಲಿಂಗವನ್ನು ಅಭಿಷೇಚಿಸಿ, ವಸ್ತ್ರಗಳನ್ನು ಉಡಿಸಿ, ಚಂದನ, ಕರ್ಪೂರ ಇವುಗಳನ್ನು ಮಿಶ್ರಮಾಡಿದ ಶ್ರೀಗಂಧವನ್ನು ಆ ಲಿಂಗಕ್ಕೆ ಲೇಪಿಸಿದಳು. ಆಮೇಲೆ ಬಿಲ್ವಪತ್ರೆಯ ಚಿಗುರು, ಕೋಟಿಸಂಖ್ಯೆಯ ಸಂಪಿಗೆ, ಮಹಾಮಲ್ಲಿಗೆ, ಕಮಲ, ಮಂದಾರ, ಕರವೀರ, ತಾವರೆ ಇವುಗಳಿಂದ ತಯಾರು ಮಾಡಿದ ಮಹಾಮಾಲಿಕೆಯಿಂದ ಶಿವಲಿಂಗವನ್ನು ಅಲಂಕರಿಸಿದಳು. ॥೬೫॥

ಆಮೇಲೆ ಈಶ್ವರನು ತಗರುಧೂಪವನ್ನು ಹಾಕಿ, ರತ್ನಮಯಗಳಾದ ದೀಪಗಳಿಂದ ನೀರಾಜಿಸಿದನು. ಹಾಗೂ ಅತ್ಯುತ್ತಮಗಳಾದ ತೊವ್ವೆ, ಭಕ್ಷ್ಯ, ಅನ್ನ,

ರಮ್ಯಾನೇಕಸುಗಂಧಿಶಾಕಫಲಜೈಸ್ತಾಂಬೂಲಲಾಜೈಃ ಶಿವಃ
ನೈವೇದ್ಯಾಮಲಪತ್ರಕೋಟಿವರಕೈರ್ದೀಪೈಃ ಸಹಸ್ರೋಜ್ವಲೈಃ ॥೬೬॥

ನೀರಾಜ್ಯಪ್ರಮಥಾದಿಸುಂದರಮಹಾವಾದ್ಯಾರವೈಃ ಶಂಕರ
ಸ್ಸ್ವಚ್ಛತ್ರಾಮಲಪಂಜ್ತಿಚಾಮರಗಣೈಃ ಪ್ರೋದ್ಯತ್ಪತಾಕಾಗಣೈಃ ।
ಆದರ್ಶೈಶ್ಚ ಶಿವಾಸಖೀಕೃತಮಹಾನಾಟ್ಯೈಸ್ತದಾಶಂಕರಃ ।
ಸಂಪೂಜ್ಯಾಮಲರತ್ನಸೌಧವಿಲಸದ್ರತ್ನಪ್ರಭಾಭಾಸುರಂ ॥೬೭॥

ದೃಷ್ಟ್ವಾ ಲಿಂಗಮುಮಾಯುತೋಽತ್ರ ಭಗವಾನಾಸ್ತೇ ಚ ಸಿಂಹಾಸನೇ
ತನ್ನೈವೇದ್ಯರಸಾನುಮೋದಿತಮನಾಶ್ಚಾನ್ಯಾನ್ ಗಣೇಶಾನ್ ಗೃಹಂ।
ವಿಘ್ನಾದ್ರಿಪ್ರಶಮಂ ಚ ಭೋಜಯದುಮಾಂ ಸ್ವಸ್ಯಾನುರಾಗಂ ಗಣಂ
ತನ್ನೈವೇದ್ಯಸುಧಾರಸೈರ್ಗಿರಿಜಯಾ ದತ್ತೈಶ್ಚ ತುಷ್ಟಾ ಗಣಾಃ ॥೬೮॥

---

ಅನೇಕ ಕಾಯಿಪಲ್ಯಗಳಿಂದ ತಯಾರಾದ ಅಡಿಗೆ, ತಾಂಬೂಲ, ಇವುಗಳನ್ನು ನೈವೇದ್ಯ ಮಾಡಿದನು. ಅನಂತರ ಸಹಸ್ರವರ್ತಿಗಳಿಂದ ಪ್ರಜ್ವಲಿಸುತ್ತಿರುವ ದಿವ್ಯದೀಪಗಳಿಂದ ನೀರಾಜನವನ್ನೂ ಮಾಡಿದನು. ॥೬೬॥

ಅನಂತರ ಶಿವನು ನಾನಾ ವಾದ್ಯಗಳನ್ನೂ, ಛತ್ರಿ, ಚಾಮರ, ಧ್ವಜ ಇವುಗಳನ್ನೂ ಮೇಲಕ್ಕೆ ಎತ್ತಿ ಹಿಡಿದಿರುವ ಪ್ರಮಥಗಣಗಳೊಂದಿಗೆ ಕೂಡಿದವನಾಗಿ, ಪಾರ್ವತೀ ಸಹಿತನಾಗಿ ನಾಟ್ಯವಾಡುತ್ತಾ, ರತ್ನಸೌಧದ ಮಧ್ಯೇ! ಮಣಿಕಾಂತಿ ಯಿಂದ ಥಳಥಳಿಸುವ ಲಿಂಗವನ್ನು ಪೂಜಿಸಿದನು. ॥೬೭॥

ಆ ಪರಮೇಶ್ವರನು ಲಿಂಗದರ್ಶನವನ್ನು ಮಾಡಿ, ಪಾರ್ವತಿಯೊಂದಿಗೆ ಈ ಸಿಂಹಾಸನದಲ್ಲಿ ಕುಳಿತುಕೊಂಡನು. ಆ ಮೇಲೆ ಆ ಲಿಂಗಕ್ಕೆ ನೈವೇದ್ಯಮಾಡಿದ ಭಕ್ಷ್ಯಭೋಜ್ಯಾದಿಗಳನ್ನು ತಾನು ಸವಿದು, ಸಂತೋಷಭರಿತನಾಗಿ ತನ್ನಲ್ಲಿ ಪ್ರೀತಿ ಯಿಂದಿರುವ ಪ್ರಮಥಾದಿಗಣಗಳನ್ನೂ, ಪಾರ್ವತಿಯನ್ನೂ ಊಟಮಾಡುವಂತೆ ಪ್ರೇರಿಸಿದನು. ಆಮೇಲೆ ಪಾರ್ವತಿಯು ಬಡಿಸಿದ ಆ ಶಿವಲಿಂಗದ ನೈವೇದ್ಯಾನ್ನ, ಭಕ್ಷ್ಯ ಮೊದಲಾದುವನ್ನು ಊಟಮಾಡಿ ಇತರ ಗಣಗಳೊಂದಿಗೆ ತಾನೂ ತೃಪ್ತ ನಾದನು. ॥೬೮॥

ವಿಘ್ನೇಶೋಽಪ್ಯಹಮಪ್ಯಥೇಶ್ವರಪದಧ್ಯಾನಾನುರಕ್ತೋಽಭವಮ್
ದೇವ್ಯಾ ಚಾಪಿ ಮಹೇಶ್ವರಸ್ತ್ರಿಜಗತಾಂ ನಾಥೋ ಮುದಾ ತತ್ರ ವೈ ।
ದ್ವೀಪೇಶಸ್ಯ ನಿಜಾಲಯೇ ಗಿರಿಜಯಾ ಭೋಗಾನ್ ಪ್ರಿಯಾನ್ ಭೋಜಿನಃ
ತತ್ಪ್ರಾಸಾದಮಹೋರುಸಾರಶಿಖರೇ ಮಂಚೇ ಪರಾರ್ಧ್ಯಾಸ್ತೃತೇ ॥೧೯॥

ಶಿಶ್ಯೇ ಶೈಲಸುತಾಸಹಾಯಸುಸಖೀಯುಕ್ತೋ ಗಣೇಂದ್ರೈರಪಿ
ಹ್ಯುದ್ಯತ್ಕಾಂತಿಮಣಿಪ್ರಭಾವಿನಿಹಿತಸ್ತೋಮೋ ತಮೋರಾಶಿನಾಂ ।
ಚಂದ್ರಾಸಾರಕರೈಶ್ಚ ಚಂದನಮಹಾಪುಷ್ಪೈಕಭೂಭಾಸುಖಂ ॥೨೦॥

ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಮಣಿದ್ವೀಪವರ್ಣನಂ
ನಾಮ ದ್ವಾದಶೋಽಧ್ಯಾಯಃ

---

ಅನಂತರ ಗಣಪತಿಯೂ, ನಾನೂ, (ಕುಮಾರಸ್ವಾಮಿ) ಈಶ್ವರನ ಪಾದ ಕಮಲಗಳನ್ನು ಧ್ಯಾನಿಸುತ್ತಾ ಆ ದ್ವೀಪದಲ್ಲಿ ನಿಂತೆವು. ಮೂರು ಲೋಕಗಳಿಗೂ ಒಡೆಯನಾದ ಆ ಪರಮೇಶ್ವರನು ಪಾರ್ವತೀದೇವಿಯೊಂದಿಗೆ ಸಂತೋಷದಿಂದ ಆ ಮಣಿದ್ವೀಪದಲ್ಲಿರುವ ತನ್ನ ದ್ವೀಪೇಶ್ವರ ದಿವ್ಯಭವನದಲ್ಲಿ ವಿವಿಧ ಸುಖಗಳನ್ನು ಅನುಭವಿಸುತ್ತಾ ಆ ದೊಡ್ಡ ಶಿವಾಲಯದ ಮೇಲ್ಭಾಗದ ಉಪ್ಪರಿಗೆಯಲ್ಲಿ ದಿವ್ಯವಾದ ಆಸ್ತರಣವನ್ನು ಹಾಸಿದ ಮಂಚದಲ್ಲಿ ಕುಳಿತನು. ॥೧೯॥

ಗಿರಿಜೆಯೂ ತನ್ನ ಪ್ರಿಯ ಗೆಳತಿಯರೊಂದಿಗೆ ಆ ಮಣಿದ್ವೀಪದಲ್ಲಿ ತಂಗಿದಳು. ಪ್ರಮಥಾಧಿಗಣಗಳೂ ಸಹ ಆ ಸ್ಥಳದಲ್ಲಿಯೇ ನಿಂತವರಾದರು. ಆ ಮಣಿದ್ವೀಪವು ಕಾಂತಿಗಳನ್ನು ಚಿಮ್ಮುವ ಅಮೋಘರತ್ನಪ್ರಭೆಗಳಿಂದ ಕತ್ತಲೆರಾಶಿಗಳನ್ನೆಲ್ಲಾ ಓಡಿಸುತ್ತಿತ್ತು. ಮತ್ತು ಅಲ್ಲಿ ಎಲ್ಲಾ ಕಡೆಗಳಲ್ಲಿಯೂ ಚಂದನವೃಕ್ಷಗಳು ಹೂತುಂಬಿ ಚೆನ್ನಾಗಿ ಕಾಣುತ್ತಿದ್ದುವು. ಹಾಗೆಯೇ ಎಲ್ಲೆಲ್ಲಿಯೂ ಬೆಳದಿಂಗಳು ಉಕ್ಕಿ ಹರಿಯುವ ಹಾಗಿತ್ತು. ಇಂತಹ ದಿವ್ಯದ್ವೀಪದಲ್ಲಿ ಶಂಕರನು ಪರಿವಾರದೊಡನೆ ಸ್ಥಿರವಾಗಿ ನೆಲಸಿದನು. ॥೨೦॥

ಇಲ್ಲಿಗೆ ಶ್ರೀಶಿವರಹಸ್ಯದ ಎರಡನೆಯ ಅಂಶದಲ್ಲಿ ಮಣಿದ್ವೀಪವರ್ಣನೆಯೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ತ್ರಯೋದಶೋಽಧ್ಯಾಯಃ

### ಮಣಿದ್ವೀಪವರ್ಣನಂ

॥ ಈಶ್ವರ ಉವಾಚ ॥

ಪಶ್ಯ ದೇವದ್ರುಮಾಪಾರವನವಾಟೀಂ ಮಹೇಶ್ವರಿ ।
ವಿಕಚತ್ಪುಷ್ಪಶಬಲಂ ಬಾಲಾದಿತ್ಯಸಮಪ್ರಭಂ ॥೧॥

ಪ್ರವಾಲಮಾಲಾವಿತತಂ ಮಣಿಸುಂದರವೇದಿಕಂ ।
ಸನ್ನದ್ಧಕೈಃ ಸಮುತ್ಫುಲ್ಲೈ ರತ್ನೋದ್ಯತ್ಕಾಂತಿಸುಂದರೈಃ ॥೨॥

ಫಲಭಾರಾವೃತಾಪಾರರಮ್ಯದೇವದ್ರುಮೈರ್ಯುತಂ ।
ಸೌಂದರ್ಯಧಾರಾಸರ್ವಸ್ವಕುಸುಮಾಮೋದಮೋದಿತಂ ॥೩॥

---

ಶ್ರೀಶಿವರಹಸ್ಯದ ದ್ವಿತೀಯಾಂಶವಲ್ಲಿ ಹದಿಮೂರನೆಯ ಅಧ್ಯಾಯ

ಎಲೌ ಪ್ರಿಯೇ, ಮಹೇಶ್ವರಿ, ಈ ದ್ವೀಪದಲ್ಲಿಯ ಉದ್ಯಾನವನ್ನು ನೋಡು. ಎಷ್ಟು ಚೆನ್ನಾಗಿದೆ! ಅರಳಿದ ಹೂಗಳಿಂದ ಉದ್ಯಾನವೆಲ್ಲಾ ಚಿತ್ರವಿಚಿತ್ರವಾಗಿ ಕಾಣುತ್ತಿರುವುದು. ಬಾಲಸೂರ್ಯನಂತೆ ಕೆಂಪಾದ ಕಾಂತಿಯಿಂದ ಇದು ಕಂಗೊಳಿಸುತ್ತಿದೆ. ಸಾಲುಸಾಲಾಗಿ ಹವಳಲತೆಗಳು ಹಬ್ಬಿವೆ. ರತ್ನಖಚಿತವಾದ ಇಲ್ಲಿನ ಜಗಲಿಯು ಎಷ್ಟು ಮಂಜುಳವಾಗಿದೆ! ಆಹಾ! ಚೆನ್ನಾಗಿ ಅರಳಿದ ಹೂಗಳಿಂದ ಈ ಸಂನದ್ಧಕ ಲತೆಗಳು ರತ್ನಕಾಂತಿಗಳಂತೆ ಸುಂದರವಾದ ಪ್ರಭೆಯಿಂದ ರಮಣೀಯವಾಗಿವೆ. ॥೧-೨॥

ಇಲ್ಲಿರುವ ದೇವದಾರುಮರಗಳು ಫಲಭಾರಗಳಿಂದ ಬಗ್ಗಿವೆ. ಈ ಮರಗಳ ಹಿಂಡು ಅಪಾರ ಹೂಗಳಿಂದ ತುಂಬಿ ಎಲ್ಲೆಡೆಗಳಲ್ಲಿಯೂ ಪರಿಮಳದ ಸರ್ವಸ್ವವನ್ನೂ ಬೀರು

ರತ್ನಾಲವಾಲಮಧ್ಯಸ್ಥಸುಧಾಸಾಗರನೀರಕೈಃ ।
ಪಾದಪಾನಾಂ ಕುಲಂ ಭದ್ರೇ ತರುಣಾರುಣಪಲ್ಲವಂ ॥೪॥

ಉದ್ಯದಿಂದುಕರಸ್ಪರ್ಶಿಪ್ರವಾಲವರಕಾಂಚಿತಂ ।
ದೇವಮಂದಾರಕೈಃ ಫುಲ್ಲೈಃ ಪೂರ್ವೋದ್ಯಚ್ಛವಿಸಪ್ರಭೈಃ ॥೫॥

ರತ್ನಪತ್ರಫಲೈಶ್ಚೈವ ಕುಸುಮಾಮೋದಿದಿಕ್ತಟೈಃ ।
ಮಂದಾರಸುಂದರಾಪಾರರಸೈರ್ಗಂಧಾಯಿತಾ ದಿಶಃ ॥೬॥

ಪ್ರವಾಲಲಲಿತೈಃ ಪತ್ರೈಃ ಪಲ್ಲವೈರತಿಸುಂದರೈಃ ।
ತತ್ಪುಷ್ಪಗಂಧಮಧುರಮರುದ್ವ್ರಜಭರೈಸ್ತಲೈಃ ॥೭॥

ಪಟವಾಸಸುವಿಸ್ತೀರ್ಣಭೂಭಾಗ ಇವ ದೃಶ್ಯತೇ (ಲಕ್ಷ್ಯತೇ) ।
ಭಾಂತಿ ಮಂದಾರತರವೋ ಹ್ಯಭ್ರಂಕಷಶಿಖೋದ್ಯತೈಃ ॥೮॥

---

ತ್ತಿವೆ. ಇಲ್ಲಿ ಸೌಂದರ್ಯವು ಧಾರಾಕಾರವಾಗಿ ಹರಿಯುವ ಹಾಗಿದೆ. ಇಲ್ಲಿಯ ವೃಕ್ಷಗಳ ಪಾತಿಗಳು ಮಣಿಮಯಗಳಾಗಿವೆ. ಈ ಪಾತಿಗಳ ತುಂಬ ತುಂಬಿದ ಸುಧಾಸಮುದ್ರದ ನೀರು ನೋಡಲು ಎಷ್ಟು ಚೆನ್ನಾಗಿದೆ! ಈ ಮರಗಳು ಎಳೆ ಚಿಗುರುಗಳಿಂದ ತುಂಬಿ ಕೆಂಪಗೆ ಕಾಣುತ್ತಿವೆ. ॥೩-೪॥

ಆಹಾ! ಈ ಉದ್ಯಾನದಲ್ಲಿರುವ ಹವಳಲತೆಗಳು ಆಗತಾನೆ ಉದಯಿಸುತ್ತಿರುವ ಚಂದ್ರನ ಬೆಳದಿಂಗಳುಗಳಿಂದ ಚುಂಬಿತಗಳಾಗಿ ಪ್ರಕಾಶಿಸುತ್ತಿವೆ. ಇಲ್ಲಿರುವ ದೇವ ಮಂದಾರಮರಗಳು ರತ್ನಮಯವಾದ ಎಲೆ, ಹೂ, ಹಣ್ಣು ಇವುಗಳಿಂದ ಭರಿತಗಳಾಗಿ ಕಾಂತಿಯುಕ್ತಗಳಾಗಿ ಎಲ್ಲಾ ದಿಕ್ಕುಗಳನ್ನೂ ಪರಿಮಳಗಳಿಂದ ತುಂಬುತ್ತಿವೆ. ಈ ಮಂದಾರವೃಕ್ಷದ ದಿವ್ಯಪರಿಮಳಗಳಿಂದ ದಿಕ್ಕುಗಳೆಲ್ಲಾ ಘಮಘಮಿಸುತ್ತಿವೆ. ॥೫-೬॥

ಹವಳದಂತಿರುವ ಎಲೆ ಮತ್ತು ಚಿಗುರುಗಳಿಂದ ಈ ಮಂದಾರವೃಕ್ಷಗಳು ಅತಿ ಸುಂದರಗಳಾಗಿವೆ. ಆ ಮಂದಾರಹೂಗಳ ಪರಿಮಳ ಮಕರಂದವನ್ನು ಹೊತ್ತು ಹೊತ್ತು, ಗಾಳಿಯು ಎಲ್ಲೆಡೆಗಳನ್ನೂ, ತಪ್ಪಲುಪ್ರದೇಶಗಳನ್ನೂ ತುಂಬುತ್ತಿದೆ. ಈ ತೆರನಾದ ಈ ಉದ್ಯಾನಭಾಗವು ವಿಶಾಲವಾದ ಪಟಗೃಹ (ಡೇರ)ಗಳನ್ನು ಹಾಕಿರುವ ಹಾಗೆ ಕಾಣುತ್ತಿದೆ. ಈ ಮಂದಾರತರುಗಳು ಉದ್ದ ಉದ್ದ ಕೊಂಬೆ

ಪಾರಿಜಾತಕುಲಂ ಪಶ್ಯ ಹಾರಿತಾಖಿಲಹೃತ್ತನುಂ ।
ಪ್ರವಾಲಕಾಂಡವಿಲಸತ್ಸುಮಗುಚ್ಛವಿರಾಜಿತಂ ॥೯॥

ತದ್ಗಂಧಬಂಧುರಾಮೋದರಮ್ಯಗಂಧವಹಾಹೃತಂ ।
ಶರದಾಭ್ರಘನಪ್ರಖ್ಯಂ ವಿಕಾಸಿತದಿಶಾಮುಖಂ ॥೧೦॥

ಸ್ವಚ್ಛಸ್ಫಟಿಕಧಾರೇವ ನಯನಾನಂದದಾಯಕಂ ।
ಕಾಮದಂ ಸೋಮಸಂಕಾಶಂ ಮನಸಸ್ತುಷ್ಟಿದಾಯಕಂ ॥೧೧॥

ವಿಹಾರಹಾರಶಯನರಮ್ಯರತ್ನಾಚ್ಛವಾಲುಕಂ ।
ಚಿತ್ರವೇದಿಕಜಾಲೈಶ್ಚ ಫುಲ್ಲಪಲ್ಲವಶೋಭಿತಂ ॥೧೨॥

ತತ್ಪುಷ್ಪಗುಚ್ಛಸರಸಕೇಸರಾಯಿತಭೂತಲಂ ।
ತತ್ಫಲೈರ್ವಿನ್ವತಾತ್ಯಚ್ಛಗಲನ್ಮಧುರ್ಝುರೀಭರೈಃ ॥೧೩॥

---

ಗಳಿಂದ ಆಕಾಶವನ್ನು ಕುಕ್ಕುವ ಹಾಗೆ ಕಾಣುತ್ತಿವೆ. ಮತ್ತು ಅಧಿಕವಾಗಿ ಶೋಭಿಸುತ್ತಿವೆ. ||೭-೮||

ಎಲೌ ದೇವಿ, ನೋಡು. ಆ ಪಾರಿಜಾತದ ಗುಂಪು ಎಷ್ಟು ಚೆನ್ನಾಗಿದೆ! ಅವುಗಳ ನಾಳವೆಲ್ಲಾ ಹವಳಖಚಿತವಾಗಿವೆ. ಆ ಪಾರಿಜಾತದ ಹೂಗೊಂಚಲುಗಳೂ ಹವಳದಂತೆ ಹೇಗೆ ಶೋಭಿಸುತ್ತಿವೆ! ಈ ಪಾರಿಜಾತ ಹೂಗೊಂಚಲುಗಳು, ಪಾರಿಜಾತಹೂವಿನ ಪರಿಮಳವನ್ನು ಕುಡಿಯಲು ಆಶಿಸಿ ಗಾಳಿಯಿಂದ ಕರೆತರಲ್ಪಟ್ಟ ಶರತ್ಕಾಲದ ಮೋಡಗಳೋ ಎನ್ನುವಹಾಗಿವೆ. ನೋಡು, ಈ ಪುಷ್ಪಗುಚ್ಛಗಳು ಎಲ್ಲಾ ದಿಕ್ಕುಗಳನ್ನೂ ಅಲಂಕಾರಗೊಳಿಸಿವೆ. ||೯-೧೦||

ಧಾರಾಕಾರವಾಗಿ ಹರಿಯುವ ಸ್ಫಟಿಕಧಾರೆಯಂತೆ ಈ ಉದ್ಯಾನವು ನಮ್ಮ ನೇತ್ರಗಳಿಗೆ ಆನಂದವನ್ನುಂಟುಮಾಡುತ್ತಿರುವುದು. ಇದು ಬೇಕಾದುದನ್ನು ಕೊಡತಕ್ಕುದೂ, ಚಂದ್ರನಂತೆ ಹೊಳೆಯುವುದೂ ಆಗಿ ಮನಸ್ಸಿಗೆ ತೃಪ್ತಿದಾಯಕವಾಗಿದೆ. ಆಟಕ್ಕೆ ಅನುಕೂಲವಾದ ಸಾಮಗ್ರೀ, ಮಾಲೆ, ಮಂಚ, ರತ್ನಮಯವಾದ ಮರಳು, ಚಿತ್ರವಿಚಿತ್ರವಾದ ಜಗುಲಿ, ಎಳೆಚಿಗುರು ಇವೇ ಮೊದಲಾದ ಸಾಮಗ್ರಿಗಳಿಂದ ಈ ಯುದ್ಯಾನವು ಅತ್ಯಧಿಕವಾಗಿ ಶೋಭಿಸುತ್ತಿದೆ. ||೧೧-೧೨||

ಈ ಯುದ್ಯಾನಭೂಮಿಯು ಹೂಗೊಂಚಲುಗಳ ಪರಾಗಗಳಿಂದ ಮುಚ್ಚಿಹೋಗಿದೆ. ಎಲ್ಲೆಡೆಯಲ್ಲಿಯೂ ಫಲಗಳಿಂದ ಭರಿತವಾಗಿ ಆ ಉಪವನಭೂಮಿಯು

ಸರ್ವಕಾಮದಮತ್ಯಚ್ಛಂ ಕಾಮಿನಾಮಪಿ ಕಾಮದಂ ।
ಚಿಂತಾಮಣಿವರೋತ್ತುಂಗರಮ್ಯಪ್ರಾಕಾರಮಧ್ಯಗಂ ॥೧೪॥

ಏಹಿ ತದ್ವನಮುತ್ಕೃಷ್ಟಂ ಪಶ್ಯಾವಃ ಕಮಲೇಕ್ಷಣೇ

॥ ಸ್ಕಂದ ಉವಾಚ ॥

ಇತ್ಯುಕ್ತ್ವಾ ತೌ ಶಿವೌ ತತ್ರ ರಮ್ಯರತ್ನಾಚ್ಛಪಾದುಕೇ ।
ಪಾದಾಬ್ಜೇ ಚಾರು ಸಂಯೋಜ್ಯ ಜಯಂತ್ಯಾನೀತಕೇ ತದಾ ॥೧೫॥

ಹಸ್ತೇನ ದೇವ್ಯಾ ಹಸ್ತಂ ಸ್ವಂ ಸಂಯೋಜ್ಯ ಪರಮೇಶ್ವರಃ ।
ಯಯೌ ಗಿರಿಜಯಾ ಮಂದಮಂಗರಾಗೇಣ ಶೋಭಿತೌ ॥೧೬॥

ಸ್ವಾಂಗಕಾಂತಿಜಿತಾಪಾರಸುರತ್ನಗಣಕೋಟಿಕಾ ।
ಸ್ವಚ್ಛರತ್ನವರಾಸಾರದೇವ್ಯಂಗಹತಸಪ್ರಭಃ ॥೧೭॥

ಮಣಿದ್ವೀಪಃ ಕ್ವಚಿದ್ಭಾತಿ ಶರ್ವಾಂಗಸಿತಕಾಂತಿಭಿಃ ;
ಕಲ್ಪವೃಕ್ಷವನಾಪಾರವೃಕ್ಷಜಾಲಂ ಮಹೇಶ್ವರಃ ॥೧೮॥

---

ಸುಂದರವಾಗಿ ಕಾಣುತ್ತಿದೆ. ಮತ್ತು ಮಕರಂದದ ಕಾಲುವೆಗಳು ಅಲ್ಲಲ್ಲಿ ಹರಿಯುತ್ತಿವೆ. ಈ ಉಪವನವು ಎಲ್ಲಾ ವಿಧವಾದ ಇಷ್ಟಾರ್ಥವನ್ನೂ ಕೊಡಬಲ್ಲದು. ಸಂಪೂರ್ಣತೃಪ್ತರಿಗೂ ಆಸೆಯನ್ನು ಹುಟ್ಟಿಸಿ ಅದನ್ನು ನೆರವೇರಿಸುವುದಾಗಿರುವುದು. ಚಿಂತಾಮಣಿ ಖಚಿತವಾದ ಎತ್ತರದ ಕೋಟೆಗಳನ್ನು ಇಲ್ಲಿ ನಾವು ನೋಡಬಹುದಾಗಿದೆ.॥೧೩-೧೪॥

ಕಮಲಲೋಚನೆಯಾದ ಪ್ರಿಯೇ, ಬಾ, ಆ ರಮಣೀಯವಾದ ಉತ್ತಮ ಉದ್ಯಾನವನ್ನು ನೋಡೋಣ.

ಹೀಗೆ ಆ ಪಾರ್ವತೀ ಪರಮೇಶ್ವರರು ಮೆಲ್ಲಮೆಲ್ಲನೆ ಕಮಲದಂತಿರುವ ಹೆಜ್ಜೆಗಳನ್ನು ಹಾಕುತ್ತಾ, ಜಯಂತಿಯು ತಂದುಕೊಟ್ಟ ಪಾದುಕೆಗಳನ್ನು ಮೆಟ್ಟಿಕೊಂಡು ಸಂಚರಿಸಿದರು. ಆಗ ಶಿವನು ಗಿರಿಜೆಯ ಕೈಯನ್ನು ತನ್ನ ಕೈಯಿಂದ ಹಿಡಿದುಕೊಂಡು ಮನೋಹರವಾದ ದೇಹಕಾಂತಿಗಳಿಂದ ಭೂಷಿತನಾಗಿ ಅಡ್ಡಾಡುತ್ತಿದ್ದನು. ॥೧೫-೧೬॥

ಆ ಮಣಿದ್ವೀಪವು ಅನೇಕಕೋಟಿ ರತ್ನಸಮುದಾಯಗಳಿಂದ ಶಿವನ ಕಾಂತಿಯನ್ನು ಗೆದ್ದಿರುವುದು. ಆ ದ್ವೀಪದ ರತ್ನಗಳ ತೇಜೋಧಾರೆಗಳಿಂದ ಪಾರ್ವತಿಯು

ವನಾನಾಂ ಪತಿರೀಶಾನಃ ದರ್ಶಯಾಮಾಸ ತಾಂ ಶಿವಾಂ ॥೧೯॥

॥ ಈಶ್ವರ ಉವಾಚ ॥

ಪಶ್ಯ ಕಲ್ಪವನಂ ಭದ್ರೇ ಭದ್ರಂ ತವ ನಿರೀಕ್ಷಣಂ ।
ತ್ವದಪಾಂಗೈಕಸಂಗೇನ ನಯನಾನಂದದಂ ಶಿವೇ ॥೨೦॥

ಸುರತ್ನಮಣಿಧಾರಾಚ್ಛವೇದಿಕಂ ಮಣಿವಾಲುಕಂ ।
ಹಲ್ಲಕೋತ್ಥಸರಾಸಾರಮಧ್ಯಪರ್ಯಂತಮಾರುತಂ ॥೨೧॥

ರತ್ನಕಾಂತಿಯುತೋತ್ಫುಲ್ಲರತ್ನಪಂಕಜಸುಂದರಂ ।
ಮಣಿಮಂಟಪಮೇತದ್ವೈ ಚಿತ್ರವಿದ್ರುಮಪುತ್ರಿಕಂ ॥೨೨॥

ಮಣಿಸೋಪಾನಸಂಬದ್ಧಸರೋರಾಶಿಸಮಾವೃತಂ ।
ಸಿಂಹಾಸನವರೈಃ ಕ್ಲುಪ್ತಂ ಧೂಪಿತಂ ಮಣಿದೀಪಕಂ ॥೨೩॥

---

ವೈಕಾಂತಿಯು ಆಚ್ಛಾದಿತವಾಗಿದ್ದಿತು. ಪರಶಿವನ ಶುಭ್ರತೇಜಸ್ಸಿನಿಂದ ವನವೂ ಅತಿಯಾಗಿ ಶೋಭಿಸುತ್ತಿದ್ದಿತು. ವನಗಳಿಗೆಲ್ಲಾ ಪ್ರಭುವಾದ ಆ ಈಶ್ವರನು ಕಲ್ಪ ವೃಕ್ಷವೇ ಮೊದಲಾದ ಅನೇಕ ವೃಕ್ಷಗಳ ಗುಂಪನ್ನು ಗಿರಿಜೆಗೆ ತೋರಿಸಿ ಹೀಗೆಂದನು. ॥೧೭-೧೮-೧೯॥

ಎಲೌ ಮಂಗಳಾಂಗಿಯೇ, ನಿನ್ನ ಕಡೆಗಣ್ಣಿನ ನೋಟದೊಂದಿಗೆ ಇರುವ ಈ ಕಲ್ಪವನವು ನೋಡುವವರ ಕಣ್ಣಿಗತ್ಯಾನಂದವನ್ನು ಕೊಡಬಲ್ಲುದಾಗಿದೆ. ಅನೇಕ ಒಳ್ಳೆಯ ರತ್ನಗಳನ್ನು ಮೆಟ್ಟಿರುವ ಜಗಲಿಗಳು ಈ ವನದಲ್ಲಿ ಹೇರಳವಾಗಿವೆ. ಎಲ್ಲೆಲ್ಲಿಯೂ ಮಣಿಮಯವಾದ ಮರಳುಗಳು ಕಾಣಬರುವುವು. ಸಂಜೆಮಲ್ಲಿಗೆಯ ಗುಂಪುಗಳ ಮಧ್ಯೆ ಸಂಚರಿಸುವ ಆ ಮಂದಮಾರುತವನ್ನು ನೋಡು, ಪ್ರಿಯೇ! ಎಷ್ಟು ಮನೋಹರವಾಗಿದೆ ಈ ವನ! ॥೨೦-೨೧॥

ಈ ಮಣಿದ್ವೀಪದಲ್ಲಿ ರತ್ನಪ್ರಭೆಗಳಿಂದ ಕೂಡಿದ ಅರಳಿದ ರತ್ನಕಮಲಗಳು ಶೋಭಿಸುತ್ತಿವೆ. ಚಿತ್ರವಿಚಿತ್ರಗಳಾಗಿರುವ ಹವಳದ ಗೊಂಬೆಗಳನ್ನು ಕೆತ್ತಿದ ಮಣಿಮಯಮಂಟಪಗಳು ಇಲ್ಲಿ ದರ್ಶನೀಯಗಳಾಗಿವೆ. ಮತ್ತು ಇಲ್ಲಿರುವ ಸರೋವರಗಳ ಮೆಟ್ಟಲುಗಳೆಲ್ಲವೂ ರತ್ನಮಯಗಳಾಗಿಯೇ ಕಾಣುತ್ತಿವೆ. ಧೂಪ

ಕಲ್ಪಕೋತ್ಥಸುಮಾಸಾರಗಂಧಾಯಿತಸುಮಾರುತಂ ।
ಹರಿಸ್ತಂಭಶತೋಪೇತಂ ಸರೋಂತರ್ಮಂಟಪಂ ಶಿವೇ ॥೨೪॥

ತದ್ಧೀರಸಾರಗರ್ಭೋತ್ಥಕಾಂತಿಕಾಂತಜಲಾವೃತಂ ॥೨೫॥

ತತ್ತರಂಗಪ್ರತಿಚ್ಛಾಯಬಿಂಬಿತಾಖಿಲಮಂಟಪಂ ।
ತತ್ರಾಹಂ ಸುಖಮಾತಿಷ್ಠೇ ತ್ವಯಾ ಸಹ ಸುಮಧ್ಯಮೇ ॥೨೬॥

|| ಸ್ಕಂದ ಉವಾಚ ||

ಇತಿ ತತ್ರಾವಿಶದ್ದೇವ್ಯಾ ತತ್ಸರೋಗಣಸಂವೃತಃ ।
ಕಲ್ಪಕಾಕ್ಲೃಪ್ತಸುಮನೋರಾಶಯೋಽಭೂಷಯಚ್ಛಿವಾಂ ॥೨೭॥

ಕಸ್ತೂರೀರಸಸಂಮಿಶ್ರಪಾಟೀರದ್ರವಚಂದನೈಃ ।
ದೇವ್ಯಂಗಮಾಲೇಪಿತವಾನ್ ಸ್ವಾಂಗಮಪ್ಯಥ ಶಂಕರಃ ॥೨೮॥

---

ಹಾಕಿರುವ ಮತ್ತು ರತ್ನದೀಪಗಳನ್ನು ಹಚ್ಚಿರುವ ಶ್ರೇಷ್ಠಸಿಂಹಾಸನಗಳು ಇಲ್ಲಿ ಸಿದ್ಧವಾಗಿವೆ. ||೨೨-೨೩||

ಎಲೌ ಗಿರಿಜೆಯೇ, ಇಲ್ಲಿ ಗಾಳಿಯು ಕಲ್ಪವೃಕ್ಷಗಳ ಹೂಗಳ ಪರಿಮಳನ್ನು ಎಲ್ಲಾ ಕಡೆಗಳಲ್ಲಿಯೂ ಹರಡುತ್ತಿರುವುದು. ಇಲ್ಲಿರುವ ರತ್ನಮಯಸರಸ್ಸುಗಳ ಒಳಗಡೆ ಒಂದು ದಿವ್ಯವಾದ ಮಂಟಪವಿದೆ. ಅದರ ಕಂಬಗಳೆಲ್ಲವೂ ವಜ್ರದಿಂದ ನಿರ್ಮಿತವಾದವುಗಳು. ಆ ಕಂಬಗಳ ವಜ್ರಕಾಂತಿಯು ಸರೋವರದ ನೀರಿನ ಮೇಲೆ ಬಿದ್ದಿದೆ. ಇದರಿಂದ ನೀರೆಲ್ಲಾ ವಜ್ರಕಾಂತಿಯುಳ್ಳದ್ದಾಗಿದೆ. ಆ ಸರೋವರದ ಪ್ರತಿಯೊಂದು ಅಲೆಗಳ ಮಧ್ಯದಲ್ಲಿಯೂ ಈ ಮಂಟಪವು ಪ್ರತಿಬಿಂಬಿಸಿದೆ. ಅದು ನೋಡಲು ಅತಿ ಮನೋಹರವಾಗಿದೆ. ಎಲೌ ಪ್ರಾಣವಲ್ಲಭೆ! ನಿನ್ನೊಡನೆ ನಾನು ಅಲ್ಲಿ ಬಹುಕಾಲ ಸುಖವಾಗಿ ವಾಸಿಸುವೆನು. ||೨೪-೨೫-೨೬||

ಹೀಗೆ ಶಂಕರನು ಆ ಸರೋವರದ ಸಮೀಪವನ್ನು ಹೊಕ್ಕು ಆ ದಿವ್ಯಮಂಟಪವನ್ನು ಪಾರ್ವತಿಯೊಂದಿಗೆ ಪ್ರವೇಶಿಸಿದನು. ಅಲ್ಲಿರುವ ಕಲ್ಪವೃಕ್ಷದ ಪುಷ್ಪರಾಶಿಗಳಿಂದ ಪಾರ್ವತಿಯು ಅಲಂಕಾರಮಾಡಿಕೊಂಡಳು. ಶಂಕರನು ಕಸ್ತೂರೀರಸಮಿಶ್ರವಾದ ಮತ್ತು ಹವಳರಸದಿಂದ ಕೂಡಿದ ಚಂದನವನ್ನು ಗಿರಿಜಾದೇವಿಯ ಶರೀರಕ್ಕೆ ಲೇಪಿಸಿದನು. ಮತ್ತು ತನ್ನ ಅವಯುವಗಳಿಗೂ ಹಚ್ಚಿಕೊಂಡನು. ||೨೭-೨೮||

ಧೂಪವರ್ತಿಸಹಸ್ರೌಘರತ್ನವೃಕ್ಷಾಗ್ರಧೂಪಕೈಃ ।
ಮಣಿದ್ವೀಪಮಹಾವೃಕ್ಷೈಃ ದಿದೀಪೇ ಮಂಟಪಂ ಹಿ ತತ್ ॥೨೯॥

ತದ್ಧೂಪರಾಶಿಮಾಣಿಕ್ಯಜಾಲೋದ್ಯದ್ಭಾಸಿತಾಂತರೇ ।
ರತ್ನಮಂಡಲಸತ್ಪಾದಮಹಾಹೀರಾಚ್ಛಕಲ್ಪಿತೇ ॥೩೦॥

ಪರಾರ್ಧ್ಯಾಸ್ತರಣೋಪೇತೇ ಕಲ್ಪಪುಷ್ಪಸರಾವೃತೇ ।
ನಿಷಣ್ಣಃ ಶಿವಯಾ ದೇವಸ್ತತ್ಫಲಾನ್ಯಥ ಭಕ್ಷಯನ್ ॥೩೧॥

ಸುಧಾವಧೀರಣರಸೈಸ್ಸುರಸಾಮೋದಮೇದುರೈಃ ।
ಫಲೈರಗಾತ್ತತಸ್ತೃಪ್ತಿಂ ದೇವ್ಯಾ ದೇವೋ ಮಹೇಶ್ವರಃ ॥೩೨॥

ನಿತ್ಯತೃಪ್ತೋಽಪಿ ಭಗವಾನ್ ಅಂಬಿಕಾಪತಿರೀಶ್ವರಃ ।
ತತ್ರೈವ ಯಾಪಯಾಮಾಸ ದಿವಸಂ ದೇವಮಾನತಃ ॥೩೩॥

---

ಅನೇಕ ವರ್ತಿಗಳುಳ್ಳ ರತ್ನಮಯಗಳಾದ ಧೂಪಾರತಿಗಳನ್ನು ಆ ಮಂಟಪದಲ್ಲಿ ಇಟ್ಟಿದ್ದರು. ಮಣಿದ್ವೀಪದಲ್ಲಿರುವ ರತ್ನಖಚಿತಗಳಾದ ಮಹಾವೃಕ್ಷಗಳ ಮಧ್ಯೆ ಈ ಮಂಟಪವು ಚೆನ್ನಾಗಿ ಶೋಭಿಸುತ್ತಿತ್ತು. ಇಂತಹ ಮಂಟಪದ ಒಳಗೆ ರತ್ನಮಯವಾದ ಧೂಪದ ಹೊಗೆಯು ಸಾಲಾಗಿ ಹಾಕಿರುವ ಮಾಣಿಕ್ಯ ತೋರಣವನ್ನು ಚುಂಬಿಸುತ್ತಿತ್ತು. ಇದರ ಮಧ್ಯದಲ್ಲಿ ರತ್ನಮಯವಾದ ಪಾದಗಳುಳ್ಳದ್ದಾಗಿಯೂ, ವಜ್ರದ ಕಟ್ಟಡದಿಂದ ಅತಿ ಶುಭ್ರವಾದದ್ದಾಗಿಯೂ, ಕಲ್ಪತರುವಿನ ಹೂಗಳಿಂದ ಮುಚ್ಚಲ್ಪಟ್ಟದ್ದಾಗಿಯೂ, ಶ್ರೇಷ್ಠವಾದ ಆಸನದಿಂದ ಅಲಂಕೃತವಾಗಿಯೂ ಇದ್ದ ಒಂದು ದಿವ್ಯಸಿಂಹಾಸನವಿತ್ತು. ಆ ಆಸನದಲ್ಲಿ ಶಂಕರನು ಅಂಬಿಕೆಯೊಂದಿಗೆ ಮಂಡಿಸಿ ಅಲ್ಲಿಯ ಶ್ರೇಷ್ಠವಾದ ಹಣ್ಣುಗಳನ್ನು ಸವಿದನು. ॥೨೯-೩೦-೩೧॥

ಶಂಕರನು ಅಮೃತದ ಸವಿಯನ್ನು ತಿರಸ್ಕರಿಸುವಂತಹ ರಸಗಳಿಂದ ಪೂರಿತಗಳಾದ ದಿವ್ಯಫಲಗಳನ್ನು ಪಾರ್ವತಿಯೊಡನೆ ತಾನೂ ಸವಿದು ತೃಪ್ತಿಯನ್ನು ಹೊಂದಿದನು. ಯಾವಾಗಲೂ (ನಿತ್ಯ) ತೃಪ್ತನೆನಿಸಿದ ಆ ಭಗವಂತನಾದ ಅಂಬಿಕಾರಮಣನು ಅಲ್ಲಿಯೇ ದೇವಮಾನದಲ್ಲಿನ ಒಂದು ದಿವಸವನ್ನು ಕಳೆದನು. (ಅಂದರೆ ಮನುಷ್ಯಮಾನದ ಒಂದುವರ್ಷವನ್ನು ಕಳೆದನೆಂದು ತಾತ್ಪರ್ಯ). ॥೩೨-೩೩॥

ವಿಹರನ್ ಸ ಹರೋ ದೇವ್ಯಾ ವಿಸ್ಮಿತಾಂತರಯಾ ದೃಶಾ ।
ದೇವೀ ತದಾ ಮಹಾದೇವಂ ಪ್ರಾಹ ಪಂಕಜಲೋಚನಾ ॥೩೪॥

ತ್ರಿಣೇತ್ರ ಜಗದಾಧಾರ ಬಂಧುರಾಮಲವಿಗ್ರಹ ।
ನ ಕೈಲಾಸೇ ನ ಲೋಕೇಷು ಕ್ವಾಪಿ ದೃಷ್ಟೇದೃಶೀ ಸ್ಥಿತಿಃ ॥೩೫॥

ಮಣಿದ್ವೀಪೇ ಯಾದೃಶೀ ಮೇ ಪರಾ ತೃಪ್ತಿರ್ಮಹೇಶ್ವರ ।
ಮಣಿದ್ವೀಪೇಶ್ವರಸ್ಯಾಸ್ಯ ರತ್ನೌಘನಗವಾಸಿನಃ ॥೩೬॥

ಪ್ರಾಕಾರಗೋಪುರೋತ್ತುಂಗರಚನಾ ಮಹದದ್ಭುತಾ ।
ಲಿಂಗಂ ವಿಚಿತ್ರಮಣಿಜಂ ನಾನಾಕಾಂತಿಜಭಾಸುರಂ ॥೩೭॥

ಭುಜಂಗಭೋಗಾಭರಣಂ ಕಂಠೇ ನೀಲಮಣಿಪ್ರಭಂ ।
ತತ್ಫಣಾವೃತಸನ್ಮೌಲಿದರ್ಶನಾತ್ಸರ್ವಕಾಮದಂ ॥೩೮॥

ತದ್ರತ್ನಶಿಖರೋದ್ಭಾಸಿವೃಷಭಾವಳಿಶೋಭಿತಂ ।
ವಿಸ್ಮಯಾನಾಂ ಸ್ಮಯಕರಂ ಸೌಂದರ್ಯಾದಪಿ ಸುಂದರಂ ॥೩೯॥

---

ಆ ಪಾರ್ವತೀವಲ್ಲಭನಾದ ಶಂಕರನು ಆಶ್ಚರ್ಯಪಡುತ್ತಿರುವ ಗೌರಿಯೊಂದಿಗೆ ಅಲ್ಲಿ ಹೀಗೆ ವಿಹರಿಸುತ್ತಿರುವಾಗ ಕಮಲದಂತೆ ಕಣ್ಣುಳ್ಳ ಗೌರೀದೇವಿಯು ಆಶ್ಚರ್ಯಪೂರ್ಣವಾದ ಕಡೆಗಣ್ಣಿನ ನೋಟದಿಂದ ಈಶ್ವರನನ್ನು ನೋಡಿ ಹೀಗೆಂದಳು. ॥೩೪॥

ಎಲೈ ಮುಕ್ಕಣ್ಣನೇ, ಜಗತ್ತಿಗೆಲ್ಲಾ ಆಧಾರನಾದವನೇ, ಹೇ ಬಂಧುವೇ, ಸ್ವಚ್ಛವಿಗ್ರಹನೇ, ದೇವ, ಈ ಮಣಿದ್ವೀಪದ ಇಂತಹ ಸೊಬಗಿನ ರೀತಿಯನ್ನು ಕೈಲಾಸದಲ್ಲಿ ಅಥವಾ ಚತುರ್ದಶಲೋಕಗಳಲ್ಲಿಯಾಗಲೀ ನಾನು ನೋಡಿರಲಿಲ್ಲ. ಮಣಿದ್ವೀಪದ ರತ್ನಗಿರಿಯಲ್ಲಿರುವ ಕೋಟೆಕೊತ್ತಳಗಳ ರಚನೆಯಿಂದ ರಮಣೀಯವಾಗಿ, ನಾನಾವಿಧದ ಹೊಳಪುಗಳಿಂದ ಥಳಥಳಿಸುವ ಈ ವಿಚಿತ್ರಲಿಂಗದರ್ಶನದಿಂದ ನನಗೆ ಅತ್ಯಂತ ತೃಪ್ತಿಯುಂಟಾಯಿತು. ॥೩೫-೩೬-೩೭॥

ದೇವ, ಈ ಲಿಂಗವು ನಾಗಾಭರಣದಿಂದ ಸುಂದರವಾಗಿ ಕಾಣುತ್ತಿದೆ. ಮತ್ತು ಕಂಠದಲ್ಲಿರುವ ನೀಲೀ ಕಾಂತಿಯು ರಮಣೀಯವಾಗಿದೆ. ಮಹಾಶೇಷನ ಫಣಾರತ್ನಗಳಿಂದ ಈ ಲಿಂಗದ ಶಿರಃಪ್ರದೇಶವು ಭೂಷಿತವಾಗಿದೆ. ಇದರ ದರ್ಶನದಿಂದ ಎಲ್ಲಾ

ರಮ್ಯಂ ವಿಹಾರಸದನಂ ತ್ವಯಾ ಮೇ ಕಲ್ಪಿತಂ ಶಿವ ।
ಪರಮಾನಂದದೇ ಮೇಽದ್ಯ ಯಥಾ ತ್ವದ್ದರ್ಶನೇ ಮಮ ॥೪೦॥

ತಥೈವಾಯಂ ಮಣಿದ್ವೀಪಶ್ರೇಯಂ ಕಲ್ಪಕವಾಟಿಕಾ

॥ ಸ್ಕಂದ ಉವಾಚ ॥

ಇತಿ ದೇವ್ಯಾ ವಚಃ ಶ್ರುತ್ವಾ ತತೋಽಂತರ್ವರಗರ್ಭಕಂ ।
ಮಣಿಜಾಲಯುತೋತ್ತುಂಗಪ್ರಾಕಾರಾಂತಃಪ್ರಕಲ್ಪಿತಂ ॥೪೧॥

ನೀಪಾನೋಕಹಕಾದಂಬವನರಾಜಿವಿರಾಜಿತಂ ।
ಚಿಂತಾಮಣಿಮಣೀಕ್ಲೃಪ್ತಸೌಧಾಯುತವಿರಾಜಿತಂ ॥೪೨॥

ಸುರಮ್ಯತನ್ಮಣಿಸ್ತಂಭಮುತ್ಕೀರ್ಣೋದ್ಯತ್ಸುಪೀಠಕಂ ।
ಶಾಣೋಲ್ಲೀಢಮಣಿವ್ರಾತಚಾಕಚಕ್ಯೈಕಭಾಸುರಂ ॥೪೩॥

ನೀಪೋಪವನಸೌಂದರ್ಯಂ ದರ್ಶಯಾಮಾಸ ವಿಶ್ವಪಃ ॥೪೪॥

---

ಇಷ್ಟಾರ್ಥಗಳೂ ಸಿದ್ಧಿಸುವುವು. ಈ ಲಿಂಗವು ಅತ್ಯಾಶ್ಚರ್ಯವನ್ನುಂಟುಮಾಡುತ್ತದೆ. ಸೌಂದರ್ಯಗಳಿಗೆಲ್ಲಾ ಇದು ಸೌಂದರ್ಯವನ್ನು ಕೊಡಬಲ್ಲದು. ॥೩೮-೩೯॥

ಶಂಕರನೇ, ನನಗಾಗಿ ನೀನು ಇಲ್ಲಿ ರಮಣೀಯವಾದ ವಿಹಾರಭವನವನ್ನು ಕಟ್ಟಿಸಿರುವೆಯಲ್ಲವೆ! ನನಗೆ ನಿನ್ನ ದರ್ಶನವು ಹೇಗೆ ಸಂತೋಷವನ್ನುಂಟುಮಾಡುವುದೋ, ಹಾಗೆ ಈ ಮಣಿದ್ವೀಪದಲ್ಲಿರುವ ಈ ಕಲ್ಪವೃಕ್ಷದ ಉಪವನವೂ ಬಹಳ ಹರ್ಷವನ್ನುಂಟುಮಾಡುತ್ತಿದೆ. ॥೪೦॥

ಹೀಗೆ ಹೇಳುತ್ತಿರುವ ದೇವಿಯನ್ನು ನೋಡುತ್ತಾ ಶಂಕರನು ಕದಂಬವನವನ್ನು ತೋರಿಸಿದನು. ಪ್ರಿಯೇ! ಇಗೋ ನೋಡು, ರತ್ನಮಯವಾದ ಎತ್ತರದ ಕೋಟೆಯೂ, ಆ ಕೋಟೆಯ ಮಧ್ಯೆ ಇರುವ ನೀಪವೃಕ್ಷಗಳ ಉದ್ಯಾನವೂ ಹೇಗೆ ಶೋಭಿಸುತ್ತಿವೆ! ಅಗೋ, ಅಲ್ಲಿ ಚಿಂತಾಮಣಿರತ್ನರಚಿತಗಳಾದ ಅಪಾರ ಉಪ್ಪರಿಗೆ ಮನೆಗಳು ಎಷ್ಟು ಸೊಗಸಾಗಿವೆ! ಆ ಸೌಧಗಳಲ್ಲಿ ಮಣಿಕಂಬಗಳು ಎಷ್ಟು ತೇಜಸ್ವಿಗಳಾಗಿವೆ! ಹಾಗೆಯೇ ಅಲ್ಲಿ ಸಿದ್ಧವಾಗಿರುವ ಭದ್ರಾಸನ ರಾಶಿಯನ್ನು ನೋಡು. ಎಲೌ ದಾಕ್ಷಾಯಣಿ! ಹತ್ತರಿಹಿಡಿದ (ಸಾಣೆ) ಆ ಮಣಿಗಳ ಗುಂಪು ಹೇಗೆ " ಚಕಚಕ"ನೆ

|| ಈಶ್ವರ ಉವಾಚ ||

ಏತನ್ನೀಪಕುಲಂ ಪ್ರಫುಲ್ಲಸುಮನಾಪಾರಾಚ್ಛಗಂಧಾವೃತಂ
ನೇತ್ರಾನಂದಕರಂ ಸದೈವ ವಿತತಂ ಚಾಪ್ಯಮ್ಲಾನವರ್ಜಂ ಶಿವೇ।
ದಿವ್ಯೋತ್ತುಂಗತರಂಗರಂಗಜಸುಧಾಸಿಂಧೋರ್ಜಲೈಃ ಸಿಕ್ತಮ
ಪ್ಯತ್ಯಂತಂ ಮಣಿಜಾಲಕಾಂತಿತತಿಭಿಃ ಪ್ರೋದ್ಯಚ್ಛಿಖಂ ಸುಂದರಂ॥೪೫॥

ರತ್ನೋದ್ಯನ್ಮಣಿವೇದಿಕಾಶತಯುತಂ ಧಾರಾಗೃಹೈಃ ಶೋಭಿತಂ
ಬರ್ಹಾಕ್ರೀಡನಬರ್ಹಿಕೋಕಿಲಮಹಾಹಂಸಾಲಿಪಾಲೀತತಂ ।
ಕಾಪೋತಾವಳಿಲೀಲಯಾ ಸುಮಧುರಾರಾವೈ ರಣಚ್ಛಿಂಜಿನೀ
ಮಂಜೀರಧ್ವನಿಪಾದಪಂಕಜಮುಮೇ ತತ್ರ ತ್ವಯಾ ನ್ಯಸ್ಯತಾಂ ॥೪೬॥

---

ಹೊಳೆಯುತ್ತಿದೆ! ನೋಡು, ದೇವಿ! ಈ ನೀಪವನವು ಎಷ್ಟು ಸುಂದರವಾಗಿದೆ! ||೪೧-೪೨-೪೩-೪೪||

ಈ ನೀಪವೃಕ್ಷಗಳ ಗುಂಪು ಅರಳಿದ ಹೂಗಳ ಪರಿಮಳವನ್ನು ಬೀರುತ್ತಿದೆ. ಇದು ಕಣ್ಣಿಗತ್ಯಾನಂದದಾಯಕವೂ ಆಗಿದೆ. ಅತ್ಯಂತ ವಿಶಾಲವಾದ ಈ ನೀಪವನವು ಎಲ್ಲೆಡೆಯಲ್ಲಿಯೂ ನಿರ್ಮಲವಾಗಿ ತೋರುತ್ತಿದೆ. ಮತ್ತು ಮನೋಹರಗಳಾದ ದೊಡ್ಡ ಅಲೆಗಳುಳ್ಳ ಸುಧಾಪ್ರವಾಹವು ಇಲ್ಲಿ ಹರಿಯುತ್ತಿದೆ. ಈ ದಿವ್ಯನದಿಯ ಜಲ ಪ್ರವಾಹದಿಂದ ತೋಯ್ದ ಈ ವನವು ಮಣಿರಾಶಿಗಳಿಂದ ಹೊರಹೊಮ್ಮುವ ಕಾಂತಿ ಗಳಿಂದ ತುಂಬಿ ಮತ್ತಷ್ಟು ಸೌಂದರ್ಯವನ್ನುಂಟುಮಾಡುತ್ತಿದೆ. ||೪೫||

ಈ ವನದಲ್ಲಿ ಕಾಂತಿಯನ್ನು ಬೀರುವ ಅನೇಕ ರತ್ನಮಯವಾದ ಜಗುಲಿ ಗಳಿವೆ. ಎಲ್ಲಾ ಕಡೆಯೂ ರಮ್ಯವಾದ ಚಿಲುಮೆಗಳಿವೆ. ಗರಿಗಳಿಂದ ಆಟವಾಡುವ ನವಿಲು, ಕೋಗಿಲೆ, ಹಂಸ, ಭ್ರಮರ ಇವುಗಳಿಂದ ಈ ವನವು ಚಂದವಾಗಿದೆ. ಕೇಳಲು ಇಂಪಾಗಿ ಧ್ವನಿಮಾಡುತ್ತಿರುವ ಪಾರಿವಾಳದ ಹಕ್ಕಿಗಳು ಗುಂಪುಗುಂಪಾಗಿ ಇಲ್ಲಿ ಆಟವಾಡುತ್ತಿರುವುವು. ಎಲೌ ಉಮೆಯೇ, ಬಿಲ್ಲಿನ ಮೌರ್ವಿಯಹಾಗೆ ಶಬ್ದ ಮಾಡುವ ಕಾಲುಂಗುರ ಸಪ್ಪಳದಿಂದ ರಮಣೀಯವಾದ ನಿನ್ನ ಪಾದಕಮಲವನ್ನು ಅಲ್ಲಿ ಇಡು. ಎಂದು ಸರಸವಾಗಿ ಶಂಕರನು ಪಾರ್ವತಿಯೊಡನೆ ನುಡಿದನು. ||೪೬||

॥ ಸ್ಕಂದ ಉವಾಚ ॥

ಇತ್ಯುಕ್ತ್ವಾ ಜಗದಂಬಯಾ ತ್ರಿ ಜಗತಾಂ ನಾಥಶ್ಶಶೀಶೇಖರಃ
ದೃಷ್ಟ್ವಾ ನೀಪವನಂ ಸಸುಂದರಮಹಾಪುಷ್ಪಾಚ್ಛಗುಚ್ಛಾವೃತಂ ।
ತದ್ವಾತೈರತಿಸುಂದರೋತ್ತಮಮಹಾಶೀತರ್ಧಿಸಾರಾಕರೈ
ರ್ಗಂಧಾನಂದಿತಪ್ರಾಣತರ್ಷಿತಮರುಜ್ಜಾಲೈರ್ವಿಶಾಲೈರಪಿ ॥೪೭॥

ದೇವ್ಯಾ ನೀಪವನಂ ವಿಲೋಕ್ಯ ಸದಯಂ ಚಾತಿಷ್ಠದೀಶಾಯುತಃ ।
ರಮ್ಯೇ ತನ್ಮಣಿವೇದಿಕಾಸ್ತೃತಮಣೀಮಂಚೇ ಜಗನ್ನಾಯಕಃ ॥೪೮॥

॥ ಈಶ್ವರ ಉವಾಚ ॥

ನೀಪಾನಾಂ ಕುಲಮೇತದದ್ಯ ಗಿರಿಜೇಽಪ್ಯತ್ಯಂತಪಾಪಾಪಹಂ
ಗೋಪಾಯಂತಮಿಹೈನಸಃ ಪ್ರತಿದಿನಂ ತ್ವದ್ಭಕ್ತಿಯುಕ್ತಾ ಉಮೇ ।
ನೇಪಂತಃ ಪವನಾಲಿಸಾರಚಲನೈಃ ಪುಷ್ಪೈರಹೀನಂ ಚ ಯತ್
ಧೂಪೋದ್ಯನ್ಮಧುಗಂಧಸಾರಸುಭಗಂ ಪಶ್ಯಾದ್ಯ ನೋದಾಸ್ಪದಂ॥೪೯॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಮಣಿದ್ವೀಪವರ್ಣನಂ
ನಾಮ ತ್ರಯೋದಶೋಽಧ್ಯಾಯಃ

---

ಹೀಗೆ ಮೂರು ಲೋಕಕ್ಕೂ ಒಡೆಯನಾದ ಆ ಚಂದ್ರಚೂಡನು(ಈಶ್ವರನು) ಲೋಕಮಾತೆಯಾದ ಗೌರಿಯನ್ನು ಕುರಿತು ಹೇಳುತ್ತಾ ದೊಡ್ಡದೊಡ್ಡ ಹೂಗೊಂಚಲುಗಳಿಂದ ಕೂಡಿದ ಆ ನೀಪವನವನ್ನು ನೋಡುತ್ತಾ ನಿಂತನು. ಅನಂತರ ಮೆಲ್ಲಮೆಲ್ಲನೆ ಬೀಸುತ್ತಿರುವ ಮಾರುತವನ್ನು ಸೇವಿಸುತ್ತಾ ಅಲ್ಲಲ್ಲಿ ಬರುವ ತುಂತುರು ಹನಿಗಳಿಂದಲೂ, ಪುಷ್ಪಗಳ ಪರಿಮಳಗಳಿಂದಲೂ ತೃಪ್ತನಾಗಿ ವಿಶಾಲವಾದ ಆ ನೀಪವನದಲ್ಲಿ ಸಂಚರಿಸುತ್ತಿದ್ದನು. ॥೪೭॥

ಆ ಪರಮೇಶ್ವರನು ಪಾರ್ವತಿಯೊಂದಿಗೆ ಆ ನೀಪವನವನ್ನು ನೋಡಿ ಸಂತುಷ್ಟಚಿತ್ತನಾಗಿ ಅಲ್ಲಿಯೇ ಇರುವ ಮಣಿಮಯವೇದಿಕೆಯಲ್ಲಿ ಸಿದ್ಧವಾದ ರತ್ನಮಂಚದಲ್ಲಿ ಪಾರ್ವತಿಯೊಡನೆ ಕುಳಿತನು. ॥೪೮॥

ಎಲೌ ಗಿರಿಜೆಯೇ, ಪಾಪವನ್ನು ಹೋಗಲಾಡಿಸುವ ಈ ನೀಪವನವನ್ನು ನೋಡು. ನಿನ್ನ ಭಕ್ತರ ಪಾಪಗಳೆಲ್ಲವೂ ಇದರ ದರ್ಶನದಿಂದಲೇ ನಾಶವಾಗುವುವು.

ಮಂದಮಾರುತನಿಂದ ಅಲುಗಾಡಿಸಲ್ಪಟ್ಟ ಹೂಗೊಂಚಲುಗಳಿಂದ ಈ ವನವು ತುಂಬಿಹೋಗಿದೆ. ಶ್ರೇಷ್ಠವಾದ ಧೂಪಗಳ ಪರಿಮಳದಿಂದ ಇದು ಆನಂದವನ್ನು ಹುಟ್ಟಿಸತಕ್ಕುದಾಗಿದೆ. ಇಂತಹ ಪವಿತ್ರವಾದ ನೀಪವನವನ್ನು ನೋಡು. ॥೪೯॥

ಇಲ್ಲಿಗೆ ಶ್ರೀಶಿವರಹಸ್ಯದ ಭವಾಖ್ಯವಾದ ಎರಡನೆಯ ಅಂಶದಲ್ಲಿ
ಮಣಿದ್ವೀಪವರ್ಣನೆಯೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಚತುರ್ದಶೋಽಧ್ಯಾಯಃ

॥ ಸ್ಕಂದ ಉವಾಚ ॥

ಮಂಚೇಷು ದೇವೌ ಹಿ ತದಾ ಚಿಕ್ರೀಡತುರಹೋ ದ್ವಿಜಾಃ ।
ಶಂಭೋಸ್ತತ್ರೈವ ವಸತಿಃ ಕೃತಾ ನೀಪವನೇ ತದಾ ॥೧॥

ನೀಪಶಾಖಾಲಂಬಿತೋದ್ಯಚ್ಛೃಂಖಲಾಮಂಚಕೇ ಶಿವೌ ।
ನಗರಾಜಾಂಗಸಂಭೂತಾ ತತ್ರಸ್ಥಂ ಪ್ರಾಹ ಶಂಕರಂ ॥೨॥

ಶ್ಲಥಧ್ಧಮ್ಮಿಲ್ಲಮಲ್ಲೀನಾಂ ಸರಾಲಿಕಲಿಕಾಭರೈಃ ।
ಚಂದನಾಲೇಪಸುಭಗಗಾತ್ರೇಣಾಲಿಂಗ್ಯ ಶಂಕರಂ ॥೩॥

---

ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಹದಿನಾಲ್ಕನೆಯ ಅಧ್ಯಾಯ.

ದ್ವಿಜಶ್ರೇಷ್ಠರೇ, ಆಗ ಮಹಾದೇವ ಮತ್ತು ದೇವಿಯರು ಆ ಮಂಚದ ಮೇಲೆ ಸಂತೋಷದಿಂದ ಕ್ರೀಡಿಸಿದರು. ಆದೇರೀತಿ ಬಹುಕಾಲ ಶಂಭುವು ದೇವಿಯೊಡನೆ ಆ ನೀಪವನದಲ್ಲಿ ವಾಸಮಾಡಿದನು. ॥೧॥

ನೀಪವೃಕ್ಷದ ಕೊಂಬೆಗಳ ಅವಲಂಬನದಿಂದ ತೂಗಾಡುವ ಆ ಮಂಚದಲ್ಲಿ ಪಾರ್ವತೀಪರಮೇಶ್ವರರು ಅನ್ಯೋನ್ಯವಾಗಿ ವಿಹರಿಸುತ್ತಿರಲು, ಒಂದುಸಾರಿ ಗಿರಿರಾಜಕುಮಾರಿಯಾದ ಮಹಾದೇವಿಯು ಆ ಮಂಚದ ಮೇಲೆ ಸುಖವಾಗಿ ಮಂಡಿಸಿದ್ದ ಮಹೇಶ್ವರನನ್ನು ಕುರಿತು ಹೀಗೆಂದಳು. ॥೨॥

ದೇವಿಯು ಮುಡಿದಿದ್ದ ಮಲ್ಲೇ ಮಗ್ಗಿನ ಸರಗಳ (ಮಾಲೆಗಳ) ಭಾರದಿಂದ ತಲೆಯ ಕೂದಲಿನ ಗಂಟೇ ಜೋಲು ಬೀಳುವಂತಿದ್ದಿತು. ತನ್ನ ಅಂಗಾಂಗಗಳಿಗೆಲ್ಲಾ

ನಯನಾಂಜನಚಿಹ್ನೋದ್ಯತ್ಕಪೋಲತಟಸುಂದರಂ ।
ಸ್ವಕುಚಾಗಾಢಸ್ಮೃದಿತಕುಂಕುಮಾಂಕಿತವಕ್ಷಸಂ ॥೪॥

ವಿಧೂತಬಿಂಬಸಾಮ್ರಾಜ್ಯಮಧರಂ ಸಾ ಮಹೇಶಿತುಃ ।
ವಾರುಣೀದಿಕ್ಸಮಾಕ್ರಾಂತಪ್ರಾಂತಶ್ಯಶಿಸಮತ್ವಿಷಂ ॥೫॥

ಚುಂಬನಾಲಿಂಗನಪ್ರೌಢರಸಾನಂದೋಲ್ಲಸಾ ಶಿವಾ ।
ಪ್ರಾಹ ತಂ ದೇವದೇವೇಶಂ ಪ್ರಾಂಜಲಿರ್ಗಿರಿಜಾ ತದಾ ॥೬॥

॥ ಗಿರಿಜೋವಾಚ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ಮಹೇಶ್ವರ ತಪೋರಾಶೇ ದಯಾರಾಶೀಶ ಶಂಕರ ॥೭॥

---

ಮನೋಹರವಾಗಿ ಕಾಣುವಂತೆ ಚಂದನವನ್ನು ಲೇಪನಮಾಡಿಕೊಂಡು ಘಮಘಮಿಸುತ್ತಿರುವ ದೇಹದಿಂದ ಗೌರಿಯು ಮಹಾದೇವನನ್ನು ಆಲಿಂಗನೆಮಾಡಿದಳು. ॥೩॥

ದೇವಿಯು ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಂಡು ಮಹಾದೇವನನ್ನು ಆಲಿಂಗಿಸಿದುದರಿಂದ, ಆ ಕಾಡಿಗೆಯು ಮಹೇಶ್ವರನ ಕಪೋಲತಲದಲ್ಲಿ ಚಿಹ್ನೆಯಂತಾಗಿ ಸುಂದರವಾಗಿ ಕಾಣುತ್ತಿದ್ದಿತು. ಪೀನವಾದ ತನ್ನ ಕುಚಗಳಿಗೆ ಲೇಪನಮಾಡಿದ್ದ ಕುಂಕುಮಕೇಸರಿಯು ಮಹೇಶ್ವರನ ವಕ್ಷಸ್ಥಳದಲ್ಲಿ ಗುರುತಾಗುವಂತೆ ಮಹಾದೇವಿಯು ಆಲಿಂಗನೆಮಾಡಿದಳು. ॥೪॥

ತೊಂಡೇಹಣ್ಣಿನ ಕಾಂತಿಯನ್ನು ತಿರಸ್ಕರಿಸಿರುವ ಮಹೇಶ್ವರನ ಕೆಳದುಟಿಯು ಪಶ್ಚಿಮದಿಕ್ಕಿನಲ್ಲಿ ಶೋಭಿಸುವ ಚಂದ್ರನ ಕಾಂತಿಯನ್ನು ಹೋಲುತ್ತಿದ್ದಿತು. ಗಿರಿಜಾದೇವಿಯು ಮಹೇಶ್ವರನ ಅಂತಹ ಸುಂದರವಾದ ಅಧರವನ್ನು ಪದೇ ಪದೇ ಚುಂಬನಮಾಡುತ್ತಾ, ಮಹಾದೇವನ ಗಾಢವಾದ ಆಲಿಂಗನದಿಂದ ಆನಂದರಸಪರಿಪೂರ್ಣಳಾಗಿ ದೇವದೇವನಾದ ತನ್ನ ಪತಿಯನ್ನು ಕುರಿತು ಕೈಮುಗಿದು ಹೀಗೆ ಪ್ರಾರ್ಥನೆಮಾಡಿದಳು. ॥೫-೬॥

“ಮಹಾದೇವನೇ, ದೇವದೇವನೆನಿಸಿದ ನೀನು ಶರಣಾಗತವತ್ಸಲನು. ಮಹೇಶ್ವರನೇ, ಸರ್ವತಪಸ್ಸುಗಳಿಗೂ ನೀನೇ ಆಧಾರನಾಗಿರುವೆ. ಶಂಕರನೇ, ನೀನು ದಯಾರಾಶಿಸ್ವರೂಪನಲ್ಲವೆ! ॥೭॥

ಇಂದುಧಾಮಸಮಾನಾಸ್ಯ ಬಾಲೇಂದುಕೃತಶೇಖರ ।
ಪಶ್ಯಾಮಿ ದ್ವೀಪಮಧ್ಯಸ್ಥಂ ತ್ವಯಾ ಚಿಂತಾಮಣೀಚಿತಂ ॥೮॥

ಮಹಾರತ್ನವರೋತ್ತುಂಗಸೌಧಾಂತರ್ಗೃಹಮೀಶ್ವರ ॥೯॥

॥ ಸ್ಕಂದ ಉವಾಚ ॥

ಇತ್ಯುಕ್ತಂ ತದ್ವಚೋ ದೇವ್ಯಾ ಶಿವಃ ಶ್ರುತ್ವಾ ಮಹೇಶ್ವರಃ ।
ಶಿವಸ್ಸ್ವಹೃದಯಾಕಾರಸಂಧಿತೌಘವಿಚಿತ್ರಿತಂ ॥೧೦॥

ಉತ್ಕೀರ್ಣರತ್ನಜಾಲೇಭ್ಯಃ ಪ್ರಭಾಧಿಕವಿನಿರ್ಮಿತಂ ।
ದೇವ್ಯೈ ತದ್ದರ್ಶಯಾಮಾಸ ವಿಶ್ವಾತ್ಮಾ ವಿಶ್ವಭಾವನಃ ॥೧೧॥

ಚೇಷ್ಟಿತಂ ತಸ್ಯ ಕೋ ವೇದ ವೇದವೇದ್ಯಸ್ಯ ಚೇಶಿತುಃ ।
ಮನಾಗಿತಿ ನ ಜಾನೇಽಹಂ ತಚ್ಚೇಷ್ಟಿತಮಿದಂ ಜಗತ್ ॥೧೨॥

---

ಚಂದ್ರನಿಗೆ ಸಮಾನವಾದ ಮುಖಕಾಂತಿಯುಳ್ಳ ಮಹಾದೇವನೇ, ಬಾಲ ಚಂದ್ರನನ್ನೇ ತಲೆಯಲ್ಲಿ ಧರಿಸಿರುವ ನೀನು, ಚಿಂತಾಮಣಿಯೆಂಬ ರತ್ನಗಳಿಂದ ನಿರ್ಮಿತವಾಗಿರುವ ಮಣಿದ್ವೀಪದ ಮಧ್ಯಭಾಗದಲ್ಲಿ ದೊಡ್ಡ ದೊಡ್ಡ ರತ್ನಗಳಿಂದ ಉನ್ನತವಾಗಿ ಕಟ್ಟಿರುವ ಈ ಸೌಧದ, ಅಂತರ್ಗೃಹದಲ್ಲಿ ಸದಾ ನನಗೆ ಕಾಣುತ್ತಿರುವಂತೆ ಅನುಗ್ರಹಿಸು!" ॥೮-೯॥

ಹೀಗೆ ಹೇಳಿದ ದೇವಿಯ ಅಭಿಪ್ರಾಯವನ್ನು ತಿಳಿದು ಮಹೇಶ್ವರನು ಹೀಗೆ ಉತ್ತರವಿತ್ತನು. ಪ್ರಪಂಚಸ್ವರೂಪನೂ, ಪ್ರಪಂಚ ಸೃಷ್ಟಿಸ್ಥಿತಿಸಂಹಾರಕರ್ತನೂ ಎನಿಸಿ ಮಂಗಳಸ್ವರೂಪನಾದ ಮಹೇಶ್ವರನು, ದೇವಿಯು ಹೀಗೆ ನುಡಿದುದನ್ನು ಕೇಳಿ, ತನ್ನ ಮನಸ್ಸಿನ ಇಷ್ಟದಂತೆ ಆಕಾರ ಪಡೆದು, ಚಿತ್ರವಿಚಿತ್ರವಾಗಿ ನಾನಾರತ್ನ ಸಮೂಹಗಳಿಂದ ನಿರ್ಮಿಸಲ್ಪಟ್ಟು ಹೊರಹೊಮ್ಮುವ ರತ್ನಕಾಂತಿಯುಳ್ಳ ಆ ಸೌಧವು ತನ್ನ ಹೃದಯಾಕಾರವನ್ನು ಪಡೆದಿದೆ ಎಂಬ ಅಪೂರ್ವ ವಿಷಯವನ್ನು ದೇವಿಗೆ ಹೇಳಿದನು. ॥೧೦-೧೧॥

ಎಲೈ ಜೈಗೀಷವ್ಯಮುನಿಯೇ, ವೇದವೇದ್ಯನಾದ ಮಹೇಶ್ವರನ ಲೀಲೆಯನ್ನು ಯಾರು ತಾನೇ ಅರಿಯಬಲ್ಲರು. ನಾನು ಈ ಜಗತ್ತೆಲ್ಲವೂ ಅವನ ಲೀಲಾವ್ಯಾಪಾರವೆಂದೇ ತಿಳಿದಿರುವೆನು. ॥೧೨॥

ಅಧಿಷ್ಠಿತಾಶ್ಚ ಯಾಸ್ಯಾಮಸ್ತದಧಿಷ್ಠಾನಚೇಷ್ಟಿತಂ ।
ಅಪೂರ್ವಂ ಯನ್ಮಯಾ ದೃಷ್ಟಂ ತದಾಖ್ಯಾಮಿ ಚ ತಚ್ಛೃಣು ॥೧೩॥

ತತೋ ದೇವ್ಯಾ ಮಹಾದೇವ್ಯಾ ನಿರಗಾದ್ದುರಿತಾಂತಕಃ ।
ತನ್ನೀಪವನಮಧ್ಯಸ್ಥಂ ಸಿಂಹಾಸನವರಂ ತದಾ ॥೧೪॥

ತದ್ದರ್ಶಯಾಮಾಸ ದೇವ್ಯೈ ದಿವ್ಯಚಿಂತಾಮಣೀತತಂ ।
ಸೌಧರಾಜೋತ್ತಮಂ ದೇವಶ್ರೀಚಕ್ರಾಕಾರಸುಂದರಂ ॥೧೫॥

ಚಿಂತಾಮಣಿಸಮೂಹಾನಾಂ ಜ್ಯೋತಿಃ ಪ್ರಾಂತತರಾಂಬರಂ ।
ಚಕ್ರಕೋಣವಿವೃತ್ತೋದ್ಯನ್ಮಣಿತೋರಣಪಾಲಿಭಿಃ ॥೧೬॥

ವಲಭೀಸುಂದರಾಕಾರಸ್ತಂಭಕುಂಭೋಜ್ಜ್ವಲೋಚ್ಛ್ರಯಂ ।
ಸೌಧಾಗ್ರವಿವಿಧೋಚ್ಛ್ರಾಯಮಣೀಕಲಶದಿಙ್ಮುಖಂ ॥೧೭॥

---

ನಾವೆಲ್ಲರೂ ಅವನಿಂದ ನಿಯಮಿಸಲ್ಪಟ್ಟವರಾಗಿ ಯಾವ ಕಾರ್ಯದಲ್ಲಿಯಾದರೂ ಪ್ರವೃತ್ತರಾಗಬೇಕು. ಎಲ್ಲವೂ ಆ ಮಹಾದೇವನ ಅಧಿಷ್ಠಾನದ ಚೇಷ್ಟೆಯೇ ಆಗಿರುವುದು. ಓ ಜೈಗೀಷವ್ಯನೇ, ನಾನು ನೋಡಿದ ಅಪೂರ್ವವಿಷಯವನ್ನೊಂದನ್ನು ನಿನಗೆ ತಿಳಿಸುವೆನು ಕೇಳು. ॥೧೩॥

ದೇವಿಗೆ ಆ ದಿವ್ಯಸೌಧರಹಸ್ಯವನ್ನು ತಿಳಿಸಿದ ಮೇಲೆ ಪಾಪನಿವಾರಕನಾದ ಮಹಾದೇವನು ದೇವಿಯೊಡನೆ ಹೊರಟು ಆ ನೀಪವನದ ಮಧ್ಯದಲ್ಲಿ ಉತ್ತಮವಾದ ಸಿಂಹಾಸನವಿರುವ ಕಡೆಗೆ ಬಂದನು. ॥೧೪॥

ಅನಂತರ ಮಹಾದೇವನು ದಿವ್ಯವಾದ ಚಿಂತಾಮಣಿಗಳಿಂದ ವ್ಯಾಪ್ತವಾಗಿ ಸುಂದರವಾಗಿರುವ ಉತ್ತಮವಾದ ಸೌಧವು, ಶ್ರೀಚಕ್ರದ ಆಕಾರದಲ್ಲಿರುವುದನ್ನು ವಿವರಿಸಿದನು. ॥೧೫॥

ಈ ಸೌಧವು ಚಿಂತಾಮಣಿಗಳಿಂದ ನಿರ್ಮಿತವಾಗಿದ್ದುದರಿಂದ ಅದರ ತೇಜಸ್ಸು ಅಂತರಿಕ್ಷಪರ್ಯಂತ ವ್ಯಾಪಿಸಿದ್ದಿತು. ಚಕ್ರಾಕಾರವಾದ ಆ ಸೌಧದ ಕೋಣಗಳಲ್ಲಿ ಇರುವ ಬಹಿರ್ದ್ವಾರಸಮೂಹಗಳಲ್ಲಿ ದುಂಡಾದ ರತ್ನಗಳು ಕೆತ್ತಲ್ಪಟ್ಟಿದ್ದುವು. ॥೧೬॥

ಸುಂದರವಾದ ಆಕಾರವುಳ್ಳ ಮುಂಜೂರುಗಳು ಕಂಬಗಳ ಮೇಲೆ ಇಟ್ಟಿರುವ ಕುಂಭಗಳಿಂದ (ಕಲಶಗಳಿಂದ) ಉಜ್ವಲವಾಗಿಯೂ ಉನ್ನತವಾಗಿಯೂ ಇರುವುವು.

ಜಯಂತೋ ವೈಜಯಂತೀನಾಂ ನಿಕರೈಸ್ತ್ರಿದಿವಸ್ಥಲೀಂ ।
ಮಹಾಸಿದ್ಧ್ಯಷ್ಟಕಸ್ಯಾಪಿ ಕ್ರೀಡಾಭವನಮುತ್ತಮಂ ॥೧೮॥

ವೃತ್ತಕಲ್ಪದ್ರುಮವನಂ ನೀಪೈಃ ಫಲಕುಲಾವನೈಃ ।
ಪರ್ಯಂತಕಲಿತಾಸಾರ ಆಲವಾಲಮಣಿದ್ಯುತಿ ॥೧೯॥

ಪ್ರಾಸಾದೇಷು ಪ್ರತೋಲೀಷು ಪ್ರಾಕಾರಾಗ್ರೇ ಗೃಹಾಂಗಣೇ ।
ಗೋಪುರೇಷು ವಿಚಿತ್ರೇಷು ಕವಾಟೇಷು ತಟೇಷ್ವಪಿ ॥೨೯॥

ಮಣಿಮಾಣಿಕ್ಯರತ್ನಾನಾಮುಚ್ಚಲಚ್ಚಾರುರೋಚಿಷಾಂ ।
ಜ್ಯೋತಿರ್ಜಾಲೈರ್ಜಟಿಲಿತಂ ಶಿವೇದಮವಲೋಕ್ಯತಾಂ ॥೨೧॥

---

ಮತ್ತು ಈ ಸೌಧದ ಅಗ್ರಭಾಗದ ಉನ್ನತವಾದ ಸ್ಥಳಗಳಲ್ಲಿ ಮಣಿಮಯವಾದ ಕಲಶಗಳು ಎಲ್ಲಾ ದಿಕ್ಕುಗಳಲ್ಲಿಯೂ ಇಡಲ್ಪಟ್ಟಿರುವುವು. ॥೧೭॥

ಇಲ್ಲಿರುವ ಪತಾಕೆಗಳ (ಬಾವುಟಗಳ) ಸಮೂಹವು ಸ್ವರ್ಗಲೋಕವನ್ನೂ ಗೆಲ್ಲುತ್ತಿವೆಯೋ ಎನ್ನುವಂತಿರುವುದು. ಈ ಸೌಧವು ಅಣಿಮಾದ್ಯಷ್ಟಸಿದ್ಧಿಗಳಿಗೂ ಉತ್ತಮವಾದ ವಿಹಾರಭವನವಾಗಿದ್ದಿತು. ಸದಾ ಇಲ್ಲಿ ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂಬ ಈ ಎಂಟು ಮಹಾಸಿದ್ಧಿಗಳೂ ಇಲ್ಲಿ ನೆಲಸಿರುವುವು. ॥೧೮॥

ಇಲ್ಲಿ ನೀಪವೃಕ್ಷಗಳಿಂದಲೂ, ಇತರ ಫಲಸಮೂಹವನ್ನು ಕೊಡುವ ವೃಕ್ಷಜಾಲಗಳಿಂದಲೂ ಯುಕ್ತವಾದ ಸುಂದರವಾದ ಕಲ್ಪವೃಕ್ಷವನವಿರುವುದು. ಈ ಕಲ್ಪವೃಕ್ಷಗಳ ಸುತ್ತಲೂ ಮಾಡಿರುವ ದೊಡ್ಡ ದೊಡ್ಡ ಪಾತಿಗಳು ರತ್ನಕಾಂತಿಗಳಿಂದ ಶೋಭಿಸುತ್ತಿರುವುವು. ॥೧೯॥

ದೇವಿಯೇ, ಉಪ್ಪರಿಗೆಗಳಲ್ಲಿಯೂ, ಕೈಸಾಲೆಗಳಲ್ಲಿಯೂ, ಪ್ರಾಕಾರಗಳ ತುದಿಯಲ್ಲಿಯೂ, ಮನೆಯ ಅಂಗಳಗಳಲ್ಲಿಯೂ, ಗೋಪುರಗಳಲ್ಲಿಯೂ, ವಿಚಿತ್ರ ವರ್ಣಗಳುಳ್ಳ ಬಾಗಿಲುಗಳಲ್ಲಿಯೂ ಮತ್ತು ಇತರ ಭೂಪ್ರದೇಶದಲ್ಲಿಯೂ, ಮೇಲಕ್ಕೆ ಉಕ್ಕುತ್ತಿರುವ ಮನೋಹರವಾದ, ಮಣಿ, ಮಾಣಿಕ್ಯ, ಮುತ್ತು, ರತ್ನ ಇವುಗಳು ನಿಕ್ಷಿಪ್ತವಾಗಿರುವುದರಿಂದ ಆ ಮಾಣಿಕ್ಯಾದಿಗಳ ತೇಜಃಪುಂಜವು ಈ ಸೌಧದಲ್ಲೆಲ್ಲಾ ಆವರಿಸಿದೆ. ದೇವಿಯೇ, ನೋಡು ಎಷ್ಟು ಮನೋಹರವಾಗಿದೆ. ॥೨೦-೨೧॥

ದ್ಯಾವಾಭೂಮ್ಯೋರಂತರಾಲೇ ಲೋಕಜಾಲೇ ತಥಾ ಭುವಿ ।
ವಿಷ್ಣುಬ್ರಹ್ಮೇಶಭವನೇ ದಿಕ್ಪಾಲಾನಾಂ ಪುರೇ ತಥಾ ॥೨೨॥

ನಾಗಾನಾಮಪಿ ಲೋಕೇಷು ದೈತ್ಯೇಂದ್ರಾಣಾಂ ಪುರೀಷ್ವಪಿ ।
ಕೈಲಾಸೇ ವಾ ಮಹಾದೇವಿ ಚಿಂತಾಮಣಿಗೃಹಾದಿಕಂ ॥೨೩॥

ಈದೃಕ್ಸಂಪತ್ತಿಸಂಭಾರೋ ನ ಕುತ್ರ ಭುವನೇಶ್ವರಿ ।
ಉದ್ಯತ್ಕಾಂತಿಮಹಾಸೌಧಮಣಿರಂಜಿತಪೀಠಭೂಃ ॥೨೪॥

ಚಾರುಚಿತ್ರವಿಚಿತ್ರಾಢ್ಯಚಿಂತಾಮಣಿಗಣದ್ಯುತಿಃ ।
ಭಾಸ್ವರಂ ಸುಮನೋದ್ದಾಮಕಲ್ಪಕಾನಾಂ ಭರೈರಪಿ ॥೨೫॥

ನೀಪವ್ರಾತಮಹಾಗಂಧವಾತಸುಂದರದರ್ಪಿತಂ ।
ಧೂಪಧೂಮಾಮೃತಾಸಾರಮಣಿದೀಪಾಯುತೋಜ್ಜ್ವಲಂ ॥೨೬॥

---

ಮಹಾದೇವಿಯೇ, ಆಕಾಶ ಮತ್ತು ಭೂಮಿ ಇವುಗಳ ಮಧ್ಯದಲ್ಲಿರುವ ದೇವಲೋಕಗಳಲ್ಲಿಯೂ, ಭೂಲೋಕ, ವಿಷ್ಣುಲೋಕ, ಬ್ರಹ್ಮಲೋಕ, ಶಿವಲೋಕ, ಅಷ್ಟದಿಕ್ಪಾಲಕರ ಪಟ್ಟಣಗಳು, ನಾಗಲೋಕ, ರಾಕ್ಷಸಲೋಕ ಮತ್ತು ಕೈಲಾಸ ಈ ಎಲ್ಲಾ ಲೋಕಗಳಲ್ಲಿಯೂ, ಈ ಚಿಂತಾಮಣಿಗೃಹಕ್ಕಿಂತ ಉತ್ಕೃಷ್ಟವಾದ ಭವನ ವಿಲ್ಲ. ಈ ಸೌಧದಲ್ಲಿರುವ ಸಂಪತ್ಸಮೃದ್ಧಿಯೂ, ಇತರ ಪರಿಕರಗಳೂ ಮತ್ತೆಲ್ಲಿಯೂ ದೊರೆಯಲಾರವು. ॥೨೨-೨೩॥

ರತ್ನಖಚಿತವಾದ ಮಹಾಸೌಧದ ಪೀಠಭೂಮಿಯ ಕಾಂತಿಯು ಸರ್ವವ್ಯಾಪಿ ಯಾಗಿರುವುದು. ಈ ಸೌಧದಲ್ಲಿ ಚಿತ್ರವಿಚಿತ್ರವರ್ಣವುಳ್ಳ ಚಿಂತಾಮಣಿರತ್ನಗಳ ಕಾಂತಿಯು ಎಲ್ಲೆಲ್ಲಿಯೂ ತೋರುತ್ತಿರುವುದು. ಅದರಮೇಲೆ ಕಾಣುವ ಹೂವಿನ ದಂಡೆಗಳ ಭಾರವಂತೂ ಮತ್ತಷ್ಟು ಸೊಬಗನ್ನುಂಟುಮಾಡುತ್ತಿದೆ. ॥೨೪-೨೫॥

ನೀಪವೃಕ್ಷಗಳ ಗುಂಪಿನ ಮೇಲೆ ಬೀಸುವ ಗಾಳಿಯು ಅದರ ಸುಗಂಧ ವನ್ನೆಲ್ಲಾ ಹೊತ್ತುಕೊಂಡು ಸುಂದರವಾದ ಈ ಸೌಧದಮೇಲೆ ಬೀಸುವುದರಿಂದ ಮತ್ತಷ್ಟು ಮನೋಹರವಾಗಿರುವುದು. ನಾನಾವಿಧವಾದ ಧೂಪಗಳ ಧೂಮಗಳೂ, ಅಮೃತವನ್ನು ಸುರಿಸುವ ಮಣಿಗಳೂ, (ಚಂದ್ರಕಾಂತ ಮತ್ತು ಸೂರ್ಯಕಾಂತಾದಿ ಮಣಿಗಳೂ) ಸಾವಿರಾರು ದೀಪಗಳೂ ಈ ಸೌಧದಲ್ಲಿ ಉಜ್ಜ್ವಲವಾಗಿ ಕಾಣುತ್ತಿರುವುವು ॥೨೬॥

ಸುರಮ್ಯಹರ್ಮ್ಯಂ ಪಶ್ಯಾದ್ಯ ಲೋಚನಾನಾಂ ತ್ವಿಷಾಮುಷಂ ।
ಮನಸ್ಸರ್ವಸ್ವರಚಿತಂ ಮಯಾ ತವ ಕೃತಂ ಶಿವೇ ॥೨೭॥

ಮಣಿಜಾಲಕಸಚ್ಛಿದ್ರತರಲೋದಾರಕಾಂತಿಭಿಃ ।
ದಿಙ್ಮೋಹಜನಕಂ ಚೈವ ದರ್ಪಣೋದರಸುಂದರಂ ॥೨೮॥

ಹೀರಸಾರಘನಾಸಾರತಲೋಲ್ಲಸಿತದಿಕ್ತಟಂ ।
ವಿಚಿತ್ರಸೂತ್ರವೈಡೂರ್ಯರಂಜಿಧಾರಾಕುಲಾಕುಲಂ ॥೨೯॥

ಗೋಮೇದಗರ್ಭಮೇದೋದ್ಯಚ್ಚಾರುಭಿತ್ತಿವಿಭೂಷಿತಂ ।
ಪುಷ್ಪರಾಗಮಣಿಜ್ಯೋತಿಸ್ತಂಭವಿದ್ರುಮಪುತ್ರಿಕಂ ॥೩೦॥

ಮಹೇಂದ್ರನೀಲಸಂಕ್ಲುಪ್ತಸ್ತಂಭಪೀಠೋಜ್ವಲತ್ಪದಂ ।
ಪ್ರವಾಲಲತಿಕಾಲೋಲೋಜ್ಜ್ವಲತ್ತಲಕಲಾಕುಲಂ ॥೩೧॥

---

ಕಾಂತಿವಿಶೇಷದಿಂದ ಕಣ್ಣುಗಳನ್ನು ಕೊಕ್ಕರಿಸುವಂತೆ ಮಾಡುತ್ತಿರುವ ಈ ಸುಂದರವಾದ ಸೌಧವನ್ನು ನೋಡು! ದೇವಿ, ನಾನು ಸಂಕಲ್ಪಮಾತ್ರದಿಂದ, ನಿನಗೋಸ್ಕರ ಈ ದಿವ್ಯಸೌಧವನ್ನು ನಿರ್ಮಿಸಿರುವೆನು. ॥೨೭॥

ರತ್ನರಾಶಿಗಳ ಒಳಭಾಗದಲ್ಲಿ ಚಂಚಲವಾಗಿ ಹೊಳೆಯುವ ತೇಜಸ್ಸು ದಿಗಂತದವರೆಗೂ ಹರಡಿ, ಸರ್ವರಿಗೂ ಮೋಹಕವಾಗಿರುವುದು. ಒಟ್ಟಿನಲ್ಲಿ ಈ ಸೌಧವು ಕನ್ನಡಿಯ ಒಳಭಾಗದಂತೆ ಸುಂದರವಾಗಿಯೂ ಪ್ರಕಾಶಕವಾಗಿಯೂ ರಂಜಿಸುತ್ತಿರುವುದು. ॥೨೮॥

ದೃಢವಾಗಿಯೂ, ಸಾರವತ್ತಾಗಿಯೂ ಇರುವ ಹೀರಮಣಿಗಳ ಕಾಂತಿಯಿಂದ ಈ ದಿಕ್ಪ್ರದೇಶಗಳೆಲ್ಲವೂ ಶುಭ್ರವಾಗಿ ಕಾಣುತ್ತಿರುವುವು. ವಿಚಿತ್ರವಾದ ಸೂತ್ರಗಳಲ್ಲಿ ಮನೋಹರವಾದ ವೈಡೂರ್ಯಗಳು ಪೋಣಿತವಾಗಿ ಧಾರಾಕಾರವಾದ ಕಾಂತಿಯನ್ನು ಎರಚತಕ್ಕದ್ದಾಗಿರುವುವು. ॥೨೯॥

ಈ ಸೌಧದ ಗೋಡೆಗಳಲ್ಲಿ ಸ್ಫುಟವಾಗಿ ಹೊಳೆಯುವ ಗೋಮೇದಕ ವಜ್ರಗಳು ನಿಕ್ಷಿಪ್ತವಾಗಿರುವುವು. ಪುಷ್ಪರಾಗಮಣಿಗಳಿಂದ ನಿರ್ಮಿತವಾಗಿರುವ ದೀಪಸ್ತಂಭಗಳಲ್ಲಿ ಹವಳದ ಬೊಂಬೆಗಳು ಕೆತ್ತಲ್ಪಟ್ಟಿರುವುವು. ॥೩೦॥

ಉಜ್ಜ್ವಲವಾದ ಪಾದಗಳುಳ್ಳ ಕಂಭಗಳ ಪೀಠಭಾಗವು ದೊಡ್ಡ ದೊಡ್ಡ

ಮುಕ್ತಾಗುಚ್ಛಸರಾಪಾರಲಂಬಿತೋತ್ತಮಪೀಠಕಂ ।
ವಲಭೀಕುಲಜಾಲಂಬಿನಾನಾರಾಗಸಮಾವೃತಂ ॥೩೨॥

ಮಹಾಮಾಣಿಕ್ಯವಲಭೀನಿರ್ಯತ್ಕಾಂತಿವೃತಾ ದಿಶಃ ।
ಆತಾಮ್ರಾ ಇವ ರಾಜಂತೇ ಸಾಮ್ಯಂ ಸಾಮ್ಯಂ ಸುಧಾಶನೇ ॥೩೩॥

ಯತ್ರಾತಿಮಿತ್ರತೇಜೋಭಿಶ್ಶಲಾಕಾಭಿರ್ವಿಚಿತ್ರಿತಂ ।
ಗವಾಕ್ಷಿತಂ ಪಕ್ಷಿಗಣೈಃ ಶಾಲೀಪಾಲಿವಿರಾಜಿತಂ ॥೩೪॥

ಸಿಂಹಾಕ್ರಾಂತಗಜಪ್ರೋದ್ಯಚ್ಛುಂಡಾದಂಡಾದಿಕೀಲಿತೈಃ ।
ಶಾರ್ದೂಲಮುಖವೃತ್ತಾಸ್ಯಘೋಣಾಚುಂಬಿತನಾಸಿಕೈಃ ॥೦೫॥

---

ಇಂದ್ರನೀಲಮಣಿಗಳಿಂದ ನಿರ್ಮಿತವಾಗಿದೆ. ಇದರ ತಳಭಾಗವು ಹವಳದ ಬಳ್ಳಿಯಿಂದ ಕೂಡಿದ್ದಾಗಿ ಅತ್ಯುಜ್ಜ್ವಲವಾಗಿರುವುದು. ॥೩೧॥

ಉತ್ತಮವಾದ ಈ ಪೀಠಗಳಿಗೆ ಅಪಾರವಾದ ಮುತ್ತಿನಜೊಂಪೆಯ ಸರಗಳು ಜೋಲಾಡುವಂತೆ ಇಡಲ್ಪಟ್ಟಿವೆ. ಸೂರುಕಟ್ಟಿನ ಸಾಲು ನಾನಾಬಣ್ಣಗಳಿಂದ ಆವರಿಸಲ್ಪಟ್ಟಿದೆ. ॥೩೨॥

ದೊಡ್ಡ ದೊಡ್ಡ ಮಾಣಿಕ್ಯಖಚಿತವಾದ ಮುಂಜೂರುಗಳಿಂದ ಹೊರಹೊಮ್ಮುತ್ತಿರುವ ಕಾಂತಿಯು ದಿಕ್ಕುಗಳಿಗೆಲ್ಲಾ ವ್ಯಾಪಿಸಿರುವುದು. ಇದರಿಂದ ಎಲ್ಲಾ ದಿಕ್ಕುಗಳೂ ಇದರ ಸಾಮ್ಯವನ್ನೇ ಹೊಂದಿದಂತೆ, ಪ್ರಕಾಶಿಸುತ್ತಿರುವುವು. ॥೩೩॥

ಈ ಸೌಧದಲ್ಲಿ ಸೂರ್ಯನ ತೇಜಸ್ಸನ್ನೂ ತಿರಸ್ಕರಿಸುವಂತಿರುವ ಕಾಂತಿಯುಕ್ತವಾದ ಸಲಾಕೆಗಳಿಂದ ನಿರ್ಮಿಸಿದ ಗವಾಕ್ಷಗಳೂ, ಅನೇಕ ಪಕ್ಷಿಸಮೂಹಗಳು ವಾಸಿಸಲು ಯೋಗ್ಯವಾಗುವಂತೆ ಗೂಡುಗಳೂ ಅಲ್ಲಲ್ಲಿ ಕಂಡುಬರುತ್ತಿವೆ. ॥೩೪॥

ಸಿಂಹದಿಂದ ಆಕ್ರಮಿಸಲ್ಪಟ್ಟ ಆನೆಯು ತನ್ನ ಸೊಂಡಲನ್ನೆತ್ತಿಕೊಂಡಿರುವಂತೆಯೂ, ಹುಲಿಯಮುಖವು ದುಂಡಾದ ಕುದುರೇಮುಖದ ನಾಸಿಕಭಾಗವನ್ನು ಚುಂಬಿಸುತ್ತಿರುವಂತೆಯೂ, ಭಿತ್ತಿಗಳಲ್ಲಿ ಚಿತ್ರಿತವಾಗಿದೆ. ॥೩೫॥

ಮರಾಲರಾಜಮುಖಗಮುಕ್ತಾಸಕ್ತಲತಾವೃತೈಃ ।
ಕಪೋತಪಾಲೀಮಣಿಜಾರಕ್ತಪಾದಾಂಕಭಾಸುರೈಃ ॥೩೬॥

ಮಯೂರಪಕ್ಷಸಂದಕ್ಷಮಯೂರರವಪದ್ಧತೈಃ ।
ವಿಸ್ತೃತಾಲಂಬಿಪಿಂಛಾಗ್ರಭರಸಾರಕಕಲ್ಪಿತೈಃ ॥೩೭॥

ಹಂಸಾಲಿಸ್ಕಂಧಮಧ್ಯಸ್ಥರತ್ನಸೌಧಾಲಿಕಾತತೇ ।
ಉದ್ವಹಂತಶ್ರಮೋದ್ಭ್ರಾಂತನಯನಾಸಾರಸುಂದರಂ ॥೩೮॥

ನಯೇನಾನ್ಯಮಲಾಪಾರಮಣೀನಾಂ ಕಲ್ಪಿತಾಂಬಿಕೇ ।
ಪಶ್ಯಾಧುನಾ ಮಣಿಮಯೈಃ ಪುರುಷೈರ್ಧೃತಚಾಮರೈಃ ॥೩೯॥

ಭುಜಾಭ್ಯಾಂ ಪೀನವೃತ್ತಾಭ್ಯಾಂ ಕಲ್ಪಿತಾ ಮಣಿಪೂರುಷಾಃ ।
ಸಿಂಹಾಸ್ಯನಿರ್ಯದ್ದಂಷ್ಟ್ರಾಗ್ರಜಿಹ್ವಾನಿರ್ಯತ್ಸುತಾರಕಾಃ ॥೪೦॥

---

ಅಲ್ಲದೆ ರಾಜಹಂಸಗಳು ಬಾಯಲ್ಲಿ ಮುತ್ತಿನ ಲತೆಯನ್ನು ಕಚ್ಚಿಕೊಂಡಿರುವಂತೆಯೂ, ಪಾರಿವಾಳಗಳ ಗುಂಪು ಮಣಿಮಯವಾದ ತಮ್ಮ ಕೆಂಪುವರ್ಣದ ಕಾಲುಗಳ ನಿಕ್ಷೇಪದಿಂದ ಪ್ರಕಾಶವಾಗಿರುವಂತೆಯೂ ಚಿತ್ರಿಸಲ್ಪಟ್ಟಿರುವುದು. ॥೩೬॥

ನವಿಲುಗಳ ದಟ್ಟವಾದ ರೆಕ್ಕೆಗಳೂ, ಕೇಕಾನಾದಮಾಡುವಾಗ ಇಡುವ ಪಾದನ್ಯಾಸಗಳೂ, ಮತ್ತು ವಿಸ್ತಾರವಾದ ಗರಿಗಳೂ ಕೆಳಗೆ ಜೋಲಾಡುತ್ತಿರುವಂತೆ ನಿರ್ಮಿಸಲ್ಪಟ್ಟಿರುವುದು. ॥೩೭॥

ಗುಂಪುಗುಂಪಾಗಿ ರಚಿಸಿರುವ ಹಂಸಗಳ ಭುಜದ ಮಧ್ಯಪ್ರದೇಶಗಳಲ್ಲಿ, ಈ ರತ್ನಮಯವಾದ ಸೌಧಪಂಕ್ತಿಯೇರ್ಪಟ್ಟು, ಆ ಹಂಸಗಳು ಶ್ರಮಪಟ್ಟು ಇದನ್ನು ಹೊತ್ತುಕೊಂಡು ಹೋಗುತ್ತಿರುವಂತೆ ಚಿತ್ರಿತವಾಗಿದೆ. ಇಂತಹ ಶ್ರಮದಿಂದ ಬಳಲಿದಂತೆ ಕಾಣುವ ಹಂಸಗಳ ನಯನಸೌಂದರ್ಯವು ಎಷ್ಟು ಚೆನ್ನಾಗಿರುವುದು ! ॥೩೮॥

ಅಂಬಿಕೇ! ಈ ಸೌಧಪಂಕ್ತಿಯಲ್ಲಿ ಅಪಾರವಾದ ಮಣಿಗಳ ಜೋಡಣೆಯಿಂದಲೇ ನಿರ್ಮಿತವಾಗಿರುವ ರತ್ನಮಯರಾದ ಪುರುಷರು ಚಾಮರಗಳನ್ನು ಹಿಡಿದು ನಿಂತಿರುವುದನ್ನು ನೋಡು. ॥೩೯॥

ವರ್ತುಲವಾದ ಮತ್ತು ಉನ್ನತವಾದ ಭುಜಗಳುಳ್ಳ ಪುರುಷವಿಗ್ರಹಗಳು ಇಲ್ಲಿ ರತ್ನದಿಂದ ನಿರ್ಮಿತವಾಗಿವೆ. ಮತ್ತು ಕೋರೇಹಲ್ಲುಗಳಮೇಲೆ ನಾಲಿಗೆಯ

ಕೇಲಿಲೀಲಾವಿಚಲನ್ಯೈಃ ಪುತ್ತಲ್ಯೋ ವ್ಯಜನೀಕರಾಃ ।
ಸೇವಂತಿ ತ್ವಾಂ ಮಹಾದೇವಿ ಸ್ವಜಾಡ್ಯವಿನಿವೃತ್ತಯೇ ॥೪೧॥

ಯಂತ್ರಾಸಾರಭ್ರಮದ್ದ್ವಾರರಥಾಕೃತಿಗೃಹಂ ಶಿವೇ ।
ಧೂಯಮಾನಪತಾಕಂ ಚ ತುರಂಗಾವಲಿಶೋಭಿತಂ ॥೪೨॥

ವಹಂತಿ ಶ್ರೀಯುತಂ ಯಸ್ಮಿಂಸ್ತುರಂಗಾಃ ಕಾಮವೇಗಿನಃ ।
ಪ್ರೋಚ್ಚಲಂತ ಇವಾಭಾತಿ ದಿವ್ಯಂ ರಥಗೃಹಂ ಶಿವೇ ॥೪೩॥

ಸಿಂಹಪ್ರಣಾದಯುತಮತ್ಯುದಾರಂ ಕೇಸರೀಗಣೈಃ ।
ಸಹಸ್ರಂ ಧವಲಾಪಾರಸಟಾಶೋಭಿತಕಂಧರೈಃ ॥೪೪॥

---

ನ್ನಿಟ್ಟು ನೊರೆ ಸುರಿಸುವ ಸಿಂಹದ ಬೊಂಬೆಗಳು ಹೇಗೆ ವಿರಾಜಿಸುತ್ತಿವೆ ನೋಡು !
॥೪೦॥

ಮಹಾದೇವಿಯೇ, ಲೀಲಾಕೇಲಿಗಳಲ್ಲಿ ಆಯಾಸಹೊಂದುವ ನಿನ್ನ ಖೇದವನ್ನು ಹೋಗಲಾಡಿಸುವುದಕ್ಕೋಸ್ಕರ, ಇಗೋ ಈ ಬೊಂಬೆಗಳು ಬೀಸಣಿಗೆಗಳನ್ನು ಹಿಡಿದು ನಿನ್ನನ್ನು ತೃಪ್ತಿಗೊಳಿಸಲು ಸಿದ್ಧವಾಗಿರುವುವು. ॥೪೧॥

ಯಂತ್ರ ಸಹಾಯದಿಂದ, ತೆಗೆದು ಮತ್ತು ಹಾಕುವ ಬಾಗಿಲುಗಳುಳ್ಳ ಈ ಮನೆಯು ರಥದ ಆಕಾರದಂತಿರುವುದು. ಇದರಲ್ಲಿ ಪತಾಕೆಗಳು ಹಾರಾಡುತ್ತಿರುವುವು. ಇದರ ಮುಂದೆ ಕುದುರೆಗಳು ಗುಂಪು ಗುಂಪಾಗಿ ಶೋಭಿಸುತ್ತಿರುವುವು. ॥೪೨॥

ದೇವಿಯೇ, ಸಂಪದ್ಯುಕ್ತವಾದ ।ಈ ದಿವ್ಯವಾದ ರಥಗೃಹವನ್ನು ರಥಿಕನ ಇಷ್ಟಾನುಸಾರವಾದ ವೇಗದಿಂದ ಕುದುರೆಗಳು (ಹೊತ್ತುಕೊಂಡು) ಎಳೆದುಕೊಂಡು ಹೋಗುತ್ತಿರುವುದೋ ಎನ್ನುವಂತೆ ಕಾಣುತ್ತಿರುವುದು. ॥೪೩॥

ಸಾವಿರಾರು ಸಿಂಹಗಣಗಳು ಶುಭ್ರವಾದ ಕೇಸರಗಳಿಂದ ಶೋಭಿಸುತ್ತಾ ಸುಂದರವಾದ ಕಂಠವುಳ್ಳವುಗಳಾಗಿ ಅತ್ಯಂತ ಗಂಭೀರವಾಗಿ ಸಿಂಹನಾದ ಮಾಡುತ್ತಿರುವುವು. ॥೪೪॥

ವಹಂತಿ ಧೂರ್ತ್ತರ್[1]ಗ್ರಹಣೇ ಮಣಿಜಾಲಯುತಸ್ಯ ಚ ।
ಗಜಸೌಧಮಿದಂ ಪಶ್ಯ ದಿವ್ಯಸಿಂಧುರಮೂರ್ಧಗಂ ॥೪೫॥

ಚಲದತ್ಯುಗ್ರದಂಡೋತ್ಥಮಣೀಕ್ಷುವರಹರ್ಷಿತಂ ।
ವಿಧೃತೋತ್ತುಂಗಕುಂಭಸ್ಥದಿವ್ಯಪೀಠಮಣಿದ್ಯುತಿ ॥೪೬॥

ಇಂದ್ರನೀಲಮಯೈಃ ಕ್ಲುಪ್ತೈರ್ಗಜೈಃ ಪಶ್ಯಾಂಬಿಕೇ ತವ ॥೪೭॥

ಇತ್ಯುಕ್ತ್ವಾ ಗಿರಿರಾಜರಾಜತನಯಾಮಾನಂದಯನ್‌ಶಂಕರೋ ।
ದಿವ್ಯಾಪಾರಮಣಿದ್ಯುತಿಪ್ರವಿಲಸನ್ಮೌಲಿಸ್ಥಕುಂಭೋಜ್ಜ್ವಲಾನ್ ।
ಪ್ರಾಸಾದಾನ್ನಿವಿಧಾನಕೃತ್ರಿಮಮಹಾಚಿತ್ರಸ್ಯ ವಿಶ್ವೇಶಿತು-
ಶ್ಚಿತ್ರೇ ಕಲ್ಪಿತಸಜ್ಜಕೈರನುದಿನಂ ತುಷ್ಟಾಷ್ಟಮೂರ್ತಿಂ ಶಿವಾ ॥೪೮॥

---

ಚಲಿಸಿದಾಗ ಅತಿಶಯಕಾಂತಿಯನ್ನು ಬೀರುವ ರತ್ನಸಮೂಹಯುಕ್ತವಾದ ಈ ಗಜಸೌಧವನ್ನು ನೋಡು. ಈ ಸೌಧವನ್ನು ದಿವ್ಯವಾದ ಆನೆಗಳು ತಮ್ಮ ತಲೆಯ ಮೇಲೆ ಹೊತ್ತಿರುವುವು. ॥೪೫॥

ದೇವಿಯೇ ನೋಡು, ಈ ಗಜಸೌಧವನ್ನು ಧರಿಸಿರುವ ಆನೆಗಳು ಅತಿ ಒರಟಾದ ಸೊಂಡಿಲುಗಳಲ್ಲಿ ರಸಭರಿತವಾದ ಮತ್ತು ಮಣಿಮಯವಾದ ಕಬ್ಬನ್ನು ಧರಿಸಿರುವುದನ್ನು ನೋಡಲು ಎಷ್ಟು ಆನಂದವಾಗುತ್ತಿದೆ! ಈ ಸೌಧವು ಮಣಿಮಯವಾಗಿರುವುದರಿಂದ, ಇದರ ಪೀಠಭಾಗವನ್ನು ತಮ್ಮ ಉನ್ನತವಾದ ಕುಂಭಪ್ರದೇಶಗಳಲ್ಲಿ ಹೊತ್ತಿರುವ ಈ ಆನೆಗಳು ಪೀಠಮಣಿಗಳ ದಿವ್ಯಕಾಂತಿಯಿಂದ ಸರ್ವದಾ ಹೊಳೆಯುತ್ತಿರುವುವು. ॥೪೬॥

ಅಂಬಿಕೇ! ಈ ಭಾಗದಲ್ಲಿರುವ ಇಂದ್ರನೀಲಮಣಿಗಳಿಂದ ನಿರ್ಮಿತವಾಗಿರುವ ಈ ಆನೆಗಳ ತಂಡವನ್ನು ನೋಡು. ಎಂದು ಪರಮೇಶ್ವರನು ಗಿರಿಜೆಗೆ ಆ ಸೌಧದ ಸೌಂದರ್ಯವನ್ನೆಲ್ಲಾ ವಿವರಿಸಿದನು.” ॥೪೭॥

ಹೀಗೆ ಶಂಕರನು ಗಿರಿರಾಜ ಕುಮಾರಿಯಾದ ಪಾರ್ವತಿಗೆ ಅನೇಕ ರತ್ನಕಾಂತಿಗಳಿಂದ ಹೊಳೆಯುತ್ತಿರುವ ಶಿಖರಗಳನ್ನೂ, ದೊಡ್ಡ ದೊಡ್ಡ ಕಲಶಗಳಿಂದ ಪ್ರಕಾಶಿಸುವ ಪ್ರಾಸಾದಗಳನ್ನೂ ತೋರಿಸುತ್ತಾ, ಅದರ ಸೌಂದರ್ಯವನ್ನು ತಾನೇ ವರ್ಣನೆ

---

1 ವಹಂತಿ ಧೂತಮುಕ್ತ್ಯಗ್ರಮಣಿಜಾಲಯುತಸ್ಯ ಚ । ಎಂಬ ಪಾಠಾಂತರವಿದೆ.

ಸ್ವೋತ್ಫುಲ್ಲಾನುಲಪಂಕಜೋತ್ತಮಕರೈರಾಲಿಂಗ್ಯ ಹೃಷ್ಟಾಂತರಾ
ಧಾರಾಸಾರಗೃಹೇಷು ಕಾಲಮನಯತ್ಕಾಲಾತಿಗಸ್ಯೇಶಿತುಃ ।
ಪರ್ಯಂಕಾಂಕಗತಿಪ್ರಚಾರವಿಹಿತಾಸಾರಾನುಸಾರಾದರಾ
ದೇವೀ ಸಾ ಪರಮೇಶ್ವರಸ್ಯ ಲಲಿತಂ ಪಾದಾಂಬುಜಂ ಸೇವತೀ ॥೪೯॥

ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಶ್ರೀ ಚಕ್ರಸೌಧವರ್ಣನಂ ನಾಮ ಚತುರ್ದಶೋಽಧ್ಯಾಯಃ

---

ಮಾಡಿ ದೇವಿಯನ್ನು ಆನಂದಗೊಳಿಸಿದನು. ದೇವಿಯೂ ಅಷ್ಟಮೂರ್ತಿಯಾದ ವಿಶ್ವೇಶ್ವರನ ಅಪಾರವಾದ ಅಕೃತ್ರಿಮಚಿತ್ರರಚನಾಸಾಮರ್ಥ್ಯವನ್ನು, ಪದೇಪದೇ ನೋಡುತ್ತಾ, ಚಿತ್ರದಲ್ಲಿ ಸುಂದರವಾಗಿ ತೋರುವ ಆಕೃತಿಗಳನ್ನು ನೋಡಿ ಸಂತೋಷಪಡುತ್ತಾ ಕೆಲವು ಕಾಲಕಳೆದಳು. ॥೪೮॥

ದೇವಿಯು ವಿಕಸಿತ ಕಮಲದಂತೆ ಮೃದುವೂ ಕಾಂತಿಯುಕ್ತವೂ ಆದ ತನ್ನ ಉತ್ತಮವಾದ ಕರಗಳಿಂದ ಮಹೇಶ್ವರನನ್ನಾಲಿಂಗಿಸಿದಳು. ಧಾರಾರೂಪವಾಗಿ ಬೀಳುತ್ತಿರುವ ಜಲತುಂತುರುಗಳುಳ್ಳ ಮನೆಗಳಲ್ಲಿ, ಕಾಲಸ್ವರೂಪನಾದ ಯಮನನ್ನೂ ನಿಗ್ರಹಿಸಿರುವ ಮಹೇಶ್ವರನೊಡನೆ ವಿವಿಧವಿನೋದಗಳಿಂದ ಅನೇಕ ಕಾಲವನ್ನು ಕಳೆದಳು. ಕೆಲವುವೇಳೆ ಮಹೇಶ್ವರನ ತೊಡೆಯೆಂಬ ಮಂಚದ ಮೇಲೆ ಕುಳಿತು ಅವನ ಆದರಕ್ಕೆ ಪಾತ್ರಳಾಗುತ್ತಿದ್ದಳು. ಮತ್ತೆ ಕೆಲವು ವೇಳೆ ಪರಮೇಶ್ವರನ ಲಲಿತವಾದ (ಮೃದುವಾದ) ಪಾದಗಳನ್ನು ಸೇವಿಸುತ್ತಲೂ, ಆ ಮೂಲಕ ಪರಶಿವನನ್ನು ಮೆಚ್ಚಿಸುತ್ತಲೂ ಕಾಲಕಳೆಯುತ್ತಿದ್ದಳು. ॥೪೯॥

ಇಲ್ಲಿಗೆ ಶ್ರೀ ಶಿವರಹಸ್ಯದಲ್ಲಿ ಭವಸಂಜ್ಞಕವಾದ ಎರಡನೆಯ ಅಂಶದಲ್ಲಿ ಶ್ರೀಚಕ್ರಸೌಧವರ್ಣನೆಯೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಪಂಚದಶೋಽಧ್ಯಾಯಃ

### ಚಿಂತಾಮಣಿಸೌಧವರ್ಣನಂ

॥ ಈಶ್ವರ ಉವಾಚ ॥

**ಪಶ್ಯ ದೇವಿ ಮಹಾಮಂಚಂ ಪುಷ್ಪಸಾರಛದಾವೃತಂ ।**
**ಹಿರಣ್ಯಾನರ್ಘ್ಯವಸ್ತ್ರಾಢ್ಯಮಹಾಕಶಿಪುಶೋಭಿತಂ ॥೧॥**

**ಸೌಧೋದ್ಯತಪತಾಕಾಭಿರುದ್ಯಚ್ಛಶಿಶತಾಯುತಂ ।**
**ಪುಷ್ಪಚ್ಛದಪಟಪ್ರಾಂತಲೋಲಾಲಂಬಿತಮೌಕ್ತಿಕಂ ॥೨॥**

---

## ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಹದಿನೈದನೆಯ ಅಧ್ಯಾಯ

ಒಂದು ಸಾರಿ ಶಂಕರನು ದೇವಿಯೊಡನೆ ಹೀಗೆಂದನು. "ದೇವಿಯೇ, ಸಾರವತ್ತಾದ ಪುಷ್ಪ ಮತ್ತು ಪತ್ರಗಳಿಂದ ಆವೃತವಾಗಿರುವ ಈ ದೊಡ್ಡ ಮಂಚವನ್ನು ನೋಡು. ಸುವರ್ಣದಿಂದಲೂ ಅಮೂಲ್ಯವಾದ ವಸ್ತ್ರಗಳಿಂದಲೂ ಅಲಂಕೃತವಾಗಿ ದಿವ್ಯಕಾಂತಿಯಿಂದ ಈ ಮಂಚವು ಶೋಭಿಸುತ್ತಿದೆ. ॥೧॥

ಸೌಧದಲ್ಲಿ ಪ್ರಕಾಶಿಸುತ್ತಿರುವ ಪತಾಕೆಗಳು, ಸಾವಿರಾರು ಚಂದ್ರರ ಕಾಂತಿಯಂತೆ ಹೊಳೆಯುತ್ತಿರುವುವು. ಪುಷ್ಪ ಮತ್ತು ಪತ್ರೇ ಇವುಗಳ ಮಾಲೆಗಳಿಂದಲೂ, ದಿವ್ಯವಸ್ತ್ರಗಳಿಂದಲೂ ಕೂಡಿ ಮುತ್ತಿನ ಜೊಂಪೆಗಳು ಇಲ್ಲಿ ಜೋಲಾಡುತ್ತಿರುವುವು. ॥೨॥

ರತ್ನಜಾಲಿಕಯಾಲೋಲಲಲತ್ಕಾಂತಿತತೇ ಗೃಹೇ।
ಸುಗಂಧಗಂಧಬಹುಲಂ ಘ್ರಾಣತರ್ಪಣಮುತ್ತಮಂ ॥೩॥

ಚಿಂತಾಮಣಿವರೋತ್ತುಂಗಸೌಧಮುಧ್ಯಾವಲಂಬಿತಂ।
ಮಣಿಶೃಂಖಲಿಕಾಕೀಲಾಜಾಲಿಕಾಲಲಿತೋತ್ತಮಂ ॥೪॥

ಲಂಬಮಾನಝುಣಾರಾವವಿತಾನಜನಿತಾಂಬರಂ।
ವಿತಾನಾಲಂಬಿಸಹಜಗುಚ್ಛಾಮುಕ್ತಾಸರಾವೃತಂ ॥೫॥

ಮಣಿಜಾಲವರಾಲಂಬಿವಾತಘೋತಚಲದ್ದ್ಯುತಿಃ।
ಅರ್ಚಿಭಿಶ್ಚಾರ್ಚಿತಂ ತತ್ರ ವಿತಾನಸ್ವರಲಂಬಿಭಿಃ ॥೬॥

ಉದ್ಯದಿಂದುಸುಧಾಚುಂಬಿಧವಲಿಮ್ನಾಯುತಾಧಿಕಂ।
ದಿವ್ಯಚಿಂತಾಮಣಿಗೃಹಂ ಸುಬಂಧುರರಸೋತ್ಕಟಂ ॥೭॥
ಮಣಿಭೃಂಗಾರಜಾತ್ಯಚ್ಛಸುಧಾಪೂರ್ಯೈಃ ಪ್ರಪೂರಿತಂ।

---

ರತ್ನಸಮೂಹಗಳಿಂದ ಯುಕ್ತವಾಗಿರುವ ರತ್ನಮಾಲೆಗಳ ಕಾಂತಿಯು ಆ ಮನೆಯಲ್ಲೆಲ್ಲಾ ವ್ಯಾಪಿಸಿರುವುದು. ಅನೇಕ ಸುಗಂಧದ್ರವ್ಯಗಳ ವಾಸನೆಯು ಈ ಸೌಧದಲ್ಲಿ ಘ್ರಾಣೇಂದ್ರಿಯಕ್ಕೆ (ಮೂಗಿಗೆ) ತುಂಬಾ ತೃಪ್ತಿಯನ್ನುಂಟುಮಾಡುತ್ತಿರುವುದು. ॥೩॥

ತೂಗುಮಂಚದ ಸರಪಣಿಗಳಲ್ಲಿ ಮುತ್ತಿನಸರಗಳು ತೂಗಾಡುತ್ತಿರುತ್ತವೆ. ಅದರ ಮೇಲುಕಟ್ಟಿನಲ್ಲಿ, ಗೊಂಚಲುಗೊಂಚಲಾಗಿ ಕೂಡಿರುವ ಮುತ್ತಿನ ಸರಗಳು ಗಾಳಿಯಹೊಡೆತದಿಂದ ಝುಣ ಝುಣ ಶಬ್ದಮಾಡುತ್ತಿವೆ. ಆ ಮೇಲುಕಟ್ಟು, ಸುಂದರವಾದ ಮತ್ತು ನಯವಾದ ಬಟ್ಟೆಯಿಂದ ರಚಿಸಲ್ಪಟ್ಟಿದೆ. ॥೪-೫॥

ಮೇಲ್ಕಟ್ಟಿನಲ್ಲಿ ಸುತ್ತಲೂ ಇರುವ ರತ್ನಮಾಲೆಗಳು ಮಂದಮಾರುತದಿಂದ ಚಲಿತವಾಗಿ ಧ್ವನಿಗೊಡುತ್ತಿರುವುವು. ಮತ್ತು ಅದರ ಕಾಂತಿಯಿಂದ ವಿತಾನವೆಲ್ಲಾ ತೇಜಸ್ವಿಯಾಗಿರುವುದು. ॥೬॥

ಇಲ್ಲಿ ಕಾಣುವ ಚಿಂತಾಮಣಿಗೃಹವು ಉದಯಚಂದ್ರನ ಕಾಂತಿಯಿಂದ ಶುಭ್ರವಾಗಿ ಹೊಳೆಯುತ್ತಿರುವುದು. ಮತ್ತು ಚಂದ್ರಕಾಂತಶಿಲೆಯಂತೆ ರಸವನ್ನು

ಕರ್ಪೂರರಸಾರತಗರಕಸ್ತೂರೀವರಚಂದನಂ ॥೮॥

ಮಣಿಪಾತ್ರಸ್ಥಿತಂ ಪಶ್ಯ ಪ್ರಾವೃತಂ ರತ್ನಚೇಲಕೈಃ ।
ಸುಧಾರಸಭರಾಪಾರಕಲ್ಪವೃಕ್ಷಫಲಾಕುಲಂ ॥೯॥

ಮಣಿಪಾತ್ರೋಲ್ಲಸತ್ಕಾಂತಿವಿದಾರಿತಗೃಹಾಂಕಣಂ ।
ಧೂಪೋದ್ಯನ್ಮಣಿಪಾತ್ರೈಶ್ಚ ಧೂಪಧೂಮಾತ್ತದಿಙ್ಮುಖಂ ॥೧೦॥

ಧೂಪಜೋತ್ತುಂಗಧೂಮೋತ್ಥಗಂಧಬಂಧುರಮಾರುತಂ ।
ಕಲ್ಪವೃಕ್ಷಸುಮೋದ್ಭೂತಸರಶೇಖರಕೇಸರೈಃ ॥೧೧॥

ಪ್ರೋದ್ಯತ್ಸಿಂಧೂರಶುಂಡಾಭಸರಗುಚ್ಛೈಸ್ಸರೈಸ್ತಥಾ
ಮಣಿಪಾತ್ರೈರ್ವೃತಂ ಪಶ್ಯ ಪುಷ್ಪಸಂಗತವಾಯುಭಿಃ ।
ಬಂಧಗಂಧವಹಾಸಾರಗೃಹಮೇತತ್ಸುಮಧ್ಯಮೇ ॥೧೨॥

---

ಎರಚುತ್ತಿರುವುದಾಗಿದೆ. ಅಲ್ಲದೆ ಈ ಭವನದ ಮುಖ್ಯ ಸ್ಥಳಗಳಲ್ಲಿ ಸುವರ್ಣಕಲಶಗಳಲ್ಲಿ ತುಂಬಿದ ಅಮೃತವು ವಿರಾಜಿಸುತ್ತಿರುವುದು. ॥೭॥

ಇಲ್ಲಿರುವ ಕೆಲವು ಮಣಿಮಯವಾದ ಪಾತ್ರೆಗಳಲ್ಲಿ, ಅಮೃತದಂತೆ ಅತಿ ರುಚಿಕರವಾದ ಕಲ್ಪದ್ರುಮಗಳ ಹಣ್ಣುಗಳು ವಿರಾಜಿಸುತ್ತಿವೆ. ಅವುಗಳ ಮೇಲೆ, ರತ್ನಮಯವಾದ ಬಟ್ಟೆಗಳನ್ನು ಹೊದ್ದಿಸಿರುವರು. ಒಟ್ಟು ಈ ಭವನವೆಲ್ಲಾ ಸುಗಂಧದ್ರವ್ಯಗಳಿಂದ ಘಮಘಮಾಯಮಾನವಾಗಿದೆ. ॥೮-೯॥

ಮಣಿಮಯವಾದ ಪಾತ್ರೆಯಿಂದ ಹೊರಹೊಮ್ಮುವ ಪ್ರಭೆಯು, ಆ ಮನೆಯ ಒಳಗಿರುವ ಅಂಧಕಾರವನ್ನು ಕತ್ತರಿಸುವಂತೆ ಕಾಣುತ್ತಿದೆ. ರತ್ನಮಯವಾದ ಪಾತ್ರೆಗಳಲ್ಲಿ ಇರಿಸಿದ, ಧೂಪದ ಪರಿಮಳವು ದಿಗಂತಗಳನ್ನೆಲ್ಲಾ ವ್ಯಾಪಿಸಿರುತ್ತದೆ. ಗಾಳಿಯು ಧೂಪದಿಂದ ಉಂಟಾದ ಧೂಮರಾಶಿಯ ಮೇಲೆ ಬೀಸಿ ಅದರ ಪರಿಮಳವನ್ನು ಎಲ್ಲೆಡೆಯಲ್ಲಿಯೂ ಹರಡುವಂತೆ ಮಾಡುವುದು. ಮತ್ತು ಅಲ್ಲಿ ಆನೆಯ ಸೊಂಡಲಿನಂತಿರುವ ಹೂವಿನ ಸರಗಳು ಹೂವುಗಳ ಪರಾಗವನ್ನು ಈ ಸೌಧದ ತುಂಬಾ ಹರಡುತ್ತವೆ. ॥೧೦-೧೧॥

ಎಲೌ, ಸುಂದರಿಯೇ! ಮಣಿಮಯವಾದ ಪಾತ್ರೆಗಳಿಂದ ತುಂಬಿರುವ ಈ ಮನೆಯನ್ನು ನೋಡು. ಇಲ್ಲಿ ಪುಷ್ಪಗಳಮೇಲೆ ಬೀಸಿ ಅವುಗಳ ಮಕರಂದದ ಪರಿಮಳವನ್ನು ಬೀರುತ್ತಲಿರುವ ವಾಯುಚಲನವನ್ನು ನೋಡುವವಳಾಗು. ॥೧೨॥

ಉದ್ಯಚ್ಛಶಿಕಲಾಸಾರಪುಷ್ಪಶೋಭಿತಕಾಂತಿಭಿಃ ॥೧೩॥

ವಿನಾದಿತಮಹಾವೀಣಾಹ್ಯನಾಹತಸುತಂದ್ರಿತಃ ।
ಮೃದಂಗರಂಗಿತತಲಶಬ್ದಪ್ರೋದ್ಯದ್ಧ್ವನೀಭರೈಃ ॥೧೪॥

ಪೂರಿತಾಂತರ್ಗೃಹಮುಖಂ ಪಶ್ಯಾಂಬ ಕಮಲೇಕ್ಷಣೇ ।
ನೇದೃಶಂ ಶಯನೀಯಂ ತೇ ಕೈಲಾಸೇಽಪಿ ಮನೋಹರಂ ॥೧೫॥

ಬ್ರಹ್ಮವಿಷ್ಣುಮಹೇಶಾನ ಈಶ್ವರಾ ಮಂಚಪಾದುಕಾಃ ।
ಸದಾಶಿವೋಽಸ್ಯ ಫಲಕಃ ಸೋಪಧಾನಾರ್ಥತತ್ತ್ವಕೇ ॥೧೬॥

ನಿಷಣ್ಣಾ ತ್ವಂ ಘನಾನಂದರಸಾವೋದಿವರಾದರಾ ।
ಅಧಿಶೇಷ್ವ ಮಹಾದೇವಿ ದಿವ್ಯಚಿಂತಾಮಣೀಗೃಹೇ ॥೧೭॥

ಇತ್ಯುಕ್ತ್ವಾ ತಾಂ ಸಮಾಲಿಂಗ್ಯ ದೇವಃ ಕಾಮಾಂಗನಾಶನಃ ।
ಕಂದರ್ಪದರ್ಪನಾಶೋದ್ಯತ್ಕೋಟಿಕಂದರ್ಪಸುಂದರಃ ॥೧೮॥
ಕಾಮೇಶ್ವರಾಕೃತಿರಭೂತ್ಸಿಂದೂರೋತ್ತಮವಿಗ್ರಹಃ ।

---

ಈ ಮನೆಯು ಆಗ ತಾನೇ ಉದಯಿಸಿದ ಚಂದ್ರನಂತೆ ಶೋಭಿಸುವ ಪುಷ್ಪ ಪ್ರಭೆಗಳಿಂದ ಕಂಗೊಳಿಸುತ್ತಲಿರುವುದು. ಮತ್ತು ವೀಣಾ, ಮೃದಂಗ ಮುಂತಾದ ವಾದ್ಯಗಳ ಇಂಚರದಿಂದ ಈ ಚಿಂತಾಮಣಿ ಗೃಹವೆಲ್ಲವೂ ಪೂರಿತವಾಗಿ ಬಹು ಸುಂದರವಾಗಿ ಕಾಣುತ್ತಿರುವುದು. ||೧೩-೧೪||

ಪ್ರಿಯಳೇ, ಇಷ್ಟು ಸುಂದರವಾದ ಮಂಚವನ್ನು ನೀನು ಕೈಲಾಸದಲ್ಲಿಯೂ ನೋಡಲಾರೆ. ||೧೫||

ಬ್ರಹ್ಮ, ವಿಷ್ಣು, ಮಹೇಶ್ವರರೇ, ಈ ಮಂಚಕ್ಕೆ ಕಾಲುಗಳಾಗಿರುವರು. ಸದಾಶಿವನು ಹಲಗೆಯಾಗಿರುವನು. ಸಕಲ ತತ್ತ್ವಗಳೇ ಮೃದುವಾದ ದಿಂಬಾಗಿರುವುವು. ಆನಂದತುಂದಿಲಳಾಗಿ ಕುಳಿತಿರುವ ನೀನು ಇಂತಹ ಚಿಂತಾಮಣಿಗಳಿಂದ ನಿರ್ಮಿತವಾದ ಈ ಮಂಚದಲ್ಲಿ ಪವಡಿಸುವವಳಾಗು. ||೧೬-೧೭||

ಹೀಗೆಂದು ಹೇಳಿ ದೇವಿಯನ್ನು ಅಪ್ಪಿಕೊಂಡು ಮನ್ಮಥಶತ್ರುವಾದ ಶಿವನು ಮನ್ಮಥವನ್ನು ದಹನಮಾಡಿ, ಅವನಿಗಿಂತ ಕೋಟಿಪಾಲಾದ ಸೌಂದರ್ಯವನ್ನು

ಚಲಚ್ಚಂದ್ರಕಲಾಮೌಳಿಲೋಚನತ್ರಯದೀಪ್ತಿಯುಕ್ ॥೧೯॥

ತಮಾಲನೀಲಸುಗಲರಕ್ತಾಲಕ್ತಕಸತ್ಕರಃ ।
ರಕ್ತಕಂಜೋಪಮಾನಾಸ್ಯೋ ರಕ್ತಪಂಕಜಪಾಣಿಕಃ ॥೨೦॥

ರಕ್ತಪಂಕಜಧಾಮಾಂಘ್ರಿರ್ಮಣಿಜಾಲವಿಭೂಷಣಃ ।
ರತ್ನಾಂಬರಧರಾಸಾರಪ್ರಸಾರಿತದಿಶಾಮುಖಃ ॥೨೧॥

ತಮಸ್ತೋಮತಿರಸ್ಕಾರಿರತ್ನಾಭರಣಭೂಷಿತಃ ।
ಶುಭಗಂಧಾವೃತೋತ್ತುಂಗಪೀನವಕ್ಷೋರುಬಾಹುಭಿಃ ॥೨೨॥

ಏಣಂ ಚ ಪರಶುಂ ಚೈವ ದಧಾನಂ ಚ ವರಾಭಯೇ ।
ತಸ್ಮಿನ್ನಿಷಣ್ಣಃ ಪರ್ಯಂಕೇ ಪಶ್ಯನ್ ದೇವ್ಯಾಸ್ತದಾನನಂ ॥೨೩॥

---

ಬೇರುವ ಶರೀರವನ್ನು ಧರಿಸಿ ಕಾಮೇಶ್ವರನೆನಿಸಿಕೊಂಡನು. ಆಗ ಕಾಮೇಶ್ವರನು ಸಿಂಧೂರದಂತೆ ಹೊಳೆಯುವ ದೇಹವುಳ್ಳವನಾದನು. ॥೧೮॥

ಆಗ ಪರಮೇಶ್ವರನ ಶಿರಸ್ಸಿನಲ್ಲಿ ಚಲಿಸುವ ಚಂದ್ರನು ಶೋಭಿಸುತ್ತಿದ್ದನು. ಮೂರು ಕಣ್ಣುಗಳ ಕಾಂತಿಯು ಹೊರಸೂಸುತ್ತಿದ್ದಿತು. ಹೊಂಗೆಯ ವೃಕ್ಷದಂತೆ ಕಪ್ಪಾದ ಕಂಠವುಳ್ಳವನಾಗಿದ್ದನು. ಕೈಗಳಲ್ಲಿ ಅರಗಿನ ರಸವು ಶೋಭಿಸುತ್ತಿದ್ದಿತು. ॥೧೯॥

ಕೆಂದಾವರೆಯಂತೆ ಕೆಂಪಾದ ಮುಖವುಳ್ಳವನಾಗಿಯೂ, ಕನ್ನೈದಿಲೆಯಂತೆ ಕೈಗಳುಳ್ಳವನಾಗಿಯೂ, ಕೆಂಪು ಕಮಲದ ಕಾಂತಿಯಂತೆ ಕಾಂತಿಯುಳ್ಳ ಚರಣಗಳುಳ್ಳವನಾಗಿಯೂ, ನಾನಾ ರತ್ನಾಭರಣ ವಿಶಿಷ್ಟನಾಗಿಯೂ ಕಂಗೊಳಿಸುತ್ತಿದ್ದನು. ॥೨೦-೨೧॥

ಶಿವನು ಧರಿಸಿದ ರತ್ನಖಚಿತವಾದ ವಸ್ತ್ರವು ತನ್ನ ಪ್ರಭೆಯಿಂದ ದಶದಿಕ್ಕುಗಳನ್ನು ಬೆಳಗಿಸುತ್ತಿದ್ದಿತು. ಮತ್ತು ಅವನು ಧರಿಸಿದ ಅಮೂಲ್ಯವಾದ ರತ್ನಾಭರಣಗಳು ಅಂಧಕಾರರಾಶಿಯನ್ನು ಕ್ಷಣಕಾಲದಲ್ಲಿ ಓಡಿಸುವುವುಗಳಾಗಿದ್ದುವು.

ಇದಲ್ಲದೇ ಎದೆ, ತೊಡೆ ಮತ್ತು ಬಾಹುಗಳಲ್ಲಿ ಸುಗಂಧವಾದ ಚಂದನವನ್ನು ಲೇಪಿಸಿಕೊಂಡಿದ್ದನು. ಕೈಯಲ್ಲಿ ಜಿಂಕೆಯನ್ನೂ ಪರಶುವನ್ನೂ ಧರಿಸಿ, ದೇವಿಯ ಮುದ್ದು ಮುಖವನ್ನು ನೋಡುತ್ತಾ ಆ ಮಂಚದಲ್ಲಿ ಕುಳಿತುಕೊಂಡನು.॥೨೨-೨೩॥

ಮಿತ್ರಸಂದರ್ಶನೋತ್ಫುಲ್ಲರತ್ನಪಂಕಜಸನ್ಮುಖಾಂ ।
ಅಂಬಾಮಂಬುರುಹಾಭಾಕ್ಷೀಂ ತ್ರಿಣೇತ್ರಾಂ ಚಂದ್ರಶೇಖರಾಂ ॥೨೪॥

ಮುಕುಟೀಘಟಿತಾಪಾರರತ್ನಜಾಲೈಕಭಾಸುರಾಂ ।
ಬಿಂಬಕಾಂತಿತಿರಸ್ಕಾರಿರದಚ್ಛದವಿರಾಜಿತಾಂ ॥೨೫॥

ತಿಲಕೋದ್ಭಾಸಿತಮುಖಾಂ ತಾಟಂಕದ್ಯುತಿಕರ್ಣಿಕಾಂ ।
ಕರ್ಣಾಲಂಬಿತರತ್ನಾಚ್ಛಬಾಲೀಪಾಲಿವಿರಾಜಿತಾಂ ॥೨೬॥

ದಿವ್ಯಚೂಡಾಮಣಿಸ್ಫಾರಚಂಚಚ್ಚಂದ್ರಕಸೂರ್ಯಕಾಂ ।
ಸೀಮಂತರೇಖಾಯಿತಸುಪ್ರಭೋದ್ಯದಲಿಕಾಯುತಾಂ ॥೨೭॥

ಮಣಿಮಾಣಿಕ್ಯಖಚಿತಲಸನ್ಮುಕ್ತಾಫಲಾವೃತಾಂ ।
ಉದ್ಯತ್ಕವಿಸಮಸ್ವಚ್ಛನಾಸಾಭರಣಭೂಷಿತಾಂ(ಭಾಸುರಾಂ) ॥೨೮॥

---

ಆಗ ದೇವಿಯು, ಸೂರ್ಯನ ದರ್ಶನದಿಂದ ಅರಳಿರುವ ಅರವಿಂದದಂತೆ ಮುಖವುಳ್ಳವಳಾಗಿದ್ದಳು. ತ್ರಿಲೋಚನಳಾಗಿಯೂ ಕಮಲಾಕ್ಷಿಯೆನಿಸಿಯೂ ತಲೆಯಲ್ಲಿ ಚಂದ್ರನನ್ನು ಧರಿಸಿದವಳೂ ಆಗಿದ್ದಳು. ||೨೪||

ದೇವಿಯು ಧರಿಸಿದ ರತ್ನಖಚಿತವಾದ ಕಿರೀಟವು, ದೇವಿಯ ಮುಖವನ್ನು ಬೆಳಗಿಸುತ್ತಿದ್ದಿತು. ಅದಲ್ಲದೇ, ತುಟಿಗಳು ತೊಂಡೆಯಹಣ್ಣಿನ ಕಾಂತಿಯನ್ನು ತಿರಸ್ಕರಿಸುವಂತಿದ್ದುವು. ||೨೫||

ದೇವಿಯು ಮುಖದಲ್ಲಿ ತಿಲಕವನ್ನು ಧರಿಸಿ, ಕಿವಿಗಳನ್ನು ಓಲೆಯಿಂದ ಅಲಂಕರಿಸಿದ್ದಳು. ಕಿವಿಗಳಲ್ಲಿ ನೇತಾಡುತ್ತಿರುವ ರತ್ನಗಳ ಕಾಂತಿಯಿಂದ ಅವಳ ಕಪೋಲಗಳು ಶೋಭಿಸುತ್ತಿದ್ದುವು. ||೨೬||

ಸೂರ್ಯಚಂದ್ರರ ಪ್ರಕಾಶವನ್ನು ಅನುಕರಿಸುವ ಚೂಡಾಮಣಿಯನ್ನು ತಲೆಯಲ್ಲಿ ಧರಿಸಿದ್ದಳು. ಸೀಮಂತರೇಖೆಯಂತೆ (ಬೈತಲೆ) ಇರುವ ಕಾಂತಿಯುಕ್ತವಾದ ಶಿರೋಭೂಷಣವನ್ನು ಮುಂದಲೆಯಲ್ಲಿ ಮುಂಗೂದಲಿನಮೇಲೆ ಬರುವಂತೆ ಧರಿಸಿದ್ದಳು. ||೨೭||

ರತ್ನಗಳಿಂದಲೂ ಮತ್ತು ಮಾಣಿಕ್ಯಗಳಿಂದಲೂ ನಿರ್ಮಿತವಾದ ಮುತ್ತಿನ ಸರದಿಂದ ಭೂಷಿತಳಾಗಿದ್ದಳು. ಅವಳ ನಾಸಾಭರಣವು (ಮೂಗುಬೊಟ್ಟು) ಆಗ ತಾನೇ ಉದಯಿಸಿದ ಶುಕ್ರಗ್ರಹದ ಕಾಂತಿಯನ್ನು ಅನುಕರಿಸುತ್ತಿತ್ತು. ||೨೮||

ಕಂಠೇ ಮಂಡಲಿಕಾಕ್ಲೃಪ್ತರತ್ನಕಂಠಸರದ್ಯುತಿಂ ।
ಚಿಂತಾಕಲಂಬಿತಸ್ವಚ್ಛಮುಕ್ತಾಗುಚ್ಛವಿರಾಜಿತಾಂ ॥೨೯॥

ಮಣಿಮುಕ್ತಾಸರಾಪಾರಲಲತ್ಪದಕಸಂತತಿಂ ।
ರತ್ನವೈಡೂರ್ಯಗೋಮೇದಪುಷ್ಯರಾಗಹರಿನ್ಮಣಿಂ ॥೩೦॥

ಕಲ್ಪಿತಾಚ್ಛಮಹಾರಾಗಪದ್ಮರಾಗೋಜ್ವಲಪ್ರಭಾಂ ।
ಭಾಸಿತಾಪಾರಸತ್ಕಾಂಚೀಕಟೀತಟಮನೋಹರಾಂ ॥೩೧॥

ರಮ್ಯಕಿಂಕಿಣಿಕಾಕ್ಲೃಪ್ತಮಣಿಮಾಣಿಕ್ಯಮೌಕ್ತಿಕೈಃ ।
ಖಚಿತಾಪಾರಸಾರೋದ್ಯದ್ವರಹಸ್ತಸುಸಂವೃತಾಂ ॥೩೨॥

ಬಾಹುಬಂಧಮಹಾನಾಗಫಣಾಬಂಧೋರುಮೌಕ್ತಿಕೈಃ ।
ಜ್ವಲತ್ಪ್ರಭೈ ರತ್ನಗುಚ್ಛಪ್ರಭಾಭಾಸ್ವರಶೋಭಿತಾಂ ॥೩೩॥

---

ಕಂಠದಲ್ಲಿ ಮಂಡಲಾಕಾರವಾಗಿರುವ ಪದಕವನ್ನು ಧರಿಸಿದ್ದಳು. ಆ ಪದಕಕ್ಕೆ ಸಂಬಂಧಿಸಿದಂತೆ ಮುತ್ತಿನಗೊಂಚಲುಗಳು ತೂಗಾಡುತ್ತಿದ್ದುವು. ॥೨೯॥

ಆ ದೇವಿಯು ರತ್ನ, ವೈಡೂರ್ಯ, ಗೋಮೇದಕ, ಪುಷ್ಪರಾಗ, ಕೆಂಪು ನೀಲಮಣಿ, ಇವುಗಳಿಂದ ರಚಿತವಾದ ಸರಗಳನ್ನೂ, ಅವುಗಳ ಮಧ್ಯಭಾಗದಲ್ಲಿ ಅನೇಕ ಪದಕಗಳನ್ನು ಧರಿಸಿದ್ದಳು. ॥೩೦॥

ಅತಿ ನಿರ್ಮಲವಾದ ಕಾಂತಿಯನ್ನು ಎರಚುವ ಪದ್ಮರಾಗಮಣಿಗಳಿಂದ ಭೂಷಿತಳಾಗಿದ್ದಳು. ಮತ್ತು ಸೊಂಟದಲ್ಲಿ ಥಳಥಳನೆ ಹೊಳೆಯುವ ಮಣಿಮಯವಾದ ಡಾಬಿನಿಂದ ಶೋಭಿಸುತ್ತಿದ್ದಳು. ॥೩೧॥

ಮನೋಹರವಾದ ಕಿರುಗೆಜ್ಜೆಗಳ ಸರವನ್ನು ಸೊಂಟದಲ್ಲಿ ಹಾಕಿದ್ದಳು. ಮತ್ತು ರತ್ನಮಯವಾದ ಹಸ್ತಾಭರಣಗಳು ದೇವಿಯ ಕೈಗಳನ್ನು ಅಲಂಕರಿಸುತ್ತಿದ್ದುವು. ॥೩೨॥

ಎರಡು ತೋಳುಗಳಲ್ಲಿಯೂ ನಾಗಾಭರಣಗಳನ್ನು (ನಾಗಮುರಿ) ಧರಿಸಿರುವಳು. ಆ ನಾಗಾಭರಣದ ಹೆಡೆಗಳಲ್ಲಿರುವ ಮುತ್ತುಗಳು, ರತ್ನಗಳು, ಥಳಥಳನೆ ಹೊಳೆಯುತ್ತಿದ್ದುವು. ॥೩೩॥

ವಂಕಿಕಾಮುಖಸಂಫುಲ್ಲರತ್ನಸೇವಂತಿಕಾತತಿಂ ।
ಮಣಿಮಂಡಲಸಂಕ್ಲುಪ್ತರತ್ನಸೇವಂತಿದೀಧಿತಿಂ ॥೩೪॥

ಪುರಾಕೇತಶಿರೋತ್ತುಂಗಮುಕ್ತಾರತ್ನೈಕಶೇಖರಾಂ ।
ಕುಮುದಾಕಾರಮುದ್ಗಚ್ಛನ್ಮಣಿಸುಂದರಸಂತತಿಂ ॥೩೫॥

ಮಲ್ಲಿಕಾಮೋದಿಧಮ್ಮಿಲ್ಲಮಲ್ಲಿಕಾಲಿಸರಾವೃತಾಂ ।
ರಕ್ಷಾಮಣಿಮಯಾಕಾರಛತ್ರಾಕವರಶೋಭಿತಾಂ ॥೩೬॥

ರತ್ನಾಂಗುಲಿಪ್ರವಿತತಪ್ರಭಾಜಾಲಲಸತ್ಕರಾಂ ।
ನಿಚೋಳಕೀಲಿತಾಪಾರನಾನಾರತ್ನತತಿದ್ಯುತಿಂ ॥೩೭॥

ರತ್ನಾಂಚಲಲಸದ್ವಸ್ತ್ರಾಂ ಕುಂಕುಮಾರುಣಸುಂದರಾಂ ।
ಪಾಟೀರರಸಕಸ್ತೂರೀಸಾರಲೇಪಿತಸತ್ಕುಚಾಂ ॥೩೮॥

---

ಬಾಹುಗಳಲ್ಲಿ ಹಾಕಿಕೊಂಡಿದ್ದ ವಂಕಿಯ ಮುಂದುಗಡೆ ರತ್ನಗಳಿಂದ ನಿರ್ಮಿತವಾದ ಸೇವಂತಿಗೆ ಹೂಗಳು ಬಹಳವಾಗಿ ಹೊಳೆಯುತ್ತಿದ್ದುವು. ಅಲ್ಲಲ್ಲಿ ಮಣಿಗಳನ್ನು ಕಟ್ಟಿದ್ದ ರತ್ನಮಯವಾದ ಸೇವಂತಿಗೆಗಳಿಂದ ತುಂಬಿದ ಆಭರಣದಿಂದ ಶೋಭಿಸುತ್ತಿದ್ದಳು. ॥೩೪॥

ಮುತ್ತುರತ್ನಗಳಿಂದ ನಿರ್ಮಾಣಮಾಡಿದ ಶೀರ್ಷಾಭರಣದಿಂದಲೂ, ಕುಮುದಪುಷ್ಪದಂತೆ ಕೆತ್ತಿದ್ದ ಮಣಿಮಯವಾದ ಒಡವೆಗಳಿಂದಲೂ, ದೇವಿಯು ಕಾಂತಿಯಿಂದ ಸುಂದರಿಯಾಗಿ ಕಾಣುತ್ತಿದ್ದಳು. ॥೩೫॥

ಕೇಶಪಾಶದಲ್ಲಿ ಘಮಘಮಿಸುವ ಮಲ್ಲಿಗೆಯ ಮಾಲಿಕೆಗಳನ್ನು ಮುಡಿದಿದ್ದಳು. ರಕ್ಷಾಮಣಿ (ಯಂತ್ರ) ಯಂತೆ ಇರುವ ಪದಕವನ್ನೂ ಹಾಕಿಕೊಂಡಿದ್ದಳು. ॥೩೬॥

ಬೆರಳುಗಳಲ್ಲಿ ರತ್ನಪ್ರಭೆಗಳಿಂದ "ಝುಗಝುಗಿ"ಸುವ ಉಂಗುರಗಳನ್ನು ಹಾಕಿಕೊಂಡಿದ್ದಳು. ಮತ್ತು ಅನೇಕವಿಧವಾದ ರತ್ನಗಳನ್ನು ಕೆತ್ತಿದ ಕುಪ್ಪಸವನ್ನು ತೊಟ್ಟಿದ್ದಳು. ॥೩೭॥

ರತ್ನಮಯವಾದ ಅಂಚುಳ್ಳ ಸೀರೆಯನ್ನು ಉಟ್ಟು ದೇವಿಯು ಕುಂಕುಮವನ್ನು ಧರಿಸಿದ್ದುದರಿಂದ ಅತಿಯಾದ ಅರುಣಕಾಂತಿಯಿಂದ ಶೋಭಿಸುತ್ತಿದ್ದಳು.

ಚಂದನದ್ರವದಿಗ್ಧಾಂಗೀಂ ಮುಗ್ಧಸ್ಮಿತಮನೋಹರಾಂ ।
ಅಂಗುಷ್ಠಿಕಾಲಸದ್ಧೀರಕಲಿಕೋತ್ಕಾಂತಿತಾಂಬರಾಂ ॥೩೯॥

ಘುಮುಘುಮಿತಸದ್ವಸ್ತ್ರಾಂ ಪಟವಾಸೈಕವಾಸಿತಾಂ ।
ಪದಾಂಬುಜತಲಾರಕ್ತಜಾಟವೀಲಲಿತೋಜ್ವಲಾಂ ॥೪೦॥

ಮಂಜೀರರತ್ನಜರಣಜ್ಝಿಂಜನ್ಮಂಜುಲನಿಸ್ವನಾಂ ।
ಚತುರ್ಭುಜೇಕ್ಷುಕೋದಂಡಪಾಶಾಂಕುಶವರೋಜ್ವಲಾಂ ॥೪೧॥

ಸೌಂದರ್ಯಧಾರಾಸರ್ವಸ್ವಾಂ ತಾಮಾಲಿಂಗ್ಯ ಚ ಸುಂದರೀಂ ।
ಮಹಾದೇವ್ಯಾ ನಿಷಣ್ಣೋಽಭೂತ್ತಸ್ಮಿನ್ಮಂಚೇ ಮನೋಹರೇ ॥೪೨॥

---

ಚಂದನರಸ, ಕಸ್ತೂರೀ ಇಂತಹ ಸುಗಂಧದ್ರವ್ಯಗಳನ್ನು ಸ್ತನಗಳಿಗೆ ಲೇಪಿಸಿ ಕೊಂಡಿದ್ದಳು. ॥೩೮॥

ಶರೀರಕ್ಕೆಲ್ಲಾ ಚಂದನ ಗಂಧವನ್ನು ಲೇಪನಮಾಡಿಕೊಂಡಿರುವ ದೇವಿಯು ಶುಚಿಯಾದ ಮಂದಹಾಸದಿಂದ ಮನೋಹರಳಾಗಿ ತೋರುತ್ತಿದ್ದಳು. ತನ್ನ ಬೆರಳಿನಲ್ಲಿ ಧರಿಸಿರುವ ಮೊಗ್ಗಿನಂತಿರುವ ಹೀರರತ್ನದ ಅಂಗುಳೀಯಕದ ಕಾಂತಿಯು ಉಟ್ಟಿದ್ದ ಬಟ್ಟೆಯಮೇಲೆಲ್ಲಾ ಹರಡಿದ್ದಿತು. ॥೩೯॥

ದೇವಿಯು ಸುಗಂಧದ ಪುಡಿಯಿಂದ ಸುವಾಸಿತವಾಗಿ "ಘಮಘಮ" ವೆಂದು ವಾಸನೆಯುಳ್ಳ ಉತ್ತಮವಾದ ಪಟ್ಟೆವಸ್ತ್ರಗಳನ್ನು ಧರಿಸಿದ್ದಳು. ಮಹೇಶ್ವರಿಯ ಉದ್ದವಾಗಿ ಸುಂದರವಾಗಿರುವ ಜಡೆಯು, ಅವಳ ಪಾದಕಮಲದವರೆವಿಗೂ ವ್ಯಾಪಿಸಿದ್ದಿತು. ॥೪೦॥

ದೇವಿಯು ರತ್ನಮಯವಾದ ಕಾಲುಕಡಗವನ್ನು ಧರಿಸಿದ್ದುದರಿಂದ ಅದರ ನಾದವು ಮನೋಹರವಾಗಿ ಕಿವಿಗಿಂಪಾಗುವಂತೆ ಕೇಳುತ್ತಿದ್ದಿತು. ತನ್ನ ನಾಲ್ಕು ಭುಜಗಳಲ್ಲಿಯೂ, ಕ್ರಮವಾಗಿ ಇಕ್ಷುಚಾಪ, ಪಾಶಾಯುಧ ಮತ್ತು ಅಂಕುಶ, ವರದ ಮುದ್ರೆ ಇವುಗಳನ್ನು ಹಿಡಿದು ಮಹಾದೇವಿಯು ಉಜ್ಜ್ವಲವಾಗಿ ತೋರುತ್ತಿದ್ದಳು. ॥೪೧॥

ಸರ್ವಸೌಂದರ್ಯಗಳಿಗೂ ನಿಧಿಯಂತಿರುವ ಸುಂದರಾಂಗಿಯಾದ ಆ ಮಹಾದೇವಿಯನ್ನು ಮಹೇಶ್ವರನು ಆಲಿಂಗಿಸಿ, ಮನೋಹರವಾದ ಅದೇ ಮಂಚದಲ್ಲಿ ದೇವಿಯೊಡನೆ ಕುಳಿತುಕೊಂಡನು. ॥೪೨॥

**ಸುಧಾಪಾನರಸಾಸ್ವಾದಿದಿವ್ಯಚಂದನಚರ್ಚಿತಃ**
**ದಿವ್ಯಪುಷ್ಪಸರಾಸಾರಲಸದ್ಗಲತರಂಗಕಃ ॥೪೩॥**

**ರತ್ನವೃಕ್ಷೋದ್ಯತಾಪಾರಧೂಪವರ್ತಿಸುತರ್ಪಿತಃ ।**
**ಮಣಿದ್ವೀಪಮಹಾವೃಕ್ಷಮುದ್ಭಾಸಿತದಿಗಂತರಃ ॥೪೪॥**

**ದ್ರವತ್ಪುಷ್ಪೋತ್ಥಸಲಿಲಾಸಾರಶೀಕರಸುಂದರಃ ।**
**ವಿಜಹಾರ ಮಹಾದೇವಃ ಕಾಮೇಶಃ ಕಾಮನಾಶನಃ ॥೪೫॥**

**ಕಾಮೇಶ್ವರ್ಯಾ ಮಹಾದೇವ್ಯಾ ಚಿರಂ ಕಾಲಂ ದ್ವಿಜೋತ್ತಮ ॥೪೬॥**

**ಚಿಂತಾಮಣೀಸಾರಗೃಹಾಂತರಾಲವಿದ್ಯೋತಿತಾಪಾರಮಣೀಂದ್ರಜಾಲೈಃ ।**
**ಮಂಚೇ ಸುಗಂಧ್ಯುತ್ತರಸಚ್ಛದಾವೃತೇ ದೇವ್ಯಾ ಹರಸ್ತತ್ರ ಮುದಾ ವಿಜಹ್ರೇ ॥೪೭॥**

---

ಅಮೃತಪಾನದ ಆನಂದವನ್ನುಂಟುಮಾಡುವ ದಿವ್ಯಚಂದನವನ್ನು ಮಹಾದೇವನು ತನ್ನ ದೇಹಕ್ಕೆಲ್ಲಾ ಲೇಪಿಸಿಕೊಂಡಿದ್ದನು. ವಿಷಕಂಠನಾದ ಮಹೇಶ್ವರನ ಕೊರಳಲ್ಲಿ ಅನೇಕ ದಿವ್ಯವಾದ ಪುಷ್ಪಮಾಲೆಗಳು ಅಲೆಅಲೆಯಾಗಿ ಶೋಭಿಸುತ್ತಿದ್ದವು. ॥೪೩॥

ರತ್ನಮಯವಾದ ಅಗರುವೇ ಮುಂತಾದ ಧೂಪವೃಕ್ಷಗಳ ಚಕ್ಕೆಯಿಂದುಂಟಾದ ಧೂಪವು ಮಹೇಶ್ವರನಿಗೆ ಬಹು ಸಂತೋಷವನ್ನುಂಟುಮಾಡುತ್ತಿದ್ದಿತು. ಮಹೇಶ್ವರನ ಮಹಿಮೆಯಿಂದ ಈ ಮಣಿದ್ವೀಪದಲ್ಲಿರುವ ದೊಡ್ಡ ದೊಡ್ಡ ವೃಕ್ಷಗಳು ತಮ್ಮ ಕಾಂತಿಯಿಂದ ದಿಕ್ಕುಗಳನ್ನೆಲ್ಲಾ ಪ್ರಕಾಶಗೊಳಿಸುತ್ತಿದ್ದುವು. ॥೪೪॥

ತಾನು ಧರಿಸಿರುವ ಪುಷ್ಪಮಾಲೆಗಳಲ್ಲಿರುವ ನೀರಿನ ತುಂತುರುಗಳು ಮಹೇಶ್ವರನ ದೇಹದಮೇಲೆ ಹನಿಹನಿಯಾಗಿ ಬಿದ್ದು ಮಹಾದೇವನು ಇದರಿಂದ ಅತಿಯಾಗಿ ಶೋಭಿಸುತ್ತಿದ್ದನು. ॥೪೫॥

ಸಕಲ ಮನೋರಥಗಳಿಗೂ ಒಡೆಯನಾಗಿ ಕಾಮೇಶ್ವರನೆನಿಸಿದ ಮಹಾದೇವನು, ಈ ಮಣಿದ್ವೀಪದಲ್ಲಿ ತನ್ನ ಪ್ರೇಯಸಿಯಾದ ಗಿರಿಜೆಯೊಡನೆ ಈರೀತಿ ವಿಹರಿಸಿದನು. ॥೪೬॥

ಸಾರವತ್ತಾದ ಚಿಂತಾಮಣಿಗಳಿಂದ ನಿರ್ಮಿತವಾಗಿರುವ ಸೌಧಮಧ್ಯದಲ್ಲಿ, ಅನೇಕ ಉತ್ತಮರತ್ನಗಳಿಂದ ನಿರ್ಮಿಸಲ್ಪಟ್ಟ ಉತ್ತಮವಾದ ಸುಗಂಧದ್ರವ್ಯಗಳಿಂದ

ನಾನಾಗಂಧಸುಮಾನುಮೋದಿತರಸಾಸಾರೈಕಶುದ್ಧಾಂತರಃ
ಕಾಮೇಶಃ ಕಮನೀಯಸೌರಭಭರೈರಾನಂದಿತಸ್ವಾಂತರಃ ।
ಕಾಮೇಶ್ಯಾ ಶಿವಯಾ ಕೃಪಾರಸಭರೈಸ್ಸಂಕ್ಲುಪ್ತಭೋಗೋತ್ಸವೈ
ರ್ಜಾತಾನಂದಭರೈಸ್ಸಹೈವ ಕರುಣಾಮೂರ್ತಿಃ ಕೃಪಾಸಾಗರಃ ॥೪೮॥

॥ ಈಶ್ವರ ಉವಾಚ ॥

ನಿತ್ಯಾರಕ್ಷಣದೀಕ್ಷಿತೇನ ನಗರಂ ಖ್ಯಾತಂ ವರಂ ಶ್ರೀಪುರಂ
ದ್ವೀಪೇಽಸ್ಮಿನ್ಮಣಿಕಲ್ಪಿತೇ ತದುಪರಿ ಮಧ್ಯಸ್ಥಿತಂ ತೇ ಗೃಹಂ ।
ಯದ್ವಾ ಚಿಂತಿತಕಾಮದಾನಮಣಿಭಿಃ ಕ್ಲುಪ್ತಂ ತ್ವದರ್ಥೇ ಮಯಾ
ನಿತ್ಯಾಭಿಃ ಪುರಮೇತದದ್ಯ ಕೃಪಯಾ ಭೋಭುಜ್ಯತಾಂ ಭೂತಿಭಿಃ ॥೪೯॥

---

ಆವೃತವಾದ ಆ ಮಂಚದಲ್ಲಿ ಕಾಮೇಶ್ವರಿಯೆನಿಸಿದ ಮಹಾದೇವಿಯೊಡನೆ ಮಹೇಶ್ವರನು ಬಹುಕಾಲ ಸಂತೋಷದಿಂದ ವಿಹರಿಸಿದನು. ॥೪೭॥

ಆ ದ್ವೀಪದಲ್ಲಿ, ಅನೇಕ ಸುಗಂಧಭರಿತವಾದ ಹೂವುಗಳ ಮಕರಂದವಾಸನೆಯಿಂದಲೂ ಪರಿಶುದ್ಧವಾದ ಅಂತಃಕರಣದಿಂದಲೂ, ಕಾಮೇಶ್ವರನು, ಮನೋಹರವಾದ ಸುಗಂಧವಸ್ತುಗಳ ಸಮೂಹದಿಂದ ಆನಂದಭರಿತನಾಗಿದ್ದನು. ಕರುಣಾಮೂರ್ತಿಯೂ ಕೃಪಾಸಾಗರನೂ ಆದ ಮಹೇಶ್ವರನು ಕಾಮೇಶ್ವರಿಯಾದ ದೇವಿಯೊಡನೆ, ನಾನಾ ವಿಧವಾದ ಭೋಗಗಳನ್ನು ಹೊಂದುತ್ತಾ ಬಹುಕಾಲ ಹಾಗೆ ವಿಹರಿಸಿದನು. ॥೪೮॥

ದೇವಿಯೇ, ನಿತ್ಯವೂ ಪ್ರಪಂಚರಕ್ಷಣಕಾರ್ಯದಲ್ಲಿ ದೀಕ್ಷಾಬದ್ಧನಾಗಿರುವ ನಾನು ನಿನಗೋಸ್ಕರ ಶ್ರೀಪುರವೆಂದು ಪ್ರಸಿದ್ಧವಾದ ಈ ನಗರವನ್ನು ನಿರ್ಮಿಸಿರುವೆನು. ಈ ಶ್ರೀಪುರವು ಮಣಿಮಯವಾದ ಈ ಮಣಿದ್ವೀಪದಲ್ಲಿರುವುದು. ಇಂತಹ ಈ ಶ್ರೀಪುರದ ಮಧ್ಯಭಾಗದಲ್ಲಿ, ಭಕ್ತರ ಅಭೀಷ್ಟವನ್ನೆಲ್ಲಾ ಒಡನೆಯೇ ಸಲ್ಲಿಸುವ ದಿವ್ಯಮಣಿಗಳಿಂದ ಆವೃತವಾಗಿ ಈ ಭವನವು ರಚಿತವಾಗಿದೆ. ಇಲ್ಲಿ ನಿತ್ಯವಾದ ಅಣಿಮಾದ್ಯಷ್ಟೈಶ್ವರ್ಯವೂ ತುಂಬಿರುವುದು. ಪ್ರಿಯೇ! ಅನವರತವೂ ಸುಖಪ್ರದವಾದ ಈ ದ್ವೀಪದಲ್ಲಿ ನೀನು ಸರ್ವದಾ ನೆಲಸಿ ನಿನ್ನ ಪೂರ್ಣಾನುಗ್ರಹದಿಂದ ಇದನ್ನುದ್ಧರಿಸು ಎಂದು ಮಹಾದೇವನು ಗಿರಿಜೆಗೆ ಹೇಳಿದನು. ॥೪೯॥

|| ಸ್ಕಂದ ಉವಾಚ ||

**ಬ್ರಹ್ಮಾವಿಷ್ಣುಸದಾಶಿವೇಶ್ವರಮಹಾರುದ್ರೋರುಮಂಚೇಶ್ವರಾ**
**ಸ್ತೀರ್ಣೇ ತಲ್ಪವರೇ ಶಿವಾಂಕನಿವಸಾ ಶ್ರೀಕಾಮದಾನೇಶ್ವರೀ ।**
**ಕಾಮಾಖ್ಯೇನ ಮಹೇಶ್ವರೇಣ ತ್ರಿಜಗನ್ನಾಥೇನ ಹರ್ಷಾಂತರಾ**
**ನಿತ್ಯಾಭಿಃ ಪರಿಸೇವಿತಾ ಭಗವತೀ ಪಾಯಾತ್ಸದಾ ಮಾಂ ದ್ವಿಜಾಃ॥೫೦॥**

**ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಚಿಂತಾಮಣಿ**
**ಸೌಧವರ್ಣನಂ ನಾಮ ಪಂಚದಶೋಽಧ್ಯಾಯಃ**

---

ಜೈಗೀಷವ್ಯಾದಿ ಮುನಿಗಳಿರಾ! ಬ್ರಹ್ಮ, ವಿಷ್ಣು, ಮಹೇಶ್ವರ, ಸದಾಶಿವ ರುದ್ರ, ಇವರುಗಳಿಂದ ಆಶ್ರಯಹೊಂದಿರುವ, ಈ ದಿವ್ಯವಾದ ಮಂಚದಲ್ಲಿ, ಸರ್ವ ಕಾಮಪ್ರದಳಾದ ಕಾಮೇಶ್ವರಿಯು ಮೂರುಲೋಕಗಳಿಗೂ ಸ್ವಾಮಿಯಾಗಿರುವ ಕಾಮೇಶ್ವರನೊಡನೆ ವಿಹರಿಸುತ್ತಾ ಆನಂದಭರಿತಳಾಗುತ್ತಿದ್ದಳು. ಆ ಸಮಯದಲ್ಲಿ ಶಾಶ್ವತವಾದ ಸಕಲಸಿದ್ಧಿಗಳೂ ಆ ದೇವಿಯನ್ನು ಸೇವಿಸುತ್ತಿದ್ದುವು. ಈ ರೀತಿಯಾಗಿ ಸರ್ವಸಂಸೇವ್ಯಳೂ, ಮಹಾಮಹಿಮಳೂ ಆದ ಕಾಮೇಶ್ವರೀದೇವಿಯು ನನ್ನನ್ನು ಯಾವಾಗಲೂ ಕಾಪಾಡಲಿ ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ತಿಳಿಸಿದನು. ||೫೦||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಭವವೆಂಬ ಎರಡನೆಯ ಅಂಶದಲ್ಲಿ
ಚಿಂತಾಮಣಿ ಸೌಧವರ್ಣನೆಯೆಂಬ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಷೋಡಶೋಽಧ್ಯಾಯಃ

## ಶ್ರೀಚಕ್ರವರ್ಣನಂ

॥ ಮುನಯ ಊಚುಃ ॥

**ಕಥಂ ದೇವ್ಯಾ ತಾರಕಾರೇ ಪುರಂ ಶ್ರೀಪುರನಾಮಕಂ ।**
**ಕಲ್ಪಿತಂ ಶ್ರೀಮಹೇಶಾಜ್ಞಾವಶತಸ್ತದ್ವದಾದ್ಯ ನಃ ॥೧॥**

॥ ಸ್ಕಂದ ಉವಾಚ ॥

**ಯಥಾ ದೇವ್ಯಾ ನಿರ್ಮಿತಂ ಚ ಶ್ರೀಪುರಂ ಶೃಣುತ ದ್ವಿಜಾಃ ।**
**ಕಾಮೇಶೇನ ಶಿವೇನೈವ ಸಾ ಪ್ರೋಕ್ತಾ ಪರಮೇಶ್ವರೀ ॥೨॥**

**ಲಲಿತಾ ಶ್ರೀಮಹಾದೇವೀ ಸೈವ ತ್ರಿಪುರಸುಂದರೀ ।**
**ಮನಸಾ ಚಿಂತಯಾಮಾಸ ಪುರಂ ತತ್ರ ಮನೋರಮಂ ॥೩॥**

---

### ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಹದಿನಾರನೆಯ ಅಧ್ಯಾಯ

ಸಕಲ ಮಹರ್ಷಿಗಳೂ ಕುಮಾರಸ್ವಾಮಿಯನ್ನು ಕುರಿತು "ತಾರಕಾರಾತಿಯೇ, ದೇವಿಯು ಮಹೇಶ್ವರನ ಅಪ್ಪಣೆಯಿಂದ ಶ್ರೀಪುರವೆಂಬ ಪ್ರದೇಶವನ್ನು ಕಲ್ಪಿಸಿದಳಷ್ಟೆ. ಅದರ ಕ್ರಮವನ್ನು ದಯೆಯಿಂದ ನಮಗೆ ವಿವರಿಸಬೇಕು" ಎಂದು ಕೇಳಿಕೊಂಡರು. ॥೧॥

ಆಗ ಕುಮಾರಸ್ವಾಮಿಯು ಋಷಿಗಳನ್ನು ಕುರಿತು ಹೀಗೆ ಹೇಳಿದನು. "ಎಲೈ ಋಷಿಜನರಿರಾ, ಕಾಮೇಶ್ವರನಾದ ಶಂಕರನು ದೇವಿಗೆ ಶ್ರೀಪುರವನ್ನು

ಮಣಿಪ್ರಾಕಾರಶತೈರ್ಭೂಧರಾಕಾರಗೋಪುರೈಃ ।
ಮಾಣಿಮಾಣಿಕ್ಯಖಚಿತನವರತ್ನೋರುಕಾಂತಿಭಿಃ ॥೪॥

ಪ್ರಫುಲ್ಲಸುಮನಾಮೋದಿ ರತ್ನವೃಕ್ಷವನಾವೃತಂ ।
ಕಲ್ಪವಾಟೀಪರಿವೃತನೀಪೋದ್ಯಾನವಿರಾಜಿತಂ ॥೫॥

ಸುಧಾಸಿಂಧುತರಂಗೌಘ ರಮ್ಯಪರ್ಯಂತಮಾರುತಂ ।
ನವರತ್ನಾಗಾರಸೌಧಕುಂಭೋದ್ಯತ್ಕಾಂತಿಕಾಂತಿತಂ ॥೬॥

ದಿವ್ಯಮುಕ್ತಾವಲೀಕ್ಲುಪ್ತಸರಾವಲಿವಿಭೂಷಿತೈಃ ।
ಗೋಮೇದಪುಷ್ಯರಾಗೋದ್ಯತ್ಪ್ರವಾಲಮಣಿತೋರಣೈಃ ॥೭॥

ಹರಿಜಾಲಕಸಂಛನ್ನಕುಂಭಮೌಳಿವಿರಾಜಿತೈಃ ।
ಸೌಧಪಂಕ್ತಿಸಮುತ್ಸೇಧವಿಶಾಲಾಯುತಶಸ್ತದಾ ॥೮॥

---

ನಿರ್ಮಿಸಲು ಅಪ್ಪಣೆಮಾಡಿದನಷ್ಟೆ. ಲಲಿತಾ, ತ್ರಿಪುರಸುಂದರೀ, ಮಹಾದೇವೀ, ಮುಂತಾದ ಅನೇಕ ನಾಮಗಳುಳ್ಳ ದೇವಿಯು ಪರಶಿವನ ಅಪ್ಪಣೆಯಂತೆ ಶ್ರೀಪುರವನ್ನು ನಿರ್ಮಿಸಲು ಮನಸ್ಸಿನಲ್ಲಿಯೇ ಯೋಚಿಸಿ ಹೀಗೆ ನಿರ್ಮಾಣಮಾಡಿದಳು. ||೧-೩||

ಸಂಕಲ್ಪಮಾತ್ರದಿಂದ ಸೃಷ್ಟವಾದ ಆ ಪುರಕ್ಕೆ ನೂರಾರು ರತ್ನಮಯ ಪ್ರಾಕಾರಗಳೂ, ಪರ್ವತದಂತಿರುವ ಗೋಪುರಗಳೂ, ಅವುಗಳಲ್ಲಿ ಅತಿಶಯವಾದ ಕಾಂತಿಯಿಂದ ಕೂಡಿರುವ ನವರತ್ನಗಳೂ ಕಂಗೊಳಿಸುತ್ತಿದ್ದುವು. ||೪||

ಅರಳಿದ ಹೂವಿನ ವಾಸನೆಯಿಂದ ಕೂಡಿದ ರತ್ನಮಯವಾದ ವೃಕ್ಷವನಗಳೂ, ಕಲ್ಪವೃಕ್ಷಗಳಿಂದ ಸುತ್ತುವರಿದ ನೀಪವನಗಳೂ, ಅವುಗಳ ಮೇಲೆ ಅಮೃತಸಮುದ್ರದ ಅಲೆಗಳಿಂದ ಬೀಸುವ ವಾಯುವೂ, ಬಹಳ ಮನೋಹರವಾಗಿದ್ದಿತು. ಮತ್ತು ಆ ಪುರದ ಸೌಧಗಳ ಮೇಲಿನ ಕಲಶಗಳಲ್ಲಿ ಕೆತ್ತಿರುವ ನವರತ್ನಗಳ ಕಾಂತಿಯು ಸರ್ವತ್ರ ಎರಚುತ್ತಿರುವುದು. ||೫-೬||

ದಿವ್ಯವಾದ ಮುತ್ತುಗಳ ಸರಗಳೂ, ಗೋಮೇದಕ, ಪುಷ್ಯರಾಗ, ಹವಳ ಮುಂತಾದುವುಗಳಿಂದ ನಿರ್ಮಿತವಾದ ತೋರಣಗಳೂ, ಇಂದ್ರನೀಲಮಣಿಗಳಿಂದ

ಮಣಿಮಾಣಿಕ್ಯಖಚಿತನವರತ್ನವಿಚಿತ್ರಿತೈಃ ।
ಧೂಪಿತೈಸ್ತಗರಾಮೋದಪಾಟೀರೋಶೀರಚಂದನೈಃ ॥೯॥

ಪುರದ್ವಾರೈರ್ಧವಲಿತಗವಾಕ್ಷವಲಭೀಯುತೈಃ ।
ಮಂಟಪಾವಲಿಸಂಛನ್ನಮೌಲಿಪಾಲಿತತದ್ದ್ಯುತಿಃ ॥೧೦॥

ಮಣಿರೋಚಿರ್ಯುತಾದರ್ಶಕುಟ್ಟಿಮೋದ್ಯತ್ಕವಾಟಕೈಃ ।
ಪ್ರಾಕ್ಪಶ್ಚಾದುತ್ತರೇ ಚೈವ ದಕ್ಷಿಣೇ ಪೂರ್ವತಃ ಕ್ರಮಾತ್ ॥೧೧॥

ಮಣಿಗೋಪುರಮೌಲಿಸ್ಥಹೀರೋದ್ಯತ್ಕಲಶಪ್ರಭೈಃ ।
ತಿರಸ್ಕಾರಿತಚಂದ್ರಾರ್ಕೈಃ ಪ್ರಾಕಾರೈರ್ಮಣಿಕಲ್ಪಿತೈಃ ॥೧೨॥

ನಿಯುತಾಯುತಗೋದ್ಭಾಸಿ ಸಮುಚ್ಛ್ರಾಯೋರುಮಂಡಲೈಃ ।
ಗೋಮೇದಪುಷ್ಯರಾಗೇಂದ್ರನೀಲವೈಡೂರ್ಯಹೀರಜೈಃ ॥೧೩॥

---

ನಿರ್ಮಿತವಾದ ಕಲಶಗಳೂ, ಅನೇಕ ಉಪ್ಪರಿಗೆಗಳಿಂದ ಕಿಕ್ಕಿರಿದ ವಿಶಾಲವಾದ ಪ್ರಾಸಾದ ಪಂಕ್ತಿಗಳೂ ಆ ಪುರದಲ್ಲಿ ಕಂಡುಬರುತ್ತಿದ್ದುವು. ||೭-೮||

ಆ ಊರಬಾಗಿಲು ಅನೇಕ ರತ್ನಗಳಿಂದ, ಚಿತ್ರವಿಚಿತ್ರವಾಗಿ ಅಲಂಕರಿಸಲ್ಪಟ್ಟಿದ್ದಿತು. ಯಾವಾಗಲೂ ಅಲ್ಲಿ ತಗರ, ಶ್ರೀಗಂಧ, ಲಾಮಂಚ, ಚಂದನ ಮುಂತಾದ ಸುಗಂಧದ್ರವ್ಯಗಳು ಸುವಾಸನೆಯನ್ನು ಬೀರುತ್ತಿದ್ದುವು. ಪುರದ್ವಾರದ ಮೇಲ್ಭಾಗದಲ್ಲಿ ಶುಭ್ರವಾದ ಕಿಟಕಿಗಳೂ, ಮುಂಜೂರುಗಳೂ ಅಕ್ಕಪಕ್ಕದಲ್ಲಿ ಸುಂದರ ಮಂಟಪಗಳೂ ವಿರಾಜಿಸುತ್ತಿರುವುವು. ||೯-೧೦||

ಆ ಪುರಕ್ಕೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಈ ನಾಲ್ಕು ದಿಕ್ಕುಗಳಲ್ಲಿಯೂ ದ್ವಾರಗಳಿರುವುವು. ಆ ದ್ವಾರಗಳಿಗೆಲ್ಲಾ ರತ್ನಮಯವಾದ ಕನ್ನಡಿಗಳಿಂದ ಕೂಡಿದ ಬಾಗಿಲುಗಳಿರುವುವು. ಆ ಬಾಗಿಲಿನ ಮೇಲೆ ಅದಕ್ಕೆ ಒಂದು ಕಲಶವೂ, ಕಲಶದಲ್ಲಿ ಸೂರ್ಯ ಚಂದ್ರರ ಕಾಂತಿಯನ್ನೂ ಮಂಕುಗೊಳಿಸುವ ರತ್ನಗಳೂ ವಿಶೇಷವಾಗಿದ್ದುವು. ||೧೧-೧೨||

ಹತ್ತುಸಾವಿರ ಸಂಖ್ಯೆಯಲ್ಲಿ ಹೊಳೆಯುವ ಗೋಮೇದಕ, ಪುಷ್ಯರಾಗ, ಇಂದ್ರನೀಲ, ವೈಡೂರ್ಯ, ಹೀರರತ್ನ ಇವುಗಳಿಂದ ನಿರ್ಮಿತವಾದ ಮಂಟಪಗಳೂ,

ಮುಕ್ತಾವಿದ್ರುಮರತ್ನಾಚ್ಛತತಿಕಾಂತಿವಿರಾಜಿತೈಃ ।
ಗರುಡೋದ್ಗಾರರತ್ನಾನಾಂ ಮಂಟಪಾವಲಿಶೋಭಿತೈಃ ॥೧೪॥

ಹೀರಸೌಧೈರ್ಮಣಿಪ್ರೋದ್ಯದ್ವಾತಾಯನಗವಾಕ್ಷಕೈಃ ।
ದೇವೀವಿಹಾರಸದನೈರ್ಮದನಾಂತಕರಸ್ಯ ಚ ॥೧೫॥

ಪರ್ಯಂತರತ್ನಮಾಲಾದಿಛನ್ನಮೌಲಿವಿರಾಜಿತೈಃ ।
ಚಂದ್ರೋಪಲಮಹಾಸೌಧೈಶ್ಚಂದ್ರಾಸಾರೈಕನಿರ್ಝರೈಃ ॥೧೬॥

ರಮ್ಯಾದರ್ಶಮಹಾಸೌಧೈ ರತ್ನಪುಷ್ಪವಿರಾಜಿತೈಃ ।
ಯಾಲೀಪಾಲೀಚಿತಾನೇಕಮಯೂರವರಹಂಸಕೈಃ ॥೧೭॥

ಗಜಸೌಧೈರ್ಹಂಸಸೌಧೈಸ್ಸಿಂಹಸೌಧೈಶ್ಚ ಭಾಸ್ವರೈಃ ।
ತುರಂಗರಥಸೌಧೈಶ್ಚ ಶಾರ್ದೂಲೋತ್ತಮಸೌಧಕೈಃ ॥೧೮॥

ತತ್ತತ್ಪ್ರಾಕಾರಾಂತರಾಲೇ ಶ್ರೀದೇವ್ಯಾ ಮನಸಾ ತತೈಃ ।
ಸುರತ್ನತರವಸ್ತತ್ರ ಮಣಿಪುಷ್ಪಫಲಾವೃತಾಃ ॥೧೯॥

---

ಅದರಲ್ಲಿ ಮುತ್ತು, ಹವಳ ಇವುಗಳ ಕಾಂತಿಗಳಿಂದ ವಿರಾಜಿಸುವ ಮಾಲೆಗಳೂ ಗರುಡಮಣಿಗಳಿಂದ ಶೋಭಿಸುವ ಪ್ರದೇಶಗಳೂ ವಿರಾಜಿಸುತ್ತಿರುವುವು. ॥೧೩-೧೪॥

ಹೀರರತ್ನಯುತವಾದ ಸೌಧಗಳೂ, ಅದರಲ್ಲಿ ಮಣಿಮಯವಾದ ಕಿಟಕಿಗಳೂ, ಗವಾಕ್ಷಿಗಳೂ, ದೇವಿಯು ಮತ್ತು ಪರಶಿವನ ವಿಹಾರಸದನಗಳೂ, ಅವುಗಳ ಸುತ್ತಲೂ ರತ್ನದ ತೋರಣಗಳೂ, ಚಂದ್ರನ ಕಿರಣಗಳಿಂದ ದ್ರವಕೊಡುವ ಚಂದ್ರಕಾಂತಶಿಲೆಗಳ ಉಪ್ಪರಿಗೆಗಳೂ ಆ ಪುರದಲ್ಲಿ ಬಹು ರಮ್ಯವಾಗಿದ್ದವು. ॥೧೫-೧೬॥

ಮುತ್ತು, ರತ್ನಗಳಿಂದ ಪ್ರಕಾಶಿಸುವ ಅನೇಕ ಸೌಧಗಳೂ, ಅದರಲ್ಲಿ ಸಾಲುಸಾಲಾಗಿ ಅಲಂಕೃತವಾಗಿರುವ ನವಿಲುಗಳ ಮತ್ತು ಹಂಸಗಳ ಸಮೂಹವೂ, ವಿರಾಜಿಸುತ್ತಿರುವುವು. ಆನೆಗಳಿಗೂ, ಹಂಸಗಳಿಗೂ, ಸಿಂಹಗಳಿಗೂ, ಕುದುರೆಗಳಿಗೂ, ಹುಲಿಗಳಿಗೂ ಪ್ರತ್ಯೇಕಪ್ರತ್ಯೇಕವಾದ ಉಪ್ಪರಿಗೆಗಳನ್ನು ನಿರ್ಮಿಸಿ ಅಲ್ಲಲ್ಲಿ ಅವುಗಳನ್ನು ರಮ್ಯವಾಗಿ ಕಾಣುವಂತೆ ಇಟ್ಟಿರುವರು. ॥೧೮॥

ಪ್ರತಿ ಸೌಧಗಳಿಗೂ ಪ್ರಾಕಾರಗಳಿರುವುವು. ಅವುಗಳ ಒಳಭಾಗದಲ್ಲಿ ದೇವಿಯ ಮನಃಕಲ್ಪಿತವಾದ ರತ್ನವೃಕ್ಷಗಳೂ, ಫಲಪುಷ್ಪಭರಿತವಾದ ಮರಗಳೂ,

ಚಂದನಾನಾಂ ಚ ವಿಪಿನೈರ್ನಯನಾನಂದದಾಯಕೈಃ ।
ಕಲ್ಪವೃಕ್ಷೋರುವಿಪಿನೈರ್ನೀಪೋಪವನಸುಂದರೈಃ ॥೨೦॥

ಕದಂಬವನರಾಜೀಭಿಃ ರಾಜದ್ರಾಜೀವವಾಪಿಕಾಃ ।
ತತ್ಪ್ರಾಂತಮಧ್ಯಸೌಧೈಶ್ಚ ನವರತ್ನವಿಚಿತ್ರಿತೈಃ ॥೨೧॥

ಧಾರಾಸಾರಗೃಹೈಶ್ಚೈವ ಭ್ರಮದ್ರಥಗೃಹೈಸ್ತಥಾ ।
ಮಂದಾರಪಾರಿಜಾತೋತ್ಥವನವಾಯುಸುಗಂಧಿತೈಃ ॥೨೨॥

ಪ್ರತ್ಯಗ್ರಕೇತಕೋದ್ಭಾಪಿ ಚಂಪಕೋದ್ದಾಮಸೌರಭೈಃ ।
ಕುರವಾಶೋಕಬಕುಲರಸಾಲಮಧುಕೈರ್ಧವೈಃ ॥೨೩॥

ಖರ್ಜೂರಪೂಗನಾರೇಲನಾಗಪುನ್ನಾಗಲೋಧ್ರಕೈಃ ।
ತಕ್ಕೋಲಾಂಕೋಲಹಿಂತಾಲಮಣಿರಂಭಾಕಪಿತ್ಥಕೈಃ ॥೨೪॥

ತಗರಾಗರುಕೇದಾರದೇವದಾರುಮಧೂಕಕೈಃ ।
ಚಿರಿಬಿಲ್ವೈಶ್ಚ ಬಿಲ್ವೈಶ್ಚ ಮಧೂಕಾಮ್ರಾತಕೈರ್ದ್ರುಮೈಃ ॥೨೫॥

---

ನೇತ್ರಾನಂದಕರವಾಗಿರುವ ಚಂದನವೃಕ್ಷಗಳ ಸಮೂಹವೂ, ಕಲ್ಪವೃಕ್ಷ, ನೀಪವೃಕ್ಷ ಇವುಗಳ ವನಗಳೂ ಬಹುವಾಗಿ ಕಂಗೊಳಿಸುತ್ತಿರುವುವು. ||೧೯-೨೦||

ಕದಂಬವೃಕ್ಷಗಳ ಸಾಲುಗಳೂ, ಕಮಲಗಳಿಂದ ಅಲಂಕೃತವಾದ ಬಾವಿಗಳೂ ಸೌಧದ ಸುತ್ತಲೂ ಮತ್ತು ಮಧ್ಯಭಾಗದಲ್ಲಿಯೂ ನವರತ್ನಮಯವಾದ ಜಲಧಾರೆಗಳನ್ನು ಎರಚುವ ಗೃಹಗಳೂ, ರಥಾಕಾರದಲ್ಲಿ ಅಲ್ಲಲ್ಲಿ ಚಲಿಸುತ್ತಿರುವ ಸಣ್ಣಸಣ್ಣ ಮನೆಗಳೂ, ಅವುಗಳಲ್ಲೆಲ್ಲಾ ಮಂದಾರ, ಪಾರಿಜಾತ ಮುಂತಾದ ಸುಗಂಧಮಯವಾದ ಪುಷ್ಪಗಳ ಮೇಲೆ ಬೀಸುವ ಮಂದಮಾರುತವೂ ಬಹು ರಮ್ಯವಾಗಿರುವುದು. ||೨೧-೨೨||

ಮೇಲ್ಭಾಗದಲ್ಲಿ ತಾಳೆಯ ಹೂವಿನಿಂದಲೂ, ಅಧೋಭಾಗದಲ್ಲಿ ಸಂಪಿಗೆ ಹೂವುಗಳಿಂದಲೂ, ಕೂಡಿರುವ ವೃಕ್ಷಗಳ ಮೇಲೆ ಬೀಸುವ ಗಾಳಿಯೂ ಗೋರಂಟಿ, ಅಶೋಕ, ವಕುಲ, ಮಾವು, ಮಧೂಕ, ಧವವೃಕ್ಷ ಇವುಗಳ ಮೇಲೆ ಚಲಿಸುವ ವಾಯುವೂ ಬಹು ಸುಗಂಧಮಯವಾಗಿರುವುದು. ಅಲ್ಲದೆ ಖರ್ಜೂರ, ಅಡಕೆ, ತೆಂಗು, ಸುರಗಿ, ಹಿಪ್ಪೆ, ತಕ್ಕೋಲ, ಅಂಕೋಲ, ಹಿಂತಾಲ, ಬಾಳೆ, ಬೇಲ, ತಗರ,

ವಲ್ಲಯಸ್ತತ್ರ ರಾಜಂತಿ ದ್ರಾಕ್ಷೇಲಾಪಿಪ್ಪಲೀಯುತಾಃ ।
ಮರೀಚಯಃ ಕುಂದಮಲ್ಲ್ಯೋ ಜಾಜಿಕಾಚಂದ್ರಿಕಾಯುತಾಃ ॥೨೬॥

ತದ್ರುಮ್ಯಕುಸುಮಾಮೋದಿ ಸೌಮ್ಯಬಂಧುರಮಾರುತಃ ।
ಹಂಸಾಮಯೂರಾಶ್ಚ ಪಿಕಾ ಕೋಕಸಾರಸಪಂಕ್ತಯಃ ॥೨೭॥

ಕಪೋತಶಾರಿಕಾರಾವಮೃಗಾಶ್ಚ ಚಮರೀಗಣಾಃ ।
ಕುರಂಗಾ ಹಸ್ತಿನಃ ಕೋಲಾಸ್ಸಂಚರಂತಿ ವನೇ ಮುದಾ ॥೨೮॥

ನಯನಾನಂದದಂ ನಿತ್ಯಂ ಶ್ರೀಪುರೇ ಮಣಿದ್ವೀಪಕೇ ।
ಪದ್ಮಿನ್ಯೋ ವಿವಿಧಾಸ್ತತ್ರ ರತ್ನಸೋಪಾನಮಂಡಿತಾಃ ॥೨೯॥

ಪ್ರಾಂತರತ್ನೋದ್ಯತಮಹಾಮಂಟಪಾವಲಿಭಾಸುರಾಃ ।
ತತ್ರ ದೇವದ್ರುಮಾಪಾರವನರಾಜಿವಿರಾಜಿತಂ ॥೩೦॥

---

ಅಗುರು, ಕೇದಾರ, ದೇವದಾರು, ಚಿರಿಬಿಲ್ವ, ಬಿಲ್ವ, ಮಾವು, ಧ್ರುವ ಮುಂತಾದ ವೃಕ್ಷಗಳೂ ಅಲ್ಲಲ್ಲಿ ಪ್ರಕಾಶಿಸುತ್ತಿರುವುವು. ॥೨೩-೨೪-೨೫॥

ಆ ಮರಗಳಿಗೆಲ್ಲಾ, ದ್ರಾಕ್ಷಿ, ಏಲಕ್ಕಿ, ಹಿಪ್ಪಲಿ, ಮೆಣಸು, ಕುಂದ ಮಲ್ಲಿಗೆ, ಜಾಜಿ, ಚಂದ್ರಿಕಾ ಮುಂತಾದ ಸುಗಂಧಮಯವಾದ ಬಳ್ಳಿಗಳು ಹಬ್ಬಿಕೊಂಡಿರುವುವು. ಇವುಗಳ ಮೇಲೆ ಬೀಸುವ ವಾಯುವಂತೂ ಸುವಾಸನವಿಶಿಷ್ಟವಾಗಿರುವುವು. ಅಲ್ಲಲ್ಲಿ ಹಂಸಗಳೂ, ನವಿಲುಗಳೂ, ಕೋಗಿಲೆಗಳೂ, ಚಕ್ರವಾಕ ಪಕ್ಷಿಗಳೂ ಸಾರಸಗಳೂ ಓಡಾಡುತ್ತಿರುವುವು. ॥೨೬-೨೭॥

ಕಪೋತಗಳು, ಶಾರಿಕೆಗಳು, ಇವುಗಳ ಧ್ವನಿಯಿಂದ ಆ ಉದ್ಯಾನವು ಶಬ್ದಭರಿತವಾಗಿರುವುದು. ಚಮರೀಮೃಗ, ಜಿಂಕೆಗಳೂ, ಆನೆಗಳೂ, ಹಂದಿಗಳೂ, ಅಲ್ಲಲ್ಲಿ ಸಂಚರಿಸುತ್ತಿರುವುವು. ಹೀಗಿರುವುದರಿಂದ ಆ ಶ್ರೀಪುರವು ನಿತ್ಯವೂ ನೋಟಕರಿಗೆ ರಮಣೀಯವಾಗಿಯೇ ಕಂಡುಬರುತ್ತಿರುವುದು. ಅಲ್ಲದೆ ಶ್ರೀಪುರಾಂತರ್ಗತವಾದ ಮಣಿದ್ವೀಪದಲ್ಲಿ ಪದ್ಮಗಳಿಂದಲೂ ರತ್ನಸೋಪಾನಗಳಿಂದಲೂ ಕೂಡಿದ ದಿವ್ಯ ಸರೋವರಗಳಿರುವುವು. ಅವುಗಳ ಪಕ್ಕದಲ್ಲೆಲ್ಲಾ ರತ್ನಮಂಟಪಗಳೂ, ಅಲ್ಲಲ್ಲಿ ದೇವವೃಕ್ಷಗಳೂ ಸಾಲುಸಾಲಾಗಿ ರಂಜಿಸುತ್ತಿರುವುವು. ॥೨೮-೨೯-೩೦॥

ತತ್ಪ್ರಾಚ್ಯಾಂ ಮಣಿಸಂಕ್ಲುಪ್ತಂ ದಂಡಿನೀಧಾಮಮುತ್ತಮಂ ।
ನಾನಾರತ್ನಮಣಿಭ್ರಾಜಿಸಿಂಧುರೌಘವಿರಾಜಿತಂ ॥೩೧॥

ಭದ್ರಮಂದ್ರೈರ್ಭದ್ರಮೃಗೈಶ್ಚತುರ್ದಂತಾಳಿಶೋಭಿತೈಃ ।
ಕಟಸ್ರವನ್ಮದಭರೈಃ ಕುಂಭೋದ್ಯತ್ಪಾಂಡರಾರುಣೈಃ ॥೩೨॥

ಮಣಿಗ್ರೈವೇಯಘಂಟಾದಿ ಕುಥಾಂಕುಶವಿಭೂಷಿತೈಃ ।
ಪೂರ್ವತೋ ಭಾತಿ ಶೈಲೇಂದ್ರನಿಭೈರ್ವಾರಣಸತ್ತಮೈಃ ॥೩೩॥

ದಕ್ಷಿಣೇ ತತ್ರ ಪ್ರಾಕಾರೋ ನವರತ್ನವಿರಾಜಿತಃ ।
ಮಂತ್ರಿಣ್ಯಾಸ್ತತ್ರ ತದ್ಧಾಮ ನವರತ್ನವಿರಾಜಿತಂ ॥೩೪॥

ಉಚ್ಚೈಃಶ್ರವಾಧಿಕೈರಶ್ವೈರ್ನಾನಾವರ್ಣೈರ್ಬಲೋತ್ಕಟೈಃ ।
ಕಲ್ಮಾಷೈಸ್ತಿತ್ತಿರಿಪ್ರಖ್ಯೈಃ ರಕ್ತಕರ್ಬುರಶ್ವೇತಕೈಃ ॥೩೫॥

ನೀಲಪೀತಕಮಾಂಜಿಷ್ಠೈರ್ಮಯೂರಸದೃಶೈರ್ಹಯೈಃ ।
ತತ್ರಾಶ್ವಕೋಟಿಭಿರ್ಯುಕ್ತಾ ಮಂತ್ರಿಣೀ ಸೇವಿತಾದರಾ ॥೩೬॥

---

ಅದರ ಪೂರ್ವಭಾಗದಲ್ಲಿ ಮಣಿಖಚಿತವಾದ ದಂಡಿನಿಯ ವಾಸಸ್ಥಾನವಿದೆ. ಅಲ್ಲಿಯೇ ಪ್ರತ್ಯೇಕವಾಗಿ ರತ್ನಮಯವಾದ ಗಜಶಾಲೆಗಳೂ, ಅವುಗಳಲ್ಲಿ ಗುಂಪು ಗುಂಪಾಗಿ ಮದೋದಕವನ್ನು ಸುರಿಸಿಕೊಂಡು ವಾಸಿಸುವ ನಾಲ್ಕು ದಂತಗಳಿಂದ ಕೂಡಿದ ಮದ್ದಾನೆಗಳು ಕಂಡುಬರುತ್ತಿವೆ. ಅವುಗಳ ಮೇಲೆ ಮೆತ್ತೆಯನ್ನು ಹಾಕಿರುವರು. ಕಂಠಪ್ರದೇಶಗಳಿಗೆ ರತ್ನಾಭರಣಗಳನ್ನೂ, ಶಿಖರಭಾಗದಲ್ಲಿ ರತ್ನಮಯವಾದ ಕಲಶಗಳನ್ನೂ ಕಟ್ಟಿರುವರು. ಕಿವಿಯಲ್ಲಿ ಅಂಕುಶವಿರುವುದು. ಹೀಗೆ ಪೂರ್ವಭಾಗದಲ್ಲಿ ಪರ್ವತೋಪಮವಾದ ಆನೆಗಳ ಸಾಲುಗಳು ಕಂಡುಬರುತ್ತಿವೆ. ||೩೧-೩೨-೩೩||

ಹಾಗೆಯೇ ದಕ್ಷಿಣ ಭಾಗದಲ್ಲಿ ನವರತ್ನಮಯವಾದ ಒಂದು ಮಂತ್ರಿಣೀ ದೇವಿಯ ಭವನವಿದೆ. ಅಲ್ಲಿಯೇ ಉಚ್ಚೈಃಶ್ರವಸ್ಸೆಂಬ ದಿವ್ಯ ಹಯಕ್ಕಿಂತಲೂ ದೊಡ್ಡದಾದ ನಾನಾವರ್ಣವಿಶಿಷ್ಟಗಳಾದ ಬಲಿಷ್ಠ ಕುದುರೆಗಳ ತಂಡವು ನೆಲಸಿರುವುದು. ಚಿತ್ರವರ್ಣದಿಂದ ರಂಜಿಸುತ್ತ ಬೂದು ಬಣ್ಣದ, ಕೆಂಪಾದ, ಚಿಕ್ಕಿ ಚಿಕ್ಕಿಯಿರುವ, ಬಿಳುಪಾದ ಮತ್ತು ನೀಲಿ, ಪೀತ, ಮಾಸಲು ಹೊಂಬಣ್ಣ,

ಮುದ್ರಿಣ್ಯಾಃ ಪಶ್ಚಿಮೇ ಧಾಮ ನಾನಾರತ್ನವಿಚಿತ್ರಿತಂ ।
ಕುಂಭೋದ್ಯನ್ಮಣಿಕ್ಲಪ್ತಾಕ್ಷಚಕ್ರಜಾಲಪತಾಕಕೈಃ ॥೩೭॥

ಯುಗಂಧರಾಕ್ಷಫಲಕೈರ್ಘೋಣಾಕರ್ಬುರಶೋಭಿತೈಃ ।
ರಥೈಶ್ಚ ಕೋಟಿಭಿಸ್ತತ್ರ ಶೋಭಿತಾ ಮುದ್ರಿಣೀ ತದಾ ॥೩೮॥

ವಾರಾಹ್ಯಾಶ್ಚೋತ್ತರೇ ಧಾಮ ರತ್ನಾವಳಿವಿಭೂಷಿತಂ ।
ಸಾಪಿ ಪ್ರಮುದಿತಾ ನಿತ್ಯಂ ಪಾತಿತಂ ಯೋಗಿನೀಗಣೈಃ ॥೩೯॥

ನವಕೋಟಿಭಿರತ್ಯುಗ್ರಾಃ ಪ್ರಾಸಾಸಿವರಪಾಣಿಭಿಃ ।
ನಿತ್ಯಾನಾಮಂತರಾ ಸದ್ಮ ಪದ್ಮರಾಗಮಣೀತತಂ ॥೪೦॥

ತತೋ ಹಿ ಪರಿತಸ್ತತ್ರ ಜ್ವಾಲಾಮಾಲನಿಕಾ ತತಃ ।
ಪ್ರಾಕಾರೋ ವಹ್ನಿನಾ ವೀತೋ ಪರ್ಯಂತಜ್ವಾಲಶೋಭಿತಃ ॥೪೧॥

---

ಮಯೂರವರ್ಣ ಇವೇ ಮೊದಲಾದ ಬಣ್ಣ ಬಣ್ಣದ ಕುದುರೆಗಳು ಪ್ರಕಾಶಿಸುತ್ತಿರುವುವು. ಇಂತಹ ಕುದುರೆಗಳು ಮಂತ್ರಿಣಿಯ ರಕ್ಷಣೆಯಲ್ಲಿ ಕೋಟಿಸಂಖ್ಯಾಕವಾಗಿದ್ದುವು. ॥೩೪-೩೫-೩೬॥

ಪಶ್ಚಿಮ ದಿಕ್ಕಿನಲ್ಲಿ ನಾನಾರತ್ನಗಳಿಂದ ಪ್ರಕಾಶಿಸುವ ಮುದ್ರಿಣೀದೇವಿಯ ವಾಸಭವನವಿರುವುದು. ಆ ಮುದ್ರಿಣಿಯ ರಕ್ಷಣೆಯಲ್ಲಿ ಕೋಟಿಸಂಖ್ಯೆಯ ರಥಗಳಿರುವುವು. ಪ್ರತಿರಥವೂ ರತ್ನಕಲಶಗಳಿಂದಲೂ, ಮಣಿಮಯವಾದ ಆಭರಣಗಳಿಂದಲೂ, ನೊಗ, ಅಚ್ಚು, ಹಲಗೆ ಮುಂತಾದ ಬಣ್ಣ ಬಣ್ಣದ ಅವಯವಗಳಿಂದಲೂ ಕೂಡಿ ರಂಜಿಸುತ್ತಿರುವುದು. ॥೩೭-೩೮॥

ಉತ್ತರಭಾಗದಲ್ಲಿ ವಾರಾಹಿಯ ಭವನವಿರುವುದು. ಅದು ರತ್ನಭೂಷಿತವಾದದ್ದು. ಆ ವಾರಾಹಿಯನ್ನು ಅನೇಕ ಯೋಗಿನೀಗಣಗಳು ಸೇವಿಸುತ್ತಿರುವುವು. ಆ ಯೋಗಿನಿಯರು ಒಂಬತ್ತುಕೋಟಿ ಸಂಖ್ಯೆಯಲ್ಲಿ ಭಯಂಕರಾಕಾರದಿಂದ ಕತ್ತಿ, ಪ್ರಾಸಾಯುಧ ಇವುಗಳನ್ನು ಧರಿಸಿ, ಸರ್ವದಾ ಆ ಪದ್ಮರಾಗಮಣಿಮಯವಾದ ವಾರಾಹಿಯ ಭವನದಲ್ಲಿ ಓಡಾಡುತ್ತಿರುವರು. ॥೩೯-೪೦॥

ಆ ಭವನದ ಸುತ್ತಲೂ ಅಗ್ನಿಜ್ವಾಲೆಯಿಂದ ಆವೃತವಾದ ಪ್ರಾಕಾರವಿರುವುದು. ಆ ಅಗ್ನಿಜ್ವಾಲೆಯು ಸೌದೆಯಿಲ್ಲದೆ ಉರಿಯುತ್ತಿರುವುದು. ತನ್ನ ಶಿಖಾ

ಅನಿಂಧನೋ ಜ್ವಲತ್ಯೇಷ ಸ್ವಶಿಖಾಲೀಢಿತಾಂಬರಃ ।
ಅಹೋರಾತ್ರಮನಿಶ್ರಾಂತೋ ಜ್ವಾಲಾವ್ಯಾಪ್ತದಿಗಂತರಃ ॥೪೨॥

ಮಾತರೋ ವಟುಕಾಶ್ಚೈವ ಡಾಕಿನ್ಯೋ ಯೋಗಿನೀಗಣಾಃ ।
ಯಾಂತಿ ತತ್ರಾಂತರೇ ದೇವ್ಯಾಃ ಪ್ರಾಕಾರಾಣಾಂ ಶತಾಷ್ಟಕಂ ॥೪೩॥

ಮಾರ್ತಾಂಡಭೈರವಶ್ಚೈವ ತಥೈವಾನಂದಭೈರವಃ ।
ಪ್ರಮೋದಭೈರವಶ್ಚೈವ ತಥಾ ವೈ ಮೋದಭೈರವಃ ॥೪೪॥

ಪ್ರಾಚ್ಯಾಂ ಪ್ರತೀಚ್ಯಾಂ ತತ್ಪಾತಿ ದಕ್ಷಿಣೇ ಚ ತಥೋತ್ತರೇ ।
ಸುಧಾಕೂಪಸುಧಾವಾಪ್ಯೋಘೃತಕ್ಷೀರದಧಿಸ್ರವಾಃ ॥೪೫॥

ಮಧುಸ್ರವಾಸ್ತಥಾ ನದ್ಯಃ ಪುಟಕೇ ಪುಟಕೇ ಮಧು ।
ಸುಧಾಫಲಾಸ್ಸದಾ ವೃಕ್ಷಾಶ್ಚಾಮ್ಲಾನಾನಿ ಸುಮಾನಿ ಚ ॥೪೬॥

---

ಜ್ವಾಲೆಯಿಂದ ಅಂತರಿಕ್ಷವನ್ನೇ ಮುಟ್ಟುತ್ತಿರುವುದು. ಇದೇ ರೀತಿ ಆ ಜ್ವಾಲಮಾಲೆಯು ಅಹೋರಾತ್ರಿಯಲ್ಲಿಯೂ ದಿಗಂತವನ್ನೆಲ್ಲಾ ತೇಜಸ್ಸಿನಿಂದ ಬೆಳಗಿಸುತ್ತಿರುವುದು. ॥೪೧-೪೨॥

ಹೀಗೆ ದೇವೀಭವನಕ್ಕೆ ಸಂಬಂಧಿಸಿದ ನೂರೆಂಟು ಪ್ರಾಕಾರಗಳ ಒಳಭಾಗದಲ್ಲಿ ಮಾತೃಕಾದೇವತೆಗಳೂ, ವಟುಗಳೂ, ಡಾಕಿನಿಯೇ ಮೊದಲಾದ ಯೋಗಿನೀಗಣಗಳೂ ಗುಂಪುಗುಂಪಾಗಿ ವಾಸಿಸುತ್ತಿರುವರು. ಆ ಪ್ರಾಕಾರಗಳ, ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ಈ ನಾಲ್ಕು ದಿಗ್ಭಾಗಗಳಲ್ಲಿ ಕ್ರಮವಾಗಿ, ಮಾರ್ತಾಂಡಭೈರವ, ಆನಂದಭೈರವ, ಪ್ರಮೋದಭೈರವ, ಮೋದಭೈರವರೆಂಬ ನಾಲ್ಕು ಜನರು ದ್ವಾರಪಾಲಕರಾಗಿ ಆ ಭಾಗಗಳನ್ನು ರಕ್ಷಿಸುತ್ತಿರುವರು. ॥೪೩-೪೪॥

ಆ ಮಣಿದ್ವೀಪದಲ್ಲಿ ಅಮೃತದ ಬಾವಿಗಳೂ, ಅಮೃತಮಯವಾದ ಕೊಳಗಳೂ, ಹಾಲು, ತುಪ್ಪ, ಮೊಸರು, ಜೇನು ಮೊದಲಾದ ವಸ್ತುಗಳಿಂದ ಪೂರಿತವಾಗಿ ಹರಿಯುವ ನದಿಗಳೂ, ಅಲ್ಲಲ್ಲಿ ಜೇನು ಹುಟ್ಟಿಗಳೂ, ರುಚಿಯಾದ ಹಣ್ಣು, ಬಾಡದ ಹೂವುಗಳು ಸರ್ವದಾ ರಂಜಿಸುವುವು. ॥೪೫-೪೬॥

ಯೋಜನಾಯುತಗಂಧೀನಿ ನೇತ್ರಾನಂದಕರಾಣಿ ಚ ।
ದ್ವೀಪೋಽಯಂ ಕುಮುದಾಕಾರಸ್ಸುಧಾಪಾರ್ಥಿತರಂಗಕೈಃ ॥೪೭॥

ರಂಜಿತಃ ಪರಿತೋ ಭಾತಿ ಮಣಿಸಾರೈಕಸುಂದರಃ ।
ಲಕ್ಷದ್ವಯಂ ಯೋಜನಾನಾಂ ಮನಸಾ ಶಿವನಿರ್ಮಿತಃ ॥೪೮॥

ತತ್ರ ಚಿಂತಾಮಣಿತತೇ ಸೌಧೇ ಪರಮಭಾಸ್ಕರೇ ।
ಕಾಮೇಶ್ವರ್ಯಾ ಚ ಕಾಮೇಶಸ್ತತ್ರ ನಿತ್ಯಮುಪಾಸತೇ ॥೪೯॥

ನಾನಾಭೋಗವಿಹಾರೈಶ್ಚ ನಿತ್ಯಾಭಿಃ ಪರಿಸೇವಿತಃ ।
ಬ್ರಹ್ಮವಿಷ್ಣ್ವೀಶ್ವರಸದಾಶಿವರುದ್ರೋರುಮಂಚಕೇ ॥೫೦॥

ನಿಷಣ್ಣಃ ಪರಯಾ ದೇವ್ಯಾ ಕಾಮೇಶಃ ಕಾಮದಾಯಕಃ ।
ಕಾಮೇಶ್ವರ್ಯಾ ಸದೈವಾಸ್ತೇ ಕಾಮದಾನೈಕದೀಕ್ಷಿತಃ ॥೫೧॥

ಕೋಟಿಕಂದರ್ಪದರ್ಪಘ್ನಃ ಕಪರ್ದೀಽಣಾಂಕಶೋಭಿತಃ ।
ಸುರಕ್ತಪಂಕಜಾಕಾರವಿಗ್ರಹಸ್ಸುಂದರಾಕೃತಿಃ ॥೫೨॥

---

ಅಲ್ಲಿರುವ ಹೂವುಗಳು ಅನೇಕ ಯೋಜನಪರ್ಯಂತ ಸುವಾಸನೆಯುಳ್ಳದ್ದಾಗಿ, ನೇತ್ರಾನಂದಕರಗಳಾಗಿದ್ದುವು. ಇಂತಹ ದ್ವೀಪವು ಕುಮುದಾಕಾರವುಳ್ಳದ್ದಾಗಿ, ಸುಧಾಸಮುದ್ರಮಧ್ಯವರ್ತಿಯಾಗಿ ಸುಧಾಸಮುದ್ರಗಳ ಅಲೆಗಳಿಂದ ಕೂಡಿ ರಂಜಿಸುತ್ತಿರುವುದು. ಹೀಗೆ ಅನೇಕ ರತ್ನಸಾರಗಳಿಂದ ಎರಡುಲಕ್ಷ ಯೋಜನಪರ್ಯಂತವಾಗಿ ಪ್ರಕಾಶಿಸುವ ಆ ಮಂಟಪವು ಶಂಕರನ ಮನೋನಿರ್ಮಿತವಾದದ್ದು. ಹೀಗೆ ಸುಂದರತಮವಾದ ಚಿಂತಾಮಣೀ ಸೌಧದಲ್ಲಿ ಕಾಮೇಶ್ವರಿಯು, ಕಾಮೇಶ್ವರನೊಡನೆ ವಿಹರಿಸುತ್ತಿರುವಳು. ॥೪೭-೪೮-೪೯॥

ಬ್ರಹ್ಮ, ವಿಷ್ಣು, ಈಶ್ವರ ಇವರಿಂದ ಸೇವಿತನಾಗಿ ಪರಶಿವನು ಪಾರ್ವತಿಯೊಡಗೂಡಿ, ಮಂಚದಲ್ಲಿ ಮಂಡಿತನಾಗಿ ಕಾಮದಾಯಕನಾದ ಕಾಮೇಶನು ಕಾಮೇಶ್ವರಿಯ ಇಷ್ಟಾರ್ಥಗಳನ್ನು ನೆರವೇರಿಸುತ್ತಾ ಕುಳಿತಿರುವನು. ॥೫೦-೫೧॥

ಪರಶಿವನು ಸೌಂದರ್ಯದಲ್ಲಿ ಕೋಟಿ ಮನ್ಮಥರನ್ನೂ ತಿರಸ್ಕರಿಸುತ್ತಾ, ಜಟಾಧಾರಿಯಾಗಿ, ಚಂದ್ರಶೇಖರನೆನಿಸಿ, ರಕ್ತಕಮಲದಂತೆ ಶೋಭಿಸುವ ದೇಹ

ಜಪಾಸುಮನಿಭಾಧಿಕ್ಯಕಾಮೇಶ್ಯಾಕಾಂತಿವತ್ತಯಾ ।
ಸೇವಿತೋ ವಿವಿಧೈರ್ಭಾಗೈರ್ನಿತ್ಯಾಭಿಃ ಪರಿಸೇವಿತಃ ॥೫೩॥

॥ ಸ್ಕಂದ ಉವಾಚ ॥

ಪಾಥೋಜಾತಭವಪ್ರಿಯಾಕರಮಹಾಪಂಕೇರುಹಾಧ್ಯಾಸಿತಾ
ಪಾಣ್ಯೋರ್ಲೋಲಧೃತಾಕ್ಷಚಾಮರಗಣೈಸ್ಸಂವೀಜಿತಾ ಸಾ ಶಿವಾ।
ನಿತ್ಯಾಭಿಃ ಪರಿಸೇವಿತಾ ಪ್ರಮಥಪೇನಾಧ್ಯಸ್ತಮಂಚೋತ್ತರಂ
ಸ್ವಸ್ಯಾರಕ್ತನಖಾಂಶುನಿರ್ಗತಹರಿಬ್ರಹ್ಮೇಶಲೀಲಾಯುತಾ ॥೫೪॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಶ್ರೀಪುರವರ್ಣನಂ ನಾಮ ಷೋಡಶೋಽಧ್ಯಾಯಃ

---

ವುಳ್ಳವನಾಗಿ, ದಾಸವಾಳದ ಹೂವಿನಂತೆ ಕಾಂತಿಯುಳ್ಳ ಪಾರ್ವತಿಯಿಂದ ಸೇವಿತನಾಗಿ ನಿತ್ಯಾನಂದ, ನಿತ್ಯಭೋಗಗಳಲ್ಲಿ ನಿರತನಾಗಿರುವನು. ॥೫೨-೫೩॥

ಪಾರ್ವತಿಯು ಅಕ್ಕಪಕ್ಕದಲ್ಲಿ ಬ್ರಹ್ಮಪತ್ನಿಯಾದ ಸರಸ್ವತಿಯೂ, ವಿಷ್ಣುಪ್ರಿಯಳಾದ ಲಕ್ಷ್ಮಿಯೂ ಚಾಮರಗಳನ್ನು ಹಿಡಿದು, ದೇವಿಯನ್ನು ಸೇವಿಸುತ್ತಿರುವರು. ಹಾಗೆಯೇ ಬ್ರಹ್ಮ, ವಿಷ್ಣು, ರುದ್ರರು ದೇವಿಯ ಪಾದಸೇವಕರಾಗಿದ್ದು, ಆ ದೇವಿಯ ಪಾದನಖದ ಕಾಂತಿಯಿಂದ ತಾವೂ ಅತಿಶಯವಾದ ಕಾಂತಿಯುಳ್ಳವರಾಗಿ ರಂಜಿಸುತ್ತಿರುವರು. ಇಂತಹ ದೇವಿಯು ಆ ಶ್ರೀಪುರದಲ್ಲಿ ಸಂತೋಷದಿಂದ ಭಕ್ತರನ್ನುದ್ಧರಿಸುತ್ತಾ ವಾಸವಾಡುತ್ತಿರುವಳು. ॥೫೪॥

ಇಲ್ಲಿಗೆ ಶ್ರೀ ಶಿವರಹಸ್ಯದ ದ್ವಿತೀಯಾಂಶದಲ್ಲಿ ಶ್ರೀಪುರವರ್ಣನೆಯನ್ನು ವಿವರಿಸುವ ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಸಪ್ತದಶೋಽಧ್ಯಾಯಃ

### ಕಾಮೇಶ್ವರಕಾಮೇಶ್ವರೀ ವಿವಾದವರ್ಣನಂ

### (ಮಣಿದ್ವೀಪಾತ್ಕೈಲಾಸಗಮನಂ)

॥ ಜೈಗೀಷವ್ಯ ಉವಾಚ ॥

**ಶ್ರುತಮೇತನ್ಮಹಾಖ್ಯಾನಂ ಸ್ಕಂದ ತ್ವತ್ತೋಽಖಿಲಾರ್ಥದಂ ।**
**ಮಣಿದ್ವೀಪೇ ಮಹಾದೇವ್ಯಾ ಶ್ರೀಪುರಸ್ಯ ತು ವರ್ಣನಂ ॥೧॥**

**ಪರಾಶಕ್ತೇರ್ಮಹಾಸೌಧಶ್ಚಿಂತಾಮಣಿಗಣಾಂಚಿತಃ ।**
**ಸುಧಾಸಿಂಧೋರ್ಮಧ್ಯಗತಕಲ್ಪವಾಟೀವನಾವೃತೇ ॥೨॥**

**ನೀಪೋಪವನಪರ್ಯಂತಂ ಶ್ರುತ್ವಾಹಂ ನಿತರಾಂ ಮುನೇ ।**
**ಅತ್ಯಂತಂ ವಿಸ್ಮಯಾವಿಷ್ಟಃ ಪರಿಪೂರ್ಣಮನೋರಥಃ ॥೩॥**

---

ಶ್ರೀ ಶಿವರಹಸ್ಯದ ದ್ವಿತೀಯಾಂಶದಲ್ಲಿ ಹದಿನೇಳನೆಯ ಅಧ್ಯಾಯ

ಜೈಗೀಷವ್ಯಮಹರ್ಷಿಯು ಮತ್ತೆ ಕುಮಾರಸ್ವಾಮಿಯನ್ನು ಕುರಿತು " ಮಹಾಮಹಿಮನೇ, ಇಲ್ಲಿನವರೆಗೂ ಮಹಾದೇವಿಯ ಮಣಿದ್ವೀಪದ ಮತ್ತು ಶ್ರೀಪುರದ ವರ್ಣನೆಯನ್ನು ಕೇಳಿದಂತಾಯಿತು. ॥೧॥

ಪರಾಪರಶಕ್ತಿದೇವತೆಯಾದ ದೇವಿಯ ಚಿಂತಾಮಣಿ ನಿರ್ಮಿತವಾದ ಗೃಹ ಸೌಂದರ್ಯವನ್ನೂ, ಸುಧಾಸಮುದ್ರಮಧ್ಯವರ್ತಿಯೂ, ಕಲ್ಪವೃಕ್ಷಗಳಿಂದ ಪರಿವೃತವೂ ಆದ ನೀಪವನದ ಸೊಬಗನ್ನೂ ನಿನ್ನಿಂದ ತಿಳಿದುಕೊಂಡು ಅತ್ಯಂತ ವಿಸ್ಮಿತನಾಗಿ ತುಷ್ಟಚಿತ್ತನಾಗಿರುವೆನು. ॥೨-೩॥

ಸರ್ವಜ್ಞಹೃದಯಾನಂದ ಗೌರೀಹೃದಯನಂದನ ।
ತಾರಕಾರೇ ತದಾ ದೇವಃ ಕಿಂ ಚಕಾರ ಶಿವಾಯುತಃ ॥೪॥

ತನ್ಮೇ ವದ ವಿಶೇಷೇಣ ಮಹ್ಯಂ ಶುಶ್ರೂಷವೇಽನಘ ॥೫॥
ಜೈಗೀಷವ್ಯವಚಶ್ಶ್ರುತ್ವಾ ಮಯೂರವರವಾಹನಃ ।

॥ ಸೂತ ಉವಾಚ ॥

ಉವಾಚ ಮನಸಾ ದೇವೋ ನತ್ವಾ ಹೃಷ್ಟತನೂರುಹಃ ॥೬॥
ಜೈಗೀಷವ್ಯಾಯ ಮುನಯೇ ವಿನಯೋದಾರಸಂಯುತಂ ।

ಮಾಧುರ್ಯಗುಣಗಾಂಭೀರ್ಯಚಕ್ಷೂರಸವಿಜೃಂಭಿತಂ ॥೭॥

॥ ಸ್ಕಂದ ಉವಾಚ ॥

ಮಣಿದ್ವೀಪೇ ಸುಧಾಸಿಂಧೌ ಮಧ್ಯೇ ಗತಮಣಿಪ್ರಭೇ ।
ಮಣಿಪ್ರಾಕಾರಪರ್ಯಂತಕಲ್ಪವೃಕ್ಷೌಘಸಂಯುತೇ ॥೮॥

ನೀಪವಾಟೀಸಮಾಕ್ರಾಂತಚಿಂತಾಮಣಿವಿರಾಜಿತೇ ।
ಮಹಾಸೌಭಗ್ಯಹಾಶೃಂಗಮಹಾದ್ಯುತಿವಿರಾಜಿತೇ ॥೯॥

---

ಪರಶಿವನ ಹೃದಯಾಹ್ಲಾದಕನೂ, ಗೌರೀಮನೋರಂಜಕನೂ ಆದ ಕುಮಾರ ಸ್ವಾಮಿಯೇ, ಮುಂದೆ ಪರಶಿವನು ಪಾರ್ವತಿಯೊಡಗೂಡಿ ನಡೆಸಿದ ವಿಹಾರಾದಿಗಳನ್ನು ನನಗೆ ವಿವರಿಸಿ ಹೇಳುವವನಾಗು. ಅದನ್ನು ಕೇಳುವ ಕುತೂಹಲವು ನನಗೆ ಸಂಪೂರ್ಣವಾಗಿರುವುದು" ಎಂದು ಜೈಗೀಷವ್ಯಮಹಾಮುನಿಯು ಮತ್ತೆ ಪ್ರಾರ್ಥಿಸಿಕೊಂಡನು. ||೪-೫||

ಹಾಗೆ ಕೇಳಿಕೊಂಡ ಜೈಗೀಷವ್ಯಮಹರ್ಷಿಯ ಪ್ರಾರ್ಥನೆಯನ್ನು ಅಂಗೀಕರಿಸಿ ಮಯೂರವಾಹನನಾದ ಕುಮಾರಸ್ವಾಮಿಯು ಮನಸ್ಸಿನಲ್ಲಿ ಶಂಕರನನ್ನೇ ಬಹಳವಾಗಿ ಪ್ರಾರ್ಥಿಸುತ್ತಾ, ವಿನಯಾದಿಸದ್ಗುಣೋಪೇತನೂ, ಮಾಧುರ್ಯಗುಣಗಣಭರಿತನೂ, ಶಿವಕಥಾಕುತೂಹಲಿಯೂ ಆದ ಜೈಗೀಷವ್ಯನಿಗೆ ಮುಂದಿನ ಕಥಾಭಾಗವನ್ನು ವಿವರಿಸಿದನೆಂದು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ವಿವರಿಸಿದರು. ||೬-೭||

ಸ್ಕಂದಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೀಗೆ ಮುಂದಿನ ವಿಷಯವನ್ನು ವಿವರಿಸುತ್ತಾ "ಮಹರ್ಷಿವರ್ಯರೇ, ಸಕಲ ರತ್ನಗಳ ಕಾಂತಿಯನ್ನೂ ಮಂಕುಮಾಡಿದ

ದಿವ್ಯಚಿಂತಾಮಣಿಗೃಹೇ ಕಲ್ಪವಾಟೀಪರೀವೃತೇ ।
ಚಿಂತಾಮಣಿಗಣಜ್ಯೋತಿಸ್ತಿರಸ್ಕೃತದಿವಾಕರೇ ॥೧೦॥

ತಸ್ಮಿನ್ನಾಲಂಬಿರತ್ನಾಘಶೃಂಖಲಾಬದ್ಧಮಂಚಕೇ ।
ಹರಿಬ್ರಹ್ಮಮಹೇಶೇಶಸದಾಶಿವವರಾರ್ಚಿತೇ ॥೧೧॥

ಪಾದಪ್ರಪೀಠಭೂತೇಷು ಸೃಷ್ಟಿಸ್ಥಿತ್ಯಂತಕಾರಿಷು ।
ತಸ್ಮಿನ್ವಿಹಾರಶಯನೇ ಕಾಮಕಾಮೇಶ್ವರಾಕೃತೀ ॥೧೨॥

ಚಿಕ್ರೀಡತುಶ್ಚಿರಂ ಕಾಲಂ ದೇವೌ ರಸವನೇ ಮುನೇ ।
ತದಾ ಸಂಪ್ರಾರ್ಥಯಾಮಾಸ ದೇವೀ ದೇವಂ ಮಹೇಶ್ವರಂ ॥೧೩॥

---

ಮಣಿದ್ವೀಪವು ಮಣಿಮಯವಾದ ಪ್ರಾಕಾರಗಳಿಂದಲೂ, ಕಲ್ಪವೃಕ್ಷಗಳ ಸಾಲಿನಿಂದಲೂ ಪ್ರಕಾಶಿಸುತ್ತಿರುವುದು. ಆ ದ್ವೀಪದಲ್ಲಿ ಕದಂಬವೃಕ್ಷಭರಿತವಾದ ನೀಪವನವೂ, ಅದರ ಮಧ್ಯದಲ್ಲಿ ಚಿಂತಾಮಣಿನಿರ್ಮಿತವಾದ ದಿವ್ಯ ಸೌಧವೂ ಇರುವುವಷ್ಟೆ. ಆ ಸೌಧದ ಶಿಖರಗಳು ಮಹಾ ತೇಜಸ್ಸಿನಿಂದ ಜ್ವಲಿಸುತ್ತಿರುವುವು. ॥೮-೯॥

ಅಂತಹ ಕಲ್ಪವೃಕ್ಷಗಳ ವನದಿಂದಲೂ, ಚಿಂತಾಮಣಿಗಣಗಳ ಕಾಂತಿಯಿಂದಲೂ ಸೂರ್ಯನನ್ನು ಕೂಡ ಮಂಕುಮಾಡಿ ಜ್ವಲಿಸುತ್ತಿರುವ, ದಿವ್ಯ ಚಿಂತಾಮಣಿಗೃಹದಲ್ಲಿ, ರತ್ನಮಯವಾದ ಸರಪಳಿಗಳಿಂದ ತೂಗಾಡುವ ಮಂಚವೊಂದಿತ್ತು. ಅದರಲ್ಲಿ ಪಾರ್ವತೀ ಪರಶಿವರು, ಕಾಮೇಶ್ವರ, ಕಾಮೇಶ್ವರೀ ಎಂಬ ಹೆಸರಿನಿಂದ ಮಂಡಿಸಿ, ಹರಿ, ಹರ, ಬ್ರಹ್ಮ ಮುಂತಾದ ಸಕಲ ದೇವತೆಗಳಿಂದಲೂ ಪೂಜಿತರಾಗಿ ವಿರಾಜಿಸುತ್ತಿದ್ದರು. ॥೧೦-೧೧॥

ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಈ ಕಾರ್ಯಗಳನ್ನು ನಡೆಸುವ ತ್ರಿಮೂರ್ತಿಗಳೂ ಆ ಪೀಠದ ಕೆಳಭಾಗದಲ್ಲಿ ನಿಂತು ಪರಶಿವದಂಪತಿಗಳನ್ನು ಸೇವಿಸುವರು. ಇಂತಹ ವಿಹಾರಾರ್ಥವಾದ ಶಯನದಲ್ಲಿ ಚಿರಕಾಲ, ಕಾಮೇಶ್ವರ, ಕಾಮೇಶ್ವರೀ ರೂಪದಲ್ಲಿ ಪಾರ್ವತೀಪರಮೇಶ್ವರರು ವಿಹರಿಸಿದರು. ಅನಂತರ ಒಂದು ಸಾರಿ ದೇವಿಯು ಮಹೇಶ್ವರನನ್ನು ಈರೀತಿ ಪ್ರಾರ್ಥಿಸಿಕೊಂಡಳು. ॥೧೨-೧೩॥

ಮಮಾತ್ಯಂತತಪೋದ್ಭೂತಮಹಾನಂದರಸೇನ ಚ ।
ಅನಂತಜಗದುತ್ಪತ್ತಿಸಂಹಾರಸ್ಥಿತಿತೋಷಕೃತ್ ॥೧೫॥

ಹೃದಯೇನ ತವೇಶಾನ ನಿರ್ಮಿತೋ ದ್ವೀಪ ಉತ್ತಮಃ ।
ಸುಧಾಸಿಂಧುತರಂಗೌಘಮಣಿಭಾಗ್ಯೈಕಸುಂದರಃ ॥೧೬॥

ತತ್ರ ಚಿಂತಾಮಣಿಕೃತಸೌಧಮಧ್ಯಸ್ಥಮಂಚಗಃ ।
ವಸ ಮಾಗಚ್ಛ ಕೈಲಾಸಮತ್ರ ಮೇ ರಮತೇ ಮನಃ ॥೧೭॥

ಯಾದೃಶ್ಯತ್ರ ಮಮ ಪ್ರೀತಿಸ್ತಾದೃಶೀ ಚ ನ ಕುತ್ರಚಿತ್ ।
ಮಮಾಂತರಾತ್ಮಾ ಭಗವನ್ ಮಮ ಪ್ರಾಣಶಿರೋಮಣೇ ॥೧೮॥

|| ಈಶ್ವರ ಉವಾಚ ||

ವಿಜ್ಞಪ್ತಂ ಯನ್ಮಯಾ ಶಂಭೋ ತತ್ಸ್ವೀಕುರು ಕೃಪಾನಿಧೇ ।
ತದುದಾರತರಾಂ ವಾಣೀಂ ಸಮಾಕರ್ಣ್ಯಾರ್ಹತಾಂ ಶಿವಾಂ ॥೧೯॥

---

"ಸ್ವಾಮಿಯೇ, ನಾನು ಬಹುಕಾಲ ತಪಸ್ಸು ಮಾಡಿ, ತತ್ಫಲವಾಗಿ ಇಂತಹ ಆನಂದಕರವಾದ ಚಿಂತಾಮಣಿಗೃಹವನ್ನು ಸಂಪಾದಿಸಿರುವೆನು. ಅದೂ ನಿನ್ನ ದಯಾ ರಸಪರಿಪೂರ್ಣವಾದ ಮನಸ್ಸಿನಿಂದಲೇ ನಿರ್ಮಿತವಾಗಿರುವುದು. ತ್ರಿಮೂರ್ತಿಗಳಿಗೂ ಸಂತೋಷಪ್ರದವಾಗಿರುವುದು. ಅಲ್ಲದೆ ಸುಧಾಸಮುದ್ರದ ಅಲೆಗಳಿಂದಲೂ, ರತ್ನಕಾಂತಿಗಳಿಂದಲೂ ಬಹು ಮನೋಹರವಾಗಿ ಕಾಣುತ್ತಿರುವುದು. ||೧೫-೧೬||

ಇಂತಹ ಚಿಂತಾಮಣಿಗೃಹದ ಮಧ್ಯಭಾಗದಲ್ಲಿ ನೀನು, ಮಂಚಾಧಿಶಾಯಿಯಾಗಿಯೇ ಯಾವಾಗಲೂ ನೆಲಸಿರಬೇಕು. ಕೈಲಾಸಕ್ಕೆ ಹೋಗಬೇಡ. ಇಲ್ಲಿ ವಾಸಿಸಲು ನನಗೆ ಬಹು ಸಂತೋಷವಾಗುತ್ತದೆ. ನನಗೆ ಇಲ್ಲಿರುವಷ್ಟು ಪ್ರೀತಿಯು ಮತ್ತೆಲ್ಲಿಯೂ ಕಾಣಲಾರದು. ಭಗವಂತನಾದ ಪ್ರಾಣನಾಥನೇ, ನನ್ನ ಮನಸ್ಸು ಇಲ್ಲಿಯೇ ಇರಬಯಸುತ್ತದೆ. ||೧೭-೧೮||

ಈ ನನ್ನ ಪ್ರಾರ್ಥನೆಯನ್ನು ನೆರವೇರಿಸು" ಎಂದು ಪಾರ್ವತಿಯು ಪ್ರಾರ್ಥಿಸಿಕೊಳ್ಳಲು, ಶಂಕರನು ಉದಾರತರವಾದ ಮತ್ತು ನ್ಯಾಯಬದ್ಧವಾದ ಆ ದೇವಿಯ ಮಾತುಗಳನ್ನು ಕೇಳಿ ಹೀಗೆಂದನು. ||೧೯||

ಮಮೋಷ್ಟವಾಸಃ ಸುಭಗೇ ಕೈಲಾಸೋ ಗೀಯತೇ ಸುರೈಃ ।
ಶಂಭೋಃ ಕೈಲಾಸಸದನಮಿತಿರೂಢಿರ್ಮಹೇಶ್ವರಿ ॥೨೦॥

ಅತ್ರ ತ್ವಂ ಚ ಮಯಾ ಸಾರ್ಧಂ ವಿಹರಸ್ವ ಯಥೇಚ್ಛಯಾ ।
ಸುಧಾಸಾಗರಮಧ್ಯಸ್ಥಮಣಿದ್ವೀಪೇ ಮನೋಹರೇ ॥೨೧॥

ಕಲ್ಪವೃಕ್ಷಮಹಾವಾಟೀನೀಪೌಘವಿಪಿನಾಕುಲೇ ।
ಯಥಾ ತ್ವಯಿ ಮಮ ಪ್ರೀತಿಸ್ತಥಾ ದ್ವೀಪೇ ಮಹೇಶ್ವರಿ ॥೨೨॥

ಅಸ್ಮಿನ್ನೇವ ವಸಾಮೀತಿ ಮಮಾಪಿ ನಿಯತಂ ಮನಃ ।
ಏಕೋಽಪ್ಯಹಮನೇಕಾತ್ಮಾ ನಾನಾಕಾರೋಽಹಮೀಶ್ವರಿ ॥೨೩॥

ಯಥಾ ಸೂರ್ಯಃ ಪುರೇ ರಾಷ್ಟ್ರೇ ದ್ವೀಪೇ ಲೋಕೇಷ್ವಪೀಶ್ವರಿ ।
ಏಕ ಏವ ಹಿ ತತ್ರತ್ಯೈರ್ದೃಶ್ಯತೇ ಸ್ವಗೃಹೋದಿತಃ ॥೨೪॥

---

ದೇವಿಯೇ, ನನಗೆ ಕೈಲಾಸವಾಸವೇ ಅತ್ಯಂತ ಪ್ರಿಯವಾದದ್ದು. ಹಾಗೆ ತಿಳಿದೇ ಸಕಲ ದೇವತೆಗಳೂ, ಶಂಕರನು ಕೈಲಾಸವಾಸಿಯೆಂದು ರೂಢಿಯಾಗಿ ಹೊಗಳುತ್ತಿರುವರು. ॥೨೦॥

ಆದರೂ ನೀನು ಈ ಸ್ಥಳದಲ್ಲಿ ನನ್ನೊಡನೆ ಸುಖದಿಂದಿರು. ಈ ಮಣಿದ್ವೀಪವು ಸುಧಾಸಾಗರದ ಮಧ್ಯದಲ್ಲಿ ಮನೋಹರವಾಗಿರುವುದು. ಕಲ್ಪವೃಕ್ಷಗಳ ತೋಟವೂ, ನೀಪವನವೂ ಇಲ್ಲಿ ಸುಂದರವಾಗಿರುವುದು. ಇಲ್ಲಿ ನಿನಗೆ ಎಷ್ಟು ಅಭಿಮಾನವಿರುವುದೋ ಅಷ್ಟೇ ಅಭಿಮಾನವು ನನಗೂ ಇರುವುದು. ॥೨೧-೨೨॥

ಆದ್ದರಿಂದ ನಿನ್ನ ಪ್ರಾರ್ಥನೆಯಂತೆ ನಾನೂ ಇಲ್ಲಿಯೇ ವಾಸಮಾಡುವೆನು. ನಾನು ಒಬ್ಬನಾದರೂ ಅನೇಕ ರೂಪದಲ್ಲಿ ವಿಹರಿಸುವೆನು. ನನ್ನ ಆಕಾರವೇ ನಾನಾವಿಧ. ಸೂರ್ಯನೊಬ್ಬನಾಗಿದ್ದರೂ, ಊರು, ಹಳ್ಳಿ, ನಗರ, ಲೋಕ ಮುಂತಾದ ಬೇರೆ ಬೇರೆ ಪ್ರದೇಶದಲ್ಲಿ ಬೇರೆ ಬೇರೆಯಾಗಿ ಕಾಣುವನು. ಮತ್ತೂ ಅಲ್ಲಿನವರೆಲ್ಲರೂ ನಮ್ಮ ನಮ್ಮ ಮನೆಗಳಲ್ಲಿಯೂ ಒಬ್ಬ ಸೂರ್ಯನಿರುವನೆಂದು ಭಾವಿಸಿರುವರು. ಅದರಂತೆ ನಾನು ಸರ್ವವ್ಯಾಪಿಯಾಗಿ ಇಲ್ಲಿಯೂ ನೆಲಸುವೆನು. ॥೨೩-೨೪॥

ತಥಾಹಂ ಸರ್ವಭೂತೇಷು ಸರ್ವಾಂತರ್ವಾಸ ಏವ ಹಿ ।
ಅತ್ರಾಹಂ ವೈ ತ್ವಯಾ ದೇವಿ ಕಾಮೇಶ್ವರಸಮಾಹ್ವಯಃ ॥೨೫॥

ತ್ವಂ ಚ ಕಾಮೇಶ್ವರೀ ದೇವೀ ನಾನಾರೂಪಾಣಿ ಕಲ್ಪಯ ।
ಇತ್ಯುಕ್ತ್ವಾ ಸಾ ಜಗನ್ಮಾತಾ ಶಿವಸ್ಯಾನುಮತಂ ಶಿವಾ ॥೨೬॥

ಚಕಾರ ರೂಪಂ ಕಾಮೇಶ್ಯಾಃ ತ್ರಿಪುರಾಖ್ಯಾ ಮಹೇಶ್ವರೀ ।
ತಥಾ ತತ್ರ ಮಣಿದ್ವೀಪೇ ನಿತ್ಯಾಭಿಃ ಪರಿಸೇವಿತಾ ॥೨೭॥

ಕಾಮೇಶಾವಸ್ಥಿತಾ ದೇವಿ ಕಾಮೇಶಪರಮೇಶ್ವರೇ ।
ರಮಯಾಮಾಸ ವಿವಿಧೈರ್ಭೋಗಜಾಲರಸೈಃ ಶಿವಾ ॥೨೮॥

ಪುನಃ ಕತಿಪಯೇ ಕಾಲೇ ಶಂಕರೌ ಲೋಕಸುಂದರೌ ।
ವೃಷಭಂ ತಂ ಸಮಾರುಹ್ಯ ಕೈಲಾಸಮಭಿಜಗ್ಮತುಃ ॥೨೯॥

ನಂದಿಭೃಂಗಿಗಣಾಘ್ಯೈಶ್ಚ ದೇವೇನ ಗಣಪೇನ ಚ ।
ನಾನಾವಾದ್ಯಮಹಾರಾವಬಧಿರೀಕೃತದಿಙ್ಮುಖಃ ॥೩೦॥

---

ಹಾಗೆಯೇ ನಾನು ಸರ್ವಪ್ರಾಣಿಗಳಲ್ಲಿಯೂ ಅಡಗಿರುವವನಾಗಿ ಸರ್ವವ್ಯಾಪಿಯಾಗಿರುವೆನು. ಆದ್ದರಿಂದ ಎಲೌ ದೇವಿಯೇ, ನಾನು ನಿನಗಾಗಿ ಕಾಮೇಶ್ವರನೆಂಬ ಹೆಸರಿನಿಂದ ಇಲ್ಲಿ ನೆಲಸುವೆನು. ನೀನೂ ನಾನಾರೂಪಿಣಿಯಾಗಿರುವುದರಿಂದ, ಕಾಮೇಶ್ವರೀ ಎಂಬ ಹೆಸರಿನಿಂದ ಇಲ್ಲಿ ವಾಸಿಸು ಎಂದು ಪಾರ್ವತಿಯ ಅಭಿಪ್ರಾಯವನ್ನೇ ಶಂಕರನು ಅನುಮೋದಿಸಿದನು. ॥೨೫-೨೬॥

ಪರಶಿವನ ಆಜ್ಞೆಯಂತೆ ದೇವಿಯು ತ್ರಿಪುರಸುಂದರಿಯೆಂಬ ಹೆಸರಿನಲ್ಲಿ ಕಾಮೇಶ್ವರಿಯ ರೂಪವನ್ನು ಧರಿಸಿದಳು. ಶಂಕರನೂ ಕಾಮೇಶ್ವರನೆಂಬ ಹೆಸರಿನಿಂದ ಪತ್ನಿಯೊಡಗೂಡಿ ಅನೇಕ ವಿಧವಾದ ಭೋಗಭಾಗ್ಯಗಳನ್ನು ಅನುಭವಿಸುತ್ತಾ ಸುಖವಾಗಿ ಕಾಲಕಳೆದನು. ॥೨೭-೨೮॥

ಹೀಗೆ ಕೆಲವು ದಿನಗಳು ಕಳೆದಮೇಲೆ ಪಾರ್ವತೀ ಶಂಕರರು ವೃಷಭಾರೂಢರಾಗಿ ಕೈಲಾಸವನ್ನು ಕುರಿತು ಪ್ರಯಾಣಮಾಡಿದರು. ಆಗ ನಂದೀ, ಭೃಂಗೀ ಮೊದಲಾದ ಸಕಲ ಪ್ರಮಥಗಣಗಳು ನಾನಾವಾದ್ಯಧ್ವನಿಗಳಿಂದ ದಿಕ್ಕುಗಳನ್ನೇ ಮೊಳಗಿಸುತ್ತಾ ಕೈಲಾಸಾಭಿಮುಖರಾದರು. ॥೨೯-೩೦॥

ಕೈಲಾಸಮೌಳಿರತ್ನಾಘಸದನೇ ಪರಮೇಶ್ವರಃ ।
ಪರ್ವತೇಂದ್ರೇಗಜಾಯುಕ್ತೋ ಗಣಯುಕ್ತಃ ಪರಂ ಸುಖಂ ॥೩೧॥

ನಾನಾಹಾರವಿಹಾರೈಶ್ಚ ಕೋಟಿಕಂದರ್ಪಸುಂದರಃ ॥೩೨॥

ಸುಧಾಸಾಗರೋದ್ವಾಸಚಿಂತಾಮಣಿದ್ವೀಪಮಧ್ಯೇ ।
ಮಹಾಕಲ್ಪನಾತೋದ್ಯತಾಪಾರವಾಟೀಮನೋಜ್ಞೇ
ಮಹಾನೀಪಜಾಲಾಂತರೋದ್ಯತ್ಪ್ರಭಾಭಿ ।
ಸ್ಸಚಿಂತಾಮಣೀಕ್ಲೃಪ್ತಸೌಧಾಂತರೋದ್ಯ
ನ್ಮಹಾಮಂಚಕೇ ಕಾಮರೂಪೋ ಮಹೇಶಃ ॥೩೩॥

ತಥಾ ಮೇ ಜನಿತ್ರ್ಯಾ ಸಹೈವಾಸ್ತ ಈಶೋ
ಜಗಜ್ಜಾಲಸಂಹಾರಸಂಸ್ಥಾಸ್ಥಿತಿಜ್ಞಃ ।
ನಗಾಗ್ರೇದ್ಯ ಕೈಲಾಸಮೌಲೌ ಮಹಾಂತೇ
ನಿಷಣ್ಣಸ್ಸದಾ ವಿಶ್ವಲೀಲೋ ಮಹೇಶಃ ॥೩೪॥

---

ಕೈಲಾಸದ ಶಿಖರದಲ್ಲಿರುವ ರತ್ನಮಯವಾದ ಸದನದಲ್ಲಿ ಪರಶಿವನು ಪಾರ್ವತಿಯಿಂದಲೂ, ಪ್ರಮಥಗಣವರ್ಗದವರಿಂದಲೂ ವಾಸಿಸುತ್ತಾ, ನಾನಾ ವಿಹಾರಸುಖಗಳನ್ನು ಅನುಭವಿಸಿ, ಕಾಂತಿಯಲ್ಲಿ ಕೋಟಿಮನ್ಮಥ ಸದೃಶನಾಗಿ ಕಾಲಕಳೆಯುತ್ತಿದ್ದನು. ॥೩೧-೩೨॥

ಸುಧಾಸಾಗರಗಳ ಮಧ್ಯಭಾಗದಲ್ಲಿರುವ ಚಿಂತಾಮಣಿದ್ವೀಪವು ಕಲ್ಪವೃಕ್ಷಗಳ ಸುಗಂಧದಿಂದ ಮನೋಹರವಾಗಿರುವುದು. ಅದರ ಸುತ್ತಲೂ ಕದಂಬವೃಕ್ಷಗಳ ವನವು ತನ್ನ ಪ್ರಭೆಯನ್ನು ಬೀರುತ್ತಿರುವುದು. ಇವುಗಳ ಮಧ್ಯಭಾಗದಲ್ಲಿ ಚಿಂತಾಮಣಿ ನಿರ್ಮಿತವಾದ ದಿವ್ಯಹರ್ಮ್ಯ ಮಧ್ಯವರ್ತಿಯಾದ ದಿವ್ಯಮಂಚದಲ್ಲಿ ಕಾಮರೂಪಿಯಾದ ಕಾಮೇಶ್ವರನು ಸಂತೋಷದಿಂದ ಮಂಡಿಸಿರುವನು. ॥೩೩॥

ಎಲೈ ಜೈಗೀಷವ್ಯಮಹರ್ಷಿಯೇ, ಹೀಗೆ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಮೂಲಕಾರಣನಾದ ಮಹೇಶ್ವರನು ಪಾರ್ವತಿಯೊಡಗೂಡಿ ಕೈಲಾಸಪರ್ವತದ ಅಗ್ರಭಾಗದಲ್ಲಿ ವಿಶ್ವಲೀಲೆಯಿಂದ ಸರ್ವದಾ ಆನಂದಮಯನಾಗಿ ನೆಲಸಿರುವನು. ॥೩೪॥

ಸದೈವಾಂಬಯಾ ಚಿತ್ರಶಕ್ತಿರ್ಮಹೇಶೋ
ಹ್ಯಸಂತಾನ್ಯಪಾರಾಣಿ ಚಿತ್ರಾಣಿ ತಸ್ಯ ।
ನ ಜಾನಂತಿ ವೇದಾ ನ ಜಾನಂತಿ ದೇವಾ
ಸ್ತದಾಕಾರರೂಪಂ ನ ಕೋಽಪೀಶರೂಪಂ ॥೩೫॥

ಕಿಮೇತತ್ತದಾಪಾರನೀರೂಪಮೋಹಾಪರಂ ।
ನಿರ್ಗುಣಂ ಕಿಂ ತು ಲಭ್ಯಂ ಪ್ರಸಾದಾತ್ ॥೩೬॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ
ಕಾಮೇಶ್ವರ ಕಾಮೇಶ್ವರೀ ನಾನಾರೂಪವಿಹಾರ ಕೈಲಾಸಗಮನವರ್ಣನಂ
ನಾಮ ಸಪ್ತದಶೋಽಧ್ಯಾಯಃ

---

ಲೋಕರಚನೆಯಲ್ಲಿ ವಿಚಿತ್ರಶಕ್ತಿಯುಳ್ಳ ಮಹೇಶ್ವರನು ಲೋಕಮಾತೆಯಾದ ಜಗದೀಶ್ವರಿಯೊಡನೆ ಕೂಡಿ ಚಿತ್ರವಿಚಿತ್ರವಾದ ರೂಪವನ್ನು ತಾಳಿ ಜಗದಾತ್ಮನಾ ಪರಿಣತಿಗೊಳ್ಳುವನು. ಇದನ್ನೇ ವೇದಾಂತಿಗಳು ಪರಬ್ರಹ್ಮವಸ್ತುವು ಅವಿದ್ಯಾರೂಪ ವಾದ ಮಾಯಾಶಕ್ತಿಯ ಸಂಬಂಧದಿಂದ ಲೋಕದ ಚರಾಚರವಸ್ತುರೂಪವಾಗಿ ಭಾಸಮಾನನಾಗುವನು. ಅವಿದ್ಯಾ ನಿವೃತ್ತಿಯಾದಮೇಲೆ ಶುದ್ಧಪರಬ್ರಹ್ಮವಸ್ತುವು ಸ್ಥಿರವಾಗಿ ಆನಂದರೂಪದಲ್ಲಿ ನಿಲ್ಲುವುದು. ಆ ಅವಿದ್ಯಾನಿವೃತ್ತಿಯೇ ಮೋಕ್ಷ ಎಂದು ಹೇಳುವರು. ಇಂತಹ ಪರಬ್ರಹ್ಮಸ್ವರೂಪವು ಯಾರಿಗೂ ಸುಲಭವಾಗಿ ಗೋಚರಿಸು ವುದಿಲ್ಲ. ಅವಿದ್ಯಾರೂಪವಾದ ಮಾಯಾವರಣ ವಿಚ್ಛೇದ ಹೊರತು ಯಾರಿಗೂ ತಿಳಿ ಯುವುದಿಲ್ಲ. ಆದ್ದರಿಂದಲೇ ಅದರ ನಿಜತತ್ತ್ವವನ್ನು ವೇದಗಳಾಗಲಿ, ಯಾವ ದೇವತೆಗಳೇ ಆಗಲಿ ಸುಲಭವಾಗಿ ತಿಳಿಸಲಾರರು. ಎಲ್ಲವೂ ಪರಶಿವನ ಆಕಾರಗಳೇ, ಎಲ್ಲವೂ ಅವನ ರೂಪಗಳೇ. ವಾಸ್ತವವಾಗಿ ಗೋಚರವಾಗುವ ಯಾವುದೂ ಪರ ಬ್ರಹ್ಮನ ಸ್ಥಿರವಾದ ಆಕಾರವಲ್ಲ. ಎಲ್ಲವೂ ನಷ್ಟವಾಗತಕ್ಕದ್ದೇ. ||೩೫||

ಆದರೆ ಆಕಾರರಹಿತವಾಗಿದ್ದರೂ ಪರಬ್ರಹ್ಮವಸ್ತುವು ಅನೇಕ ರೂಪಗಳ ಮೋಹವನ್ನುಂಟುಮಾಡತಕ್ಕದ್ದು. ವಸ್ತುತಃ ನಿರ್ಗುಣರೂಪಿಯಾದರೂ, ಅದರ ಸ್ವರೂಪವು ಪರಬ್ರಹ್ಮರೂಪಿಯಾದ ಶಂಕರನ ಅನುಗ್ರಹವಿಲ್ಲದೆ ಗೋಚರಿಸಲಾರದು." ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ವಿವರಿಸಿದನು. ||೩೬||

ಇಲ್ಲಿಗೆ ಶ್ರೀಶಿವರಹಸ್ಯದ ಎರಡನೆಯ ಅಂಶದಲ್ಲಿ ಕಾಮೇಶ್ವರ ಕಾಮೇಶ್ವರೀ ವಿವಾದ
ವರ್ಣನ ಮತ್ತು ಕೈಲಾಸಗಮನರೂಪ ಕ್ರಿಯಾವರ್ಣನೆಯೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಅಷ್ಟಾದಶೋಽಧ್ಯಾಯಃ

### ಕೈಲಾಸಂ ಪ್ರತಿಹಿಮವದಾಗಮನಂ

॥ ಸ್ಕಂದ ಉವಾಚ ॥

ಏಕದಾದ್ರೀಂದ್ರಮಾಲೋಕ್ಯ ಮೇನಾ ಹೃಷ್ಟತನೂರುಹಾ ।
ಉಮಾಂ ಸಂಸ್ಮೃತ್ಯ ನಿಶ್ವಸ್ಯ ಪ್ರೋವಾಚೇತ್ಥಂ ಪತಿವ್ರತಾ ॥೧॥

॥ ಮೇನೋವಾಚ ॥

ಆರ್ಯಪುತ್ರ ನ ಜಾನಾಮಿ ಪ್ರವೃತ್ತಿಮಪಿ ಕಿಂಚನ ।
ವಿವಾಹಸಮಯಾದೂರ್ಧ್ವಂ ತಸ್ಯಾ ಗೌರ್ಯಾ ಗಿರೀಶ್ವರ ॥೨॥

ಪ್ರವೃತ್ತಿಮಪಿ ನೋ ದೇವ್ಯಾ ಜಾನೇಹಂ ತೇನ ದುಃಖಿತಾ ।
ಸ ವೃಷೇಂದ್ರಗತಿರ್ದೇವೋ ಭಸ್ಮೋರಗವಿಭೂಷಣಃ ॥೩॥

---

## ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಹದಿನೆಂಟನೆಯ ಅಧ್ಯಾಯ

ಒಂದುಸಾರಿ ಹಿಮವಂತರಾಜನ ಪತ್ನಿಯಾದ ಮೇನಾದೇವಿಯು ತನ್ನ ಪುತ್ರಿಯಾದ ಪಾರ್ವತಿಯನ್ನು ಸ್ಮರಿಸಿಕೊಂಡು, ತನ್ನ ಪತಿಯಾದ ಪರ್ವತ ರಾಜನನ್ನು ಕುರಿತು ಹೀಗೆ ಪ್ರಾರ್ಥಿಸಿಕೊಂಡಳು. ॥೧॥

ಆರ್ಯಪುತ್ರನೇ, ಮದುವೆಯಾದ ದಿನದಿಂದ ಮುಂದಕ್ಕೆ ಪಾರ್ವತಿಯ ಯೋಗಕ್ಷೇಮವೇ ತಿಳಿಯಲಿಲ್ಲ. ಮಗಳು ಎಲ್ಲಿದ್ದಾಳೆ, ಹೇಗಿದ್ದಾಳೆ ಎಂಬುದೇ ತಿಳಿಯದಾಗಿದೆ. ಗಿರಿರಾಜನೇ, ಅಳಿಯನಾದ ಮಹೇಶ್ವರನಾದರೋ, ವೃಷಭಾರೂಢ ನಾಗಿ, ಕೇವಲ ಭಸ್ಮ, ಹಾವು ಇವುಗಳಿಂದ ಅಲಂಕೃತನಾಗಿರುವವನು. ॥೨-೩॥

ಮಹಾಪಿತೃವನಾವಾಸೋ ದಿಗ್ವಾಸಾಃ ಕ್ವಾಸ್ತಿ ಸಂಪ್ರತಿ ।
ಅಷ್ಟೌ ಯಾ ಮಾತರೋ ದೃಷ್ಟ್ವಾ ಬ್ರಾಹ್ಮೀಪ್ರಭೃತಯೋಽತ್ರ ಯಾಃ ॥೪॥

ದುಃಖಸ್ವರೂಪಾ ಮನ್ಯೇಽಹಂ ಬಾಲಿಕಾಕಷ್ಟಹೇತವಃ ।
ತಸ್ಯೈಕಸ್ಯೈ ನ ಕೋಽಪ್ಯನ್ಯೋ ಏಕೋ ರುದ್ರಶ್ಶ್ರುತೀರಿತಃ ॥೫॥

ತದುದಂತಪ್ರವೃತ್ತ್ಯೈವ ಕ್ರಿಯತಾಮುದ್ಯಮೋ ವಿಭೋ ।
ತಸ್ಯಾಃ ಪ್ರಿಯಾಯಾ ವಾಕ್ಯೇನ ತದಪತ್ಯಪ್ರಿಯೋ ಗಿರಿಃ ॥೬॥

ಉವಾಚ ವಚನಂ ಸಾಸ್ರಂ ಉಮಾವಾತ್ಸಲ್ಯಸಕ್ತಧೀಃ ॥೭॥

ಮೈವಂ ವದಾದ್ಯ ಮೇನೇ ತ್ವಂ ದುಃಖಾಧಿಕ್ಯಂ ಮಹೇಶ್ವರ ।
ಮತ್ಸುತಾ ಸಾ ಶಿವಾ ದೇವೀ ತ್ರೈಲೋಕ್ಯಜನನೀ ಶಿವಾ ॥೮॥

ಕನ್ಯಾ ತೇ ಕಾರಣಾಜ್ಜಾತಾ ಶಿವಸ್ಯಾರ್ಧಾಂಗಭಾಗಿನೀ ।
ಯಸ್ಯಾಃ ಕಟಾಕ್ಷಮಾತ್ರೇಣ ಸರ್ವೇಷಾಂ ಸರ್ವಸಿದ್ಧಯಃ ॥೯॥

---

ಅವನ ವಾಸಸ್ಥಳವಾದರೋ ಸ್ಮಶಾನವಾಗಿರುವುದು. ದಿಗಂಬರನಾಗಿರುವ ಶಂಕರನು ಪತ್ನಿಯೊಡನೆ ಎಲ್ಲಿರುವನೆಂಬುದೇ ತಿಳಿಯದಾಗಿದೆ. ಸೇವೆಗಾಗಿರುವ ಬ್ರಾಹ್ಮಿಯೇ ಮೊದಲಾದ ಸಪ್ತಮಾತೃಕೆಯರು ನವಶಕ್ತಿಸಹಿತರಾದ ಆ ಎಂಟು ಜನರೂ ಕೇವಲ ದುಃಖಜನಕರಾಗಿರುವರು. ಬಾಲಿಕೆಯಾದ ನನ್ನ ಮಗಳಿಗೆ ಅವರು ಕೇವಲ ಕಷ್ಟಪ್ರದರಾಗಬಹುದು. ಶ್ರುತಿಗಳು ಲೋಕದಲ್ಲಿ ಶಿವನೊಬ್ಬನೇ ಎಂದೂ, ಮತ್ತಾರೂ ಅವನಿಗೆ ಸದೃಶರಿಲ್ಲವೆಂದೂ ಹೇಳುತ್ತಿರುವುವು. ಇದರಿಂದ ಏಕಾಕಿಯಾದ ಶಂಕರನು ಎಲ್ಲಿರುವನೆಂಬುದೇ ಸಂದೇಹವಾಗಿದೆ. ||೪-೫||

ಆದ್ದರಿಂದ ಪರ್ವತರಾಜನೇ, ಆ ಮಗಳು ಮತ್ತು ಅಳಿಯಂದಿರ ಸಮಾಚಾರವನ್ನು ತಿಳಿಯಲು ಪ್ರಯತ್ನಿಸುವವನಾಗು ಎಂದು ಪತ್ನಿಯಿಂದ ಪ್ರಾರ್ಥಿತನಾದ ಗಿರಿರಾಜನು ಮಗಳಮೇಲಿನ ಸ್ಮರಣೆಯಿಂದಲೂ, ವ್ಯಾಮೋಹದಿಂದಲೂ, ಅಶ್ರುಲೋಚನನಾಗಿ ಪತ್ನಿಯೊಡನೆ ಇಂತೆಂದನು. ||೬-೭||

ಮೇನಾದೇವಿಯೇ, ನೀನು ಹಾಗೆ ಯೋಚಿಸಬೇಡ. ಮಹೇಶ್ವರನಲ್ಲಿ ದುಃಖಲೇಶವೂ ಇರುವುದಿಲ್ಲ. ಕಾರಣಾಂತರದಿಂದ ನಿನ್ನ ಮತ್ತು ನನ್ನ ಮಗಳಾಗಿ ಹುಟ್ಟಿದ ಮಹೇಶ್ವರಪತ್ನಿಯು, ನಿಜವಾಗಿಯೂ ವಿಶ್ವಜನನಿಯು. ಮತ್ತು ವಿಶ್ವರಕ್ಷಕಳು.

ಲಭ್ಯಂತೇ ವೈ ಮಹೇಶಾನ್ಯಾಃ ಸಾ ಕಿಂ ದುಃಖಾಧಿಕಾ ಭವೇತ್ ।
ಸುಖೈಕವಸತಿಶ್ಶಂಭುಶ್ಶಂಕರಶ್ಶಾಶ್ವತೋಽವ್ಯಯಃ ॥೧೦॥

ತತ್ಸ್ವರೂಪಪರಿಜ್ಞಾನಂ ವೇದೈರಪಿ ನ ಶಕ್ಯತೇ ।
ಯಸ್ಯ ಲಿಂಗಾರ್ಚನೇನೈವ ಮೋಕ್ಷಭಾಗ್ಯಮದೂರಗಂ ॥೧೧॥

ಯಸ್ಯಾರ್ಚನೇನ ದೇವಾನಾಂ ದೇವತ್ವಂ ಕಿಲ ಭಾಮಿನಿ ।
ಯಸ್ಯೈಕವಸತಿರ್ಮಾನೇ ಕೈಲಾಸೋ ರಜತಾಚಲಃ ॥೧೨॥

ಧನುರ್ಯಸ್ಯ ಮಹಾಮೇರುಸ್ಸರ್ವದೇವಾಲಯೋ ಮಹಾನ್ ।
ಯಸ್ಯ ಬಾಣೋ ಹರಿಸ್ಸಾಕ್ಷಾದ್ಯಸ್ಯಾಶ್ವಾ ಶ್ರುತಯೋಽಖಿಲಾಃ॥೧೩॥

ರಥೋ ಧರಿತ್ರೀ ದೇವಸ್ಯ ಸರ್ಪರಾಜೋಽಥ ಶಿಂಜಿನೀ ।
ಸ್ರಷ್ಟಾ ಯಸ್ಯ ಕಿಲೇದಾನೀಂ ಸಾರಥೀ ರಥವಾಹನೇ ॥೧೪॥

---

ಆ ದೇವಿಯ ಕೇವಲ ಕಟಾಕ್ಷಪಾತದಿಂದಲೇ ಭಕ್ತರಿಗೆ ಅಣಿಮಾದ್ಯಷ್ಟಸಿದ್ಧಿಗಳೂ ಒದಗುವುವು. ಅಲ್ಲದೆ ಮಹೇಶ್ವರನು ಸುಖಾಶ್ರಯನು. ಸೌಖ್ಯಕ್ಕೆ ಮೂಲಭೂತನಾದವನು. ಅವನಿಗೆ ನಾಶವಾಗಲಿ, ಉತ್ಪತ್ತಿಯಾಗಲಿ ಇರುವುದಿಲ್ಲ. ಹೀಗಿರುವಾಗ ಆತನ ಪತ್ನಿಯಾದ ಪಾರ್ವತಿಗೆ ಎಂದಾದರೂ ದುಃಖವು ಒದಗೀತೆ? ||೮-೯-೧೦||

ಪರಶಿವನ ಸ್ವರೂಪವನ್ನರಿಯಲು ವೇದಗಳಿಗೂ ಸಾಧ್ಯವಾಗಿಲ್ಲ. ಶಿವಲಿಂಗಾರ್ಚನೆಯಿಂದಲೇ ಭಕ್ತರಿಗೆ ಮೋಕ್ಷವು ಸುಲಭವಾಗುವುದಾಗುವುದು. ದೇವತೆಗಳು ಇಂದು ದೇವತೆಗಳಾಗಿರುವುದು ಶಿವಲಿಂಗಾರ್ಚನೆಯಿಂದಲೇ. ಅಂತಹ ಪರಶಿವನಿಗೆ ರಜತಾದ್ರಿಯಾದ ಕೈಲಾಸವೇ ಮುಖ್ಯಸ್ಥಳವಾಗಿರುವುದು. ||೧೧-೧೨||

ಸರ್ವದೇವತೆಗಳಿಗೂ ಆವಾಸಸ್ಥಾನವಾಗಿರುವ ಮೇರುವೇ ಪರಶಿವನಿಗೆ ಧನುಸ್ಸಾಗಿರುವುದು. ಹರಿಯೇ ಅವನ ಬಾಣ. ವೇದಗಳೇ ಕುದುರೆಗಳು. ಭೂಮಿಯೇ ರಥವಾಗಿರುವುದು. ಬಿಲ್ಲಿಗೆ ಕಟ್ಟುವ ಶಿಂಜಿನಿಯೇ ಆದಿಶೇಷ. ಸಕಲಲೋಕಸೃಷ್ಟಿಕರ್ತನಾದ ಬ್ರಹ್ಮನೇ ಪರಶಿವನಿಗೆ ಸಾರಥಿಯಾಗಿರುವನು. ||೧೩-೧೪||

ಚಂದ್ರಸೂರ್ಯೌ ತಥಾ ಚಕ್ರೇ ತಸ್ಯ ದೇವಸ್ಯ ಧೂರ್ಜಟೇಃ ।
ಖ್ಯಾತೋ ದೇವೇಷು ದೇವೇಶಸ್ಸುಧನ್ವಾ ಸಸ್ವಿಷುರ್ಹರಃ ॥೧೫॥

ಹರಿಕೇಶಶ್ಚ ಭಗವಾನ್ ರಥಾಶ್ವಪತಿರೀಶ್ವರಃ ।
ವಿಷ್ಣುಬ್ರಹ್ಮಮಹೇಶಾದಿಲೋಕೋತ್ಥಾಯಾಃ ಶ್ರಿಯಃ ಪ್ರಿಯೇ॥೧೬॥

ತಸ್ಯ ಕೈಲಾಸಕೋಟ್ಯಂಶಕೋಟ್ಯಂಶೇನಾಪಿ ನೋ ಸಮಾಃ ।
ತದ್ದರ್ಶನಾರ್ಥಂ ಚ ಮಮ ಗಂತುಂ ವೃತ್ತಂ ಮನಃ ಪ್ರಿಯೇ ॥೧೭॥

ಅಹಮೇವ ಗಮಿಷ್ಯಾಮಿ ತಸ್ಯಾ ಮೇನೇ ಗವೇಷಣೇ ।
ಗವಾಂ ಪತೇರ್ಮಹೇಶಸ್ಯ ಕೈಲಾಸನಿಲಯಸ್ಯ ಚ ॥೧೮॥

ನಿತರಾಂ ಬಾಧತೇ ಪ್ರೇಮ ತದದೃಷ್ಟ್ಯಾಗ್ನಿದೂಷಿತಂ ।
ಯದಾ ಪ್ರಭೃತಿ ಸಾ ದೇವೀ ನಿರ್ಗತಾ ಮಮ ಸದ್ಮತಃ ॥೧೯॥

ಮನ್ಯೇ ಮೇನೇ ತದಾರಭ್ಯ ಪದ್ಮಸದ್ಮಾಪಿ ನಿರ್ಯಯೌ ।
ತದಾಲಾಪಾದಯೋ ಮೇನೇ ಶ್ರೋತ್ರೇ ಶಬ್ದಗ್ರಹೌ ಪ್ರಿಯೌ ॥೨೦॥

---

ಪರಶಿವನ ರಥಕ್ಕೆ ಚಂದ್ರಸೂರ್ಯರೇ ಚಕ್ರಗಳು, ದೇವತೆಗಳಲ್ಲಿಯೂ, ಇತರ ಶೂರಧನುರ್ಧಾರಿಗಳಲ್ಲಿಯೂ ನಿಜವಾದ ಬಿಲ್ಲುಗಾರನೆಂದರೆ ಶಂಕರನೊಬ್ಬನೇ. ಆತನೇ ವ್ಯೋಮಕೇಶನು. ರಥಪತಿಯು, ಅಶ್ವಪತಿಯು. ವಿಷ್ಣು, ಬ್ರಹ್ಮ, ರುದ್ರ ಮುಂತಾದವರ ಸಕಲ ಲೋಕಗಳಿಗಿಂತಲೂ ಕೈಲಾಸಲೋಕದ ರಮಣೀಯತೆಯು ಅತ್ಯಧಿಕವಾದದ್ದು. ಕೈಲಾಸದ ಸೌಂದರ್ಯದ ಕೋಟಿಯ ಕೋಟಿಭಾಗದಲ್ಲೊಂದು ಸೊಬಗನ್ನು ಪ್ರತ್ಯಕ್ಷವಾಗಿ ನೋಡಲು ನಾನೇ ಹೊರಡುವವನಾಗಿರುವೆನು. ||೧೫-೧೬-೧೭||

ಮೇನಾದೇವಿಯೇ, ಪಶುಪತಿಯಾದ ಮತ್ತು ಕೈಲಾಸವಾಸಿಯಾದ ಪರಮೇಶ್ವರನ ದರ್ಶನಾರ್ಥವಾಗಿ ನಾನೇ ಹೊರಡಲುದ್ಯುಕ್ತನಾಗುವೆನು. ಅವರನ್ನು ನೋಡದೆ ಇರುವುದರಿಂದ ನನ್ನ ಮನಸ್ಸು ತಲ್ಲಣಗೊಳ್ಳುತ್ತಿದೆ. ಪಾರ್ವತಿಯು ನಮ್ಮ ಮನೆಯನ್ನು ಬಿಟ್ಟು ಹೊರಟುಹೋದದಿನದಿಂದ ನಮ್ಮ ಗೃಹಲಕ್ಷ್ಮಿಯೇ ಮನೆಯಿಂದ ಹೊರಹೊರಟಂತೆ ತೋರಿಬರುತ್ತಿದೆ. ||೧೮-೧೯||

ಆ ಪಾರ್ವತಿಯ ಮಧುರಾಲಾಪಾದಿಗಳನ್ನು ಕೇಳಿ ನನ್ನ ಕಿವಿಗಳೆರಡೂ, ಆ

ಪ್ರಾಣೇಶ್ವರಿ ತದಾರಭ್ಯ ಸ್ಯಾತಾಂ ಶಬ್ದಗ್ರಹಾಂತರೌ ।
ಜೈವಾತೃಕೀ ಯತೋಽಹ್ನಸ್ಸ್ಯಾದ್ದೂರೀಭೂತಾ ದೃಶೋರ್ಮಮ ॥೨೧॥

ಪ್ರಿಯೇ ಜೈವಾತೃಕೀ ಜ್ಯೋತ್ಸ್ನಾ ತತೋಽಹ್ನೋಽಪಿ ಧುನೋತಿ ಮಾಂ ।
ಯದಪತ್ಯಪ್ರಮೋದೇನ ದೇವದೇವ್ಯೋಃ ಪದಾಂಬುಜಂ ॥೨೨॥

ಧನ್ಯಃ ಪಶ್ಯಾಮಿ ನೇತ್ರಾಭ್ಯಾಂ ಚಿರಾಯ ಚಿರಪಾಪಹೃತ್ ।
ದೃಷ್ಟ್ವಾ ಶಿವೌ ಶಿವಂ ಮೇ ಸ್ಯಾದಿತಿ ಮನ್ಯೇ ಗಿರೀಶ್ವರಃ ॥೨೩॥

ಮೇನೇ ಧನ್ಯೋಽದ್ಯ ತ್ವತ್ಕನ್ಯಾದರ್ಶನೇನಾದ್ಯ ಧನ್ಯತಾಂ ।
ಮಾನ್ಯೋಽತಿನಿತರಾಂ ಶಂಭೋಃ ಕೈಲಾಸಾರೋಹಣೇನ ತು ॥೨೪॥

---

ಶಬ್ದಗಳನ್ನು ಮಾತ್ರ ಗ್ರಹಿಸಿದ್ದಾಗಿರುವುದು. ಪ್ರಾಣೇಶ್ವರಿಯೇ, ಶಬ್ದಗ್ರಾಹಕ ಶಕ್ತಿಯು ಕಿವಿಗಳಿಗಿರುವುದರಿಂದಲೇ ಅವು ಶಬ್ದಗೃಹಗಳೆನಿಸಿವೆ. ನನ್ನ ಪುತ್ರೀ ವಿಯೋಗದಿಂದ ನನ್ನ ಕಣ್ಣುಗಳಿಗೆ ಚಂದ್ರಿಕಾಸಂಬಂಧವಾದ ಹಗಲೇದೂರವಾದಂತಿದೆ. ಮಗಳ ಮುಖದರ್ಶನದಿನದಲ್ಲಿ, ಚಂದ್ರಿಕಾವಿಶಿಷ್ಟವಾದ ಹಗಲನ್ನು ನೋಡುತ್ತಿದ್ದೆನು. (ಅಂದರೆ ಮಗಳ ಮುಖವು ಚಂದ್ರನಿಗೂ ಅದರ ಕಾಂತಿಯು ಚಂದ್ರಿಕೆಗೂ ಸಮವಾಗಿತ್ತೆಂದು ಭಾವ.) ಈಗ ಅದು ಇಲ್ಲವಾಗಿದೆ. ||೨೦-೨೧||

ದೇವಿಯೇ, ಪುತ್ರೀಮುಖದಿಂದ ತೋರಿಬರುವ ಚಂದ್ರಿಕೆಯು ಹಗಲನ್ನು ಸಹ ಮಂಕುಮಾಡುವಂತೆ ನನ್ನ ಮನಸ್ಸಿಗೆ ತೋರಿಬರುವುದು. ಇದು ಮಗಳ ಮೇಲಿನ ವ್ಯಾಮೋಹದ ಪರಿಣಾಮ. ಈಗ ದೇವದೇವಿಯರಾದ ಪಾರ್ವತೀಪರಶಿವರ ಪಾದಕಮಲಗಳನ್ನು ನಾನೇ ಪ್ರತ್ಯಕ್ಷವಾಗಿ ನೋಡಿ ನನ್ನ ಕಣ್ಣುಗಳಿಗೆ ಸಾರ್ಥಕತೆಯನ್ನು ಕಲ್ಪಿಸಿಕೊಳ್ಳುವೆನು. ಶಿವಾಶಿವರನ್ನು ನೋಡಿ ಗಿರೀಶ್ವರನಾದ ನಾನು ಸಕಲ ಪಾಪಗಳಿಂದ ಮುಕ್ತನಾಗುವೆನು. ಇದೇ ನನ್ನ ದೃಢನಿಶ್ಚಯ. ||೨೨-೨೩||

ಎಲೌ ಮೇನಾ ದೇವಿಯೇ, ಈಗ ನಿನ್ನ ಮಗಳ ದರ್ಶನದಿಂದಲೂ, ಶಂಕರನ ವಾಸಸ್ಥಾನವಾದ ಕೈಲಾಸಗಿರಿಯ ಆರೋಹಣದಿಂದಲೂ ನಾನು ಮುಂದೆ ಧನ್ಯನೂ, ಮಾನ್ಯನೂ ಆಗುವೆನು. ||೨೪||

॥ ಹಿಮವಾನುವಾಚ ॥

**ಮೈನಾಕಾನಯ ರತ್ನಾನಿ ವಾಸಾಂಸಿ ವಿವಿಧಾನಿ ಚ ।**
**ವೃತ್ತಮುಕ್ತಾಫಲಾನಾಂ ತು ಕೋಟಿದ್ವಯಪರೀಮಿತಂ ॥೨೫॥**

**ತಥಾ ಹಾರೀತರಾಗಾಣಾಂ ಹೀರಕಾಣಾಂ ತುಲಾಶತಂ ।**
**ನವಲಕ್ಷಾಧಿಕಂ ವಿಪ್ರ ಷಡಸ್ರಾಣಾಂ ಸುತೇಜಸಾಂ ॥೨೬॥**

**ಲಕ್ಷದ್ವಯಂ ವಿಡೂರಾಣಾಂ ತುಲಾವಿಮಲವರ್ಚಸಾಂ ।**
**ಕೋಟಿಂ ಚ ಪದ್ಮರಾಗಾಣಾಂ ಪಂಚಾನ್ಯೈಹಿ ತುಲಾಮುನೇ ॥೨೭॥**

**ಪುಷ್ಯರಾಗತುಲಾಪಂಚ ಕೋಟಿಂ ಚ ಗುಣಿತಸ್ತದಾ ।**
**ತದಾ ಗೋಮೇದರತ್ನಾನಾಂ ತುಲಾಲಕ್ಷಮಿದಂ ಮುನೇ ॥೨೮॥**

**ಇಂದ್ರನೀಲಮಣೀನಾಂ ತು ಕೋಟಿದ್ವಯಮಿತಂ ತದಾ ।**
**ಗರುಡೋದ್ಗಾರಿರತ್ನಾನಾಂ ತುಲಾಃ ಪ್ರಯುತಸಂಮಿತಾಃ ॥೨೯॥**

**ಶುದ್ಧವಿದ್ರುಮರತ್ನಾನಾಂ ತುಲಾಶ್ಚ ನವಕೋಟಯಃ ।**
**ಅಷ್ಟಾಂಗಾಭರಣಾನಾಂ ಚ ಸಂಖ್ಯಾಕರ್ತುಂ ನ ಶಕ್ಯತೇ ॥೩೦॥**

---

ಎಂದು ಹೇಳಿ ಹಿಮವಂತನು ತನ್ನ ಮಗನಾದ ಮೈನಾಕನನ್ನು ಕುರಿತು, "ಎಲೈ ಮೈನಾಕನೇ, ಈಗಲೇ ನಾನಾವಿಧವಾದ ಮತ್ತು ಅಮೂಲ್ಯವಾದ ರತ್ನಗಳನ್ನೂ, ವಸ್ತ್ರಗಳನ್ನೂ ತಂದು ಒದಗಿಸು. ದುಂಡಾಗಿರುವ ಎರಡುಕೋಟಿ ಮುತ್ತುಗಳನ್ನೂ, ಹರಿದ್ವರ್ಣದಿಂದಿರುವ ನೂರು ತೊಲ ಹೀರಕರತ್ನಗಳನ್ನೂ, ಹೊಳೆಯುವ ಒಂಬತ್ತುಲಕ್ಷ ವಜ್ರಗಳನ್ನು ತೆಗೆದುಕೊಂಡುಬಾ. ॥೨೫-೨೬॥

ಎರಡುಲಕ್ಷ ತೊಲ ವೈಡೂರ್ಯ, ಐದುಕೋಟಿ ಪದ್ಮರಾಗಮಣಿಗಳು, ಐದು ಕೋಟಿ ತೊಲ ಪುಷ್ಪರಾಗಮಣಿಗಳು, ಅಷ್ಟೇಸಂಖ್ಯೆಯುಳ್ಳ ಐದುಲಕ್ಷ ತೊಲ ಗೋಮೇದಕಗಳನ್ನೂ ತೆಗೆದುಕೊಂಡುಬಾ ಎಂದು ಅಪ್ಪಣೆಮಾಡಿದನು. ॥೨೭-೨೮॥

ಎರಡುಕೋಟಿ ಇಂದ್ರನೀಲಮಣಿಗಳನ್ನೂ ಪ್ರಯುತ ಸಂಖ್ಯೆಯಲ್ಲಿ ಗರುಡ ಮಣಿಗಳನ್ನೂ, ಒಂಬತ್ತುಕೋಟಿ ಶುದ್ಧ ಹವಳಗಳನ್ನೂ, ಇನ್ನೂ ವಿಧವಿಧವಾದ

---

(ತುಲಾ ಶಬ್ದಕ್ಕೆ ಪ್ರಾಚೀನ ರೀತಿಯಂತೆ ಬೇರೆ ತೂಕದ ಪ್ರಮಾಣವಿದ್ದರೂ ಆಧುನಿಕ ವ್ಯವಹಾರವನ್ನು ಅನುಸರಿಸಿ ತೊಲ ಎಂದು ಅರ್ಥಮಾಡಿದೆ.)

ಮಕುಟಾಂಗದಕೇಯೂರಚೂಡಾಮಣಿಶಿಖಂಡಕಾಃ ।
ಕೂರ್ಪರಾನಾಗಬಂಧಾಶ್ಚ ವಂಕಿಕಾಂಗುಲಿಕಾದಯಃ ॥೩೧॥

ವೇಣೀಮಂಡಲಸಂಭ್ರಾಜಿರತ್ನಪುಷ್ಪಗಣಾಸ್ತಥಾ ।
ಮಣಿಹಸ್ತಸರಾಶ್ಚೈವ ಹೀರಾಂಗುಷ್ಠಾಗ್ರವೇಷ್ಟನಾಃ ॥೩೨॥

ರತ್ನಗ್ರೈವೇಯಚಿಂತಾಕಲೋಲಮುಕ್ತಾಫಲೀಸರೈಃ ।
ರತ್ನಾಢ್ಯಪದಕಾನಾಂ ಚ ಸರಾವಳಿಮಣಿಪ್ರಭೈಃ ॥೩೩॥

ರತ್ನತಾಟಂಕವಲಯೈರ್ನಾಸಾಬರ್ಹೈಶ್ಚ ಮೌಕ್ತಿಕೈಃ ।
ರತ್ನಕಾಂಚ್ಯೋದ್ಯಘಂಟಾಢ್ಯಮುಕ್ತಾಗುಚ್ಛೈಕಲಂಬಿತಾಃ ॥೩೪॥

ರತ್ನಮಂಜೀರಪಾದಾಂಘ್ರಿಕಟಿಕಾ ರತ್ನಶೃಂಖಲಾಃ ।
ಕುಂಡಲೀಭೋಗವಕ್ತ್ರಾಭಾರಣತ್ಕಟಕಪಾಡಗಾಃ ॥೩೫॥

ನಖಾಂಗುಲೀವೇಷ್ಟನಕೈರ್ಮುಕ್ತಾಲೋಲೈಸ್ಸ್ರವದ್ಘರೈಃ ।
ವಾಸಸಾಂ ಚ ವಿಚಿತ್ರಾಣಾಂ ನಾನಾವರ್ಣಾಂಬರಾವೃತಾಂ ॥೩೬॥

---

ಅಸಂಖ್ಯಾತವಾದ ಆಭರಣರಾಶಿಗಳನ್ನೂ ಮೈನಾಕನು ತಂದೆಯ ಅಪ್ಪಣೆಯಂತೆ ಒದಗಿಸಿದನು. ॥೨೯-೩೦॥

ಹಾಗೆಯೇ, ಕಿರೀಟ, ತೋಳುಬಳೆ, ಕೈಬಳೆ, ಚೂಡಾಮಣಿ, ಮುಂದಲೆ ಹೂವು, ಹೆರಳಿಗೆ ಹಾಕುವ ಜಡೆಹೂವು, ನಾಗಾಭರಣ, ವಂಕಿ, ಉಂಗುರ, ಜಡೆಗೆ ಸಾಲಾಗಿ ಹಾಕುವ ರತ್ನಪುಷ್ಪಗಳು, ಮಣಿಮಯವಾದ ಕೈಸರ, ಹೀರರತ್ನ ನಿರ್ಮಿತವಾದ ಅಂಗುಷ್ಠಾಂಗುಳೀಯಕ. (ಪಿಲ್ಲಿ) ॥೩೧-೩೨॥

ರತ್ನದ ಕಂಠಾಭರಣ, ಮುಂದಲೆಹೂವು, ಕಿವಿಗೆ ಹಾಕುವ ಮುತ್ತಿನಸರಗಳು, ರತ್ನದ ವಿಶಾಲವಾದ ಪದಕ, ನವರತ್ನಖಚಿತವಾದ ಸರಗಳು, ರತ್ನದ ಓಲೆಗಳು, ಬಳೆಗಳು, ಮೂಗುಬೊಟ್ಟುಗಳು, ರತ್ನದ ಒಡ್ಯಾಣ, ಅದರಲ್ಲಿ ಇಂಚರಗೈಯ್ಯುವ ಮುತ್ತಿನ ಗಂಟೆಗಳು, ರತ್ನದ ಗೆಜ್ಜೆಗಳು ಇವೆಲ್ಲವೂ ಮೈನಾಕನಿಂದ ತರಲ್ಪಟ್ಟವು. ॥೩೩-೩೪॥

ರತ್ನದ ಗೆಜ್ಜೆಗಳಿಂದ ಕೂಡಿದ, ಕಾಲುಬಳೆಗಳೂ, ರತ್ನದ ಸರಪಳಿಗಳೂ, ಸರ್ಪಾಕಾರದಲ್ಲಿರುವ ಮುಖಾಭರಣ, ಕೈಬಳೆ, ಪಾಡಗ ಮುಂತಾದುವುಗಳೂ, ಉಂಗುರ

ಹಂಸಾಪಾಲೀಗಜಾಕಾರಸಿಂಹಸ್ರಾಂತೋರುಶೋಭಿನಾಂ ।
ಸುವರ್ಣಪದ್ಮಸಂಕ್ಲೃಪ್ತವಾಸಸಾಂ ರಾಶಯಸ್ತದಾ ॥೩೭॥

ಕರ್ಬುರಾಣಾಂ ಚ ಪೀತಾನಾಂ ಹರಿನ್ಮಣಿನಿಭಾತ್ಮನಾಂ ।
ಕೃಮಿಸೂತ್ರೋತ್ಥಜಾತ್ಯುದ್ಯದ್ವಾಸೋರಾಶಿಭರ್ಭೈರಪಿ ॥೩೮॥

ನಿಚೋಲೈರ್ವಿವಿಧೈಸ್ತತ್ರ ಮುಕ್ತಾಸ್ರಾಂತೋರುಶೋಭಿತೈಃ ।
ದುಕೂಲಕುಲವಿಲಸನ್ಮಣಿಮೌಕ್ತಿಕಜಾಲಕೈಃ ॥೪೦॥

ನಿಚಿತಸ್ವರ್ಣವಸ್ತ್ರಾಣಾಂ ಭಾರಕಾಣಾಂ ಶತತ್ರಯಂ ।
ಗಂಧಗಂಧಾಯಿತಾನಾಂ ಚ ಕಂಕತಾದರ್ಶಭಾರಕೈಃ ॥೪೧॥

ಅಂಜನಾರೋಚನಾನಾಂ ಚ ಕರ್ಪೂರರಪಟವಾಸಸಾಂ ।
ಪಾಟೀರಚಂದ್ರಕಸ್ತೂರೀಗಂಧೈರ್ಮಲಯಜೈಸ್ತಥಾ ॥೪೨॥

ತಗರಾಗರುತಕ್ಕೋಲಜಾತೀಪತ್ರಫಲೈರಪಿ ।
ಲವಂಗೇಲಾಮಧುರಸಸರ್ಜನೈಶ್ಚ ಮನಃಶಿಲಾ ॥೪೩॥

---

ಕೈಸುತ್ತು, ಮುತ್ತಿನ ಗೊಂಚಲಿನಿಂದ ನೇತಾಡುವ ಕೆನ್ನೇಸರಪಳಿ, ಇನ್ನೂ ಚಿತ್ರ ವಿಚಿತ್ರವಾದ ಬಣ್ಣಬಣ್ಣವಾದ ವಸ್ತ್ರಗಳೂ ಇವೆಲ್ಲವೂ ತರಲ್ಪಟ್ಟುವು. ॥೩೫-೩೬॥

ಹಂಸ, ಆನೆ, ಸಿಂಹ ಇವುಗಳ ಆಕಾರದಿಂದ ಕೂಡಿ, ಕಮಲದಂತೆ ಜರತಾರಿಗಳಿಂದ ರಂಜಿಸುವ ವಸ್ತ್ರಗಳ ರಾಶಿಗಳು ಅಲ್ಲಿ ಶೇಖರವಾದವು. ಹಾಗೆಯೇ ಶಬಲವರ್ಣದ, ಹೊಂಬಣ್ಣದ, ಹರಿದ್ವರ್ಣದ, ರೇಷ್ಮೇಮಡಿಯಿಂದ ನಿರ್ಮಿತವಾದ ಮೇಲುಹೊದಿಕೆಯ ಬಟ್ಟೆಗಳಂತೂ ಹೇರಳವಾಗಿ ತರಿಸಲ್ಪಟ್ಟುವು. ॥೩೭-೩೮॥

ಮುತ್ತಿನ ಗೊಂಚಲುಗಳಿಂದ ಶೋಭಿಸುವ ರೇಷ್ಮೆಯ ಮೇಲುಹೊದಿಕೆಗಳೂ ಮುನ್ನೂರುತೊಲ ತೂಗುವ ಸುವರ್ಣವಸ್ತ್ರಗಳೂ, ,ದಿವ್ಯಸುಗಂಧವೃಕ್ಷ ನಿರ್ಮಿತವಾಗಿ ಸುವಾಸನೆ ಕೊಡುವ ಬಾಚಣಿಗೆಗಳೂ, ಕನ್ನಡಿಗಳೂ ತರಲ್ಪಟ್ಟುವು. ॥೪೦-೪೧॥

ಕಣ್ಣಿಗೆ ಹಾಕುವ ಅಂಜನ, ಅಂಗರಾಗ, ಕರ್ಪೂರದ ಗಂಧದಿಂದ ಸುವಾಸಿತವಾದ ಅಂಗವಸ್ತ್ರಗಳು, .ಶ್ರೀಗಂಧ, ಚಂದ್ರ, ಕಸ್ತೂರಿ, ಮಲಯ ಪರ್ವತದಲ್ಲಿ ಹುಟ್ಟಿದ ಶ್ರೀಗಂಧ, ತಗರು, ಅಗರು, ತಕ್ಕೋಲ, ಜಾಜೀಪತ್ರ, ಜಾಜೀಫಲ,

ಸಿಂದೂರಾಲಕ್ತಕನಿಶಾಕುಂಕುಮ್ಯೈಃ ಕಂಕಣ್ಯೈಸ್ತಥಾ ।
ಕ್ರಮುಕಾಣಾಂ ರಾಶಯಶ್ಚ ಸ್ವಚ್ಛನಾಗಕಪತ್ರಕೈಃ ॥೪೪॥

ಮುಕ್ತಾಚೂರ್ಣಾದ್ರಿಜಾತ್ಯುಚ್ಚಚಂದನೈರ್ಧೂಪವರ್ತಿಭಿಃ ।
ಸ್ವಮೌಲಿಚಂದನಾನಾಂ ಚ ಪಾಲಿಕಾಲಿಭರೈರಪಿ ॥೪೫॥

ರತ್ನಕಂದುಕಹಲ್ಲೀಸದಂಡೈಶ್ಚೈವಾಥಪಾಲಿಕಾಃ ।
ದಿವ್ಯವೃಕ್ಷಫಲೈಶ್ಚೈವ ರತ್ನವೀಟೀಗಣೈರಪಿ ॥೪೬॥

ವರಾಟಿಕಾಕೋಟಿಭಿಶ್ಚ ಮುಕ್ತಾಶುಕ್ತಿಕರಂಡಕೈಃ ।
ಛತ್ರವ್ಯಜನಜಾಪಾರಚಾಮರಾಪಾರದರ್ಪಣೈಃ ॥೪೭॥

ಫಲಮೂಲಭರಾಣಾಂ ಚ ತಥಾ ಸುಮನಸಾಂ ಭರೈಃ ।
ಪಾರ್ವತೀಯೈಶ್ಚ ಪುರುಷೈರುದ್ಯಮಾನೈಶ್ಚ ಸಂಘಶಃ ॥೪೮॥

---

ಲವಂಗ, ಏಲಕ್ಕಿ, ಅರಗಿನರಸ, ಮನಶಿಲೆ ಇವೇ ಮೊದಲಾದ ಮಂಗಳದ್ರವ್ಯಗಳೆಲ್ಲಾ ಸಿದ್ಧವಾದವು. ॥೪೨-೪೩॥

ಸಿಂದೂರಚೂರ್ಣ, ಅರಗಿನರಸ, ಕುಂಕುಮ, ಕಂಕಣಗಳು, ವಿಳ್ಳೆಯದೆಲೆ, ಅಡಕೆಯರಾಶಿ, ಮುತ್ತಿನಸುಣ್ಣ, ಜಾತೀಚಂದನ, ಧೂಪಕ್ಕೆ ಬೇಕಾಗುವ ಸಾಮಗ್ರಿಗಳು, ಹಿಮಾಲಯದಲ್ಲಿ ಬೆಳೆದ ಚಂದನ ಗಂಧ ಇವೇ ಮೊದಲಾದ ವಸ್ತುಗಳನ್ನು ದೊಡ್ಡ ತಟ್ಟೆಗಳಲ್ಲಿಟ್ಟು ಸಿದ್ಧಮಾಡಿಕೊಂಡರು. ॥೪೪-೪೫॥

ರತ್ನದ ಚಂಡು, ಹಲ್ಲೀಸವೆಂಬ ನಾಟ್ಯವಿಶೇಷಕ್ಕೆ ಬೇಕಾಗುವ ದಂಡ, ಪಗಡೇಕಾಯಿ, ರತ್ನಮಯವಾದ ದಾಳಗಳು ಇವೆಲ್ಲವನ್ನೂ ಅನೇಕ ದಾಸಿಯರು ಹೊತ್ತು ನಿಂತರು. ಕವಡೆಗಳು, ಕವಡೆಯಿಂದ ಮಾಡಿದ ಬುಟ್ಟಿಗಳು, ಮುತ್ತಿನ ಚಿಪ್ಪುಗಳು, ಡಬ್ಬಿಗಳು, ಛತ್ರಿ, ಬೀಸಣಿಗೆ, ಚಾಮರ, ಕನ್ನಡಿ ಮುಂತಾದುವುಗಳು, ॥೪೬-೪೭॥

ಇವೇ ಮೊದಲಾದ ವಸ್ತುಗಳನ್ನೂ, ಹಣ್ಣು, ಹೂವು ಮುಂತಾದ ಪೂಜಾ ಯೋಗ್ಯವಾದ ವಸ್ತುಜಾಲಗಳನ್ನೂ, ಪರ್ವತನಿವಾಸಿಗಳಾದ ಪುರುಷಸೇವಕರು ಹೊತ್ತು ಸಿದ್ಧರಾದರು. ಹಾಗೆಯೇ, ರತ್ನ ಮತ್ತು ವಸ್ತ್ರಾದಿಗಳನ್ನು ತುಂಬಿದ

**ಶಕಟೀನಾಂ ಕುಲಭರ್ತೈಃ ಪೂರಿತ್ತೈಃ ರತ್ನವಾಸಸಾಂ ।**
**ಸುವರ್ಣಕೋಟ್ಯೋ ದೃಷ್ಟಾಂಗ್ಯೋ ದಾಸ್ಯೋ ದಾಸಾಶ್ಚ ಕೋಟಿಶಃ । ೪೯॥**

**ಸರ್ವಾಣ್ಯಪಿ ಸಮಾದಾಯ ಪ್ರತಸ್ಥೇ ಭೂಧರೇಶ್ವರಃ ।**
**ಯಯೌ ಕೈಲಾಸಮೀಶಾಸ್ಯಮಧ್ಯೇ ಹ್ಯಪ್ಯೋ ಮಹಾಮುನಿಃ ॥೫೦॥**

**ದೂರ್ವಾಸಾಸ್ತಪತಾಂ ಶ್ರೇಷ್ಠಸ್ತಪೋಯುಕ್ತೋ ಜಟಾಧರಃ ।**
**ಭಸ್ಮರುದ್ರಾಕ್ಷಸಂವೀತೋ ವೃತೋ ಮುನಿಗಣೈರಪಿ ॥೫೧॥**

**ರುದ್ರಾವರ್ತನಶೀಲೈಶ್ಚ ಶಿವಲಿಂಗಾರ್ಚಕೈಸ್ಸದಾ ।**
**ಬಿಲ್ವಪತ್ರೈಸ್ತ್ರಿಕಾಲಂ ಚ ಪಂಚಾಕ್ಷರಪರಾಯಣಃ ॥೫೨॥**

॥ ದೂರ್ವಾಸಾ ಉವಾಚ ॥

**ತಂ ದೃಷ್ಟ್ವಾ ಪ್ರಣನಾಮಾಥ ಮೇನಯಾ ಹಿಮಭೂಧರಃ ।**
**ಮೈನಾಕೇನ ನಗಶ್ರೇಷ್ಠೋ ಗಂತುಂ ತತ್ರೋಪಚಕ್ರಮೇ ॥೫೩॥**

---

ಗಾಡಿಗಳು ಗುಂಪುಗುಂಪಾಗಿ ನೆರೆದು ಪ್ರಯಾಣ ಸಿದ್ಧವಾದವು. ಹೀಗೆ ಕೋಟಿ ಸಂಖ್ಯೆಯ ಸುವರ್ಣರಾಶಿಯೂ, ಮತ್ತು ಕಾಮಿನಿಯರಾದ ದಾಸಿಯರೂ, ದಾಸರೂ ಸಂಘಸಂಘವಾಗಿ ಪ್ರಯಾಣಕ್ಕೆ ಸಿದ್ಧರಾದರು. ॥೪೮-೪೯॥

ಈ ಮರ್ಯಾದಾವಸ್ತುಗಳನ್ನೆಲ್ಲಾ ತೆಗೆದುಕೊಂಡು ಪರ್ವತರಾಜನಾದ ಹಿಮವಂತನು ಕೈಲಾಸಪರ್ವತವನ್ನು ಕುರಿತು ಪ್ರಯಾಣಮಾಡಿದನು. ದಾರಿಯಲ್ಲಿ ಮಹಾಮುನಿಯೂ, ತಪಸ್ವಿವರನೂ, ಭಸ್ಮ, ರುದ್ರಾಕ್ಷ, ಜಟೆ, ಯಜ್ಞೋಪವೀತಾದಿಗಳಿಂದ ಕೂಡಿದ ಋಷಿಜನರೊಡಗೂಡಿದವನೂ ಆದ ದೂರ್ವಾಸಮಹರ್ಷಿಯು ನಗರಾಜನಿಗೆ ಕಾಣಿಸಿಕೊಂಡನು. ॥೫೦-೫೧॥

ಮತ್ತು ಆ ಮುನಿಯ ಜೊತೆಯಲ್ಲಿದ್ದ ಸಕಲ ಮುನಿಗಳೂ, ರುದ್ರಮಂತ್ರಗಳನ್ನೇ ಜಪಿಸುತ್ತಾ, ತ್ರಿಕಾಲದಲ್ಲಿಯೂ ಬಿಲ್ವಪತ್ರೆಯಿಂದ ಶಿವಲಿಂಗವನ್ನು ಆರಾಧಿಸುವವರಾಗಿಯೂ, ಶಿವಪಂಚಾಕ್ಷರೀಮಂತ್ರವನ್ನು ಸರ್ವದಾ ಜಪಿಸುವವರಾಗಿಯೂ ಇದ್ದರು. ॥೫೨॥

ಅಂತಹ ಋಷಿಜನಪರಿವೃತನಾದ ದೂರ್ವಾಸಮಹರ್ಷಿಯನ್ನು ಕಂಡು ಹಿಮವಂತನು, ಪತ್ನೀಪುತ್ರರೊಡನೆ ಸಾಷ್ಟಾಂಗಪ್ರಣಾಮಮಾಡಿದನು. ಹೀಗೆ

ತಮಾಹ ವಿನಯಾನ್ನಮ್ರಂ ಹಿಮವಂತಂ ಮಹಾಗಿರಿಂ

|| ದೂರ್ವಾಸಾ ಉವಾಚ ||

ಕುತ್ರ ವಾ ಗಮ್ಯತೇ ಶೈಲ ಮೈನಾಕೇನ ಚ ಮೇನಯಾ ।
ತದ್ವ್ರತಂ ಸಮ್ಯಗಾಚಕ್ಷ್ವ ಯದಿ ಶ್ರಾವ್ಯಂ ನಗೋತ್ತಮ ||೫೪||

ತದ್ದೂರ್ವಾಸವಚಶ್ಶ್ರುತ್ವಾ ಪ್ರಾಂಜಲಿರ್ವಿನಯಾನ್ನಗಃ ।
ಪ್ರೋವಾಚ ತಂ ಮಹಾತ್ಮಾನಂ ದೂರ್ವಾಸಸಮಕಲ್ಮಶಂ ||೫೫||

|| ಹಿಮವಾನುವಾಚ ||

ಮೇನಯಾ ದರ್ಶನೇಪ್ಸಾತೋ ಬಹುಕಾಲೀನಯಾ ಮಮ ।
ದೇವೀಮುಖಾಂಬುಜಂ ದ್ರಷ್ಟುಂ ಗಚ್ಛಾಮಿ ಸ್ನೇಹಯಂತ್ರಿತಃ ||೫೬||

ಅದ್ಯಾಪಿ ಸಾ ಮಹಾದೇವೀ ಮತ್ತೋ ಜಾತೇತಿ ಮೇ ಸ್ಪೃಹಾ ।
ಕೈಲಾಸೇ ಶಂಕರಂ ದ್ರಷ್ಟುಮುಪಬರ್ಹಣಸತ್ಕರಃ ||೫೭||

ಶಿವಪಾದಾಂಬುಜದ್ವಂದ್ವದರ್ಶನಾರ್ಥಂ ಮಹಾಮುನೇ ।
ಹಿಮವದ್ವಚನಂ ಶ್ರುತ್ವಾ ಮುನಿಃ ಪ್ರಾಹ ತದಾ ಮುದಾ ||೫೮||

---

ವಿನೀತನಾಗಿ ನಿಂತಿದ್ದ ಹಿಮವಂತನನ್ನು ನೋಡಿ ದೂರ್ವಾಸಮಹರ್ಷಿಯು ಹೀಗೆಂದನು. ||೫೩||

"ಎಲೈ ಶೈಲರಾಜನೇ, ಮೈನಾಕ ಮತ್ತು ಮೇನಾದೇವಿಯೊಡಗೂಡಿ ಎಲ್ಲಿಗೆ ಪ್ರಯಾಣಮಾಡುತ್ತಿರುವೆ? ಅದನ್ನು ನಾನು ಕೇಳಬಹುದಾದರೆ, ಬೇಗನೆ ನನಗೆ ತಿಳಿಸು" ಎಂದು ಪ್ರಶ್ನಿಸಲು, ಆ ದೂರ್ವಾಸನ ಮಾತುಗಳನ್ನು ಕೇಳಿ ಹಿಮವಂತನು ವಿನಯಸಂಪನ್ನನಾಗಿ, ಮಹಾತ್ಮನಾದ ದೂರ್ವಾಸಮುನಿಗೆ ಇಂತೆಂದನು. ||೫೪-೫೫||

"ಮಹರ್ಷಿಯೇ, ಮಗಳನ್ನು ನೋಡಲಿಚ್ಛಿಸುವ ಮೇನೆಯೊಡಗೂಡಿ, ನಾನೂ ಸಹ ಗೌರಿಯ ಮುಖಕಮಲವನ್ನು ನೋಡಬೇಕೆಂಬ ಆಸೆಯಿಂದ ಕೈಲಾಸಕ್ಕೆ ಹೊರಟಿರುವೆನು. ಸ್ವಭಾವತಃ ಮಹಾದೇವಪತ್ನಿಯು ಉತ್ಪತ್ತಿರಹಿತಳಾಗಿದ್ದರೂ, ನನ್ನ ಮಗಳೆಂಬ ಭ್ರಾಂತಿಯೇ ನನ್ನಲ್ಲಿರುವುದು. ಅದೇ ವಿಶ್ವಾಸದಿಂದಲೇ ಮಗಳನ್ನೂ, ಶಂಕರನನ್ನೂ ನೋಡಿ ಪೂಜಿಸಿಬರಬೇಕೆಂದು ಸಕಲ ಸಂಭಾರಗಳೊಂದಿಗೆ ಪ್ರಯಾಣ ಮಾಡುತ್ತಿರುವೆನು. ||೫೬-೫೭||

ಮಹಾಮುನಿಯೇ, ಶಂಕರನ ಪಾದಕಮಲಗಳ ದರ್ಶನವೇ ನನಗೆ ಈಗ

॥ ದೂರ್ವಾಸಾ ಉವಾಚ ॥

ಗಚ್ಛಸ್ವಾರಿಷ್ಟಪಂಥಾನಂ ಮಾ ತೇ ಕಾರ್ಯಸ್ಯ ವಿಘ್ನತಾ ।
ದೃಷ್ಟ್ವಾ ದೇವಂ ಮಹಾದೇವಂ ತ್ವನ್ಮೌಲೌ ಸಂಸ್ಥಿತಂ ಹಿ ಮಾಂ॥೬೦॥

ತಪಸ್ಯಂತಂ ಚ ಕೇದಾರೇ ಮುನಿಭಿರ್ಜ್ಞಾಪಯೇಶ್ವರಂ ।
ಕೇದಾರೇಶ್ವರಲಿಂಗಸ್ಯ ವರಿವಸ್ಯಾಪರಂ ಸದಾ ॥೬೧॥

ಶಿವಾಜ್ಞಯಾ ಮಹಾದೇವೀ ತ್ವಯಾಪ್ಯತ್ರಾಗಮಿಷ್ಯತಿ ।
ತಾಂ ಪ್ರಸಾದ್ಯ ತಪಃ ಪಾರಂ ಗಂತುಮಿಚ್ಛಾಮಿ ಭೂಧರ ॥೬೨॥

ಇತ್ಯುಕ್ತೋ ಮುನಿನಾ ಭೂಭೃನ್ನತ್ವಾಗಾಚ್ಛಾಂಕರಂ ನಗಂ ।
ಮೈನಾಕೇನ ಚ ಸಂಹೃಷ್ಟೋ ಮೇನಯಾನುಯಯೌ ದ್ರುತಂ ॥೬೩॥

॥ ಸ್ಕಂದ ಉವಾಚ ॥

ಶ್ವಶುರಂ ಶಶಿಶೇಖರಸ್ಯ ದೇವ್ಯಾಃ
ಪಿತರಂ ಜ್ಯೇಷ್ಠಕುಲಾಚಲೇಷು ಧುರ್ಯಂ ।

---

ಮುಖ್ಯ ಧ್ಯೇಯವಾಗಿರುವುದು" ಎಂದು ಹೇಳಿದ ಹಿಮವಂತನ ಮಾತುಗಳನ್ನು ಕೇಳಿ ದೂರ್ವಾಸಮಹರ್ಷಿಯು, "ಅಯ್ಯಾ ನಗರಾಜನೇ, ಬಹಳ ಸಂತೋಷ. ಪ್ರಯಾಣಮಾಡು. ನಿನಗೆ ಪ್ರಯಾಣವು ಶುಭಕರವಾಗಲಿ. ನಿನ್ನ ಕಾರ್ಯಕ್ಕೆ ವಿಘ್ನಗಳು ಬರದೇ ಇರಲಿ. ನೀನು ಮಹಾದೇವನ ದರ್ಶನವನ್ನು ಹೊಂದಿ ಮರಳಿ ಬಾ. ನಾನು ಅಲ್ಲಿನವರೆಗೂ ಶಿಖರದಲ್ಲಿಯೇ ನೆಲಸಿ ತಪಸ್ಸಮಾಡುತ್ತಿರುವೆನು. ||೫೯-೬೦||

ಎಲೈ ಪರ್ವತರಾಜನೇ, ನಾನು ನಿನ್ನ ಪರ್ವತದ ಸಮೀಪದಲ್ಲಿರುವ ಕೇದಾರಕ್ಷೇತ್ರದಲ್ಲಿ ಕೇದಾರೇಶ್ವರಲಿಂಗಾರ್ಚನೆಯಿಂದ ತಪಸ್ಸುಮಾಡುತ್ತಿರುವೆನು. ಈ ವಿಷಯಗಳನ್ನು ಪರಮೇಶ್ವರನಲ್ಲಿ ವಿಜ್ಞಾಪಿಸು. ಶಿವನ ಅಪ್ಪಣೆಯನ್ನು ಪಡೆದು ದೇವಿಯು ನಿನ್ನೊಡನೆ ಹಿಮಾಲಯಕ್ಕೆ ಬರುವಳು. ಆಗ ನಾನು ದೇವಿಯನ್ನು ದರ್ಶನಮಾಡಿ, ನನ್ನ ತಪಸ್ಸಿಗೆ ಸಾರ್ಥಕ್ಯವನ್ನು ಪಡೆಯುವೆನು." ||೬೧-೬೨||

ಹೀಗೆ ದೂರ್ವಾಸಮಹರ್ಷಿಯಿಂದ ಬೀಳ್ಕೊಂಡ ನಗರಾಜನು ಮೈನಾಕ ಮತ್ತು ಮೇನಾದೇವಿಯರಿಂದ ಕೂಡಿ ಕೈಲಾಸಪರ್ವತಕ್ಕೆ ಪ್ರಯಾಣ ಬೆಳೆಸಿದನು.

ವಯುಸಾ ಶಿರಸಾ ನನಾಮ ಪಾದೌ
ಹಿಮಭೂಮೇಸ್ಸ ತದಾ ಮಹೇಶಶೈಲಃ ॥೬೪॥

ಮೈನಾಕೇನ ಚ ಮೇನಯಾ ಹಿಮಗಿರಿಃ ಕೈಲಾಸಮೌಲಿಸ್ಥಿತಂ
ತತ್ರಾಗಾದಗಜಾಪತಿಂ ಸುಮನಸಾಂ ಭಾರೈಶ್ಚ ರತ್ನಾರ್ಹಣೈಃ ।
ಸ್ವಸ್ಯಾಪಾರಶಿರೋರುಸಂಭರಫಲೈಃ ಪುಷ್ಪಾರ್ಹಣೈರದ್ರಿರಾ
ಡಾಯಾತೋಪಚಿತಿಪ್ರಧಾನಪರಮಾನಂದೇನ ದ್ರಷ್ಟುಂ ಶಿವೌ ॥೬೫॥

ಕಲಧೌತನಗಃ ಕಲಾಸು ದಕ್ಷ
ಶ್ಶಶಲಕ್ಷ್ಮಾಂಕಕಲಾಧರೋರುಮೌಲೇಃ ।
ಕುಲಭೂಭೃತ್ತಿಲಕಂ ಪ್ರಣಮ್ಯ ಹರ್ಷಾತ್
ಶ್ರಯಣೇನಾಪಿ ಶಿವಸ್ಯ ವಾಚಮೂಚೇ ॥೬೬॥

---

ಅಲ್ಲಿಗೆ ಸೇರಿದೊಡನೆಯೇ, ಮಹೇಶ್ವರನಿಗೆ ಆವಾಸಸ್ಥಾನವಾದ ಕೈಲಾಸಪರ್ವತವು, ಪರಶಿವನಿಗೆ ಮಾವನಾಗಿಯೂ, ಪಾರ್ವತಿಗೆ ತಂದೆಯಾಗಿಯೂ, ಸಕಲ ಪರ್ವತಗಳಿಗೂ ದೊಡ್ಡವನಾಗಿಯೂ, ರಾಜನಾಗಿಯೂ ಇರುವ ಹಿಮಾಲಯದ ಪಾದಗಳಿಗೆ ನಮಸ್ಕರಿಸಿತು. ||೬೪||

ಪರ್ವತರಾಜನಾದ ಹಿಮವಂತನು, ಮಗನಾದ ಮೈನಾಕನನ್ನೂ, ಪತ್ನಿಯಾದ ಮೇನಾದೇವಿಯನ್ನೂ ಕರೆದುಕೊಂಡು ಕೈಲಾಸಶಿಖರವನ್ನು ಹತ್ತಿದನು. ಅಲ್ಲಿ ಪಾರ್ವತೀ ಸಮೇತನಾದ ಶಂಕರನನ್ನು ನೋಡುವುದಕ್ಕಾಗಿ ತಾನು ತಂದಿದ್ದ ಸಕಲ ಪೂಜಾದ್ರವ್ಯಗಳನ್ನೂ, ಫಲಪುಷ್ಪಗಳನ್ನೂ, ಹಿಮಾಲಯದಲ್ಲಿ ಬೆಳೆದ ಸಾರವತ್ತಾದ ವಸ್ತುಜಾಲವನ್ನೆಲ್ಲಾ ಕೈಗಾಣಿಕೆಯಾಗಿ ಮಾಡಿಕೊಂಡು ಸಂತೋಷದಿಂದ ಮುಂದುವರಿದನು. ||೬೫||

ಆಗಲೇ ಚಂದ್ರಶೇಖರನಿಗೆ ಆಶ್ರಯನೂ ಮತ್ತು ಕಲಾವಿದನೂ ಆದ ಕೈಲಾಸ ಪರ್ವತರಾಜನು ಪುನಃ ಪುನಃ ನಗರಾಜನಿಗೆ ವಂದಿಸುತ್ತಾ ಮುಂದೆ ಹೇಳುವಂತೆ ಕುಶಲಪ್ರಶ್ನೆಗಳನ್ನು ಮಾಡಿದನು. ||೬೬||

॥ ಕೈಲಾಸ ಉವಾಚ ॥

ಭವತೋ ಭವದಂಗಸಂಗತೋ
ಪ್ಯಭವದ್ದರ್ಶನಮದ್ಯ ಶೈಲಮೌಲೇ ।
ಭವರಾಶೌ ಹಿ ಭವಪ್ರಣಾಮತೋ
ಭಗ[1]ನೀಚಾಖ್ಯಗಿರೇರಹೋ ಭವಾನೀ ॥೬೭॥

ಭವತೋ ವಿಪಿನಾವನೀತಪೋದ್ಯ
ತ್ತಪಸೋ ರಾಶಿಮುನೀಷು ದೇವಸಂಘೇ ।
ವನಜಾಲೇಷು ನಗೇಶ್ವರೋರುಮೌಲೇ
ಕುಶಲಂ ಕಿಂ ನು ತವಾಂಡಜೇ ಮೃಗೇಷು ॥೬೮॥

ಅಗಮಾ ವಯಮೇವ ಲೋಕಜಾಲೇ
ಸುಗಮಾ ಅಪ್ಯತಿಶಂಕರಸ್ಯ ಭಕ್ತಾಃ ।
ನಿಗಮಾಗಮಸಂಸ್ತುತಸ್ಯ ಪಾದಾ
ಶ್ರಯಣೇನಾಸುಗತಾ ಸದಾ ನಗೇಶ ॥೬೯॥

---

" ಹಿಮವಂತನೆ, ನಿನ್ನ ಪುತ್ರಿಯು ನನ್ನ ಪರ್ವತದಲ್ಲಿಯೇ ವಾಸಿಸುತ್ತಿದ್ದರೂ ನೀನು ಮಾತ್ರ ಇಲ್ಲಿಗೆ ಈಗ ಬಂದಿರುವೆ. ನಿನ್ನ ದರ್ಶನವು ಇಂದೇ ನನಗೆ ಉಂಟಾಗಿರುವುದು. ನಿನ್ನ ಪುತ್ರಿಯಾದ ಭವಾನಿಯು ಶಂಕರನ ಸೇವೆಯಿಂದ ಸಂಸಾರದ ದುಃಖಗಳನ್ನೆಲ್ಲಾ ತೊರೆದು ಕೇವಲಾನಂದಮಯಳಾಗಿ ಇಲ್ಲಿ ಕ್ಷೇಮದಿಂದಿರುವಳು. ॥೬೭॥

ಎಲೈ ಪರ್ವತರಾಜನೇ, ನಿನ್ನ ತಪೋವನಗಳಲ್ಲಿ ತಪಸ್ಸುಮಾಡುವ ಋಷಿಜನರೂ, ದೇವತಾವೃಂದವೂ, ವನಪ್ರದೇಶಗಳಲ್ಲಿ ಹಾರಾಡುವ ಪಕ್ಷಿಮೃಗಗಳೂ ಕ್ಷೇಮದಿಂದಿರುವುವೇ ? ನಿನ್ನವರೆಲ್ಲರೂ ಕುಶಲಿಗಳಾಗಿರುವರೆ ? ॥೬೮॥

ಸಕಲ ವೇದ ಪ್ರತಿಪಾದ್ಯನಾದ ಮಹೇಶ್ವರನ ಪಾದವನ್ನು ನಾನು ಧರಿಸಿಕೊಂಡಿರುವುದರಿಂದ ಶಂಕರನ ಭಕ್ತರಿಗೆ ಮಾತ್ರ ನಾನು ಸುಲಭವಾಗಿ ದೊರಕುವವನು. ಲೋಕದಲ್ಲಿರುವ ಸರ್ವರಿಗೂ ನಾನು ಅಷ್ಟು ಸುಲಭನಾಗಿಲ್ಲ. ಮಹೇಶ್ವರನ ಮಹಿಮೆಯಿಂದ ನಾನು ಅಷ್ಟು ಮುಂದುವರಿದಿರುವೆನು. ॥೬೯॥

---

1 ಭಗಿನೀಚಾಸ್ಯ—(ಪಾ. ರ)

॥ ಸ್ಕಂದ ಉವಾಚ ॥

ಇತಿ ನಗತಿಲಕಸ್ಯ ವಾಕ್ಯಜಾಲಂ
ಮಧುರೋದಾರತರಂ ನಿಶಮ್ಯ ಹರ್ಷಾತ್ ।
ಕಲಧೌತನಗಸ್ಯ ಧೂತತಾಪೈ
ರ್ವಚನೈರ್ನಂದಿತಹೃದ್ಗುಹೋಽಭ್ಯುವಾಚ ॥೨೦॥

॥ ಹಿಮವಾನುವಾಚ ॥

ತವ ಮೌಲಿಕುಲೇಷು ತುಂಗಲಿಂಗ
ಪ್ರಥಿತಾಪಾರಶಿವಾಲಯೋಜ್ಜ್ವಲದ್ಭಾಃ ।
ಭವತಾಪಶಮಾಯ ಕೇವಲಂ ಭವ
ಪಾದಾಂಬುಜಸಂಶ್ರಯಾದ್ವಿಶಿಷ್ಟಃ ॥೨೧॥

ತವ ಮೌಲಿವನಸ್ಪತಿಪ್ರಭಾವೇ
ತವ ಮೌಲ್ಯಂಡಜಸನ್ಮೃಗೇ ನಗಾದ್ಯ ।
ಕುಶಲಂ ಕಿಮು ಚಿತ್ರಮೇತದೇವ ಶಂಭೋಃ
ಪದಭಕ್ತೇಷು ನ ವಾ ಕಿಮಸ್ತ್ಯಲಭ್ಯಂ ॥೨೨॥

---

ಹೀಗೆ ಹೇಳಿದ ಕೈಲಾಸರಾಜನ ಮೃದುಮಧುರವಾದ ಮಾತುಗಳನ್ನು ಕೇಳಿ ಶಂಕರನ ನಾಮಸ್ಮರಣೆಯಿಂದ ಪಾಪಗಳನ್ನೆಲ್ಲಾ ಕಳೆದುಕೊಂಡು ಸಂತುಷ್ಟಾಂತರಂಗನಾಗಿ ಪವಿತ್ರನಾಗಿರುವ ಹಿಮವಂತನು ಮತ್ತೆ ಹೀಗೆಂದನು. ॥೨೦॥

" ಕೈಲಾಸಪರ್ವತವೇ, ನಿನ್ನ ಶಿಖರಭಾಗದಲ್ಲಿರುವ ಅನೇಕ ಶಿವಲಿಂಗಗಳ ಮತ್ತು ಶಿವಾಲಯಗಳ ಕಾಂತಿಯಿಂದ ನೀನು ಅತ್ಯಂತ ಪ್ರಕಾಶಮಾನನಾಗಿರುವೆ. ಸಂಸಾರದ ತಾಪಗಳನ್ನು ನಿವಾರಿಸಿಕೊಳ್ಳುವುದಕ್ಕಾಗಿ ನೀನು ಕೇವಲ ಪರಮೇಶ್ವರನ ಪಾದಕಮಲದ ಸೇವೆಯೊಂದರಲ್ಲಿಯೇ ಆಸಕ್ತನಾಗಿ ನಿಂತಿರುವೆ. ಇದರಿಂದ ನೀನೇ ಧನ್ಯನಲ್ಲವೇ ? ॥೨೧॥

ನಿನ್ನ ಶಿಖರಭಾಗದಲ್ಲಿ ಬೆಳೆದಿರುವ ಮೂಲಿಕೆಗಳ ಪ್ರಭಾವದಿಂದಲೂ, ಇಲ್ಲಿ ವಿಹರಿಸುವ ಪಕ್ಷಿಗಳ ಹಾರಾಟದಿಂದಲೂ, ಪರಶಿವನ ಅನುಗ್ರಹಬಲದಿಂದಲೂ ನೀನು ಕ್ಷೇಮನಾಗಿರುವೆ ಎಂಬುದನ್ನು ನಾನು ಮತ್ತೆ ಕೇಳಬೇಕಾಗಿಯೇ ಇಲ್ಲ. ಏಕೆಂದರೆ

ಇತ್ಯಾಲಿಂಗ್ಯ ನಗೋತ್ತಮೌ ಸರಸಯಾ ವಾಚಾ ಪ್ರಸನ್ನಾನನೌ
ಜಾತಾನಂದಭರೌ ಮಹೇಶ್ವರಪದಾಂಭೋಜಾನುರಕ್ತಾಂತರೌ ।
ಯಾತೌ ದೇವವರಂ ಹ್ಯುಮಾಮಪಿ ತಥಾ ತೌ ಮೇನಯಾ ಪ್ರಸ್ನುತಾ
ಪಾರಸ್ತನ್ಯಝರೀಭರೀರಸವತ್ಯೈಶೈಲೇಂದ್ರಕನ್ಯೇಕ್ಷಣಾತ್ ॥೭೩॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ
ಶಿವಪಾರ್ವತೀದರ್ಶನಾರ್ಥಂ ಕೈಲಾಸಪರ್ವತಂ ಪ್ರತಿಹಿಮವದಾಗಮನಂ
ನಾಮ ಅಷ್ಟಾದಶೋಽಧ್ಯಾಯಃ

---

ಪರಶಿವನ ಭಕ್ತರಿಗೆ ಲೋಕದಲ್ಲಿ ದೊರಕದಿರುವುದು ಯಾವುದುತಾನೆ ಇದ್ದೀತು ? ||೭೨||

ಹೀಗೆ ಕೈಲಾಸ ಮತ್ತು ಹಿಮವಂತರು ಪರಸ್ಪರವಾದ ಆಲಿಂಗನಾದಿಗಳಿಂದಲೂ, ಕುಶಲೋಕ್ತಿಗಳಿಂದಲೂ, ತಮ್ಮ ತಮ್ಮ ಆನಂದವನ್ನು ವ್ಯಕ್ತಪಡಿಸುತ್ತಾ ಮುಂದುವರಿದರು. ಸ್ವಭಾವತಃ ಇಬ್ಬರೂ ಮಹೇಶ್ವರನ ಪಾದಕಮಲಗಳಲ್ಲಿಯೇ ನೆಟ್ಟ ಮನಸ್ಸುಳ್ಳವರಾದ್ದರಿಂದ ಸುಲಭವಾಗಿ ಮಹೇಶ್ವರನು ಅವರಿಗೆ ಗೋಚರನಾದನು. ಹಾಗೆಯೇ ಮೇನಾದೇವಿಯು ತನ್ನ ಪ್ರೀತಿಪುತ್ರಿಯಾದ ಪಾರ್ವತಿಯನ್ನು ನೋಡಿದೊಡನೆಯೇ ಪುತ್ರೀವಾತ್ಸಲ್ಯದಿಂದ ಸ್ತನ್ಯಪ್ರವಾಹವನ್ನು ಸುರಿಸುತ್ತಾ ಮಗಳನ್ನು ನೋಡಿ ಆನಂದಿಸಿದಳು. ಹೀಗೆ ನಗರಾಜದಂಪತಿಗಳು ಶಿವದಂಪತಿಗಳನ್ನು ದರ್ಶನಮಾಡಿದರು. ಎಂದು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ವಿವರಿಸಿದರು. ||೭೩||

ಇಲ್ಲಿಗೆ ಶ್ರೀಶಿವರಹಸ್ಯದ ದ್ವಿತಿಯಾಂಶವಾದ ಭವಾಂಶದಲ್ಲಿ ಶಿವಪಾರ್ವತಿಯರ
ದರ್ಶನಾರ್ಥವಾಗಿ ಹಿಮವದ್ದಂಪತಿಗಳು ಕೈಲಾಸಕ್ಕೆ ಮಾಡಿದ
ಪ್ರಯಾಣವಿವರಣೆಯನ್ನು ವಿವರಿಸುವ
ಹದಿನೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಏಕೋನವಿಂಶೋಽಧ್ಯಾಯಃ

### ಹಿಮಾಚಲೇಶ್ವರಸಮಾಗಮಃ

|| ಸ್ಕಂದ ಉವಾಚ ||

ಆರಾದ್ದೃಷ್ಟ್ವಾ ತದಾ ವಿಪ್ರ ಹಿಮವಾನ್ ಹೇಮಭೂಷಿತಂ ।
ವಿಮಾನಂ ತದನುಜ್ಞಾಪ್ಯ ಸ್ವಮೌಲೌ ಸ್ಥಾತುಮದ್ರಿರಾಟ್ ||೧||

ಮೇನಯಾ ರತ್ನಭಾರೈಶ್ಚ ದುಕೂಲಫಲಭಾರಕೈಃ ।
ಮೈನಾಕೇನಾಥ ಸವ್ಯೇ ತು ದತ್ತಹಸ್ತೋ ನಗಾಧಿಪಃ ||೨||

ದಕ್ಷೇ ತ್ರ್ಯಕ್ಷಮಹಾಶೈಲಕೈಲಾಸಾಚಲಪಾಣಿನಾ ।
ದತ್ತಹಸ್ತೋ ನಗಾಧೀಶಸ್ತಂ ದದರ್ಶ ನಗೋತ್ತಮಂ ||೩||

---

ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಹತ್ತೊಂಬತ್ತನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಯನ್ನು ಕುರಿತು ಮುಂದಿನ ಕಥೆಯನ್ನು ವಿವರಿಸಲಾರಂಭಿಸಿದನು. ಕೈಲಾಸಶಿಖರವನ್ನು ಪ್ರವೇಶಿಸಿದ ಹಿಮವಂತನು ತನ್ನ ರತ್ನಮಯವಾದ ವಿಮಾನವನ್ನು ಅಲ್ಲಿಯೇ ಬಿಟ್ಟು, ಮುಂದಕ್ಕೆ ಪಾದಚಾರಿಯಾಗಿ ತೆರಳಿದನು. ||೧||

ಜೊತೆಯಲ್ಲಿ ಮೇನಾದೇವಿಯೂ, ರತ್ನ, ವಸ್ತ್ರ, ಫಲ, ಪುಷ್ಪಗಳ ರಾಶಿಯೊಡನೆ ಹಿಂಬಾಲಿಸಿದಳು. ಹಿಮವಂತನ ಎಡಭಾಗದಲ್ಲಿ ಮೈನಾಕನೂ, ಬಲಭಾಗದಲ್ಲಿ ಕೈಲಾಸರಾಜನೂ ಹಸ್ತಲಾಘವಪೂರ್ವಕವಾಗಿ ಕರೆದುಕೊಂಡುಹೋದರು.

ವಿಸ್ಮಯಾಕ್ರಾಂತಹೃದಯೋ ಮೇನಾಂ ವೀಕ್ಷ್ಯ ತದಾಬ್ರವೀತ್ ॥೪॥

॥ ಹಿಮವಾನುವಾಚ ॥

ಧನ್ಯೇ ಮನ್ಯೇಽದ್ಯ ನಯನೇ ಮೇನೇಽದ್ಯೈವ ಮನೋರಥಂ ।
ಚಿರಾಯ ದೃಷ್ಟಃ ಕೈಲಾಸೋ ನಾನಾಶೃಂಗವಿರಾಜಿತಃ ॥೫॥

ಯತ್ರ ಸಂತ್ಯುರುರತ್ನೋತ್ಥಗರ್ಭಧಾಮಗತಾನಿ ಚ ।
ಉತ್ಕೃಷ್ಟಶಿವಲಿಂಗಾನಿ ಸೋಮಧಾಮೋಜ್ಜ್ವಲಾನಿ ಚ ॥೬॥

ತಲ್ಲಿಂಗಗರ್ಭಧಾಮಾದ್ಯ ಪಶ್ಯ ಕುಂಭಾವಲೀಮಪಿ ।
ದೂರಾದ್ದೃಷ್ಟಂ ಪುಣ್ಯತಮಂ ಯತ್ರ ಕುತ್ರ ಶಿವಾಲಯಂ ॥೭॥

ತತ್ಸಪ್ತಜನ್ಮಪಾಪಾನಾಂ ವಿನಾಶಕಮಪಿ ಪ್ರಿಯೇ ।
ಕೈಲಾಸಮೌಳಿಜಾಪಾರಶಿವಾಗಾರೋರುಶೇಖರೈಃ ॥೮॥

ಜನ್ಮನಾಂ ಪಾಪಗಣನಾಪ್ರವೇಶಃ ಕುತ್ರ ವಾ ಪ್ರಿಯೇ ।
ಪಶ್ಯ ಗೋಪುರಜಾಲಾನಿ ವೃಷಕುಂಭೋಜ್ಜ್ವಲಾನಿ ಚ ॥೯॥

---

ಈ ರೀತಿ ಮುಂದುವರಿದು ಸುಂದರವಾದ ಕೈಲಾಸಶಿಖರವನ್ನು ದರ್ಶನಮಾಡಿದನು. ॥೨-೩॥

ಒಡನೆಯೇ ಹಿಮವಂತನು ಕೈಲಾಸದ ಸೊಬಗನ್ನು ನೋಡಿ ಅತ್ಯಾಶ್ಚರ್ಯಯುಕ್ತನಾಗಿ ಪತ್ನಿಯೊಡನೆ ಹೀಗೆಂದನು. "ಮೇನಾದೇವಿಯೇ, ಇಂದು ನಾನು ಧನ್ಯನಾದೆನು. ಇಷ್ಟು ಸುಂದರತರವಾದ ಕೈಲಾಸಶಿಖರಗಳ ದರ್ಶನದಿಂದ ನನ್ನ ನೇತ್ರಗಳು ಸಫಲವಾದುವು. ॥೪-೫॥

ಈ ಕೈಲಾಸಶಿಖರದಲ್ಲಿ ಶೋಭಿಸುವ ರತ್ನಮಯವಾದ ಗರ್ಭಗೃಹಗಳಲ್ಲಿ ಉತ್ಕೃಷ್ಟವಾದ ಶಿವಲಿಂಗಗಳು ಕಾಣುವುವು. ಅವುಗಳ ಮೇಲೆ ಚಂದ್ರನ ಕಾಂತಿಯು ಪ್ರಕಾಶಿಸುತ್ತಿರುವುದು. ಈ ಶಿವಲಿಂಗಗಳಗರ್ಭಗುಡಿಯು ಮೇಲ್ಭಾಗದಲ್ಲಿರುವ ದಿವ್ಯಕಲಶಗಳಿಂದ ಅಲಂಕೃತವಾಗಿರುವುದು. ಇಂತಹ ಒಂದು ಶಿವಾಲಯವನ್ನು ದೂರದಿಂದ ನೋಡಿದರೂ ಏಳು ಜನ್ಮಗಳಿಂದ ಸಂಪಾದಿಸಿದ ಪಾಪವೆಲ್ಲಾ ನಿವೃತ್ತಿಯಾಗುವುದು. ॥೬-೭॥

ಹೀಗಿರುವಾಗ ಈ ಕೈಲಾಸಶಿಖರದಲ್ಲಿರುವ ಅಸಂಖ್ಯಾತವಾದ ಶಿವದೇವಾಲಯಗಳ ದರ್ಶನದಿಂದ ಪ್ರಾಣಿಗಳಿಗೆ ಪಾಪರಾಶಿಯೆಲ್ಲಿ ಕಾಣುವುದು? ದೇವಿಯೇ,

ತದ್ಗೋಪುರಮಹಾಕುಂಭಬಿಂಬಾಯಿತನಭೋಂಕಣೇ ।
ಚಂದ್ರಸೂರ್ಯೌ ತಥಾ ತಾರಾ ಬಿಂಬಿತಾಯಿತಸಂಸ್ಥಿತಾಃ ॥೧೦॥

ಗ್ರಹಾಸ್ಸಪ್ತರ್ಷಯಶ್ಚೇಮೇ ಧ್ರುವೋಽಯಂ ಪಶ್ಯ ಮತ್ಪ್ರಿಯೇ ।
ಸೌಧಪಂಕ್ತಿಮಿಮಾಂ ಪಶ್ಯ ಮಣಿಜಾಲೈಃ ಪ್ರಕಲ್ಪಿತಾಂ ॥೧೧॥

ಸರ್ವಾವಾಸೋಽಪಿ ಭಗವಾನ್ ಸೌಧೇಷ್ವತ್ಯಂತಹರ್ಷಿತಃ ।
ಮೇನೇ ತ್ವತ್ಕನ್ಯಯಾ ಮೇನೇ ವಿಹರತ್ಯೇವ ನಿಶ್ಚಿತಂ ॥೧೨॥

ರಾಜತೋ ರಾಜತೇ ಧನ್ಯೋ ಮಾನ್ಯೋ ಮನ್ಯುಸಮಾಗಮಾತ್ ।
ಬಾಲೋಽಪ್ಯಬಾಲಚರಿತಃ ಕೈಲಾಸಸ್ತ್ವೇಷ ಭೂಧರಃ ॥೧೩॥

ಪುತ್ರಾತ್ಪ್ರಿಯತರೋ ಮೇಽದ್ಯ ಮೈನಾಕೇನಾದ್ಯ ನಿಶ್ಚಿತಂ ।
ಯಸ್ಮಿನ್ ಕೈಲಾಸಭೂಭಾಗೇ ಬ್ರಹ್ಮವಿಷ್ಣ್ವಾದಿಕಾಂಕ್ಷಿತೇ ॥೧೪॥

---

ಶಿವಾಲಯಗಳ ಗೋಪುರಗಳನ್ನು ನೋಡು. ಪ್ರತಿಗೋಪುರಗಳೂ ವೃಷಭವಿಗ್ರಹಗಳಿಂದಲೂ, ದಿವ್ಯಕಲಶದಿಂದಲೂ ರಂಜಿತವಾಗಿರುವುದು. ॥೮-೯॥

ಅಂತರಿಕ್ಷಭಾಗದಲ್ಲಿ ಈ ದೇವಾಲಯಗಳ ಕಲಶಗಳೂ ಒಂದೊಂದು ಗ್ರಹಬಿಂಬದಂತೆಯೇ ಕಾಣುತ್ತಿವೆ. ಆ ಕುಂಭದಲ್ಲಿ ಸೂರ್ಯಚಂದ್ರರ ಮತ್ತು ನಕ್ಷತ್ರಗಳ ಬಿಂಬಗಳು ಪ್ರತಿಫಲಿಸುತ್ತಿರುವುವು. ಇದರಲ್ಲಿ ಇತರ ಗ್ರಹಗಳೂ, ಸಪ್ತರ್ಷಿಗಳೂ, ಧ್ರುವನಕ್ಷತ್ರವೂ ಪ್ರತಿಬಿಂಬಿಸುತ್ತಿರುವುವು. ಈ ಸೌಧಪಂಕ್ತಿಯನ್ನು ನೋಡು. ಸಂಪೂರ್ಣವಾದ ರತ್ನಗಳಿಂದ ಇದು ಶೋಭಿಸುತ್ತಿರುವುದು. ॥೧೦-೧೧॥

ಪೂಜ್ಯನಾದ ಶಂಕರನು ಸರ್ವಾಂತರ್ಯಾಮಿಯಾಗಿದ್ದರೂ ಈ ದಿವ್ಯಸೌಧದಲ್ಲಿ ನಿನ್ನ ಪುತ್ರಿಯಾದ ಪಾರ್ವತಿಯೊಡನೆ ಸಂತೋಷದಿಂದ ವಿಹರಿಸುತ್ತಿರುವನು. ಇಂತಹ ಶಿವದಂಪತಿಗಳಿಗೆ ಆಶ್ರಯನಾಗಿ ಈ ಕೈಲಾಸಾಚಲವು, ಧನ್ಯವೂ, ಮಾನ್ಯವೂ ಎನಿಸಿದೆ. ನೋಡುವುದಕ್ಕೆ ಬಾಲನಂತೆ ಚಿಕ್ಕದಾಗಿದ್ದರೂ ಮಹಿಮೆಯಲ್ಲಿ ಪ್ರೌಢನಂತಿರುವುದು. ॥೧೨-೧೩॥

ಎಲೌ ಪಕ್ಷಿಯೇ, ಈ ಕೈಲಾಸಪರ್ವತರಾಜನಲ್ಲಿ ನನಗೆ ಮಗನಾದ ಮೈನಾಕನಲ್ಲಿರುವುದಕ್ಕಿಂತ ಹೆಚ್ಚು ಅಭಿಮಾನವುಂಟಾಗಿದೆ. ಈ ಕೈಲಾಸಾಚಲವು ಬ್ರಹ್ಮವಿಷ್ಣ್ವಾದಿದೇವತೆಗಳಿಗೂ ಆಶ್ರಯಸ್ಥಳವಾಗಿದೆ. ಮಹಾ ಮಹಾ ಯೋಗಿಗಳು

ತಪಸಾ ನೈವ ಸಂಪ್ರಾಪ್ಯೋ ದುರ್ದರ್ಶೋ ಯೋಗಿನಾಮಪಿ ।
ಕೈಲಾಸದರ್ಶನಾರ್ಥಾಯ ತಪಸ್ಯಂತಿ ತಪಃಪ್ರಿಯೇ ॥೧೫॥

ಅದ್ಯಾಪಿ ಬ್ರಹ್ಮವಿಷ್ಣ್ವಾದ್ಯಾ ಮುನಯೋ ಗಣಸತ್ತಮಾಃ
ಸೋಽಯಂ ಸಂಬದ್ಧಸಂಬಧ್ಯಗೌರ್ಯಾ ಗುರುತಯಾ ಪ್ರಿಯೇ ॥೧೬॥
ಸ್ನೇಹಧಾರಾನುವಶತೋ ಅಗಮ್ಯಸ್ಸುಗಮೋ ಭವೇತ್
ನೈವ ದೇವಾದಿಲೋಕೇಷು ನ ವೈಕುಂಠೇ ನ ಸತ್ಯಕೇ ॥೧೭॥

ಭೂರಾದಿಸರ್ವಲೋಕೇಷು ಸಾಸ್ತ್ಯಸ್ಯ ತುಲಸಾ ಕ್ವಚಿತ್ ।
ಸ್ವಯಮೀಶೇನ ಮನಸಾ ಕಲ್ಪಿತೋಽಯಂ ಮಹೀಧರಃ ॥೧೮॥

ವಿಶ್ವಂ ವಿಶ್ವಸೃಜಾ ಕ್ಲುಪ್ತಂ ಏತನ್ನಗನದೀವನಂ ।
ಕಾಲೇನ ಶೀರ್ಣತಾಂ ಯಾತಿ ಕಾರಣಾತ್ಕಾರ್ಯಮಪ್ಯನು ॥೧೯॥

---

ಅನೇಕಕಾಲ ತಪಸ್ಸನ್ನಾಚರಿಸಿದರೂ, ಈ ಪರ್ವತದ ದರ್ಶನವು ಅವರಿಗೆ ಸುಲಭವಾಗಿ ದೊರೆಯಲಾರದು. ಇದಕ್ಕಾಗಿಯೇ ಇನ್ನೂ ಅನೇಕ ಜನರು ಅದ್ಯಾಪಿ ತಪಸ್ಸನ್ನಾಚರಿಸುತ್ತಿರುವರು. ||೧೪-೧೫||

ಈಗಲೂ ಬ್ರಹ್ಮವಿಷ್ಣ್ವಾದಿದೇವತೆಗಳೂ, ಮುನಿಗಳೂ, ಗಣಶ್ರೇಷ್ಠರೂ ಕೈಲಾಸದಲ್ಲಿ ವಾಸಿಸಲೋಸುಗ ತಪಸ್ಸನ್ನಾಚರಿಸುತ್ತಿರುವರು. ಅಂತಹ ಈ ಗಿರಿಯ ದರ್ಶನವು, ನಮ್ಮ ಪುತ್ರಿಯು ಇಲ್ಲಿ ನೆಲಸಿರುವುದರಿಂದಲೂ, ಪರಂಪರೆಯಾದ ಈಶ್ವರ ಸಂಬಂಧವು ನಮ್ಮಲ್ಲಿ ಕಾಣುವುದರಿಂದಲೂ, ನಮಗೆ ಸುಲಭವಾಗಿ ದೊರಕಿರುವುದು. ಇಂತಹ ದಿವ್ಯಮಹಿಮಾಪೂರ್ಣವಾದ ಪರ್ವತವು ದೇವಲೋಕಗಳಲ್ಲಾಗಲಿ, ವೈಕುಂಠ ಅಥವಾ ಸತ್ಯಲೋಕದಲ್ಲಾಗಲಿ ಕಾಣಲಾರದು. ||೧೭||

ಅಷ್ಟಲ್ಲದೆ ಭೂಲೋಕವೇ ಮೊದಲಾದ ಚತುರ್ದಶಲೋಕಗಳಲ್ಲಿಯೂ ಈ ಪರ್ವತಕ್ಕೆ ಸಮನಾದ ಗಿರಿಯು ಮತ್ತೊಂದಿಲ್ಲ. ಏಕೆಂದರೆ, ಇದು ಬ್ರಹ್ಮಸೃಷ್ಟಿಗೆ ಸೇರಿದುದಲ್ಲ. ಶಿವಮಾನಸನಿರ್ಮಿತವಾದದ್ದು. ಈ ಚರಾಚರಾತ್ಮಕವಾದ ಜಗತ್ತು ಬ್ರಹ್ಮನಿಂದ ನಿರ್ಮಿತವಾದದ್ದು. ಆದ್ದರಿಂದಲೇ ಅವುಗಳೆಲ್ಲಾ ನಶ್ವರವಾದವುಗಳು. ಕಾರಣನಾದ ಬ್ರಹ್ಮನೇ ಅಸ್ಥಿರನಾದುದರಿಂದ ಕಾರ್ಯಭೂತವಾಗಿರುವ ಈ ಜಗದಾದಿಗಳು ನಶ್ವರವೆಂದು ಹೇಳಬೇಕಾದದ್ದೇನು ? ||೧೮-೧೯||

ಅನುಮೀಯೇತ ಹೇ ಬಾಲೇ ನಶ್ವರೋ ಸ್ಥಿರತಾ ಕಥಂ ।
ಕಿಂ ತು ಮೃತ್ಯುಂಜಯೇನಾದ್ಯ ವಿಶ್ವಾಧಿಕ್ಯೇನ ಕಲ್ಪಿತಃ ॥೨೦॥

ಏತನ್ಮೌಲಿಶಿಖಾಸಾರವಾಯುಪ್ರೋತ್ಯೈಕಕಾಂಕ್ಷಿಣಃ ।
ವಿಷ್ಣುಬ್ರಹ್ಮಾದಯೋ ದೇವಾ ಮುನಯೋ ಮಾನವಾಃ ಪ್ರಿಯೇ॥೨೧॥

ವಾತೋಽಪಿ ಸಂಹರತ್ಯೇಷ ಪಾಪತಾಪಂ ವಿಶೇಷತಃ ।
ಕಿಂ ತು ವೃಷ್ಟೋಽಯಮಧುನಾ ಇಷ್ಟೋಽಯಂ ಚಾಷ್ಟದೇಹಿನಃ ॥೨೨॥

ಗಿರಿಶೇನ ಗಿರೀಶೋಽಯಂ ಪಶ್ಯ ನೇತ್ರೇಣ ಭಾಮಿನಿ ।
ಕಲಧೌತಮಹಾಶೈಲೋ ಧೂತಪಾಪೋಽಯಮದ್ರಿರಾಟ್ ॥೨೩॥

ವಯಂ ವಿಶಿಷ್ಟಾಸ್ಸರ್ವೇಷು ಧನ್ಯಾಮಾಸ್ಯಾಕ್ಷ ಭೂಭೃತಾಂ ।
ಸುರಾಣಾಂ ಚ ಮುನೀನಾಂ ಚ ಗಣಾನಾಂ ಕಿಲ ಸತ್ತಮೇ ॥೨೪॥

---

ಆದರೆ ಜಗತ್ತೆಲ್ಲವೂ ನಶ್ವರವಾಗಿದ್ದರೂ, ಮೃತ್ಯುಂಜಯನಾದ ಶಂಕರನೇ, ಇದನ್ನು ವಿಶ್ವಕ್ಕೆ ಮೀರಿದ್ದನ್ನಾಗಿ ಭಾವಿಸಿ ಸ್ವಯಂನಿರ್ಮಾಣಮಾಡಿರುವುದರಿಂದ ಇದು ಮಾತ್ರ ಸ್ಥಿರವಾದದ್ದೆಂದು ಹೇಳಬಹುದು. ಈ ಕೈಲಾಸಶಿಖರದ ಮೇಲೆ ಬೀಸುವ ಮಂದಮಾರುತದ ಸೇವನೆಗಾಗಿ, ಬ್ರಹ್ಮವಿಷ್ಣ್ವಾದಿದೇವತೆಗಳೂ, ಮುನಿಗಳೂ, ಮಾನವರೂ ಕಾದಿರುವರು. ॥೨೦-೨೧॥

ಇದರ ಮೇಲೆ ಬೀಸುವ ವಾಯುವೂ ಸಹ ಪ್ರಾಣಿಗಳ ಪಾಪನಿವಾರಕವಾದದ್ದು. ಹಾಗಿರುವಾಗ ಪರಶಿವನಿಗೆ ಅತ್ಯಂತ ಇಷ್ಟವಾಗಿರುವ ಈ ಪರ್ವತದ ಮಹಿಮೆಯನ್ನು ವರ್ಣಿಸುವುದು ಹೇಗೆ? ಈ ಪರ್ವತವು ಪರಶಿವನ ಕೃಪಾಕಟಾಕ್ಷವೀಕ್ಷಿತವಾಗಿ ಸಮಸ್ತ ಪಾಪಗಳನ್ನೂ ಕಳೆದುಕೊಂಡು, ಪವಿತ್ರತಮವೆನಿಸಿಕೊಂಡಿದೆ. ॥೨೨-೨೩॥

ಹೀಗಿರುವಾಗ ಈ ಪರ್ವತವನ್ನು ಸುಲಭವಾಗಿ ಹೊಂದಿದ ನಾವೇ ಧನ್ಯರು. ಸಕಲ ಋಷಿಗಳಿಂದಲೂ, ದೇವತೆಗಳಿಂದಲೂ ನಾವೇ ಹೆಚ್ಚಿನ ಅದೃಷ್ಟಶಾಲಿಗಳು. ಇತರ ಪರ್ವತಗಳೂ ಒಂದುವೇಳೆ ಸೌಂದರ್ಯದಲ್ಲಿ ಇದರ ಸಾಮ್ಯವನ್ನು ಪಡೆದು ನೋಡುವವರ ನೇತ್ರಗಳಿಗೆ ಆನಂದವನ್ನುಂಟುಮಾಡಬಹುದು. ಈ ಪರ್ವತವಾ

ಹೃತ್ತಮೋ ನಾಶಕಶ್ಶೈಲಸ್ತ್ವನ್ಯೇ ದೃಕ್ತಮನಾಶಕಾಃ ।
ಏತಸ್ಯ ದರ್ಶನಾದೇವ ಪ್ರಾಪ್ತಕಾಮೋಽಸ್ಮಿ ಸಾಂಪ್ರತಂ ॥೨೫॥

ಇತ್ಯುಕ್ತ್ವಾ ತಂ ಮಹಾಶೈಲಮಾರುರೋಹ ಮಹಾಗಿರಿಃ ।
ಅಪಶ್ಯಚ್ಚಾಲಯನ್ ಸೃಷ್ಟಿಂ ಸರ್ವತಶ್ಶೈಲಮೂರ್ಧಸು ॥೨೬॥

ನಾನಾಸೌಧೈಕವಸತಿಂ ಗೋಪುರಾಲಿವಿರಾಜಿತಂ ।
ರತ್ನಪ್ರಾಕಾರವೃಷಭೈಶ್ಶೋಭಿತಂ ಚ ಶಿವಾಲಯೈಃ ॥೨೭॥

ರತ್ನಕುಂಭೋರುಧಾರಾಭಿರ್ವಿಚುಂಬಿತಮಿವಾಂಬರಂ ।
ಗಣಸೌಧಗಣಾನಾಂ ಚ ಸ್ಕಂದಹೇರಂಬಸೌಧಕೇ ॥೨೮॥

ತದ್ಗಣಾನಾಂ ಪ್ರಭಾಭಿಶ್ಚ ತತಮತ್ಯಂತಸುಂದರಂ ।
ರಾಜಾನಂ ಪರ್ವತೇಂದ್ರಾಣಾಂ ವನಸಾನುವಿಭೂಷಿತಂ ॥೨೯॥

---

ಪರೋ ನೋಟಕರ ಹೃದಯಾಂಧಕಾರವನ್ನೂ ಸಹ ತೊಲಗಿಸಿ ಅವರಿಗೆ ಜ್ಞಾನೋಪದೇಶಮಾಡುವುದು. ಇದರ ದರ್ಶನಮಾತ್ರದಿಂದಲೇ ನನ್ನ ಇಷ್ಟಾರ್ಥವೆಲ್ಲಾ ನೆರವೇರಿದಂತಾಗಿದೆ. ಇದರಲ್ಲಿ ಸಂಶಯವಿಲ್ಲ, ಎಂದು ಹೇಳುತ್ತಾ ನಗರಾಜನಾದ ಹಿಮವಂತನು ತನ್ನ ದೃಷ್ಟಿಯನ್ನು ಸರ್ವತ್ರ ಹರಡುತ್ತಾ, ಕೈಲಾಸಶಿಖರದ ಅತ್ಯಗ್ರಭಾಗವನ್ನು ನೋಡುತ್ತಾ, ಪರ್ವತಶಿಖರವನ್ನು ಹತ್ತಲುಪಕ್ರಮಿಸಿದನು. ॥೨೪-೨೫-೨೬॥

ಆ ಶಿಖರದಲ್ಲಿ ಅನೇಕ ಉಪ್ಪರಿಗೆಯ ಮನೆಗಳಿದ್ದುವು. ಅನೇಕ ಗೋಪುರಗಳು ಹೊಳೆಯುತ್ತಿದ್ದುವು. ಅಲ್ಲಿರುವ ಶಿವಾಲಯಗಳೆಲ್ಲಾ ರತ್ನಮಯವಾದ ಪ್ರಾಕಾರಗಳಿಂದಲೂ, ಅವುಗಳ ಮೇಲೆ ಕಾಣುವ ಮಣಿಮಯವಾದ ವೃಷಭವಿಗ್ರಹಗಳಿಂದಲೂ, ಗೋಪುರಗಳ ಮೇಲಿರುವ ಗಗನಚುಂಬಿತವಾದ ಕಲಶಗಳಿಂದಲೂ, ಪ್ರಮಥಗಣಗಳ ಮತ್ತು ಕುಮಾರಸ್ವಾಮಿ, ಗಣಪತಿ ಇವರ ದಿವ್ಯಹರ್ಮ್ಯಗಳಿಂದಲೂ ಅಲಂಕೃತವಾಗಿದ್ದುವು. ॥೨೭-೨೮॥

ಅಲ್ಲಿರುವ ಪ್ರಮಥಗಣಗಳ ಕಾಂತಿವಿಶೇಷದಿಂದ ಆ ಶಿಖರಭಾಗವೆಲ್ಲಾ ಸುಂದರವಾಗಿ ಕಾಣುತ್ತಿದ್ದಿತು. ತಪ್ಪಲು ಪ್ರದೇಶದಿಂದಲೂ, ಸಪ್ತಕುಲಾಚಲಗ

ಕುಲಾಚಲೈಶ್ಚ ಪರಿತೋ ಮೂರ್ತಿಮದ್ಭಿರುಪಾಸಿತಂ ।
ಉತ್ಫುಲ್ಲಕಮಲೋದಾರಸರಸೀಭಿರ್ಮನೋಹರಂ ॥೩೦॥

ನಾನಾವೃಕ್ಷಸುಮೋದ್ಭೂತಗಂಧಬಂಧವಿರಾಜಿತಂ ।
ನಾನಾಮೃಗಗಣಾನಾಂ ಚ ಕೋಟಿಭಿಃ ಪರಿತೋವೃತಂ ॥೩೧॥

ಮಂದಮಾರುತಸಂಚಾರಪುಲಿನಾಯಿತದಿಕ್ತಟಂ ।
ನಾನಾರತ್ನಮಣೀಕ್ಲೃಪ್ತಮಂಡಪಾವಳಿಶೋಭಿತಂ ॥೩೨॥

ಗಂಗಾಭಿಃ ಪಂಚಭಿಸ್ತತ್ರ ಶೋಭಿತಂ ಲಿಂಗಸಂಘಕೈಃ ।
ಮಂದಂ ಮಂದಂ ಯಯೌ ಪಶ್ಯನ್ ಗಿರಿರಾಜಂ ಗಿರೀಶ್ವರಃ ॥೩೩॥

ಸ್ನಾತ್ವಾ ಸ ದೇವಗಂಗಾಯಾಂ ಕೈಲಾಸಾಮಲಪರ್ವತೇ ।
ಕೃತ್ವಾ ಚಾವಶ್ಯಕಂ ಕರ್ಮ ಮೇನಯಾ ಸೋಽಪ್ಯಮನ್ಯತ ॥೩೪॥

---

ಳಿಂದಲೂ, ಅರಳಿದ ಕಮಲಗಳಿಂದ ಕೂಡಿದ ಸರೋವರಗಳಿಂದಲೂ, ಆ ದಿವ್ಯ ಪ್ರದೇಶವು ಬಹು ಮನೋಹರವಾಗಿಯೇ ಕಂಡುಬರುತ್ತಿದ್ದಿತು. ||೨೯-೩೦||

ಅನೇಕ ಪುಷ್ಪಭರಿತವಾದ ವೃಕ್ಷಗಳೂ, ಅವುಗಳಿಂದ ಹೊರಡುವ ಸುವಾಸನೆಯೂ, ಕೋಟಿಸಂಖ್ಯೆಯಲ್ಲಿ ಕಂಡುಬರುವ ಅನೇಕ ಮೃಗಗಳೂ ಅಲ್ಲಿ ತೋರಿಬರುತ್ತಿದ್ದುವು. ಮಂದಮಾರುತದ ಸಂಚಾರದಿಂದ ಸಕಲ ದಿಕ್ಕುಗಳೂ ಮರಳಿನಿಂದ ತುಂಬಿವೆಯೋ ಎಂಬಂತೆ ತೋರುತ್ತಿದ್ದುವು. ಮತ್ತು ಮಣಿಮಯವಾದ ಅನೇಕ ಮಂಟಪಗಳೂ ಅಲ್ಲಿ ಶೋಭಿಸುತ್ತಿದ್ದುವು. ||೩೧-೩೨||

ಮುಂದೆ ಪಂಚಮುಖಿಯಾದ ಶಂಕರನ ಪಂಚಜಟೆಗಳಿಂದಲೂ ಹೊರಡುವ ಪಂಚಗಂಗಾಪ್ರವಾಹಗಳಿಂದಲೂ, ಅನೇಕ ಸಂಖ್ಯೆಯ ಶಿವಲಿಂಗಗಳಿಂದಲೂ ತುಂಬಿರುವ ಆ ಪ್ರದೇಶವನ್ನು ನೋಡುತ್ತಾ ಮುಂದೆ ನಿಧಾನವಾಗಿ ಪ್ರಯಾಣಮಾಡಿದನು. ಅಲ್ಲಿಯೇ ಪರಿಶುದ್ಧವಾದ ಪ್ರದೇಶದಲ್ಲಿ ಸಿಕ್ಕಿದ ದೇವಗಂಗಾನದಿಯಲ್ಲಿ ಹಿಮವಂತನು ಮೇನೆಯೊಡನೆ ಸ್ನಾನಮಾಡಿ ಮಿಂದು, ಅನುಷ್ಠಾನಾದಿಗಳನ್ನು ತೀರಿಸಿಕೊಂಡನು. ||೩೩-೩೪||

ಧನ್ಯತಾಂ ಸ ಸ್ವಜನುಷಸ್ಸಾಫಲ್ಯಮಗಜೇಶ್ವರಃ ।
ತಮಾಗತಂ ತದಾ ಜ್ಞಾತ್ವಾ ನಿಷಧಾದ್ಯಾ ಮಹೀಧರಾಃ ॥೩೫॥

ಸಮಾಗತಾಃ ಪ್ರಣಮ್ಯೈನಂ ಪ್ರಾಲೇಯಾಚಲಪರ್ವತಂ ।
ಮೇನಾಂ ಮೈನಾಕಮಾಲಿಂಗ್ಯ ಕುಶಲಂ ತೇಪ್ಯಪ್ರೋಚಿರೇ ॥೩೬॥

|| ಗಿರಯ ಊಚುಃ ||

ಧನ್ಯಾ ಮಾನ್ಯಾ ವಯಂ ಸರ್ವೇ ಕೈಲಾಸೇ ನಿವಸಾಮಹೇ ।
ಶಶಿಮೌಲೇಃ ಪ್ರಸಾದೇನ ವಯಂ ತ್ವದ್ದರ್ಶನೇನ ಚ ॥೩೭॥

ಚಿರಕಾಲೇನೇಹಸಾದ್ಯ ಜಾತಮದ್ರೀಶ್ವರಾಧುನಾ ।
ಗೌರೀಗುರೋರ್ದರ್ಶನೇನ ಸಫಲೋ ನೋ ಮನೋರಥಃ ॥೩೮॥

ಗುರುರ್ಮೇನಾ ಜನಿತ್ರೀ ನೋ ಭವಾನ್ ಗುರುತರೋ ಹಿ ನಃ ।
ವಿಹ್ಯಸ್ಮಾಕಂಗೃಹಾನ್ ಶೈಲ ಕದಾ ವಾ ತವ ದರ್ಶನಂ ॥೩೯॥

---

ಮತ್ತು ತಾನು ಹುಟ್ಟಿದ್ದಕ್ಕೆ ಅಂದು ಸಾರ್ಥಕವಾಯಿತೆಂದುಕೊಂಡನು. ಹಾಗೆ ಬಂದ ಹಿಮವಂತರಾಜನನ್ನು ನೋಡಿ, ನಿಷಧನೇ ಮೊದಲಾದ ಸಮಸ್ತ ಪರ್ವತಗಳೂ ಎದುರಾಗಿ ಬಂದು, ಹಿಮರಾಜನಿಗೆ ವಂದಿಸಿ, ಮೈನಾಕನನ್ನೂ ಆಲಿಂಗಿಸಿಕೊಂಡು ಮೇನಾದೇವಿಯ ಯೋಗಕ್ಷೇಮವನ್ನು ವಿಚಾರಿಸಿ ಹೀಗೆಂದವು. ||೩೫-೩೬||

" ಪರ್ವತರಾಜನೇ, ನಾವು ಕೈಲಾಸದಲ್ಲಿ ವಾಸಮಾಡುತ್ತಾ ಧನ್ಯರಾಗಿರುವೆವು. ಪರಶಿವನ ಅನುಗ್ರಹದಿಂದಲೂ, ನಿನ್ನ ದರ್ಶನ ಸೌಖ್ಯದಿಂದಲೂ ನಮ್ಮ ಮನಸ್ಸು ಈಗ ತೃಪ್ತಿಗೊಂಡಿರುವುದು. ಬಹುಕಾಲದಿಂದ ನಿನ್ನ ದರ್ಶನದಲ್ಲಿ ಕುತೂಹಲಿಗಳಾಗಿದ್ದ ನಮಗೆ ನಿಮ್ಮ ದರ್ಶನವೊದಗಿದ್ದಕ್ಕಾಗಿ ನಾವೇ ಇಂದು ಸುಕೃತಿಗಳು ||೩೭-೩೮||

ಅದ್ರಿರಾಜನೇ, ಮೇನಾದೇವಿಯು ನಮಗೆ ಗುರುವಿನಂತೆಯೂ ತಾಯಿಯಂತೆಯೂ ಇರುವವಳು. ನೀನು ನಮಗೆ ಪರಮಗುರುಸ್ಥಾನನು. ನೀವು ಖಂಡಿತವಾಗಿ ನಮ್ಮ ಮನೆಗೆ ದಯಮಾಡಿಸಬೇಕು. ತಮ್ಮ ದರ್ಶನವು ಮತ್ತೆ ನಮಗೆ

ಇತ್ಯುಕ್ತಶ್ಚಾದ್ರಿಭಿಶ್ಶೈಲಸ್ತಾನಾಲಿಂಗ್ಯಾನುಮನ್ಯತ ।
ತಾನಾಹ ಗಿರಿರಾಜೋಽಯಂ ಗಿರೀನ್ ಪುತ್ರಾನಿವೌರಸಾನ್ ॥೪೦॥

ಭವತಾಂ ಸ್ವಸ್ತಿ ನೋ ವತ್ಸಾಃ ಭವಪಾದೈಕವರ್ತ್ಮನಾಂ ।
ತ್ರಿನೇತ್ರಮಾನ್ಯಾ ಯೂಯಂ ಹಿ ಕಿಂ ಚಿತ್ರಂ ಸ್ವಸ್ತಯೇ ತು ವಃ ॥೪೧॥

ಭವನ್ಮೌಳಿಷು ವಿಶ್ವಾತ್ಮಾ ಭವೋ ಭವರುಜಾಂ ಹರಃ ।
ವಿಹರತ್ಯೇವ ನಿಯತಂ ಭವನ್ಮೌಳಿಸ್ಥಸೌಧಕೇ ॥೪೨॥

ಇತ್ಯುಕ್ತ್ವಾ ಸ ಗಿರಿರ್ಗತ್ವಾ ಗಿರೀಣಾಮಾಶ್ರಯೇಷು ಚ ।
ಪ್ರತ್ಯೇಕಂ ಗಿರಿಭಿಸ್ತತ್ರ ಪೂಜಿತೋ ಭೋಜನಾರ್ಹಣೈಃ ॥೪೩॥

ಮೇನಯಾ ಗಿರಿರಾಟ್ತತ್ರ ಮೈನಾಕೇನ ಚ ಸಂಯುತಃ ।
ಉವಾಸ ಮುದಿತೋಽತ್ಯರ್ಥಂ ಕೈಲಾಸೇನ ಮುದಾ ಯುತಃ ॥೪೪॥

---

ಯಾವಾಗ ಲಭಿಸುವುದೋ ಕಾಣೆವು" ಎಂದು ಸಮಸ್ತ ಪರ್ವತಗಳು ಪ್ರಾರ್ಥಿಸಿಕೊಳ್ಳಲು, ಗಿರಿರಾಜನು ಅವರೆಲ್ಲರನ್ನೂ ಮಕ್ಕಳಂತೆ ಭಾವಿಸುತ್ತಾ ಹೀಗೆಂದನು. ॥೩೯-೪೦॥

"ಎಲೈ ಪರ್ವತಶ್ರೇಷ್ಠರಿರಾ. ನಿಮಗೆ ಮಂಗಳವಾಗಲಿ. ನೀವೆಲ್ಲರೂ ಪರಶಿವನ ಭಕ್ತರಾಗಿರುವಿರಿ. ಅಲ್ಲದೆ ಶಂಕರನಿಂದ ನೀವು ಮರ್ಯಾದಿಸಲ್ಪಟ್ಟಿರುವಿರಿ. ನಿಮ್ಮ ಶಿಖರಭಾಗದಲ್ಲಿರುವ ಸೌಧದಲ್ಲಿ ವಿಶ್ವರೂಪಿಯೂ, ಭವರೋಗವೈದ್ಯನೂ ಆದ ಪರಶಿವನು ದೇವಿಯೊಡನೆ ಸರ್ವದಾ ವಿಹರಿಸುತ್ತಿರುವನು. ಅದರಿಂದ ನಿಮಗೆ ಯಾವ ಇಷ್ಟಾರ್ಥವು ತಾನೇ ಲಭಿಸಲಾರದು?" ॥೪೨॥

ಹೀಗೆ ಹೇಳಿ ಅವರ ಅಪೇಕ್ಷೆಯಂತೆ ಆ ಎಲ್ಲಾ ಗಿರಿಪ್ರದೇಶಗಳಿಗೂ ಹೋಗಿ ಅವರಿಂದ ಕೊಡಲ್ಪಟ್ಟ ಭೋಜನ, ಅತಿಥಿಸತ್ಕಾರ ಇವುಗಳಿಂದ ತೃಪ್ತನಾಗಿ, ಮೇನಾದೇವಿಯಿಂದಲೂ ಕೂಡಿ ಆ ದಿನ ಕೈಲಾಸಪರ್ವತದಲ್ಲಿಯೇ ವಾಸಮಾಡಿದನು. ॥೪೩-೪೪॥

ಕೈಲಾಸೋಪ್ಯೇನಮಾಮಂತ್ರ್ಯ ಭೋಜನೇನಾರ್ಹಣೇನ ಚ ।
ಸ್ರಗ್ಗಂಧಕುಸುಮವಾಸೋಭಿರ್ಮಾನಯಾ ತಂ ನಗೇಶ್ವರಂ ॥೪೫॥

ಹಿಮವಂತಂ ಗಣವರೈಶ್ಚ್ಯುತ್ವಾ ಚಾಗತಮೀಶ್ವರಃ ।
ಸ್ಕಂದಹೇರಂಬನಂದ್ಯಾದೀನಾಹೂಯ ಪ್ರೇಷಯತ್ತದಾ ॥೪೬॥

ತಮಾನಯಿತುಮೀಶಾನೋ ಮೈನಾಕೇನ ಚ ಮೇನಯಾ ।
ಶಿವಾಜ್ಞಾಂ ತೇ ತದಾ ಶ್ರುತ್ವಾ ನಂದಿಸ್ಕಂದಗಣೇಶ್ವರಾಃ ॥೪೭॥

ವಿಮಾನೇನಾರ್ಕವರ್ಣೇನ ಗಣವೃಂದೈಸ್ಸಮಾಗತಾಃ ।
ದೃಷ್ಟ್ವಾ ನಗೇಶ್ವರಂ ತತ್ರ ಕೈಲಾಸಸ್ಯ ಗೃಹೋಷಿತಂ ॥೪೮॥

ಮೈನಾಕೇನ ಚ ಪತ್ನ್ಯಾ ಚ ಪಾರ್ವತೀಯೈರ್ಗಣೈರ್ವೃತಂ ।
ವಿಮಾನಾದವರುಹ್ಯೈವ ನಂದಿಸ್ಕಂದಗಣೇಶ್ವರಾಃ ॥೪೯॥

ಗತ್ವಾ ಪ್ರಣೇಮುಸ್ತಂ ಶೈಲಂ ಗೌರೀಗುರುಮತಂದ್ರಿತಾಃ ।
ಮೇನಾಂ ನತ್ವಾ ಚ ಮೈನಾಕಂ ಸಮಾಲಿಂಗ್ಯ ಮುದಾ ತದಾ ॥೫೦॥

ಅನಂತರ ಕೈಲಾಸಪರ್ವತವು ನಗರಾಜನಾದ ಹಿಮವಂತನನ್ನು ಆಹ್ವಾನಿಸಿ, ಪೂಜಾ, ಭೋಜನ, ಇವುಗಳಿಂದಲೂ, ಪುಷ್ಪ, ವಸ್ತ್ರ ಮುಂತಾದ ಉಡುಗೊರೆಗಳಿಂದಲೂ ಪರ್ವತರಾಜದಂಪತಿಗಳನ್ನು ಸತ್ಕರಿಸಿದನು. ಹೀಗೆ ಕೈಲಾಸಪರ್ವತದಲ್ಲಿ ಬಂದು ತಂಗಿರುವ ಹಿಮವಂತನ ವಿಷಯವನ್ನು ಕೇಳಿ ಪರಮೇಶ್ವರನು ಸ್ಕಂದ, ಹೇರಂಬ, ನಂದಿಯೇ ಮೊದಲಾದವರನ್ನು ಹಿಮವಂತನ ಸಮೀಪಕ್ಕೆ ಕಳುಹಿಸಿಕೊಟ್ಟನು. ॥೪೫-೪೬॥

ಮತ್ತು ನಗರಾಜನನ್ನು ಪತ್ನೀಪುತ್ರಸಮೇತನನ್ನಾಗಿ ತನ್ನಲ್ಲಿಗೆ ಕರೆದುತರುವಂತೆ ಅಪ್ಪಣೆಮಾಡಿದನು. ಆ ಅಪ್ಪಣೆಯನ್ನು ಕೇಳಿ ನಂದಿ, ಸ್ಕಂದ, ಗಣಪತಿ ಮೊದಲಾದವರು ಸೂರ್ಯನಂತೆ ಪ್ರಕಾಶಿಸುವ ದಿವ್ಯವಿಮಾನಗಳನ್ನು ತೆಗೆದುಕೊಂಡು, ಸಮಸ್ತ ಗಣಗಳಿಂದ ಕೂಡಿದವರಾಗಿ ಕೈಲಾಸಪರ್ವತರಾಜನ ಮನೆಗೆ ಬಂದರು. ಅಲ್ಲಿ ಪರ್ವತರಾಜನು ಇಳಿದಿರುವುದನ್ನೂ ತಿಳಿದರು. ॥೪೭-೪೮॥

ಒಡನೆಯೇ ಸ್ಕಂದ, ನಂದಿ, ಗಣಪತಿ ಮೊದಲಾದವರು ವಿಮಾನದಿಂದ ಇಳಿದು, ಪತ್ನೀಪುತ್ರರೊಡನೆ ಕುಳಿತಿದ್ದ ಗೌರೀಗುರುವಾದ ಪರ್ವತರಾಜನಿಗೆ ವಂದಿಸಿ,

ಸೋಽಪಿ ಪ್ರಾಲೇಯಶೈಲೇಂದ್ರೋ ದೃಷ್ಟ್ವಾ ಪೌತ್ರೌ ಮುದಾ ಯುತಃ ।
ನಂದಿನಂ ತೌ ಚ ಶೈಲೇಂದ್ರೋ ಮೂರ್ಧ್ನ್ಯಜಿಘ್ರನ್ಮುದಾ ದ್ವಿಜಾಃ ॥೫೧॥

ಮೇನಾಪಿ ಪೌತ್ರಾವಾಲಿಂಗ್ಯ ಪುತ್ರೀಪುತ್ರಾನನೇಕ್ಷಣಾ ।
ಜಾತಹರ್ಷಾಶ್ಚ ಪುಲಕೈಶ್ಚಿರಂ ಬಾಷ್ಪಾಣ್ಯವರ್ತಯತ್ ॥೫೨॥

॥ ಹಿಮವಾನುವಾಚ ॥

ಸ್ವಾಸನೇಷ್ವುಪವಿಷ್ಟಾಸ್ತೇ ಕೈಲಾಸೇನಾನುಮೋದಿತಾಃ ।
ಗಿರಿಃ ಪ್ರಾಹ ತದಾ ಪುತ್ರೀ ಪೌತ್ರೌ ತನ್ನಂದಿನಂ ಮುದಾ ॥೫೩॥

ವತ್ಸೌ ಭವಂತೌ ಬಹುನಾ ಕಾಲೇನಾಲೋಕಯಾಮ್ಯಹಂ ।
ಸಖಾಯಂ ನಂದಿನಂ ಪುತ್ರಂ ದೃಷ್ಟ್ವಾಗಾಚ್ಚ ಮಾತರಂ ॥೫೪॥

---

ಮೇನಾದೇವಿಗೆ ನಮಸ್ಕರಿಸಿ, ಮೈನಾಕನನ್ನು ಆಲಿಂಗಿಸಿಕೊಂಡು ಕುಶಲಪ್ರಶ್ನೆ ಮಾಡಿದರು. ॥೪೯-೫೦॥

ಹಿಮವಂತನು ಅಲ್ಲಿಗೆ ಬಂದ ಮೊಮ್ಮಕ್ಕಳಾದ ಸ್ಕಂದ, ಮತ್ತು ಹೇರಂಬ ಇವರನ್ನೂ, ನಂದಿಯನ್ನೂ ನೋಡಿ ಸಂತೋಷಪಟ್ಟು ಪ್ರೀತಿವಾತ್ಸಲ್ಯದಿಂದ ಅವರ ಶಿರಸ್ಸನ್ನಾಘ್ರಾಣಿಸಿದನು. ಅದೇ ರೀತಿ ಮೇನಾದೇವಿಯೂ ಕೂಡ ಮೊಮ್ಮಕ್ಕಳನ್ನು ಆಲಿಂಗಿಸಿಕೊಂಡು ಮಗಳ ಮುಖವನ್ನು ನೋಡಲು ಕುತೂಹಲವುಳ್ಳವಳಾದಳು. ಆ ಸಮಯದಲ್ಲಿ ಎಲ್ಲರೂ ಪರಸ್ಪರಾಲೋಕನದಿಂದ ರೋಮಾಂಚವನ್ನು ಪಡೆದು ಆನಂದಬಾಷ್ಪಯುತರಾದರು. ॥೫೧-೫೨॥

ಕೈಲಾಸದ ಪ್ರಾರ್ಥನೆಯಂತೆ, ಬಂದಿದ್ದವರೆಲ್ಲರೂ ಉಚಿತಾಸನದಲ್ಲಿ ಮಂಡಿಸಿದರು. ಆಗ ಹಿಮವಂತನು ಮೊಮ್ಮಕ್ಕಳನ್ನೂ, ನಂದೀಶ್ವರನನ್ನೂ ಕುರಿತು ಹೀಗೆಂದನು. ॥೫೩॥

ಎಲೈ ಪೌತ್ರರಿರಾ, ನಿಮ್ಮನ್ನು ನೋಡಿ ಬಹುಕಾಲವಾಯಿತು. ಈಗ ನಿಮ್ಮ ಮತ್ತು ನಿಮ್ಮ ಸ್ನೇಹಿತನಾದ ನಂದಿಯ ದರ್ಶನದಿಂದ ನಾವು ತೃಪ್ತರಾದೆವು. ಆದರೆ ನಿಮ್ಮ ತಾಯಿಯಾದ ಪಾರ್ವತಿಯನ್ನು ನೋಡಲು ಅಪೇಕ್ಷೆಯುಳ್ಳವರಾಗಿ ಬಂದಿದ್ದೇವೆ. ಈಗ ಇಲ್ಲಿಗೆ ನಾನು ಬರಲು ನಿಮ್ಮ ಅಜ್ಜಿಯಾದ ಮೇನಾದೇವಿಯ

ಭವಂತೌ ಪುತ್ರಕೌ ಯುಕ್ತೌ ಮಾತಾಮಹ್ಯಾ ಸುಚೋದಿತಃ ।
ಚಿರಂ ಸಂದರ್ಶನಾನಂದಂ ಸಂಜಾತಪುಲಕೋದ್ಗಮಃ ॥೫೫॥

ಪಶ್ಯಾಮಿ ತಂ ಮಹಾದೇವಂ ಗೌರೀಂ ಹೃದಯನಂದಿನೀಂ ।
ಮಾತಾಮಹೇನ ಶೈಲೇನ ಇತ್ಯುಕ್ತಾಸ್ತೇ ಕುಮಾರಕಾಃ ॥೫೬॥

ಸರ್ವೇ ಪ್ರಾಂಜಲಯಶ್ಶೈಲಮನುಮಾನ್ಯಾಭ್ಯವೋಚಿರೇ ॥೫೭॥

॥ ಸ್ಕಂದಾದ್ಯಾ ಊಚುಃ ॥

ಕಿಂ ಚಿತ್ರಂ ಭವತಃ ಶೈಲಗುರೋರ್ಗುರುತರೋ ಭವಾನ್ ।
ಪಶ್ಯ ದೇವಂ ಮಹಾದೇವಂ ಗೌರೀಂ ತವ ತನೂಭವಾಂ ॥೫೮॥

ಮಹೇಶೇನ ಮಹಾಶೈಲ ಪ್ರೇಷಿತಾ ದರ್ಶನಾಯ ತೇ ।
ಮೇನಯಾ ಸಹ ನಿರ್ಯಾಹಿ ಮೈನಾಕೇನಾಮುನಾ ಮುದಾ ॥೫೯॥

ಅಚಿರೇಣ ದೃಶಾ ಪಶ್ಯ ದೇವೀಂ ತಂ ಚೇಂದುಭೂಷಣಂ ।
ಇತಿ ಸರ್ವೇ ಸಮಾಲಿಂಗ್ಯ ಗಿರಯೋ ಗಣಪುಂಗವಾಃ ॥೬೦॥

---

ಪ್ರೇರಣೆಯೇ ಮೂಲಕಾರಣವಾಯಿತು. ಅದರಂತೆ ಇಲ್ಲಿಗೆ ಬಂದು ನಿಮ್ಮನ್ನು ನೋಡಿದ್ದರಿಂದ ನನಗೆ ಸಂಪೂರ್ಣವಾದ ಆನಂದವುಂಟಾಯಿತು. ಮತ್ತು ರೋಮಾಂಚ ವಿಶಿಷ್ಟನೂ ಆಗಿರುವೆನು. ||೫೪-೫೫||

ಈಗ ಪುತ್ರಿಯೂ, ಮನಸ್ಸಿಗೆ ಆಹ್ಲಾದಕರಳೂ ಆದ ಪಾರ್ವತಿಯನ್ನು ನೋಡಲು ಬಯಸುತ್ತಿರುವೆನು ಎಂದು ಹೇಳಿದ ಮಾತಾಮಹನ ಮಾತುಗಳನ್ನು ಕೇಳಿ ಸ್ಕಂದಾದಿಗಳು ವಿನಯದಿಂದ ಹೀಗೆ ಹೇಳಿಕೊಂಡರು. ||೫೬-೫೭||

“ಪರ್ವತರಾಜನೇ, ಇದರಲ್ಲಿ ಆಶ್ಚರ್ಯವೇನು? ನೀನು ಸರ್ವರಿಗೂ ಪೂಜ್ಯನಾಗಿರುವೆ. ನಿನಗೆ ಈಗಲೇ ಮಹಾದೇವನ ಮತ್ತು ಮಹಾದೇವಿಯ ದರ್ಶನಲಾಭ ವೊದಗುವುದು. ಅದಕ್ಕಾಗಿಯೇ ನಾವು ಮಹೇಶ್ವರನಿಂದ ಆಜ್ಞಪ್ತರಾಗಿ ನಿನ್ನನ್ನು ಆಹ್ವಾನಿಸಲೋಸುಗ ಇಲ್ಲಿಗೆ ಬಂದಿರುವೆವು. ಸಂತೋಷದಿಂದ ಪತ್ನೀಪುತ್ರರೊಡನೆ ಪರಶಿವನ ಸನ್ನಿಧಿಗೆ ಬಿಜಯಮಾಡು. ||೫೮-೫೯||

ಜಾಗ್ರತೆಯಾಗಿ ಚಂದ್ರಶೇಖರನಾದ ಮಹಾದೇವನನ್ನೂ ದೇವಿಯನ್ನೂ ನೋಡುವೆ” ಎಂದು ಹೇಳಿ ಸ್ಕಂದಾದಿಗಳು ಎಲ್ಲರನ್ನೂ ಬೀಳ್ಕೊಟ್ಟು ಮೈನಾಕ,

ಸ್ಕಂದಹೇರಂಬಕಾಶ್ಚೈವ ಮೈನಾಕೇನ ಚ ಮೇನಯಾ ।
ವಿಮಾನಂ ತತ್ಸಮಾರುಹ್ಯ ಕೈಲಾಸೇನ ಸಹಾದ್ರಿರಾಟ್ ॥೬೧॥

ಯಯೌ ಕೈಲಾಸಮೌಲೀಷು ಪಶ್ಯನ್ವಿಶ್ವೇಶಿತುಃ ಶ್ರಿಯಂ ।
ಸೌಧಮಾಲಾಂ ಚ ತತ್ರತ್ಯಾಂ ಮಣಿಪ್ರವರಕಲ್ಪಿತಾಂ ॥೬೨॥

ಮೇನಾಮುವಾಚ ಪ್ರಸಭಂ ಪ್ರಾಲೇಯಾಚಲ ಉತ್ತಮಃ ।
ಜಾಮಾತುಸ್ತೇ ಶ್ರಿಯಂ ಪಶ್ಯ ವಿಷ್ಣುಬ್ರಹ್ಮಾದಿದುರ್ಲಭಾಂ ॥೬೩॥

ಪದವೀಮದವೀಯೋಽಯೋ ಮನಸಾಣೀಯಸಾ ಕಿಮು ॥೬೪॥

॥ ಮೇನೋವಾಚ ॥

ಕಲ್ಪಿತುಂ ಶಕ್ಯತೇ ದೇವಿ ಮಾ ದುಃಖವಿವಶಾ ಭವ ।
ತದ್ಗಿರೇರ್ವಚನಂ ಶ್ರುತ್ವಾ ದೃಷ್ಟ್ವಾ ಪೌತ್ರಾ ಚ ತಾಂ ಶ್ರಿಯಂ ॥೬೫॥

ಉವಾಚ ಗಿರಿರಾಜಾನಂ ಮೇನಾ ನಮ್ರಶಿರೋಧರಾ ॥೬೬॥

---

ಮೇನಾದೇವಿ, ಪರ್ವತರಾಜ ಇವರನ್ನು ಮಾತ್ರ ದಿವ್ಯ ವಿಮಾನದಲ್ಲಿ ಕೂರಿಸಿಕೊಂಡು ಕೈಲಾಸಪರ್ವತರಾಜನೊಡನೆ ಹೊರಟರು. ॥೬೦-೬೧॥

ದಾರಿಯಲ್ಲಿ ಕಂಡುಬರುವ ಸೌಧಪಂಕ್ತಿಗಳನ್ನೂ, ರತ್ನಮಯವಾದ ಶಿಖರ ಪ್ರದೇಶವನ್ನೂ ನೋಡುತ್ತಾ, ಪರಮೇಶ್ವರನ ಐಶ್ವರ್ಯವನ್ನು ಹೊಗಳುತ್ತಾ ತನ್ನ ಪತ್ನಿಯಾದ ಮೇನಾದೇವಿಗೆ ಹೀಗೆಂದನು "ಎಲೌ ದೇವಿಯೇ, ನಿನ್ನ ಅಳಿಯನ ಐಶ್ವರ್ಯವನ್ನು ನೋಡು. ಇದು ಬ್ರಹ್ಮ, ವಿಷ್ಣ್ವಾದಿಗಳಿಗೂ ದುರ್ಲಭವಲ್ಲವೇ ? ಅವನ ಅಧಿಕಾರವನ್ನೂ, ಸ್ಥಾನವನ್ನೂ ಮನಸ್ಸಿನಿಂದ ಊಹಿಸಿ ತಿಳಿಯಲು ಸಾಧ್ಯವಾಗುವುದೇ ? ॥೬೨-೬೩-೬೪॥

ಅಥವಾ ಈ ಸೊಬಗನ್ನು ಕಲ್ಪಿಸಿಕೊಳ್ಳಲು ಯಾರಿಂದ ತಾನೇ ಸಾಧ್ಯವಾದೀತು ? ಇದನ್ನು ನೋಡಿದ ಮೇಲಾದರೂ ಹಿಂದೆ ನೀನು ದುಃಖಪಟ್ಟಿದ್ದನ್ನು ಮರೆತುಬಿಡು" ಎಂದು ಹೇಳಿದ ಪತಿಯ ವಾಕ್ಯವನ್ನು ಕೇಳಿ, ವಿನಯದಿಂದ ಕೂಡಿದವಳಾಗಿ ಮೇನಾದೇವಿಯು ಪತಿಯೊಡನೆ ಹೀಗೆಂದಳು. ॥೬೫-೬೬॥

ಸ್ತ್ರಿಯಾ ಮಯಾ ಕೃತಾ ಬುದ್ಧಿರನ್ಯಥೈವ ಮಹೇಶ್ವರೇ ।
ನೋ ಚೇನ್ಮಹೇಶ್ವರತ್ವಂ ಸ್ಯಾತ್ಕಥಂ ದೇವೇ ತ್ರಿಲೋಚನೇ ॥೬೭॥

ಸಂಜಾತವಿಸ್ಮಯಾ ಮೇನಾ ಮನ್ಯೇ ಸರ್ವಂ ಮನೋರಥಂ ।
ಪೂರ್ಣಂ ಶಿವಪ್ರಸಾದೇನ ಗೌರ್ಯಾಸಂದರ್ಶನೇನ ಚ ॥೬೮॥

॥ ಸ್ಕಂದ ಉವಾಚ ॥

ಮೈನಾಕೇನ ಚ ಮೇನಯಾ ಶಿವಪದದ್ವಂದ್ವಾರ್ಚನಾಯಾಧಿಕಂ ।
ಸೋಽಪ್ಯನ್ಯೈರ್ಗಿರಿಗಣ್ಯೈಃ ಫಲೈಸ್ಸುಮಧುರೈರ್ಮಾಲ್ಯೈಶ್ಚ ಬಿಲ್ವೀಭರೈಃ ।
ರತ್ನೋದ್ವಾಹಗಣೈರ್ಮುದಾ ಗಿರಿವರೋ ವೀಕ್ಷಿಷ್ಯಂತೌ ತಾಂ ಶ್ರಿಯಂ ।
ಉತ್ಫುಲ್ಲಾಮಲಪಕ್ಷ್ಮಪಂಕಜಲಸದ್ದೃಷ್ಟಿಂ ಮಹೇಶಂ ಶಿವಾಂ ॥೬೯॥

ಪ್ರಾಲೇಯಪ್ರಬಲಾಚಲೋ ತರಿವರ್ಗೈರ್ಯುಕ್ತೋ ವಿಮುಕ್ತಾಪದಂ ।
ಪ್ರಾಪ್ತುಂ ಶಂಕರದಿವ್ಯಧಾಮವರಗಪ್ರಾಸಾದಮತ್ಯುಜ್ಜ್ವಲಂ ।

---

"ಪೂಜ್ಯನೇ, ಅಲ್ಪಬುದ್ಧಿಯುಳ್ಳ ಹೆಂಗಸಾದ ನಾನು ಪರಶಿವನ ವಿಷಯದಲ್ಲಿ ಅನ್ಯಥಾಭಾವನೆಯನ್ನಿಟ್ಟಿದ್ದೆನು. ತ್ರಿಲೋಚನನಾದ ಮಹೇಶ್ವರನಲ್ಲಿ ಈ ಶಕ್ತಿಯಿಲ್ಲದಿದ್ದರೆ ಅವನು ಜಗದೊಡೆಯನೆನಿಸುವುದು ಹೇಗೆ? ಇದನ್ನೆಲ್ಲಾ ನಾನು ನೋಡಿ ಈಗ ಆಶ್ಚರ್ಯಪಡುತ್ತಿರುವೆನು. ಆದರೆ ಪಾರ್ವತೀಪರಮೇಶ್ವರರ ದರ್ಶನದಿಂದ ಈಗ ನನ್ನ ಇಷ್ಟಾರ್ಥವು ಪೂರ್ಣವಾಗುವುದಾಗಿದೆ." ॥೬೭-೬೮॥

ಜೈಗೀಷವ್ಯಾದಿಗಳಿಗೆ ಕುಮಾರಸ್ವಾಮಿಯು ಈ ಕಥೆಯನ್ನು ವಿವರಿಸುತ್ತಾ ಹೀಗೆಂದನು. ಪರ್ವತರಾಜನಾದ ಹಿಮವಂತನು ಪತ್ನಿಪುತ್ರರೊಡಗೂಡಿ, ಪರಮೇಶ್ವರನ ಪಾದಕಮಲಗಳನ್ನು ಅರ್ಚಿಸುವುದಕ್ಕಾಗಿ ಪ್ರಯಾಣಮಾಡಿದನು. ಅದಕ್ಕಾಗಿ ತನ್ನ ಪರ್ವತದಲ್ಲಿ ಬೆಳೆದ ಅಮೂಲ್ಯವಾದ ಫಲಪುಷ್ಪಗಳನ್ನೂ, ಬಿಲ್ವಪತ್ರೆಗಳನ್ನೂ, ಧನಕನಕಾದಿ ಸುವಸ್ತುಗಳನ್ನೂ, ರತ್ನರಾಶಿಯನ್ನೂ ಜೊತೆಯಲ್ಲಿ ತಂದಿದ್ದನು. ಅವುಗಳನ್ನೆಲ್ಲಾ ಸ್ವಾಮಿಗೆ ಸಮರ್ಪಿಸಿ ಅರಳಿದ ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ ದೇವಿಯನ್ನು ನೋಡಬೇಕೆಂಬುದೇ ಆತನ ಮುಖ್ಯೋದ್ದೇಶವಾಗಿದ್ದಿತು. ॥೬೯॥

ಅಂತಹ ಸದುದ್ದೇಶದಿಂದ ಹಿಮಾಲಯರಾಜನು, ಅನೇಕ ಗಿರಿಗಳಿಂದ ಕೂಡಿದವನಾಗಿ ಶಂಕರನ ದಿವ್ಯ ಪ್ರಾಸಾದವನ್ನು ಪ್ರವೇಶಿಸಲು ಹೊರಟನು. ಕೈಲಾಸ

ಕೈಲಾಸಾಚಲದತ್ತಹಸ್ತತಲಕೋ ಜ್ಯೇಷ್ಠೋ ಗಿರಿಂ ವಿಸ್ಮಯನ್ ।
ಸ್ವೇನಾನೀತಮಪಾರಮಾತ್ಮಭರಕೈಃ ಕಿಂ ದೇಯಮಿತ್ಯಾದರಾತ್ ॥೨೦॥

ಪಯೋದಧಿಪಯಃಕಣೈಃ ಕಥಮಿಹಾಸ್ತಿ ಚಾರ್ಘ್ಯಂ ಮುದೇ ।
ಪ್ರಚಂಡತರರಶ್ಮಿಭಿಃ ಕಿಮುತ ದೀಪದಾನೇನ ಮೇ ।
ಇತೀವ ಮನಸಾ ಸ್ಮಯನ್ ಗಿರಿವರಸ್ತತೋರ್ತೀರ್ಯ ವೈ ।
ಜಗಾಮ ಭವನಂ ವಿಭೋರ್ಗುರುಭರಾದಿರತ್ನೋಽಪ್ಯಹೈಃ ॥೨೧॥

ಸೋಽಪ್ಯದ್ರೀಶ್ವರಮಾಗತಂ ಗಿರಿಜಯಾ ಶ್ರುತ್ವೇವ ನಂದೀಮುಖಾತ್ ।
ತೇನಾನೀತವಿಚಿತ್ರರತ್ನನಿವಹಂ ದೇವ್ಯೈ ದದೌ ಶಂಕರಃ ।
ತಂ ಚಾಲಿಂಗ್ಯ ತದಾ ಮುದಾ ತ್ರಿಜಗತಾಂ ನಾಥೋಽಪಿ ಗೌರೀಗುರುಂ ।
ಪ್ರೇಮ್ಣಾ ಹೇಮವಿತಾನಚಿತ್ರಿತಮಹಾಸಿಂಹಾಸನೇ ವಿಶ್ಯತಂ ॥೨೨॥

---

ಪರ್ವತನ ಕೈಯ್ಯನ್ನು ಹಿಡಿದುಕೊಂಡು, ತಾನು ತಂದಿರುವ ದಿವ್ಯವಸ್ತುಗಳಲ್ಲಿ ಅಪರೂಪ ವಸ್ತುವು ಯಾವುದಿರುವುದು? ಪರಶಿವನಿಗೆ ಕೊಡುವ ವಸ್ತುವಾವುದು? ಎಂದು ಯೋಚಿಸುತ್ತಾ ಮುಂದೆ ಸಾಗಿದನು. ॥೨೦॥

ಕ್ಷೀರಸಮುದ್ರವೇ ಇಲ್ಲಿ ನೆಲಸಿರುವಾಗ ನಾನು ಯಾವ ಹಾಲಿನ ಹನಿಗಳಿಂದ ಪರಶಿವನಿಗೆ ಅರ್ಘ್ಯವನ್ನು ಕೊಡಲಿ? ಪ್ರಚಂಡತರವಾದ ಸೂರ್ಯನ ತೇಜಸ್ಸೇ ಇಲ್ಲಿ ತೋರುತ್ತಿರುವಲ್ಲಿ ನಾನು ಎಂತಹ ದೀಪಗಳನ್ನು ಪೂಜಾಕಾಲದಲ್ಲಿಡಬಹುದು? ಎಂದು ಮುಂತಾಗಿ ಯೋಚಿಸುತ್ತಾ, ಅಂತೂ ತಾನು ತಂದ ರತ್ನದ್ರವ್ಯಗಳೊಡನೆ ನಿಧಾನವಾಗಿ ಪರಶಿವನ ಪ್ರಾಸಾದವನ್ನು ಹೊಕ್ಕನು. ॥೨೧॥

ಒಳಗೆ ತನ್ನ ಮನೆಗೆ ಪರ್ವತರಾಜನು ಬಂದದ್ದನ್ನು ನಂದೀಮುಖದಿಂದ ಕೇಳಿ ಶಂಕರನು ಪರ್ವತರಾಜನನ್ನು ಸ್ವಾಗತಿಸಿದನು. ಅಲ್ಲದೆ ಆತನು ತಂದೊಪ್ಪಿಸಿದ ಅಮೂಲ್ಯವಾದ ರತ್ನರಾಶಿಯನ್ನೆಲ್ಲಾ ಪತ್ನಿಗೆ ಸಮರ್ಪಿಸಿದನು. ಮತ್ತು ತಾನು ತ್ರಿಜಗತ್ಪತಿಯಾದರೂ, ಮಾವನನ್ನು ಅಲಕ್ಷಿಸದೆ ಮರ್ಯಾದೆಯಿಂದ ಆತನನ್ನು ಆಲಿಂಗಿಸಿ, ಸುವರ್ಣದ ಮೇಲ್ಕಟ್ಟಿನಿಂದ ರಂಜಿಸುವ ದಿವ್ಯ ಸಿಂಹಾಸನದಲ್ಲಿ ಪ್ರೀತಿಯಿಂದ ಪರ್ವತರಾಜನನ್ನು ಕೂರಿಸಿದನು. ॥೨೨॥

ಮೈನಾಕೇನ ಚ ಮೇನಯಾ ಗಿರಿವರಂ ಸಂಪೂಜ್ಯ ಚಾಲಿಂಗ್ಯ ತಾನ್ ।
ಪ್ರಾಹ ಸ್ವಸ್ತಿವಚೋಪ್ಯುದಾರಮನಸಾ ತಂ ಚಾದ್ರಿಪಂಚೇಶ್ವರಃ ।
ತತ್ಪುಷ್ಪಪ್ರಕರಂ ಫಲೋದ್ಯತಕುಲಂ ಪ್ರೀತ್ಯಾನುಮಾನ್ಯಾದರಾತ್ ।
ಭಕ್ತ್ಯಾಭ್ಯರ್ಚ್ಯ ಗಿರಿವ್ರಜಂ ಸುಮಧುರೈರ್ಭಕ್ಷ್ಯೈಶ್ಚ ಭೋಜ್ಯೈರಪಿ ॥೭೩॥

ಸಂಭೋಜ್ಯ ಸ್ವಸುತೈರ್ಮುದಾ ಗಣವರ್ಯೈಃ ಪ್ರಾಲೇಯಶೈಲಾನುಗೈಃ ।
ಮೈನಾಕೇನ ಗಿರೀಶ್ವರೈರ್ಗಿರಿಜಯಾ ತಾಂಬೂಲಪುಷ್ಪಾರ್ಹಣೈಃ ।
ನಾನೋರತ್ನವಿಭೂಷಣೈರ್ಮಣಿಗಣೈರ್ಧೂಪೈಶ್ಚ ದೀಪೋತ್ಸವೈಃ ।
ರುದ್ರಾಣೀಗಣನರ್ತನೈಶ್ಚ ಭಗವಾನಂಬಾಯುತೋ ಮೋದಿತಃ ॥೭೪॥

ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಹಿಮಾಚಲ ಶಿವಪಾರ್ವತೀ ಸಂದರ್ಶನವರ್ಣನಂ ನಾಮ ಏಕೋನವಿಂಶೋಽಧ್ಯಾಯಃ

---

ಅನಂತರ ಮನೆಗೆ ಬಂದ ಪರ್ವತರಾಜನನ್ನೂ, ಮೈನಾಕ ಮತ್ತು ಮೇನಾ ದೇವಿಯರನ್ನೂ ಯಥೋಚಿತವಾಗಿ ಸತ್ಕರಿಸಿ, ಕುಶಲಪ್ರಶ್ನೆಗಳಾದ ನಂತರ, ಅವನು ಸಮರ್ಪಿಸಿದ ಫಲಪುಷ್ಪಾದಿಗಳನ್ನು ಪ್ರೀತಿಯಿಂದ ಸ್ವೀಕರಿಸಿ, ಪರಶಿವನೂ ಅವರ ವರಿಗೆ ಇಷ್ಟವಾದ ಭಕ್ಷ್ಯಭೋಜ್ಯಾದಿಗಳನ್ನು ಅರ್ಪಿಸಿ ಅವರನ್ನು ತೃಪ್ತಿಪಡಿಸಿದನು. ॥೭೩॥

ಹಾಗೆಯೇ, ತಾನೂ, ತನ್ನ ಮಕ್ಕಳೊಡನೆಯೂ, ಗಣಾಧಿಪನೊಡನೆಯೂ ಕೂಡಿಕೊಂಡು, ಮೈನಾಕ, ಗಿರಿರಾಜ, ಪಾರ್ವತಿ ಮೊದಲಾದವರ ಮಧ್ಯದಲ್ಲಿ ಕುಳಿತು, ದಿವ್ಯವಸ್ತ್ರ, ಗಂಧ, ಹೂವು ಇವುಗಳ ಸುಗಂಧವನ್ನು ಆಘ್ರಾಣಿಸುತ್ತಾ, ರುದ್ರಾಣಿಯರ ನರ್ತನಸೌಂದರ್ಯವನ್ನು ನಿರೀಕ್ಷಿಸಿ ಆನಂದಿಸುತ್ತಾ, ಶಂಕರನು ಸುಖವಾಗಿ ಕಾಲಕಳೆದನು. ॥೭೪॥

ಇಲ್ಲಿಗೆ ಶಿವರಹಸ್ಯದ ಎರಡನೆಯ ಅಂಶದಲ್ಲಿ ಹಿಮಾಚಲನಿಗೆ ಶಿವಪಾರ್ವತಿಯರು ದರ್ಶನವಿತ್ತ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ವಿಂಶೋಽಧ್ಯಾಯಃ

## ಮೇನಾಪಾರ್ವತೀವಿಹಾರವರ್ಣನಂ

|| ಸ್ಕಂದ ಉವಾಚ ||

ತತೋಽಂತಃಪುರಮಾಗತ್ಯ ಸಾ ಮೇನಾ ಸೋಽದ್ರಿರಾಟ್ತದಾ ।
ಪ್ರಣತಾಂ ಪ್ರಾಂಜಲಿಂ ಗೌರೀಂ ನ್ಯೈವಮಿತ್ಯಬ್ರವೀದುಮಾಂ ॥೧॥

|| ಹಿಮವಾನುವಾಚ ||

ಗೌರಿ ತ್ವಾಂ ದ್ರಷ್ಟುಮಾಹಾತಸ್ಸಮಾಗಚ್ಛಾಮಿಹಾಂಬಿಕೇ ।
ಮೇನಯಾ ತ್ವಾಮಥಾತ್ರಾಗಾಂ ಮೇನಾಕರುಣಯಾ ಗಿರಾ ॥೨॥

ಪಶ್ಯ ಸ್ನೇಹೇನ ದೇವೇಶಿ ತ್ವದಾಲೋಕನಹರ್ಷಿತಾಃ ।
ಇತ್ಯುಕ್ತಾ ಸಾ ಚ ಗಿರಿಜಾ ಪಿತೃವಾಕ್ಯಪ್ರಹರ್ಷಿತಾ ॥೩॥

---

ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಇಪ್ಪತ್ತನೆಯ ಅಧ್ಯಾಯ

ಅನಂತರ ಮೇನಾದೇವಿಯೂ, ನಗರಾಜನೂ ಗೌರೀದೇವಿಯ ಅಂತಃಪುರವನ್ನು ಹೊಕ್ಕರು. ಅಲ್ಲಿ ನಮಸ್ಕರಿಸಿ ಅಂಜಲಿಬದ್ಧಳಾದ ಗೌರಿಯನ್ನು ನೋಡಿ ಹಿಮವಂತನು ಹೀಗೆಂದನು. ||೧||

"ಎಲೌ ಗೌರೀದೇವಿಯೇ, ನಿನ್ನನ್ನೇ ನೋಡಬೇಕೆಂಬ ಕುತೂಹಲದಿಂದ ಮೇನಾದೇವಿಯೊಡನೆ ನಾನು ಇಲ್ಲಿಗೆ ಬಂದಿರುವೆನು. ಇಷ್ಟಕ್ಕೆಲ್ಲಾ ಮೊದಲು ಇಲ್ಲಿಗೆ ಬರಲು ಮೇನಾದೇವಿಯ ಅಪೇಕ್ಷೆಯೇ ಮೂಲಕಾರಣ. ದೇವಿಯೇ, ಈಗ ನಾವು ನಿನ್ನ ದರ್ಶನದಿಂದ ಸಂತೋಷಗೊಂಡಿರುವೆವು" ಎಂದು ಹೇಳಿದ ತಂದೆಯ ಮಾತನ್ನು ಕೇಳಿ ಪಾರ್ವತಿಯು ಬಹುವಾಗಿ ಹರ್ಷಗೊಂಡಳು. ||೨-೩||

ಮಾತರಂ ತಾಂ ಸಮಾಲಿಂಗ್ಯ ಮೇನಾಂ ಹರ್ಷೇಣ ಭಾವಿತಾ ।
ಮೇನಾಪಿ ತಾಂ ಸಮಾಲಿಂಗ್ಯ ಗೌರೀಂ ಸ್ನೇಹಾವಲೋಕನೈಃ ॥೪॥

ಅಪಶ್ಯತ್ಪ್ರಸ್ನುತಪಯಃಪೂರೈಸ್ತಾಂ ಸ್ನಾಪಯತ್ತದಾ ।
ಸಾಸ್ರಾವಿಲಮುಖಂ ವೀಕ್ಷ್ಯ ಪ್ರೋವಾಚಾಂಬಾಂ ಸಗದ್ಗದಂ ॥೫॥

॥ ಮೇನೋವಾಚ ॥

ಧನ್ಯೇ ಪಶ್ಯಾಮಿ ನೇತ್ರೇಣ ಚಿರಮದ್ಯ ತವಾನನಂ ।
ಪುತ್ರೀಸ್ನೇಹೇನ ತ್ವಾಂ ಗೌರಿ ಪ್ರಸನ್ನೇನಾಂತರಾತ್ಮನಾ ॥೬॥

ಆನಂದಾಂಬುನಿಧೌ ಮಗ್ನಾ ಸರ್ವೇಂದ್ರಿಯಗುಣೈಸ್ಸಹ ।
ಇತ್ಯುಕ್ತ್ವಾ ತಾಂ ಸಮಾಲಿಂಗ್ಯ ಚಾನಂದಾಂಬುಪರಿಸ್ರವೈಃ ॥೭॥

ಸ್ವೇನಾನೀತಂ ಕ್ರೀಡನಕಂ ತಸ್ಯಾಯಾದಾತ್ಪ್ರೀತಿತಸ್ತದಾ ।
ರತ್ನಾಭರಣಜಾಲಾನಿ ಗಂಧಾಗರುನಿಶಾದಿಕಂ ॥೮॥

ಕುಂಕುಮಂ ರೋಚನಾಪುಷ್ಪಂ ವಾಸೋಭಾರನಿಚೋಲಕಂ ।
ಪಾಲಿಕಾಃ ಬಾಲಿಕಾ ದೇವ್ಯೈ ಸರ್ವಂ ಯತ್ತದುಪಾಹೃತಂ ॥೯॥

---

ತಾಯಿಮಕ್ಕಳಾದ ಮೇನಾಪಾರ್ವತಿಯರು ಪರಸ್ಪರ ಆಲಿಂಗನಾದಿಗಳಿಂದ ತಮ್ಮ ಪ್ರೀತಿವಿಶ್ವಾಸಗಳನ್ನು ತೋರ್ಪಡಿಸಿಕೊಂಡಮೇಲೆ, ತಾಯಿಯಾದ ಮೇನೆಯು ಪ್ರೀತಿಯಿಂದ ಸುರಿಯುವ ಸ್ತನ್ಯದಿಂದ ಮಗಳನ್ನು ನೆನಸುತ್ತಾ, ಆನಂದಬಾಷ್ಪ ಸಹಿತಳಾದ ಮಗಳನ್ನು ನೋಡುತ್ತಾ ಹೀಗೆ ಹೇಳಲಾರಂಭಿಸಿದಳು. ॥೪-೫॥

ಮಗಳೇ, ನಿನ್ನನ್ನು ಬಹುದಿವಸದಿಂದ ನೋಡಿರಲಿಲ್ಲವಾದ್ದರಿಂದ ನನ್ನ ಮನಸ್ಸು ಬಹುವಾಗಿ ತವಕಪಡುತ್ತಿದ್ದಿತು. ಈಗ ಮನಸ್ಸು ಪ್ರಸನ್ನವಾಗಿದೆ. ನಾನು ಸರ್ವೇಂದ್ರಿಯಗಳೊಡನೆ ಆನಂದಸಮುದ್ರದಲ್ಲಿ ಮುಳುಗಿರುವಂತಿರುವೆನು, ಎಂದು ಹೇಳುತ್ತಾ ಆನಂದಾಶ್ರುಯುತಳಾಗಿ ಮಗಳನ್ನು ಆಲಿಂಗಿಸಿಕೊಂಡಳು. ॥೬-೭॥

ಮತ್ತು ಮಗಳಿಗಾಗಿ ತಾನು ತಂದಿದ್ದ ಕ್ರೀಡಾವಸ್ತುಗಳ ಜಾಲವನ್ನೂ, ರತ್ನಾಭರಣಾದಿಗಳನ್ನೂ, ಕುಂಕುಮಕೇಸರಿಯೇ ಮೊದಲಾದ ಸುಗಂಧದ್ರವ್ಯಗಳನ್ನೂ ವಸ್ತ್ರಕುಪ್ಪುಸಾದಿಗಳನ್ನೂ, ತಟ್ಟೆಯೇ ಮೊದಲಾದ ಅಪೂರ್ವಪದಾರ್ಥಗಳನ್ನೂ, ಪ್ರೀತಿಯಿಂದ ಸಮರ್ಪಿಸಿದಳು. ॥೮-೯॥

ಸಾ ದೃಷ್ಟ್ವಾ ಮೇನಯಾ ದತ್ತಮನುಪೂಸ್ಯ ಮುದಾಂಬಿಕಾ ।
ತಯಾಹಾರವಿಹಾರೈಶ್ಚ ಸ್ನಾನನೀರಾಜನೋತ್ಸವೈಃ ॥೧೦॥

ಕ್ರೀಡಾಭಿರ್ವಿವಿಧಾಭಿಸ್ಸಾ ನಿನ್ಯೇ ವರ್ಷಂ ತದಾಂಬಿಕಾ ।
ಸೋಽಪ್ಯದ್ರಿರಾಣ್ಮಹೇಶೇನ ಸಪುತ್ರೋಽನುಚರೈಸ್ಸಹ ॥೧೧॥

ಪೂಜಿತೋ ಗಣವರ್ಯೈಶ್ಚ ಉವಾಸಾಚಲಸೌಧಕೇ ।
ಏಕದಾ ಮೇನಯಾ ದೇವೀ ಕೈಲಾಸಾಚಲದರ್ಶನೇ ॥೧೨॥

ನಿಯೋಜಿತಾ ಶಿವಾಜ್ಞಾತೋ ದ್ರಷ್ಟುಂ ದೇವೀ ಸಖೀಗಣೈಃ ।
ತತೋ ವಿಮಾನಂ ತರಸಾ ಮೇನಯಾಂಬಾ ಮನೋಹರಂ ॥೧೩॥

ಅಷ್ಟಸಿಂಹಸಮಾಯುಕ್ತಂ ಕಾಮಗಂ ಸುಮನೋಹರಂ ।
ರತ್ನೋದ್ಯದ್ದ್ಯುಮಣಿಪ್ರಖ್ಯದೀಪ್ತಿದೀಪ್ತದಿಗಂತರಂ ॥೧೪॥

ಆತ್ಯರ್ಕವರ್ಣಂ ತರಸಾ ಮನೋವೇಗಾತಿವೇಗಿತಂ ।
ಮುಕ್ತಾಮಾಣಿಕ್ಯಖಚಿತಂ ಪತಾಕಾಛತ್ರಶೋಭಿತಂ ॥೧೫॥

---

ತಾಯಿಯಿಂದ ಕೊಡಲ್ಪಟ್ಟ ರತ್ನಮಾಲ್ಯಾದಿಗಳನ್ನು ಸ್ವೀಕರಿಸಿ, ಗೌರಿಯು ತಾಯಿಯ ಜೊತೆಯಲ್ಲಿಯೇ, ಸ್ನಾನ, ನೀರಾಜನ, ಆಟ, ಮುಂತಾದ ವಿಹಾರಗಳನ್ನು ನಡೆಸುತ್ತಾ ಒಂದು ವರ್ಷ ಸುಖವಾಗಿ ಕಾಲಕಳೆದಳು. ಹಾಗೆಯೇ ಅದ್ರಿರಾಜನಾದ ಹಿಮವಂತನೂ ಪುತ್ರನೊಡನೆಯೂ, ಸೇವಕರೊಡನೆಯೂ ಅಲ್ಲಿಯೆ ಒಂದು ವರ್ಷಕಾಲ ವಾಸಮಾಡಿದನು. ||೧೦-೧೧||

ನಗರಾಜನು ಪ್ರತಿದಿನವೂ ಪ್ರಮಥಗಣಗಳಿಂದ ಪೂಜಿತನಾಗಿ ಪರ್ವತರಾಜನಿಗೆ ಪ್ರತ್ಯೇಕವಾಗಿರುವ ದಿವ್ಯ ಸೌಧದಲ್ಲಿ ವಾಸಮಾಡಿದನು. ಹೀಗಿರುವಾಗ ಒಂದು ದಿನ ಗೌರೀದೇವಿಯು, ತಾಯಿಯಾದ ಮೇನಾದೇವಿಗೆ ಕೈಲಾಸಪರ್ವತವನ್ನೆಲ್ಲಾ ತೋರಿಸಬೇಕೆಂದು, ಪತಿಯಿಂದ ಅನುಜ್ಞಾತಳಾಗಿ, ಸಖಿಯರಿಂದ ಕೂಡಿ ಸಂಚರಿಸುವುದಕ್ಕಾಗಿ ಒಂದು ವಿಮಾನವನ್ನು ತರಿಸಿದಳು. ||೧೨-೧೩||

ಆ ವಿಮಾನವು ಎಂಟು ಸಿಂಹ ವಿಗ್ರಹಗಳಿಂದ ಅಲಂಕೃತವಾಗಿತ್ತು. ಸ್ವಾಮಿಯ ಇಷ್ಟದಂತೆ ನಡೆಯತಕ್ಕದ್ದಾಗಿತ್ತು. ಮನೋಹರವಾಗಿ, ದಿಗಂತ ವಿಶ್ರಾಂತವಾದ ರತ್ನಗಳ ಕಾಂತಿಯಿಂದ ಸೂರ್ಯನನ್ನೂ ಮಂಕುಮಾಡುತ್ತಲಿತ್ತು. ಮತ್ತು

ಸಿಂಹಾಸನಯುತಂ ದಿವ್ಯಮಣಿಪುಷ್ಪಸರಾವೃತಂ ।
ಮಣಿದೀಪಮಹಾಕಾಂತಿಕಾಂತಿತಂ ಚೋಜ್ಜ್ವಲಪ್ರಭಂ ॥೧೬॥

ರತ್ನಕುಂಭಶತೋಪೇತಮಂತರಿಕ್ಷರಥೋಪಮಂ ।
ಧೂಪಾಮೋದೈಕಬಹುಲಂ ಪುಷ್ಪದಾಮಸುವಾಸಿತಂ ॥೧೭॥

ಮೇನಯಾಂಬಾ ಸಮಾರುಹ್ಯ ಕೈಲಾಸಂ ದ್ರಷ್ಟುಮಭ್ಯಗಾತ್ ।
ಫಲಜಾಲೈಶ್ಚ ತಾಂಬೂಲೈರ್ಗಂಧಪುಷ್ಪಭರೈರಪಿ ॥೧೮॥

ಭೂಷಿತಾ ಭೂಷಣೈಶ್ಚಿತ್ರೈರ್ದೇವ್ಯಾಶ್ಚಾಪಿ ಸಖೀಗಣೈಃ ।
ರಕ್ತಾಸುರಕ್ತನಾಟ್ಯೈಶ್ಚ ಸೇವಾವಸರಶಿಕ್ಷಿತೈಃ ॥೧೯॥

ಚಾಮರೈರ್ವೀಜಯಂತ್ಯನ್ಯಾ ಕಾಚಿಚ್ಛತ್ರವಿಧಾರಿಣೀ ।
ಕಾಚಿತ್ತಾಂಬೂಲಪಾತ್ರಂ ಚ ಕಲ್ಕಾಧಾರಧರಾಪಿ ಚ ॥೨೦॥

---

ಮಾಣಿಕ್ಯ ಇವುಗಳಿಂದ ತುಂಬಿದ್ದಾಗಿ ಧ್ವಜ, ಛತ್ರಿ ಇವುಗಳಿಂದ ಅಲಂಕೃತವಾಗಿದ್ದಿತು. ॥೧೪-೧೫॥

ಅದರಲ್ಲಿ ದಿವ್ಯವಾದ ಸಿಂಹಾಸನವೂ, ರತ್ನ ಮತ್ತು ಪುಷ್ಪಗಳ ಮಾಲೆಯೂ, ಪ್ರಭೆಯಿಂದ ಹೊಳೆಯುತ್ತಿರುವ ರತ್ನದೀಪಗಳೂ, ರತ್ನಮಯವಾದ ಕಲಶಗಳೂ, ಪುಷ್ಪಗಳ ಮತ್ತು ಧೂಪಗಳ ಸುವಾಸನೆಯೂ ತುಂಬಿದ್ದುದರಿಂದ ಅಂತರಿಕ್ಷ ರಥದಂತೆ ನೋಡಲು ಬಹುರಮಣೀಯವಾಗಿದ್ದಿತು. ॥೧೬-೧೭॥

ಇಂತಹ ದಿವ್ಯವಿಮಾನವನ್ನು ಪಾರ್ವತಿಯು ಮೇನಾದೇವಿಯೊಡನೆ ಏರಿ ಕೈಲಾಸವನ್ನು ನೋಡಲು ಪ್ರಯಾಣಮಾಡಿದಳು. ದೇವಿಯು ಸ್ವಯಂ ಸುಂದರಿಯಾಗಿದ್ದರೂ, ದಿವ್ಯಾಭರಣಗಳಿಂದ ಇನ್ನೂ ಅಲಂಕೃತಳಾಗಿರುವಳು. ಜೊತೆಯಲ್ಲಿ ಸೇವಕಿಯರು ಸಮಯವರಿತು ಸೇವಿಸುತ್ತಿರುವರು. ನಾಟ್ಯಾದಿಗಳಿಂದ ಮನಸ್ಸನ್ನು ಆನಂದಗೊಳಿಸುತ್ತಿರುವರು. ಶಿಕ್ಷಿತರಾದ ಆ ಸಖಿಯರಿಂದಲೂ, ಫಲ, ಪುಷ್ಪ, ತಾಂಬೂಲ, ಸುಗಂಧವಸ್ತು ಇವುಗಳಿಂದಲೂ ಕೂಡಿ ದೇವಿಯು ಪ್ರಯಾಣ ಮಾಡಿದಳು ॥೧೮-೧೯॥

ಕೆಲವರು ದೇವಿಗೆ ಚಾಮರ ಬೀಸುವರು. ಒಬ್ಬಳು ಛತ್ರಿಯನ್ನು ಹಿಡಿದಿರುವಳು. ಒಬ್ಬಳು ತಾಂಬೂಲ ಪಾತ್ರೆಯನ್ನೂ, ತಾಂಬೂಲರಾಗವನ್ನೂ ಧರಿಸಿರುವಳು.

ಕಂಕತಾದರ್ಶನಿಕರಾಃ ಫಲಪುಷ್ಪಸ್ರಜೋತ್ಕರಾಃ ।
ಗಂಧಪಾತ್ರಕರಾವಾಸೋ ರತ್ನಭೂಷಣಸತ್ಕರಾಃ ॥೨೧॥

ಭೃಂಗಾರುಪಾನಪಾನೀಯೈಶ್ಶೀತೈರ್ಧೂಪೈಶ್ಚ ದೀಪಕೈಃ ।
ಏವಂ ಸಖೀಗಣೋ ದೇವ್ಯಾ ದೇವೀಂ ಮೇನಾಂ ಚ ಸೇವತೇ ॥೨೨॥

ವೀಣಾವೇಣುಮೃದಂಗಾನಾಂ ರಮ್ಯಧ್ವನಿಕರಾಸ್ತಥಾ ।
ಉಮಾ ಸಂದರ್ಶಯಾಮಾಸ ಮೇನಾಯೈ ತನ್ಮಹೋತ್ಸವಂ ॥೨೩॥

ಪ್ರಥಮಾವರಣಂ ದೇವೀ ಕೈಲಾಸಸ್ಯ ಮಹೇಶಿತುಃ ।
ನಾನಾಪ್ರಾಕಾರಮಣಿಭೀ ರಂಜಿತಂ ದಿವ್ಯಮದ್ಭುತಂ ॥೨೪॥

ತತ್ಪ್ರಾಕಾರಮಣಿಜ್ಯೋತ್ಸ್ನಾ ಚಂದ್ರಾರ್ಕೌ ನೈವ ಭಾಸತಃ ।
ಗೋಪುರಾಣಾಂ ಲಕ್ಷಕೈಶ್ಚ ಸಹಸ್ರತಲಮಂಡಿತೈಃ ॥೨೫॥

---

ಅನೇಕರು ಬಾಚಣಿಗೆ, ಕನ್ನಡಿ, ಹೂವು, ಹಣ್ಣು, ಗಂಧದಬಟ್ಟಲು, ರತ್ನಾಭರಣಗಳು ಇವುಗಳನ್ನು ಧರಿಸಿ ದೇವಿಯ ಸುತ್ತಲೂ ನಿಂತಿದ್ದರು. ॥೨೦-೨೧॥

ಅಲ್ಲದೆ, ಶೀತಲವಾದ ಪಾನೀಯಗಳನ್ನು ತುಂಬಿದ ಹೂಜಿಗಳನ್ನು ಕೆಲವರೂ, ಧೂಪಾದಿಗಳನ್ನು ಕೆಲವರೂ ಹಿಡಿದು ದೇವಿಯನ್ನು ಸೇವಿಸುತ್ತಿದ್ದರು. ಇಂತಹ ಸಖಿಯರೊಡನೆ ಕೂಡಿ ತಾಯಿಮಕ್ಕಳಿಬ್ಬರೂ ವೀಣಾ, ಕೊಳಲು, ಮೃದಂಗ ಮುಂತಾದ ವಾದ್ಯಧ್ವನಿಗಳಿಂದ ಹೊರಡುವ ಇಂಚರವನ್ನು ಕೇಳುತ್ತಾ ಪ್ರಯಾಣಮಾಡುತ್ತಿರುವಾಗ, ಗೌರಿಯು ಮೇನಾದೇವಿಗೆ ಕೈಲಾಸಪರ್ವತದ ಸೊಬಗನ್ನು ತೋರಿಸಲಾರಂಭಿಸಿದಳು. ॥೨೨-೨೩॥

ದೇವಿಯು ಪ್ರಯಾಣಮಾಡುತ್ತಾ ಕೈಲಾಸದ ಪ್ರಥಮಾವರಣಭೂತವಾದ ಒಂದು ಒಳಸುತ್ತನ್ನು ತೋರಿಸಿದಳು. ಅದು ನಾನಾವಿಧವಾದ ಪ್ರಾಕಾರಗಳಿಂದಲೂ, ಸೂರ್ಯಚಂದ್ರರನ್ನೇ ತೇಜಸ್ಸಿನಿಂದ ಮಂಕುಮಾಡುವ ದಿವ್ಯರತ್ನಗಳ ಕಾಂತಿಯಿಂದಲೂ, ಲಕ್ಷಸಂಖ್ಯೆಯ ಗೋಪುರಗಳಿಂದಲೂ, ಸಹಸ್ರಾರು ಅಂಗಳಗಳಿಂದಲೂ ಶೋಭಿಸುವುದಾಗಿದ್ದಿತು. ॥೨೪-೨೫॥

ರಮ್ಯೈರುದ್ರಾವಳೀಕ್ಲೃಪ್ತೈರ್ಮಹಾವೃಷಭಸೇವಿತೈಃ ।
ಪಶ್ಯ ಮೇನೇದ್ಯ ಪರಿತಃ ಕಲ್ಪಿತಾ ಏವ ಸಾಗರಾಃ ॥೨೬॥

ಕೈಲಾಸಸ್ಯ ಮಹಾಮೇರುರ್ವೃಷಸ್ತಂಭ ಇವ ಸ್ಥಿತಃ ।
ಸಾಗರಾಃ ಪರಿಖಾಕಾರಾಃ ಪ್ರಾಕಾರಸ್ಯಾಸ್ಯ ಶೋಭಿತಾಃ ॥೨೭॥

ಲಕ್ಷಸ್ತಂಭೈರ್ಮಣೀಕ್ಲೃಪ್ತೈರ್ಮಂಟಪೋಽಯಂ ಸುಲೋಚನೇ ।
ತನ್ಮಧ್ಯಸರಸೀರಾಜತ್ಕಲಹಂಸೈಸ್ಸುಪದ್ಮಕೈಃ ॥೨೮॥

ಕುರುವಿಂದಮಣೀಜಾಲಸೋಪಾನಪ್ರಾಂತಭಾಸುರಂ ।
ಗಂಧಮೋದಿತಮಂದಾರತರವಃ ಪರಿತಸ್ಸ್ಥಿತಾಃ ॥೨೯॥

ಪರಿತೋ ವನಮಧ್ಯಸ್ಥಂ ಮಂಟಪಂ ಪಶ್ಯ ರತ್ನಜಂ ।
ನಿಯುತಸ್ತಂಭಸಂಕ್ಲೃಪ್ತಂ ಪಶ್ಯ ಬಿಲ್ವವನಂ ಮಹತ್ ॥೩೦॥

---

ಕೈಲಾಸಶಿಖರದ ಭಾಗಗಳಲ್ಲೆಲ್ಲಾ ಈಶ್ವರ ಮತ್ತು ವೃಷಭವಿಗ್ರಹಗಳು ಸಾಲುಸಾಲಾಗಿದ್ದುವು. ಇವುಗಳನ್ನೆಲ್ಲಾ ಗೌರಿಯು ಮೇನಾದೇವಿಗೆ ತೋರಿಸುತ್ತಾ ಹೀಗೆಂದಳು. ಮೇನಾದೇವಿಯೇ, ಈ ಕೈಲಾಸದ ಸುತ್ತಲೂ ಸಾಗರಗಳಿವೆ. ಮಹಾ ಮೇರುವೇ ಈ ಕೈಲಾಸಕ್ಕೆ ಮುಂದಿನ ವೃಷಸ್ತಂಭದಂತೆಯೂ, ಪರ್ವತಗಳೇ ಪ್ರಾಕಾರಗಳಂತೆಯೂ, ಸಪ್ತಸಾಗರಗಳೇ ಕಂದಕಗಳಂತೆಯೂ ಪರಮೇಶ್ವರನಿಂದ ಕಲ್ಪಿತವಾಗಿವೆ. ॥೨೬-೨೭॥

ಎಲೌ ಜನನಿಯೇ, ಇಲ್ಲಿ ಒಂದು ದಿವ್ಯಮಂಟಪವಿರುವುದು. ಅದರ ಮಧ್ಯದಲ್ಲಿ ಕಲಹಂಸಗಳಿಂದಲೂ ಕಮಲಗಳಿಂದಲೂ, ರತ್ನಮಯವಾದ ಸೋಪಾನ ಗಳಿಂದಲೂ ಅತ್ಯಂತ ರಮಣೀಯವಾಗಿರುವ ದಿವ್ಯಸರೋವರವೊಂದಿರುವುದು. ಆ ಸರೋವರದ ಸುತ್ತಲೂ ಸುಗಂಧದಿಂದ ಶೋಭಿತವಾಗಿರುವ ಮಂದಾರವೃಕ್ಷಗಳು ಸುಂದರವಾಗಿ ಕಾಣುತ್ತಿರುವುವು. ॥೨೮-೨೯॥

ಈ ಮಂಟಪದ ಸುತ್ತಲೂ ದಿವ್ಯವಾದ ವನವಿರುವುದು. ಈ ಮಂಟಪ ವಾದರೋ ಹತ್ತುಸಾವಿರ ರತ್ನಮಯವಾದ ಕಂಬಗಳಿಂದ ಕೂಡಿರುವುದು. ಅಲ್ಲಿಯೇ ಬಿಲ್ವವೃಕ್ಷಗಳ ವನವೊಂದಿರುವುದು. ಅದು ಕೆಂಪಾದ ಚಿಗುರುಗಳಿಂದಲೂ, ಮೂಲಸ್ಥ

ಅರುಣೈಃ ಪಲ್ಲವೈರ್ಯುಕ್ತಂ ಮೂಲಲಿಂಗೋಪಶೋಭಿತಂ ।
ತನ್ಮಧ್ಯೇ ಮಂಟಪೋ ಭಾತಿ ಸಹಸ್ರಸ್ತಂಭಮಂಡಿತಃ ॥೩೧॥

ಮಹಾಮರಕತೈಃ ಕ್ಲುಪ್ತಸ್ತಸ್ಮಿಲ್ಲಿಂಗಕುಲಂ ಮಹತ್ ।
ಸಹಸ್ರಮಿದಮುತ್ಕೃಷ್ಟಂ ಶಿವಪ್ರೇಮರಸಾಸ್ಪದಂ ॥೩೨॥

ಪಶ್ಯೈತದ್ಬಿಲ್ವಮಂದಾರಪಂಕಜಾಂಕಿತಮಸ್ತಕಂ ।
ಉದ್ಯತ್ತ್ರಿಪುಂಡ್ರವಿಲಸತ್ಫಾಲಭಾಗಮನೋಹರಂ ॥೩೩॥

ಭುಜಂಗಭೋಗಕಲಿತಂ ಕಂಠಮೌಲೌ ಫಣಾಯುತಂ ।
ಮಣಿದೀಪಮಹಾಕಾಂತಿರಂಜಿತಂ ಧೂಪಿತಂ ಸದಾ ॥೩೪॥

ರತ್ನಪುಷ್ಕರಿಣೀತೋಯೈರಭಿಷಿಕ್ತಂ ವಿಲೋಕಯ ।
ದರ್ಶನಾದೇನಸಾಂ ನಾಶೋ ಭವಿಷ್ಯತಿ ನ ಸಂಶಯಃ ॥೩೫॥

---

ವಾದ ಶಿವಲಿಂಗಗಳಿಂದಲೂ ಕೂಡಿ ಮನೋಹರವಾಗಿ ಕಾಣುತ್ತಿರುವುದು. ಆದರ ಮಧ್ಯಭಾಗದಲ್ಲಿ ಸಹಸ್ರಸ್ತಂಭವಿರಾಜಿತವಾದ ಮತ್ತೊಂದು ಮಂಟಪವಿರುವುದು. ||೩೦-೩೧||

ಅದು ಸಂಪೂರ್ಣವಾಗಿ ಪಚ್ಚೆಯಿಂದ ನಿರ್ಮಿತವಾದುದು. ಅದರಲ್ಲಿ ಸಹಸ್ರ ಶಿವಲಿಂಗಗಳ ಸಮೂಹವಿರುವುದು. ಇದರ ಮೇಲೆ ಪರಮೇಶ್ವರನಿಗೆ ಬಹಳ ಅಭಿಮಾನವಿರುವುದು. ಈ ಶಿವಲಿಂಗಗಳ ಮೇಲೆಲ್ಲಾ ಬಿಲ್ವಪತ್ರೆಗಳು, ಕಮಲ, ಮಂದಾರ ಮುಂತಾದ ಪುಷ್ಪಗಳು ಅಲಂಕೃತವಾಗಿವೆ. ಶಿವಲಿಂಗಗಳ ಹಣೆಯಲ್ಲಿ ತ್ರಿಪುಂಡ್ರವೂ ನಾಗಾಭರಣವೂ ಕಂಠದಲ್ಲಿ ಸರ್ಪದ ಹೆಡೆಯೂ ಪ್ರಕಾಶಿಸುತ್ತಿರುವುವು. ||೩೨-೩೩||

ಶಿವಲಿಂಗದ ಮೇಲೆಲ್ಲಾ ಸರ್ಪಗಳು ಸುತ್ತಿಕೊಂಡಿವೆ. ಕಂಠಭಾಗದಲ್ಲಿ ಹೆಡೆಯಿರುವುದು. ರತ್ನದೀಪಗಳು ಯಾವಾಗಲೂ ಉರಿಯುತ್ತಿರುವುವು. ಧೂಪದ ಘಮಘಮವು ಸರ್ವವ್ಯಾಪಿಯಾಗಿರುವುದು. ಶಿವಲಿಂಗಗಳು, ರತ್ನಪುಷ್ಕರಿಣಿಯ ನಿರ್ಮಲೋದಕದಿಂದ ಅಭಿಷಿಕ್ತಗಳಾಗಿರುವುವು. ಇಂತಹ ಶಿವಲಿಂಗಗಳ ದರ್ಶನದಿಂದ ಭಕ್ತರ ಸಕಲ ಪಾಪಗಳೂ ನಾಶವಾಗುವುವೆಂಬುದರಲ್ಲಿ ಸಂಶಯವೇ ಇಲ್ಲ. ||೩೪-೩೫||

ಸುರಮ್ಯಕೇತಕವನಂ ಪಶ್ಯೋನ್ನಿದ್ರೋರುಕೈತಕಂ ।
ವಾಯುರಾಯಾಸಬಹುಲಾನ್ ಸುಖಯತ್ಯೇವ ತದ್ಗತಃ ॥೩೬॥

ಮಂದಾರಸುಂದರವನಂ ಫುಲ್ಲಪುಷ್ಪೋತ್ಥಧೂಲಿಭಿಃ ।
ಸುಗಂಧಮೇದುರೋಽತ್ಯಂತಂ ಮಂದಘ್ರಾಣೈಕತರ್ಪಕಃ ॥೩೭॥

ನಂದಿಕೇಶಾಲಯಂ ಪಶ್ಯ ಗಣಲಕ್ಷೈಃ ಪರೀವೃತಂ ।
ನವರತ್ನಚಿತಾನೇಕರತ್ನಪ್ರಾಕಾರಗೋಪುರಂ ॥೩೮॥

ನಂದೀಶ್ವರಂ ಸದಾ ನಂದೀ ಪೂಜಯತ್ಯತಿಭಕ್ತಿತಃ ।
ತಲ್ಲಿಂಗಾಗಾರಮೇತದ್ವೈ ಮಣಿಕಲಶಸುಂದರಂ ॥೩೯॥

ಪ್ರಾಕಾರಂ ದಕ್ಷಿಣಂ ಪಶ್ಯ ನೀಲಕಲ್ಪಿತಮುನ್ನತಂ ।
ಗೋಪುರಾರ್ಬುದಸಂಯುಕ್ತಂ ಮಣಿಕುಂಭವಿರಾಜಿತಂ ॥೪೦॥

---

ಇಲ್ಲಿಯೇ ಮನೋಹರವಾದ ತಾಳೇ ಮರದ ವನವಿರುವುದು. ಅದರ ಹೂವುಗಳೆಲ್ಲವೂ ಅರಳಿ ಘಮಘಮಿಸುತ್ತಿರುವುವು. ಅವುಗಳಮೇಲೆ ಬೀಸಿದ ಸುಗಂಧ ಯುತವಾದ ವಾಯುವು, ಆಯಾಸದಿಂದ ಬಳಲಿದ ಪಥಿಕರ ಶ್ರಮವನ್ನೆಲ್ಲಾ ಪರಿಹರಿಸುವುದು. ಅಲ್ಲದೆ, ಮಂದಾರವನದಮೇಲೆ ಬೀಸುವ ವಾಯುವಂತೂ ಮಂದಾರ ಪುಷ್ಪಗಳ ಮಕರಂದ ಭರಿತವಾಗಿ, ಆಘ್ರಾಣಿಸುವವರಿಗೆ ಅತ್ಯಂತ ಹರ್ಷವನ್ನುಂಟು ಮಾಡತಕ್ಕದ್ದಾಗಿರುವುದು. ॥೩೬-೩೭॥

ಜನನಿಯೇ, ಅನೇಕ ಲಕ್ಷ ಗಣಗಳಿಂದ ಪರಿವೃತವಾಗಿ, ನವರತ್ನಗಳಿಂದ ಹೊಳೆಯುವ ಪ್ರಾಕಾರಗಳಿಂದಲೂ, ಗೋಪುರದಿಂದಲೂ ಶೋಭಿಸುವ ನಂದಿಕೇಶ್ವರನ ದೇವಾಲಯವನ್ನು ನೋಡು. ಅಲ್ಲಿ ನಂದಿಯು ಪರಮೇಶ್ವರನನ್ನು ಸರ್ವದಾ ಪೂಜಿಸುವುದಕ್ಕಾಗಿ ರತ್ನಕಲಶಗಳಿಂದ ಪ್ರಕಾಶಿಸುವ ನಂದಿಕೇಶಾಲಯವೆಂಬ ಶಿವಲಿಂಗಾಲಯವನ್ನು ನಿರ್ಮಿಸಿಕೊಂಡಿರುವನು. ॥೩೮-೩೯॥

ಆ ಶಿವಾಲಯಕ್ಕೆ ಬಲಭಾಗದಲ್ಲಿರುವ ಪ್ರಾಕಾರವು ನೀಲಮಣಿಗಳಿಂದ ರಚಿತವಾದುದು. ಅರ್ಬುದಸಂಖ್ಯೆಯಲ್ಲಿ ಅದಕ್ಕೆ ಗೋಪುರಗಳೂ, ರತ್ನಕಲಶಗಳೂ ಇರುವುವು. ಹಾಗೆಯೇ ಅಲ್ಲಿ ನೋಡು. ಚಂಡೀಶಾಲಯವು ಪ್ರಕಾಶಮಾನವಾದ

ರಾಜದ್ಗೋಪುರಗೋದ್ಭಾಸಿರುದ್ರಚಾರಿತ್ರಸದ್ವೃಷಂ ।
ಪಶ್ಯ ಚಂಡೀಶನಿಲಯಂ ನಾನಾರತ್ನವಿಚಿತ್ರಿತಂ ॥೪೧॥

ತತ್ರ ಚಂಡೀಶನಿಲಯೇ ಲಿಂಗಂ ಚಂಡೇನ ಪೂಜಿತಂ ।
ಪ್ರಾಗ್ದಕ್ಷಿಣೇ ಚ ಲಿಂಗಾನಾಂ ಕೋಟೀನಾಮಾಲಯಂ ಶುಭಂ ॥೪೨॥

ರತ್ನಗರ್ಭಗೃಹೋದ್ಭಾಸಿಮಣಿಕುಂಭೋಜ್ಜ್ವಲತ್ಪ್ರಭಂ ।
ಪಶ್ಚಾತ್ಪ್ರಾಕಾರನಿಲಯಗೋಪುರಾವಲಿಭೂಷಿತಂ ॥೪೩॥

ರಾಜತ್ಪ್ರಾಕಾರವೃಷಭೈರ್ಮೌಲಿಮಾಣಿಕ್ಯಕುಂಭಕೈಃ ।
ಪಶ್ಯ ಮೋನೇ ಭೃಂಗಿಕಸ್ಯ ಸದನಂ ಮಣಿಕಲ್ಪಿತಂ ॥೪೪॥

ಭೃಂಗೀಶಸ್ಯಾಲಯಂ ಪಶ್ಯ ವರಿವಸ್ಯಾಪರೋ ಗಣಃ ।
ಭೃಂಗೀಶ್ವರಸ್ಯ ನಿಲಯಮತ್ರ ಪಶ್ಯ ಶಿವಾಲಯಂ ॥೪೫॥

---

ಗೋಪುರಗಳಿಂದಲೂ, ರುದ್ರಚರಿತ್ರೆಯನ್ನು ಸೂಚಿಸುವ ವಿಗ್ರಹಗಳಿಂದಲೂ, ವೃಷಭ ಮೂರ್ತಿಗಳಿಂದಲೂ, ಅಮೂಲ್ಯವಾದ ರತ್ನಗಳ ಕಾಂತಿಯಿಂದಲೂ ವಿರಾಜಮಾನ ವಾಗಿರುವುದು. ॥೪೦-೪೧॥

ಆ ಚಂಡೀಶಾಲಯದಲ್ಲಿ ಚಂಡನು ಶಂಕರಲಿಂಗವನ್ನು ಸರ್ವದಾ ಪೂಜಿಸುತ್ತಿರುವನು. ಅದರ ಆಗ್ನೇಯಭಾಗದಲ್ಲಿ ಕೋಟಿಲಿಂಗಗಳಿರುವ ಭವ್ಯದೇವಾಲಯ ವಿರುವುದು. ಅದು ರತ್ನಮಯವಾದ ಗರ್ಭಗೃಹಗಳಿಂದಲೂ, ರತ್ನಕಲಶಗಳಿಂದಲೂ ಕೂಡಿ ವಿರಾಜಿಸುತ್ತಿರುವುದು. ಇನ್ನು ಪಶ್ಚಿಮಭಾಗವನ್ನು ನೋಡು. ಅಲ್ಲಿ ಅನೇಕ ಪ್ರಾಕಾರಗಳಿಂದಲೂ, ಗೋಪುರಗಳಿಂದಲೂ ರಂಜಿಸುವ ಭೃಂಗೀಶ್ವರಾಲಯವಿರುವುದು. ॥೪೨-೪೩॥

ಅದರಲ್ಲಿಯೂ ಪ್ರಾಕಾರಗಳೂ, ವೃಷಭವಿಗ್ರಹಗಳೂ, ಮಾಣಿಕ್ಯಮಯವಾದ ಕಲಶಗಳೂ ರಂಜಿಸುತ್ತಿರುವುವು. ಅಲ್ಲಿ ಸಾಕ್ಷಾತ್ ಭೃಂಗಿಯು ಪೂಜಾನಿರತರಾದ ಗಣಗಳೊಡನೆ ಕೂಡಿ ಶಂಕರನನ್ನು ಪೂಜಿಸುತ್ತಿರುವನು. ॥೪೪-೪೫॥

ನಿಯುತಂ ಮಣಿಲಿಂಗಾನಾಂ ಗರ್ಭಧಾಮೋರುಶೇಖರಂ ।
ರಮ್ಯಪ್ರಾಸಾದಮೌಲಿಸ್ಥಕ್ರೀಡಾಮಣಿಸರೋಜ್ಜ್ವಲಂ ॥೪೬॥

ಗೋಪುರಾಗ್ರಮಹಾಕುಂಭಧಾರಾತತಿವಿರಾಜಿತೈಃ ।
ರಮ್ಯಂ ಪುಷ್ಪವನಂ ಪಶ್ಯ ನೇಕೇ ಪಾದಪಮೌಲಿಗೈಃ ॥೪೭॥

ಪುಷ್ಪಗುಚ್ಛಪರಾಗೋತ್ಥಧೂಲೀಗಂಧಾಯಿತೋಽದ್ರಿರಾಟ್ ।
ಪಶ್ಯೋತ್ತರಂ ಹಿ ಪ್ರಾಕಾರಂ ನವರತ್ನವಿರಾಜಿತಂ ॥೪೮॥

ಗೋಪುರೋದ್ಯನ್ಮೌಲಿಕುಂಭವೃಷರುದ್ರಚರಿತ್ರಕೈಃ ।
ಶೋಭಿತೈಃ ಪರಮೋದಾರತಲಾನಾಂ ಗಣನಾಪಿ ನ ॥೪೯॥

ಶಿವಾಲಯಾನಾಂ ಗಣನಾಂ ಗಣಿತಂ ನೇಹ ಜಾತುಚಿತ್ ।
ರತ್ನಕುಂಭೋಜ್ಜ್ವಲಕುಲಂ ಲಿಂಗಧಾಮೋರುವೃಂದಕಂ ॥೫೦॥

---

ಅದರ ಪಕ್ಕದಲ್ಲಿಯೇ ಹತ್ತುಸಾವಿರ ಶಿವಲಿಂಗಗಳಿಂದ ಪವಿತ್ರವಾದ ಗರ್ಭಗೃಹವೂ, ಅದರ ಸುತ್ತಲೂ ರಮ್ಯವಾದ ಪ್ರಾಸಾದಗಳೂ, ಮಣಿಖಚಿತವಾದ ಸರೋವರಗಳೂ ರಂಜಿಸುತ್ತಿರುವುವು. ಆ ಗೋಪುರಗಳ ಅಗ್ರಭಾಗದಲ್ಲಿರುವ ರತ್ನ ಕಲಶಗಳ ಪ್ರಭೆಯು ಸರ್ವವ್ಯಾಪಿಯಾಗಿರುವುದು. ಹಾಗೆಯೇ ಇಲ್ಲಿ ಅನೇಕ ಪುಷ್ಪಭರಿತವಾದ ವೃಕ್ಷಸಮೂಹಗಳಿಂದ ಪರಿಪೂರ್ಣವಾದ ಪುಷ್ಪವನವನ್ನು ನೋಡು. ||೪೬-೪೭||

ಈ ಪುಷ್ಪವನದಿಂದ ಹೊರಟ ಪರಾಗವು ಈ ಪರ್ವತವನ್ನೆಲ್ಲಾ ವ್ಯಾಪಿಸಿ ಸುಗಂಧಮಯವನ್ನಾಗಿ ಮಾಡಿದೆ. ಹಾಗೆಯೇ ಉತ್ತರ ದಿಕ್ಕನ್ನು ನೋಡು. ಅಲ್ಲಿ ಎತ್ತರವಾದ ಗೋಪುರಗಳಿಂದಲೂ, ರತ್ನಕಲಶಗಳಿಂದಲೂ, ರುದ್ರಾವತಾರದ ಬೊಂಬೆಗಳಿಂದಲೂ ಪ್ರಕಾಶಮಾನಗಳಾದ ಶಿವದೇವಾಲಯಗಳಿರುವುವು. ಅವುಗಳನ್ನು ಎಣಿಸುವುದೇ ಎಲ್ಲರಿಗೂ ದುಸ್ತರವಾಗಿದೆ. ಅದರಲ್ಲಿ ಪ್ರತಿ ದೇವಾಲಯಗಳಲ್ಲಿಯೂ ರತ್ನಕಲಶಗಳಿಂದ ಅಲಂಕೃತವಾದ ಗರ್ಭಗೃಹಗಳೂ, ಅದರ ಮಧ್ಯಭಾಗದಲ್ಲೆಲ್ಲಾ ಶಿವಲಿಂಗಗಳೂ ಬಹು ಮನೋಹರವಾಗಿ ಕಂಡುಬರುತ್ತಿರುವುವು. ||೪೮-೪೯-೫೦||

ಪಶ್ಯೇಕ್ಷಣೇನ ಮೇನೇದ್ಯ ಮುಕ್ತಪಾಪಾ ಭವಿಷ್ಯಸಿ ।
ಸುರತ್ನಪದ್ಮಿನೀ ಚೇಯಂ ಪಶ್ಯ ಚಂಪಕವಾಟಿಕಾಂ ।
ರತ್ನಚಂಪಕಪುಷ್ಪೌಘೈ ರತ್ನಫುಲ್ಲೈಶ್ಚ ಪಂಕಜೈಃ ॥೫೧॥

॥ ಸ್ಕಂದ ಉವಾಚ ॥

ಇತ್ಯುಕ್ತ್ವಾ ಸಾ ಜಗನ್ಮಾತಾ ಮೇನಯಾ ಚಾವತೀರ್ಯ ಚ ।
ವಿಮಾನಶಿಖರಾದ್ದೇವೀ ಮೇನಯಾ ಚಾವತೀರ್ಯ ಚ ॥೫೨॥

ನಾನಾವೃಕ್ಷಶತೋಪೇತಾಂ ರತ್ನಪುಷ್ಪವಿಚಿತ್ರಿತಾಂ ।
ತನ್ಮಧ್ಯಮಣಿಧಾರಾಢ್ಯಮಂಟಪೇ ಸಂಸ್ಥಿತಾಂಬಿಕಾ ॥೫೩॥

ಮೇನಯಾ ಚ ಸಖೀಭಿಶ್ಚ ಕೃತ್ವಾ ಪುಷ್ಪಾವಸೇಚನಂ ।
ರಾಶೀಚಕ್ರೇ ಪುಷ್ಪಜಾಲಂ ಮಣಿಪುಷ್ಪೈಸ್ಸುಗಂಧಿತೈಃ ॥೫೪॥

ಸಾ ರತ್ನಮಂಟಪಗತಾ ಶಶಿಧಾಮಮೌಲಿ ।
ಲಿಂಗಾರ್ಚನಾಯ ಸ್ವಸಖೀನಿಚಿತೈಶ್ಚ ಪುಷ್ಪೈಃ ।

---

ಮೇನಾದೇವಿಯೇ, ಇಲ್ಲಿ ಚಂಪಕವನವಿರುವುದು. ಅದರಲ್ಲಿ ರತ್ನಮಯವಾದ ಸಂಪಿಗೆಹೂವುಗಳಿಂದಲೂ, ಅರಳಿದ ಕಮಲಗಳಿಂದಲೂ ಸುಂದರವಾಗಿ ಕಾಣುವ ಸುರತ್ನಪದ್ಮಿನೀ ಎಂಬ ಕೊಳವಿರುವುದು. ಇದನ್ನು ನೋಡು. ಸಮಸ್ತ ಪಾಪಗಳೂ ನಿವೃತ್ತಿಯಾಗುವುವು. ॥೫೧॥

ಎಂದು ಜಗನ್ಮಾತೆಯಾದ ಪಾರ್ವತಿಯು ಮೇನಾದೇವಿಯೊಡನೆ ವಿಮಾನದಿಂದ ಇಳಿದವಳಾಗಿ, ಅನೇಕ ವೃಕ್ಷರಾಜಿಗಳಿಂದಲೂ, ರತ್ನಪುಷ್ಪಗಳಿಂದಲೂ ಪರಿವೃತವಾಗಿರುವ ಚಂಪಕವನದ ಮಧ್ಯದಲ್ಲಿ ಮಣಿಧಾರೆಗಳಿಂದ ಅಲಂಕೃತವಾದ ದಿವ್ಯ ಪೀಠವಲ್ಲಿ ಮಂಡಿಸಿದಳು. ಅಲ್ಲಿ ಇತರ ಸಖಿಯರು ಎಲ್ಲಾ ವಿಧವಾದ ಸುಗಂಧ ಪುಷ್ಪಗಳನ್ನೂ ರತ್ನದ ಹೂವುಗಳನ್ನೂ, ತಂದು ರಾಶಿ ಹಾಕಿ, ತಾಯಿಮಕ್ಕಳಿಗೆ ಪುಷ್ಪಾವರಣವನ್ನು ಕಲ್ಪಿಸಿದರು. ॥೫೨-೫೩-೫೪॥

ಆ ರತ್ನಮಂಟಪದಲ್ಲಿ ಕುಳಿತ ದೇವಿಯು ತಾಯಿಯೊಡನೆ ಈಶ್ವರ ಲಿಂಗಾರ್ಚನೆ ಮಾಡಲು ಸಿದ್ಧಳಾದಳು. ಇದನ್ನರಿತ ಸಖಿಯರು ಪುಷ್ಪಗಳನ್ನು

ಸಾ ಮೇನಯಾಪ್ಯವತತಾರ ಸುಪದ್ಮಿನೀಂ ತಾಂ ।
ಸ್ನಾತುಂ ಸಖೀಜನವರ್ಯೈಸ್ಸರಸಾನುಲಾಪ್ಯೈಃ ॥೫೫॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ದೇವೀವಿಹಾರೋ ನಾಮ ವಿಂಶೋಽಧ್ಯಾಯಃ

---

ದೇವಾರ್ಚನೆಗೆ ಸಿದ್ಧಮಾಡಿದರು. ಒಡನೆಯೇ ಸಖಿಯರೊಡನೆ ಸಲ್ಲಾಪಗೈಯ್ಯುತ್ತಾ ಪಾರ್ವತಿಯು ಮೇನಾದೇವಿಯಿಂದ ಕೂಡಿದವಳಾಗಿ ಪದ್ಮಿನೀನಾಮಕವಾದ ಕೊಳದಲ್ಲಿ ಸ್ನಾನಕ್ಕಾಗಿ ಇಳಿದಳು. ॥೫೫॥

ಇಲ್ಲಿಗೆ ಶ್ರೀಶಿವರಹಸ್ಯದ ಭವನಾಮಕವಾದ ಎರಡನೆಯ ಅಂಶದಲ್ಲಿ
ದೇವೀವಿಹಾರವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಏಕವಿಂಶೋಽಧ್ಯಾಯಃ

### ದೇವೀವಿಹಾರವರ್ಣನಂ

॥ ಸ್ಕಂದ ಉವಾಚ ॥

ರತ್ನಪುಷ್ಕರಣೀಮಧ್ಯೇ ಸಖೀಭಿಸ್ಸಹಿತಾ ಶಿವಾ ।
ಮೇನಯಾ ಚ ಜಲಕ್ರೀಡಾಂ ಕೃತ್ವಾ ಚ ಕರಸೇಚನೈಃ ॥೧॥

ಅನ್ಯೋನ್ಯಂ ಸ್ತನಕುಂಭೇಷು ಕಪೋಲಜಘನೇಷು ಚ ।
ಧಾರಾಯಂತ್ರೈಶ್ಚ ಸಿಷಿಚುಸ್ಸ್ವಸಪಂಕಜಕುಟ್ಮಲಾನ್ ॥೨॥

ಉತ್ಫುಲ್ಲಪುಂಡರೀಕಾಂಶ್ಚ ಸಮಾಜಹ್ರುಸ್ಸಖೀಗಣೈಃ ।
ನೀಲೋತ್ಪಲಕುಲಂ ಚಾಪಿ ಕುಮುದಂ ಹಲ್ಲಕಂ ತಥಾ ॥೩॥

---

ಶ್ರೀಶಿವರಹಸ್ಯದ ದ್ವಿತೀಯಾಂಶದಲ್ಲಿ ಇಪ್ಪತ್ತೊಂದನೆಯ ಅಧ್ಯಾಯ

ಅನಂತರ ಪಾರ್ವತಿಯು ಆ ರತ್ನಪುಷ್ಕರಿಣೀಕ್ಷೇತ್ರದಲ್ಲಿ ಸಖಿಯರೊಡನೆಯೂ ತಾಯಿಯಾದ ಮೇನಾದೇವಿಯೊಡನೆಯೂ ಜಲಕ್ರೀಡೆಯಾಟಕ್ಕೆಂದು ಇಳಿದಳು.॥೧॥

ಜಲಕ್ರೀಡೆಯಲ್ಲಿ ಭಾಗವಹಿಸಿದ ಆ ಸ್ತ್ರೀಯರೆಲ್ಲರೂ ಬೊಗಸೆಯಿಂದ ನೀರನ್ನು ತುಂಬಿಕೊಂಡು, ಪರಸ್ಪರವಾಗಿ ಸ್ತನಕುಂಭಗಳ ಮೇಲೆಯೂ, ಕಪೋಲ ಪ್ರದೇಶದಲ್ಲಿಯೂ, ಜಘನಪ್ರದೇಶದಲ್ಲಿಯೂ ಎರಚಾಡುತ್ತಿದ್ದರು. ಧಾರಾಯಂತ್ರವನ್ನು ಹಿಡಿದು ನೀರನ್ನು ಒಬ್ಬೊಬ್ಬರಮೇಲೂ ಎರಚಲಾರಂಭಿಸಿದರು. ಮತ್ತು ಅರಳಿದ ಕಮಲಗಳನ್ನೂ, ನೀಲೋತ್ಪಲಗಳನ್ನೂ, ಕುಮುದ, ಕಲ್ಹಾರ ಮುಂತಾದ ಪುಷ್ಪವಿಶೇಷಗಳನ್ನೂ ಕಿತ್ತು ಎಸೆದಾಡುತ್ತಿದ್ದರು. ॥೨-೩॥

ತತ್ತೀರಂ ತಾಸ್ಸಮಾರುಹ್ಯ ಚಿರಂ ಕ್ರೀಡ್ಯ ಸರೋವರೇ ।
ದುಕೂಲಕೂಲಂ ತಾಸ್ಸರ್ವಾಃ ಪರಿದಧ್ಯುಸ್ಸಖೀಗಣೈಃ ॥೪॥

ಮೇನಯಾನುಗತಾ ದೇವೀ ಮೇನಾ ಮೇಸಾಮುಭೂಷಯುತ್ ।
ಧಮ್ಮಿಲ್ಲಮಲ್ಲೀಸರಕೈಃ ಕಂಕತೈಸ್ಸ್ವಯಮಂಬಿಕಾ ॥೫॥

ಅಲಕಾಲಂಬಿತಕಚಂ ಸಮಾಚಕ್ರೇ ಸ್ವಮಾತರಿ ।
ರೋಚನಾಂಜನಸಿಂದೂರೈರ್ನೇತ್ರಫಾಲೇ ಚಕಾರ ಸಾ ॥೬॥

ತಿಲಕಂ ತನ್ಮುಖೇ ದೇವೀ ಸ್ವಯಮಾನಂದದರ್ಶಿನೀ ।
ತತ್ಪದಾಂಬುಜಯೋರ್ದೇವೀ ಸರಸಾಲಕ್ತಪಂಕ್ತಿತಃ ॥೭॥

ಸ್ವಯಂ ಚಕ್ರೇ ಮಹಾದೇವೀ ಸಖ್ಯಶ್ಚಕ್ರುಶ್ಶಿವಾಂ ಪ್ರತಿ ।
ಅಭೂಷಯತ್ತದಂಗಾನಿ ರತ್ನಭೂಷಾದಿಭಿಶ್ಶಿವಾ ॥೮॥

ಅಧೂಪಯತ್ಕಚಭರಂ ಮೇನಾಯಾಸ್ಸ್ವಯಮದ್ರಿಜಾ ।
ಸಾಂಗರಾಗಂ ಗಂಧವರ್ಯೈಃ ಪಟವಾಸೈಸ್ತದಾಂಬಿಕಾ ॥೯॥

---

ಹಾಗೆ ಬಹಳಹೊತ್ತು ಸರೋವರದಲ್ಲಿ ಜಲಕ್ರೀಡೆಯಾಡುತ್ತಾ ಅನಂತರ ತೀರಕ್ಕೆ ಬಂದರು. ಅಲ್ಲಿ ಎಲ್ಲರೂ ದಿವ್ಯಪೀತಾಂಬರಗಳನ್ನು ಧರಿಸಿದರು. ದೇವಿಯಾದರೋ ತಾನೇ ಮೇನಾದೇವಿಗೆ ಸಕಲ ಭೂಷಣಸಾಮಗ್ರಿಗಳನ್ನೆಲ್ಲಾ ಒದಗಿಸಿದಳು. ಮುಡಿಯುವುದಕ್ಕೆ ಮಲ್ಲಿಗೇಹೂವಿನ ಸರವನ್ನೂ, ಬಾಚಿಕೊಳ್ಳಲು ಶುಭ್ರವಾದ ಬಾಚಣಿಕೆಯನ್ನೂ ಕೊಟ್ಟಳು. ॥೪-೫॥

ಮೇನಾದೇವಿಯ ಮುಂಗುರುಳುಗಳನ್ನು ತಾನೇ ಸರಿಮಾಡಿದಳು. ಕಣ್ಣುಗಳಿಗೆ ಕಾಡಿಗೆಯನ್ನೂ, ಹಣೆಗೆ ಕುಂಕುಮವನ್ನೂ ಇಟ್ಟಳು. ಮುಖಕ್ಕೆ ತಾನೇ ಸುಂದರವಾಗಿರುವಂತೆ ತಿಲಕವನ್ನಿಟ್ಟಳು. ಕಾಲುಗುರುಗಳಿಗೆ ರಸವತ್ತಾದ ಅರಗಿನ ರಸವನ್ನು ಬಳಿದಳು. ॥೬-೭॥

ಈ ರೀತಿಯಾಗಿ ದೇವಿಯು ತಾಯಿಯನ್ನೂ, ಇತರ ಸಖಿಯರು ದೇವಿಯನ್ನೂ ಅಲಂಕರಿಸಿದರು. ಆಮೇಲೆ ನಾನಾವಿಧವಾದ ರತ್ನಾಭರಣಗಳನ್ನು ತರಿಸಿ, ದೇವಿಯು ತಾಯಿಯ ಅಂಗಗಳಿಗೆ ತೊಡಿಸಿದಳು. ಒದ್ದೆಯಾಗಿದ್ದ ತಾಯಿಯ ಕೇಶಪಾಶವನ್ನು ಧೂಪದ ಹೊಗೆಯಿಂದ ಆರಿಸಿದಳು. ಅಲ್ಲದೆ ಅಂಗರಾಗ, ಸುಗಂಧ

ಸ್ವಾಂಗಂ ಮೇನಾಂಗಮಪ್ಯಾಶು ಮಂಡಯದ್ವೇಣಿಮಂಡಲೈಃ ।
ನಾನಾಪುಷ್ಪಸರಾಪಾರ್ಶ್ವೈರ್ಧಮ್ಮಿಲ್ಲೈಸ್ತೇಽಪ್ಯಭೂಷತುಃ ॥೧೦॥

ತತೋ ವನವಿಹಾರಾರ್ಥಂ ಸಮುತ್ತಸ್ಥೌ ಸಖೀಗಣೈಃ ।
ದೇವೀ ಸಾ ಮೇನಯಾ ಸಾರ್ಧಂ ಪಾದಸಂಯೋಜಪಾದುಕಾ ॥೧೧॥

ಯಯೌ ವನಸ್ಥಲೀಂ ತತ್ರ ಪುಷ್ಪವೃಕ್ಷೋಪಶೋಭಿತಾಂ ।
ಚಂಪಕಾಶೋಕಪುನ್ನಾಗವಕುಲೈಶ್ಚಂಪಕಾಮ್ರಕೈಃ ॥೧೨॥

ಕುಟಜೈಶ್ಚ ಧವೈಃ ಫುಲ್ಲಕೇತಕೀನಾಂ ಗಣೈಸ್ತಥಾ ।
ಮಂದಾರಪಾರಿಜಾತೈಶ್ಚ ಕುರವೈಃ ಪಾಟಲೀಮುಖೈಃ ॥೧೩॥

ಶಮೀಶಿರೀಷಬಿಲ್ವೈಶ್ಚ ರಕ್ತಾಶೋಕೈರ್ಮಧೂಕಕೈಃ ।
ಮಲ್ಲೀವಲ್ಲೀಕುಂದವಲ್ಲೀಜಾಜೀದ್ರಾಕ್ಷಾಸುಪಿಪ್ಪಲೀ ॥೧೪॥

ಪೂಗೀರಂಭಾವೃತಾಪಾರಪರ್ಯಂತೈಃ ಪ್ರಸೃತಾಸ್ತದಾ ।
ನೀಪಾಸೋಕಹಜಂಬೀರಜಂಬ್ವಾಮ್ರಾತಕಭಲ್ಲಕೈಃ ॥೧೫॥

---

ಯುತವಾದ ಮೇಲುಹೊದ್ದಿಕೆ ಇವೇ ಮೊದಲಾದುವುಗಳಿಂದ ತಾಯಿಯನ್ನು ತೃಪ್ತಿಪಡಿಸಿದಳು. ॥೮-೯॥

ಹೀಗೆ ತನ್ನ ಮತ್ತು ತಾಯಿಯ ಶರೀರವನ್ನೆಲ್ಲಾ ಅಲಂಕರಿಸಿಕೊಂಡು, ತಮ್ಮ ತಮ್ಮ ಕೇಶಪಾಶಗಳಲ್ಲಿ ಹೂವಿನ ಸರವನ್ನು ಮುಡಿದುಕೊಳ್ಳುತ್ತಾ, ಆ ಚಂಪಕ ವನದಲ್ಲಿ ವಿಹರಿಸಲು ಪ್ರಯಾಣಮಾಡಿದರು. ಆಗ ದೇವಿಯೂ ಮತ್ತು ಮೇನಾದೇವಿಯೂ ದಿವ್ಯಪಾದುಕೆಯನ್ನು ಧರಿಸಿದವರಾಗಿದ್ದರು. ॥೧೦-೧೧॥

ಆ ವನವಾದರೋ ಪುಷ್ಪಭರಿತವಾದ ಅನೇಕಜಾತಿಯ ವೃಕ್ಷಗಳಿಂದ ನಿಬಿಡವಾಗಿತ್ತು. ಸಂಪಿಗೆ, ಅಶೋಕ, ಸುರಗೀ, ವಕುಲ, ಮಾವು, ಕೊರಟಿಕೆ, ಧವ, ತಾಳೀ, ಮಂದಾರ, ಪಾರಿಜಾತ, ಪಾದರಿಯೇ ಮುಂತಾದ ಪುಷ್ಪಗಳು ಬಹುವಾಗಿ ಕಂಡುಬರುತ್ತಿದ್ದುವು. ॥೧೨-೧೩॥

ಬನ್ನಿಮರ, ಬಾಗೇಮರ. ಬಿಲ್ವ, ಕೆಂಪು ಅಶೋಕ, ಮಧೂಕ (ಹೊಂಗೆ) ಮುಂತಾದ ವೃಕ್ಷಜಾತಿಗಳೂ, ಮಲ್ಲಿಗೆ, ಕೋಲುಮಲ್ಲಿಗೆ, ಜಾಜೀ, ದ್ರಾಕ್ಷಿ ಮುಂತಾದ ಬಳ್ಳಿಗಳೂ, ಅಡಕೆ, ಬಾಳೆ, ಕದಂಬ, ನಿಂಬೆ, ನೇರಳೆ, ಮಾವು ಮುಂತಾದ ಸುಂದರ

ಲೋಧ್ರಸಲ್ಲಕವೃಕ್ಷೈಶ್ಚ ಫುಲ್ಲಹಲ್ಲಕಪಂಕಜೈಃ ।
ಕಾಸಾರಾಸಾರಮಧ್ಯಸ್ಥಮಣಿಮಂಟಪಮಧ್ಯಗಾ ॥೧೬॥

ವಿಜಹಾರ ವನೇ ದೇವೀ ಮೇನಯಾ ಸ್ವಸಖೀಗಣೈಃ ।
ಉತ್ಫುಲ್ಲಾರಕ್ತಕಮಲಹಲ್ಲಕಾನ್ಯುಜ್ಜಹಾರ ಸಾ ॥೧೭॥

ಉತ್ಫುಲ್ಲಚಂಪಕಾನಾಂ ಚ ಪುಷ್ಪಾಣ್ಯಪಚಿನೋತ್ತದಾ ।
ಮಲ್ಲೀಕುಂದಾಚ್ಛವಕುಲಪಾರಿಜಾತಸಮುದ್ಭವಾಃ ॥೧೮॥

ಮಾಲಾಶ್ಚೋದ್ಗ್ರಥ್ಯ ಪುಷ್ಪಾಣಾಂ ದೇವೀ ಪಕ್ವಫಲಾನ್ಯಪಿ ।
ಸಮಾಜಹಾರಾಲಿಭಿಸ್ಸಾ ವೃಕ್ಷಾಧಸ್ಸ್ಥಿತಮಂಚಗಾ ॥೧೯॥

ಮೇನಯಾ ಪರಯಾ ಪ್ರೀತ್ಯಾ ಸಖೀಗಣನಿಷೇವಿತಾ ।
ನಾರಿಕೇಲಾಮ್ರಪನಸಮಾತುಲಿಂಗೇಂಗುದೀಫಲೈಃ ॥೨೦॥

---

ಕಮಲಗಳೂ, ಕಮಲಕಲ್ಹಾರಗಳಿಂದ ಸುಂದರತಮವಾದ ಪುಷ್ಪಗಳಿಂದ ಕಂಗೊಳಿಸುವ ಕಾಸಾರಗಳೂ ಅಲ್ಲಿ ಶೋಭಿಸುತ್ತಿದ್ದುವು. ಇಂತಹ ಪ್ರಕೃತಿಸೌಂದರ್ಯದಿಂದ ರಂಜಿಸುವ ಉದ್ಯಾನದ ಮಧ್ಯದಲ್ಲಿರುವ ಮಂಟಪದಲ್ಲಿ ದೇವಿಯು ಕುಳಿತಿದ್ದಳು ||೧೪-೧೫-೧೬||

ಹಾಗೆಯೇ ದೇವಿಯು ತಾಯಿಯೊಡನೆಯೂ, ಸಖೀಜನರೊಡನೆಯೂ ಸಂಚರಿಸಿ, ಅರಳಿದ ಕಮಲಗಳನ್ನೂ, ವಿಕಸಿತವಾದ ಹಲ್ಲಕಪುಷ್ಪಗಳನ್ನೂ, ಸುಗಂಧ ಯುತವಾದ ನೈದಿಲೆ, ಸಂಪಿಗೆ ಮುಂತಾದ ಹೂವುಗಳನ್ನೂ ತಾನೇ ಕೊಯ್ದಳು. ಅಲ್ಲದೆ ಮಲ್ಲಿಗೆ, ಕೋಲುಮಲ್ಲಿಗೆ, ವಕುಲ, ಪಾರಿಜಾತ ಮುಂತಾದ ಹೂವುಗಳಿಂದ ಮಾಲೆಯನ್ನು ಮಾಡಿಸಿದಳು. ||೧೭-೧೮||

ಆಮೇಲೆ ಶಿವಪೂಜೆಗಾಗಿ, ಪಕ್ವಫಲಗಳನ್ನೂ, ವಿಧವಿಧವಾದ ಪುಷ್ಪಗಳನ್ನೂ, ತಾನು ವೃಕ್ಷದ ತಲಭಾಗದ ಮಂಚದಲ್ಲಿ ಕುಳಿತು ಸಖಿಯರಿಂದ ತರಿಸಿದಳು. ಮತ್ತು ತೆಂಗಿನಕಾಯಿ, ಮಾವಿನಹಣ್ಣು, ಹಲಸಿನಹಣ್ಣು, ಮಾದಲವಹಣ್ಣು, ಇಂಗುದೀಫಲ ಮುಂತಾದುವುಗಳನ್ನೂ ಸಖಿಯರಿಂದ ತರಿಸಿ ಶಿವಪೂಜೆಗೆ ಸಿದ್ಧಮಾಡಿಕೊಂಡಳು. ||೧೯-೨೦||

ಕರಂಜೈಃ ಕದಲೀಜಂಬೂದಾಡಿಮೀಲಿಕುಚೈಸ್ತಥಾ ।
ಪುಂಡ್ರೇಕ್ಷುಸಾರಖಂಡೈಶ್ಚ ನಾನಾಭಕ್ಷ್ಯಾನ್ನರಾಶಿಭಿಃ ॥೨೧॥

ಕ್ಷೀರೋದನೈರ್ಘೃತಾನ್ನೈಶ್ಚ ದಧ್ಯನ್ನೈಃ ಸೋಪದಂಶಕೈಃ ।
ಶಾಕಸೂಪಾಪೂಪಜಾಲೈರ್ದಧಿಕ್ಷೀರಘೃತಾದಿಭಿಃ ॥೨೨॥

ಲಿಂಗಪೂಜಾಂ ಸಮಾರೇಭೇ ಸಾ ದೇವೀ ಮೇನಯಾ ಸಹ ।
ಸಖ್ಯಾನೀತೈರ್ಗಂಧಪುಷ್ಪಪಂಚಾಮೃತಘಟೀಶತೈಃ ॥೨೩॥

ಫಲಜಾಲೈಸ್ತಥೇಕ್ಷೂಣಾಂ ಸಾರೈಃ ಕ್ಷೌದ್ರೈಸ್ಸಶರ್ಕರೈಃ ।
ವಾಸೋಭೂಷಣತಾಂಬೂಲೈರ್ಧೂಪದೀಪೈರ್ಮನೋಹರೈಃ ॥೨೪॥

ದೃಷ್ಟ್ವಾದರ್ಶಂ ಮಹಾದೇವೀ ತ್ರಿಪುಂಡ್ರರಚನಾದರಾ ।
ಮುಕ್ತಾಂತರಿತರುದ್ರಾಕ್ಷಮಾಲಾಶೋಭಿತಕಂಧರಾ ॥೨೫॥

ಮೇನಯಾ ಸಾ ಯಯೌ ತತ್ರ ರಮ್ಯಂ ದೇವೀಶ್ವರಾಲಯಂ ।
ತತ್ಪ್ರಾಕಾರಮಹಾಮೌಲಿಗರ್ಭಾಗಾರೈಕಸುಂದರಂ ॥೨೬॥

---

ಹೊಂಗೆಯಹಣ್ಣು, ಬಾಳೆ, ನೇರಳೆ, ದಾಳಿಂಬ, ಕಿತ್ತಲೇ, ಕಬ್ಬಿನ ಜಲ್ಲೆ, ಇನ್ನೂ ಬಗೆಬಗೆಯ ಅನ್ನರಾಶಿ, ಕ್ಷೀರಾನ್ನ, ಘೃತಾನ್ನ, ದಧ್ಯನ್ನ, ಉಪ್ಪಿನಕಾಯಿ, ಹುಳಿ, ತೊವ್ವೆ, ಒಬ್ಬಟ್ಟು, ಹಾಲು, ಮೊಸರು, ತುಪ್ಪ ಮುಂತಾದ ನೈವೇದ್ಯದ ಸಾಮಾನುಗಳನ್ನೆಲ್ಲಾ ಸಿದ್ಧಪಡಿಸಿಕೊಂಡಳು. ॥೨೧-೨೨॥

ಒಡನೆಯೇ ತಾಯಿಯ ಜೊತೆಯಲ್ಲಿ ಕುಳಿತು ಶಿವಲಿಂಗಾರಾಧನೆಗೆ ಆರಂಭಿಸಿದಳು. ಆಗ ಸಖಿಯರು, ಗಂಧ, ಪುಷ್ಪ, ಪಂಚಾಮೃತಗಳಿಂದ ತುಂಬಿದ ಗಡಿಗೆಗಳು, ಕಬ್ಬಿನರಸ, ಫಲರಸ, ಜೇನುತುಪ್ಪ, ಸಕ್ಕರೆ, ವಸ್ತ್ರ, ಭೂಷಣ, ತಾಂಬೂಲ, ಧೂಪದೀಪಾದಿಗಳು, ಇವೆಲ್ಲವನ್ನೂ ಪೂಜಾಕಾಲಕ್ಕೆ ಸರಿಯಾಗಿ ಒದಗಿಸುತ್ತಿದ್ದರು. ॥೨೩-೨೪॥

ಪೂಜೆಗೆ ಮುಂಚೆ ಗೌರಿಯು ತಾನು ಹಣೆಗೆ ತ್ರಿಪುಂಡ್ರವನ್ನೂ, ಕಂಠಕ್ಕೆ ಮುತ್ತುಗಳಿಂದ ಸೇರಿಸಿ ಮಾಡಿರುವ ರುದ್ರಾಕ್ಷಿಯ ಸರವನ್ನೂ ಧರಿಸಿಕೊಂಡು, ಮೇನಾದೇವಿಯೊಡನೆ ದೇವೀಶ್ವರಾಲಯವನ್ನು ಪ್ರವೇಶಿಸಿದಳು. ಆ ದೇವಾಲಯವೂ

ಗೋಪುರೋದ್ಭಾಸಿಮಾಣಿಕ್ಯಕುಂಭೈಸ್ಸದ್ವೃಷಭೈರಪಿ ।
ಶೋಭಿತಂ ಮಂಟಪಗಣೈರ್ಧೂಪದೀಪಾಲಿರಂಜಿತಂ ॥೨೭॥

ತತ್ರಾಂತರ್ಗೃಹಮಾಗತ್ಯ ಮೇನಯೈಕ್ಷಿ ಸಖೀಗಣೈಃ ।
ಶುದ್ಧಕರ್ಪೂರಧವಲಂ ಮಣಿಬಿಂಬೋತ್ತಮಾಂಗಕಂ ॥೨೮॥

ಹೀರತ್ರಿಪುಂಡ್ರಸಂಶೋಭಿ ಚೋದ್ಯತ್ಫಣಿಫಣಾವೃತಂ ।
ಸೋಮಾರ್ಧಶೇಖರಲಸನ್ಮಣಿಹಾರವಿಭೂಷಿತಂ ॥೨೯॥

ತಲ್ಲಿಂಗಂ ವೀಕ್ಷ್ಯ ಸಾ ದೇವೀ ಪ್ರಣಮ್ಯ ಮಣಿಭೂಷಿತಂ ।
ದೇವೀಶ್ವರಾಭಿಧಂ ತತ್ರ ದೇವೀ ಸಾ ಮೇನಯಾ ಯುತಾ ॥೩೦॥

ಪೂಜಯಾಮಾಸ ವಿವಿಧೈಃ ಪಂಚಾಮೃತನಿಷೇಚನೈಃ ।
ಫಲಸಾರೈಶ್ಚ ವಿವಿಧೈಶ್ಚಂದನಾಂಭೋಘಟೈರಪಿ ॥೩೧॥

ವಸ್ತ್ರಗಂಧಾಕ್ಷತೈರ್ಬಿಲ್ವೈಃ ಪುಷ್ಪಮಾಲಾಭಿರೀಶ್ವರೀ ।
ಧೂಪೈರ್ದೀಪೈಶ್ಚ ವಿವಿಧೈರಾನೀತೈರ್ಭಕ್ಷ್ಯಭೋಜ್ಯಕೈಃ ॥೩೨॥

---

ದಿವ್ಯಪ್ರಾಕಾರಗಳಿಂದಲೂ, ಗೋಪುರದಿಂದಲೂ ಗರ್ಭಗೃಹದಿಂದಲೂ ಸುಂದರವಾಗಿ ಕಾಣುತ್ತಿದ್ದಿತು. ||೨೫-೨೬||

ಆ ದೇವಾಲಯದ ಗೋಪುರದ ಮೇಲೆ ಮಾಣಿಕ್ಯಮಯವಾದ ಕಲಶವೂ, ವೃಷಭವಿಗ್ರಹಗಳೂ, ಒಳಭಾಗದಲ್ಲಿ ಅನೇಕ ಮಂಟಪಗಳೂ, ಧೂಪದೀಪಗಳಿಂದ ಸುವಾಸಿತವಾಗಿರುವ ಅಂತರ್ಗೃಹಗಳೂ ರಂಜಿಸುತ್ತಿದ್ದುವು. ಆ ಗರ್ಭಗೃಹದಲ್ಲಿ ಮೇನಾದೇವಿಯು ಶುದ್ಧ ಕರ್ಪೂರದಂತೆ ಧವಳವೂ ಮಣಿಮಯವಾದ ಕಿರೀಟದಿಂದ ರಂಜಿತವೂ ಆದ ಶಿವಲಿಂಗವನ್ನು ನೋಡಿದಳು. ||೨೭-೨೮||

ಆ ಶಿವಲಿಂಗಕ್ಕೆ ಹೀರಮಣಿಗಳಿಂದ ತ್ರಿಪುಂಡ್ರವನ್ನೂ, ಸರ್ಪದ ಹೆಡೆಗಳಿಂದ ನಾಗಾಭರಣವನ್ನೂ ನಿರ್ಮಿಸಿದಂತಿತ್ತು. ಚಂದ್ರಶೇಖರನಾದ ಶಂಕರನ ಕತ್ತಿನಲ್ಲಿ ರತ್ನಹಾರಗಳಿದ್ದುವು. ಇಂತಹ ದೇವೀಶ್ವರಸಂಜ್ಞಕನಾದ ಮಹೇಶ್ವರನನ್ನು ನೋಡಿ ತಾಯಿಯೊಡನೆ ದೇವಿಯೂ ನಮಸ್ಕರಿಸಿದಳು. ||೨೯-೩೦||

ಅನಂತರ ಪಂಚಾಮೃತಾಭಿಷೇಕಗಳಿಂದಲೂ, ಫಲೋದಕಗಳಿಂದಲೂ, ಗಂಧೋದಕಗಳಿಂದಲೂ ಶಿವಲಿಂಗವನ್ನು ಅಭಿಷೇಚಿಸಿದಳು. ಅನಂತರ ದಿವ್ಯವಸ್ತ್ರ,

ಅಂಧಸಾಂ ರಾಶಿಭಿರ್ದೇವೀ ನಿವೇಶ್ಯ ಪರಮೇಶ್ವರೀ ।
ತಾಂಬೂಲಾನಾಂ ಭರೈರ್ದೇವೀ ಪ್ರದಕ್ಷಿಣನತಿಕ್ರಮೈಃ ॥೩೩॥

ಸ್ವಸಖೀಜನಸಂಕ್ಲೃಪ್ತವಾದ್ಯನಾಟ್ಯನಿಷೇವಿತೈಃ ।
ಸಂಪೂಜ್ಯ ಸಾ ಮಹಾದೇವೀ ದೇವೀಶಂ ಮೇನಯಾ ಸಹ ॥೩೪॥

ಲಿಂಗಾಗ್ರೇ ಸಂನಿವೇಶ್ಯಾಂಬಾ ರುದ್ರವೀಣಾಕರಾ ತದಾ ॥೩೫॥

ನಖೋದ್ಘೃಷ್ಟಮಹಾತಂತ್ರೀಗಾನರಕ್ತಾನುಗುಂಠತಃ ।
ತುಷ್ಟಾವ ಸ್ತೋತ್ರವರ್ಯೇಣ ತದಾ ದೇವೀಶ್ವರಂ ಶಿವಾ ॥೩೬॥

॥ ದೇವ್ಯುವಾಚ ॥

ಪುರಹರ ಭಗವನ್ ಕುರು ಕರುಣಾಂ
ಸ್ಮರಹರ ಶಂಕರ ಪ್ರಭೋ ।
ಗರಧರಗುರುಭರಜಗದುದ್ಧಾರಕ
ಮುರಹರಪೂಜಿತಪಾದ ॥೩೭॥

---

ದಿವ್ಯಮಾಲ್ಯಾದಿಗಳಿಂದ ಶಂಕರನನ್ನು ಅಲಂಕರಿಸಿ, ಧೂಪದೀಪನೈವೇದ್ಯಾದಿಗಳಿಂದ ಮಹೇಶ್ವರನನ್ನು ಅರ್ಚನೆಮಾಡಿದಳು. ॥೩೧-೩೨॥

ವಿಧವಿಧವಾದ ನೈವೇದ್ಯಾದಿಗಳಿಂದಲೂ, ತಾಂಬೂಲ, ನೀರಾಜನ ಮುಂತಾದ ಉಪಚಾರಗಳಿಂದಲೂ ಪ್ರದಕ್ಷಿಣನಮಸ್ಕಾರಾದಿಗಳಿಂದಲೂ ನೃತ್ಯವಾದ್ಯಾದಿಗಳ ಪುನಃಪೂಜೆಯಿಂದಲೂ ಶಂಕರನನ್ನು ಅರ್ಚಿಸಿ, ಗೌರಿಯು ತಾಯಿಯೊಡನೆ ಶಿವ ಲಿಂಗದ ಮುಂದೆ ಕುಳಿತು ಕೈಯ್ಯಲ್ಲಿ ರುದ್ರವೀಣೆಯನ್ನು ಹಿಡಿದು, ಉಗುರುಗಳ ಹೊಡೆತದಿಂದ ತಂತ್ರೀಧ್ವನಿಯನ್ನು ಹೆಚ್ಚಿಸಿಕೊಳ್ಳುತ್ತಾ, ಮೃದುಮಧುರವಾದ ಕಂಠಧ್ವನಿಯಿಂದ ಮಹೇಶ್ವರನನ್ನು ಈರೀತಿಯಾಗಿ ಸ್ತುತಿಸಲು ಆರಂಭಿಸಿದಳು. ॥೩೩-೩೪-೩೫-೩೬॥

“ ಓ ಮಹೇಶ್ವರನೇ, ನೀನು ತ್ರಿಪುರಾಸುರರನ್ನು ಧ್ವಂಸಮಾಡಿದವನು. ಷಡ್ಗುಣೈಶ್ವರ್ಯಸಂಪನ್ನನೂ, ಮುರಾರಿಯೂ, ವಿಷಭಕ್ಷಕನೂ ಎನಿಸಿ, ಸಕಲ ಲೋಕ ವನ್ನೂ ಉದ್ಧಾರಮಾಡಿರುವೆ. ಮುರಾರಿಯಾದ ಮಹಾವಿಷ್ಣುವೂ ನಿನ್ನ ಪಾದವನ್ನು ಸೇವಿಸುತ್ತಿರುವನು. ॥೩೭॥

ಗಜಹರ ಯಮಹರ [1]ಭಗಮುಖಹರ
ಹರಿಶರ ಹರ ಹರ ಪಾಹಿ ।
ಅಗಪತಿನಿಲಸಿತಲಿಂಗಕುಲಾಂತರ
ಭರಿತಾನೇಕದಮೋದ ॥೩೮॥

ಪರಿಫುಲ್ಲಾಂಬುಜಬಿಲ್ವಾಲಂಕೃತ
ಶಶಿಧಾಮೋದ್ಯತಮೌಲೇ ।
ಪರಿಪಾಹೀಶ್ವರ ಶಂಕರ ಸುಂದರ
ಭಕ್ತಜನಪ್ರಿಯ ಶಂಭೋ ॥೩೯॥

ಉದ್ಯದ್ವಿಧುಕರಸಮಸುಮಜಾಧಿಕ
ಮಾರವರಾಂಗಕಭೂಷ ।
ಭಸಿತಾಲಂಕೃತ ನಿಟಿಲಾಲಂಕೃತ
ಪುಂಡ್ರೋತ್ತಮಪರಿಭೂಷ ॥೪೦॥

---

ಗಜಾಸುರ, ಯಮ, ದಕ್ಷಬ್ರಹ್ಮನ ಯಾಗ, ಇವುಗಳನ್ನೆಲ್ಲಾ ಧ್ವಂಸಮಾಡಿದ ಪರಮೇಶ್ವರನೇ, ನಮ್ಮನ್ನು ರಕ್ಷಿಸು. ಹರಿಯನ್ನೇ ಬಾಣವನ್ನಾಗಿ ಮಾಡಿಕೊಂಡು, ಈ ಕೈಲಾಸದಲ್ಲಿರುವ ಅಸಂಖ್ಯಲಿಂಗಗಳ ಮಧ್ಯಾಂತರ್ವರ್ತಿಯಾಗಿ ಪೂರ್ಣಾನಂದ ದಲ್ಲಿರುವ ಶಂಕರನೇ, ನಮ್ಮನ್ನು ಉದ್ಧರಿಸು. ॥೩೮॥

ಅರಳಿದ ಕಮಲಗಳಿಂದಲೂ, ಕೋಮಲವಾದ ಬಿಲ್ವಪತ್ರೆಗಳಿಂದಲೂ, ಚಂದ್ರನ ಕಾಂತಿಯಿಂದಲೂ, ಅಲಂಕೃತವಾಗಿರುವ ಶಿರೋಭಾಗವುಳ್ಳವನೇ, ಭಕ್ತ ಜನರಿಗೆ ಪ್ರಿಯವನ್ನುಂಟುಮಾಡುವವನೇ, ಶಂಭುವೇ, ಸುಖಕರನೇ, ನಮ್ಮನ್ನು ರಕ್ಷಿಸು. ॥೩೯॥

ಉದಯಿಸುವ ಪೂರ್ಣಚಂದ್ರನಂತೆ ಶುಭ್ರವಾಗಿರುವ ಪುಷ್ಪಗಳಿಂದ ಅಲಂಕೃತ ವಾಗಿ, ಮನ್ಮಥನ ಅಂಗಸೌಷ್ಠವದಿಂದ ಶೋಭಿಸುವ ಮಹೇಶ್ವರನೇ, ನಿನ್ನ ಹಣೆ ಯಲ್ಲಿರುವ ಭಸ್ಮವೂ, ತ್ರಿಪುಂಡ್ರವೂ ನಿನಗೆ ವಿಶೇಷವಾದ ಅಲಂಕಾರವಸ್ತುಗಳಾಗಿವೆ ಯಲ್ಲವೇ! ॥೪೦॥

---

1 ಭಗವಪಹರ (ಪಾ ರ)

ಚಕ್ಷುಃಶ್ರವಗಣಮಣಿಗಣಕಂಧರ
ಸೋಮಾರ್ಯಮಾನಲಾಕ್ಷ ।
ತುರಗಾಯಿತನಿಗಮಾವ್ಯಯ
ಹರ ಶ್ರುತಿಮೌಲ್ಯುದ್ಯತಕೀರ್ತೇ ॥೪೧॥

ಪರಿಪಾಹೀಶ್ವರ ದೇವದಯಾಕರ
ಭಗವನ್ನವ ಮಾಂ ದೀನಾಂ ।
ಪುರಹರ ಮುರಹರಪೂಜಿತಪಾದ
ಶಂಕರ ಹರ ಹರ ಶಂಭೋ ॥೪೨॥

ಗಂಗಾಧರ ಹರ ಗರಕಂಧರ
ಹರ ಕಾಕೋದರವರಹಾರ ।
ಪರಿಪಾಹ್ಯದ್ಯ ನಿಶಾಕರಲೋಚನ
ದಯಯಾ ಸುತರಾಂ ಗಿರಿವಾಸ ॥೪೩॥

---

ಸರ್ಪದ ರತ್ನಗಳನ್ನೇ ಮಾಲೆಯನ್ನಾಗಿ ಮಾಡಿಕೊಂಡು, ಅದನ್ನು ಕಂಠದಲ್ಲಿ ಧರಿಸಿರುವ ಮಹೇಶ್ವರನೇ, ನಿನಗೆ ಸೂರ್ಯ, ಚಂದ್ರಾಗ್ನಿಗಳೇ ಮೂರುಕಣ್ಣುಗಳಾಗಿರುವವರಲ್ಲವೇ ! ಪ್ರಸಿದ್ಧವಾದ ನಾಲ್ಕು ವೇದಗಳೇ ನಾಲ್ಕು ಕುದುರೆಗಳಾದುವಲ್ಲವೇ ? ನಿನ್ನ ಕೀರ್ತಿಯನ್ನು ಸಕಲ ಉಪನಿಷತ್ತುಗಳೂ ನಾನಾವಿಧವಾಗಿ ಘೋಷಿಸುತ್ತಿರುವುವು. ||೪೧||

ಈಶ್ವರನೇ, ದೇವನೇ, ಕರುಣಾಸಮುದ್ರನೇ, ಬಡವಳಾಗಿರುವ ನನ್ನನ್ನು ಕಾಪಾಡು. ತ್ರಿಪುರಗಳನ್ನು ನಾಶಮಾಡಿ, ಮುರಾರಿಯಿಂದ ಪೂಜಿತನಾಗಿರುವ ಶಂಕರನೇ, ಹರನೇ, ಶಂಭುವೇ, ನನ್ನನ್ನು ರಕ್ಷಿಸು. ||೪೨||

ಗಂಗೆಯನ್ನು ಶಿರಸ್ಸಿನಲ್ಲಿಯೂ, ವಿಷವನ್ನು ಕಂಠದಲ್ಲಿಯೂ, ಸರ್ಪಹಾರವನ್ನು ಉರದಲ್ಲಿಯೂ, ಧರಿಸಿರುವ ಚಂದ್ರಧರನೂ ಕರುಣಾಶಾಲಿಯೂ ಆದ ಗಿರೀಶನೇ ದಯೆಯಿಂದ ನನ್ನನ್ನು ಕಾಪಾಡು " ||೪೩||

॥ ಸ್ಕಂದ ಉವಾಚ ॥

**ಇತ್ಥಂ ಸಾ ಗಾನಧಾರಾಭಿಸ್ತುಷ್ಟಾವಾಷ್ಟಾಕೃತಿಂ ಹರಂ।**
**ತದ್ಗಾನಧಾರಾಂ ಸಾ ಶ್ರುತ್ವಾ ಮೇನಾ ವಿಸ್ಮಾಯಿತಾಂತರಾ ॥೪೪॥**

**ಚಿತ್ರಾರ್ಪಿತೇವ ಸಾ ತಸ್ಥೌ ತತ್ರ ತಸ್ಯಾಸ್ಸಖೀಗಣಃ।**
**ತಂತ್ರ್ಯತಿಶಾಯಿಕಂಠೋತ್ಥರಕ್ತಿರಾಗೈಕಮೇದುರಂ ॥೪೫॥**

**ರಾಗಾನುಸಾರಂ ಸುಶ್ರಾವಮತಿಗಾಂಧರ್ವಮುತ್ತಮಂ।**
**ಸಂಜಾತಪುಲಕಾ ಸ್ವಾಪಿನ್ಯೇವಂ ಪಂಕಜಕುಟ್ಮಲೈಃ ॥೪೬॥**

**ಉನ್ಮೇಷನಿಮಿಷೈರ್ಹೀನಾಸ್ತಾಃ ಪಶ್ಯಂತ್ಯಾಲಯೇಂಬಿಕಾಂ।**
**ವಿಸೃಷ್ಟಗಾನಾ ಸಾ ದೇವೀ ನೃತ್ಯಂ ಲಿಂಗಾಗ್ರತಃ ಕೃತಂ ॥೪೭॥**

**ಸಖೀಭಿರ್ಜಾತಹರ್ಷೇಣ ಮೇನಯಾಪಶ್ಯದೀಶ್ವರೀ।**
**ತದಾಲಯಾತ್ತಟಂ ಪ್ರಾಪ್ಯ ದೇವಗಂಗಾಮಣಿದ್ಯುತಿ ॥೪೮॥**

**ತನ್ಮಧ್ಯಮಂಟಪೇ ತಸ್ಥೌ ನವರತ್ನವಿಚಿತ್ರಿತೇ।**
**ಭೋಜಯಾಮಾಸ ಸಾ ದೇವೀ ನಿವೇದಿತಮುಮಾಪತೇಃ ॥೪೯॥**

---

ಹೀಗೆ ಪಾರ್ವತಿಯು ತನ್ನ ಗಾನಧಾರೆಯಿಂದ ಅಷ್ಟಮೂರ್ತಿಯಾದ ಶಂಕರನನ್ನು ಭಕ್ತಿಯಿಂದ ಸ್ತುತಿಸಿದಳು. ಇದನ್ನು ನೋಡಿದ ಮೇನಾದೇವಿಯು ಮಗಳ ಗಾನಮಾಧುರ್ಯಕ್ಕೂ, ತಂತ್ರಿಯ ಧ್ವನಿಯಿಂದ ಕೂಡಿದ ಕಂಠರವಕ್ಕೂ, ರಾಗರಚನೆಯ ಸೊಬಗಿಗೂ ಚಕಿತಳಾಗಿ ನಿಶ್ಚಲವಾಗಿ ನಿಂತುಬಿಟ್ಟಳು. ||೪೪-೪೫||

ಅಲ್ಲದೆ ರಾಗಾನುಸಾರವಾಗಿ ಗಂಧರ್ವರಿಗೂ ಮೀರಿದರೀತಿಯಲ್ಲಿ ಹಾಡಿದ ಶಿವಸ್ತುತಿಯನ್ನು ಕೇಳಿ, ಮೇನಾದೇವಿಯು ರೋಮಾಂಚಯುಕ್ತಳಾಗಿ ನಿಂತು ಬಿಟ್ಟಳು. ಇದನ್ನು ನೋಡುತ್ತಿದ್ದ ಸಖಿಯರೂ ಕೂಡ ಕಣ್ಣುಗಳನ್ನು ಸಹ ಮುಚ್ಚದಂತೆ ದೇವಿಯನ್ನೇ ದೃಷ್ಟಿಸುತ್ತಾ ನಿಂತುಬಿಟ್ಟರು. ಅನಂತರ ಪಾರ್ವತಿಯು ಸಂಗೀತವನ್ನು ಬಿಟ್ಟು ಶಿವಲಿಂಗದ ಮುಂದೆ ನರ್ತನಮಾಡಿದಳು. ||೪೬-೪೭||

ಹೀಗೆ ಶಿವಪೂಜೆಯನ್ನು ಸಾಂಗಗೊಳಿಸಿ, ಸಖಿಯರೊಂದಿಗೂ ತಾಯಿಯೊಡನೆಯೂ, ಗೌರೀದೇವಿಯು, ದೇವೀಶ್ವರಾಲಯವನ್ನು ಬಿಟ್ಟು ದೇವಗಂಗಾ

ಭಕ್ಷ್ಯಾನ್ನಂ ರಾಶಿದಧ್ಯಾದ್ಯೈರ್ಮೇನಾಂ ಚ ಸ್ವಸಖೀಗಣಂ ।
ಸ್ವಯಂ ಚಾಪಿ ಮಹಾದೇವೀ ಬುಭುಜೇ ಷಡ್ರಸಾನ್ವಿತಂ ॥೫೦॥

ರತ್ನಪಾತ್ರಪರೀಕ್ಲೃಪ್ತೈಃ ನಾನಾಭಕ್ಷ್ಯಾನ್ನಮುತ್ತಮಂ ।
ಖಾದ್ಯೈಃ ಪೇಯೈಶ್ಚ ಮಧುರೈಃ ಪಾನೀಯೈಶ್ಶೀತಲೈಶ್ಶಿವಾ ॥೫೧॥

ಸ್ವರ್ಣಭೃಂಗಾರುಕಲಿತೈಃ ಪಾಟಲಾಗರುಗಂಧಿತೈಃ ॥೫೨॥

॥ ದೇವ್ಯುವಾಚ ॥

ಅಹೋ ಧನ್ಯೇ ಮಹಾಮೇನೇ ಶಿವನೈವೇದ್ಯಮೀದೃಶಂ ।
ಪಾಪಜಾಲೈಕಸಂಹಾರಿ ಚಾಸ್ವಾದಯ ಸುಧಾಧಿಕಂ ॥೫೩॥

ಭಕ್ಷ್ಯಂ ಭೋಜ್ಯಂ ತಥಾ ಪೇಯಂ ದಧ್ಯನ್ನಮಿದಮುತ್ತಮಂ
ಗೃಹಾಣ ಸೋಪದಂಶಾನಿ ಪಾನಾನಿ ವಿವಿಧಾನಿ ಚ ।
ರಸವಂತ್ಯದ್ಯ ಸುಭಗೇ ಶಿವನೈವೇದ್ಯಮುತ್ತಮಂ ॥೫೪॥

---

ತೀರವನ್ನು ಹೊಕ್ಕು ಅಲ್ಲಿ ನವರತ್ನಮಯವಾದ ಮಂಟಪದಲ್ಲಿ ಮಂಡಿಸಿ, ಶಂಕರನಿಗೆ ನಿವೇದಿತವಾದ ಆಹಾರವನ್ನು ಭೋಜನಮಾಡಿದಳು. ||೪೮-೪೯||

ಜೊತೆಯಲ್ಲಿ ಸಖಿಯರೂ ಮೇನಾದೇವಿಯೂ ಭೋಜನಕ್ಕೆ ಕುಳಿತಿದ್ದರು. ರತ್ನಮಯವಾದ ಪಾತ್ರೆಗಳಲ್ಲಿ ನಾನಾವಿಧವಾದ ಭಕ್ಷ್ಯಗಳನ್ನೂ, ಭೋಜ್ಯಗಳನ್ನೂ ಪಾನೀಯಗಳನ್ನೂ, ಶೀತಲೋದಕಗಳನ್ನೂ ಇಡಲಾಗಿತ್ತು. ಹೀಗೆ ಸುಗಂಧಮಯವೂ, ಸ್ವರ್ಣಾದಿಪಾತ್ರೆಗಳಲ್ಲಿದ್ದು ನಯನಮನೋಹರವೂ ಆದ ಭೋಜ್ಯವಸ್ತುಗಳನ್ನು ದೇವಿಯು ಭುಜಿಸಿದಳು. ||೫೦-೫೧-೫೨||

ಮತ್ತೂ ತಾಯಿಯನ್ನು ಕುರಿತು "ಜನನಿಯೇ, ಇದು ಶಿವನಿಗೆ ನಿವೇದಿತವಾದದ್ದು. ಇದರ ಭಕ್ಷಣವು ಸರ್ವಪಾಪನಿವಾರಕವೆಂದು ತಿಳಿ. ರುಚಿಯಲ್ಲಿ ಅಮೃತವನ್ನು ಮೀರಿಸಿರುವುದು. ಇಂತಹ ಪವಿತ್ರವೂ, ಉಪದಂಶಕಯುಕ್ತವೂ ರುಚಿಕರವೂ ಆದ ಆಹಾರಭಕ್ಷಣದಿಂದ ನಾನು ಧನ್ಯಳಾಗಿರುವೆನು. ಈಗ ರಸಭರಿತವಾದ ಈ ಶಿವನೈವೇದ್ಯವನ್ನು ನೀನೂ ಭುಜಿಸಿ ಧನ್ಯಳಾಗು" ಎಂದು ಹೇಳಿದಳು. ||೫೩-೫೪||

|| ಸ್ಕಂದ ಉವಾಚ ||

ಇತಿ ತಾಂ ಭೋಜಯಾಮಾಸ ರತ್ನಪಾತ್ರೈಸ್ಸಖೀಗಣಂ ।
ದೇವಗಂಗಾಸರಿತ್ತೀರೇ ಸೋಪಾನತಟಮಂಟಪೇ ||೫೫||

ದೇವೀ ಪ್ರಕ್ಷಾಳ್ಯ ಹಸ್ತೌ ಚ ಮಂಟಪೇ ಸಾ ವರಾಸನೇ ।
ಮೇನಯಾ ಸಂಸ್ಥಿತಾ ದೇವೀ ತಾಂಬೂಲೈಸ್ಸುಮನೋಹರೈಃ ||೫೬||

ಮುಖವಾಸೈಸ್ಸುಧೂಪೈಶ್ಚ ಸ್ರಗ್ಗಂಧಾಭರಣಾರ್ಪಣೈಃ ।
ವಿಶ್ರಾಣಯತ್ತದಾ ಮೇನಾಂ ಸ್ವಸಖೀಗಣಮುತ್ತಮಂ ||೫೭||

ಸ್ವಯಂ ಚಾಭೂಷಯದ್ಗಾತ್ರಂ ದಿವ್ಯಾಕಲ್ಪೈರ್ಮಹೇಶ್ವರೀ ।
ದಿವ್ಯಾಂಗರಾಗಧೂಪೈಶ್ಚ ಪುಷ್ಪೈರ್ವಸ್ತ್ರೈಶ್ಚ ಭೂಷಿತಾ ||೫೮||

ಸ್ವಸಖೀಕಲ್ಪಿತಾಪಾರವೇಣುವೀಣಾಮೃದಂಗಕೈಃ ।
ದಿವ್ಯನಾಟ್ಯಸಮಾರಂಭೈರ್ನಿನಾಯ ದಿವಸಂ ಕ್ಷಣಾತ್ ||೫೯||

ರತ್ನಕಂದುಕಲೀಲಾಭಿರಕ್ಷಕ್ರೀಡಾರಸೈಶ್ಚಿವಾ ।
ಕದಾಚಿದ್ವನಮಧ್ಯಸ್ಥವೃಕ್ಷಾಲಂಬನಮಂಚಕೈಃ ||೬೦||

---

ಹೀಗೆ ಗೌರಿಯು ತಾಯಿಗೆ ಭೋಜನಮಾಡಿಸಿ ತಾನೂ ತೃಪ್ತಳಾಗಿ ದೇವಗಂಗಾನದಿಯ ಸೋಪಾನಮಂಟಪದಲ್ಲಿದ್ದ ಶ್ರೇಷ್ಠವಾದ ಪೀಠದಲ್ಲಿ ಕುಳಿತುಕೊಂಡವಳಾಗಿ ತಾಯಿಯೊಡನೆ ತಾಂಬೂಲಚರ್ವಣಮಾಡತೊಡಗಿದಳು. ||೫೫-೫೬||

ಹಾಗೆಯೇ, ಅಂಗವಸ್ತ್ರ, ಸುಧೂಪ, ಹೂವು, ಗಂಧ, ಆಭರಣಗಳು ಇವೇ ಮೊದಲಾದವುಗಳನ್ನು ಸಖಿಯರಿಂದ ತರಿಸಿ ತಾಯಿಗೆ ಕೊಟ್ಟಳು. ತಾನೂ ಗಂಧಪುಷ್ಪಾದಿಗಳಿಂದಲೂ, ಭೂಷಣಾದಿಗಳಿಂದಲೂ, ಅಲಂಕೃತಳಾದಳು. ||೫೭-೫೮||

ಅನಂತರ ಸಖಿಯರು ಬಾರಿಸಿದ ಕೊಳಲು, ವೀಣೆ, ಮೃದಂಗ ಮೊದಲಾದ ವಾದ್ಯಧ್ವನಿಗಳಿಂದ ಆನಂದಪಡುತ್ತಾ, ದಿವ್ಯನಾಟ್ಯವನ್ನು ನೋಡುತ್ತಾ, ತಾಯಿಯೊಡನೆ ರತ್ನಕಂದುಕಕ್ರೀಡಾ, ಪಗಡೆಯ ಆಟ, ಮರದಲ್ಲಿ ಕಟ್ಟಿದ ತೂಗುಮಂಚದ ಆಟ, ಇವುಗಳಿಂದ ಪಾರ್ವತಿಯು ಆ ದಿನವನ್ನು ಕಳೆದಳು. ||೫೯-೬೦||

ಮೇನಯಾ ಸಾ ಪ್ರಮುದಿತಾ ವನಮಂಟಪಮಧ್ಯಗಾ ।
ಧಾರೋಚ್ಛ್ರಾಯಗೃಹೇ ದೇವೀ ಚಂಡಾಂಶುಕರತಾಪಿತಾ ॥೬೦॥

ಮಯೂರಶುಕಶಾರೀಕಕಲಹಂಸಾಂಶ್ಚ ಪಶ್ಯತೀ ।
ರತ್ನದಂಡಾಮಲ್ಶೈರ್ದೇವೀ ಚಕ್ರೇ ಹಲ್ಲೀಸಲಾಸ್ಯಕಂ ॥೬೨॥

ಮೇನಯಾ ಸ್ವಸಖೀಭಿಶ್ಚ ವೃಕ್ಷಾಂದೋಲೈಶ್ಚ ಶಂಕರೀ ।
ಮಣಿದ್ವೀಪೇ ಕದಾಚಿತ್ಸಾ ಮೇನಯಾ ವಿಜಹಾರ ಸಾ ॥೬೩॥

ಸುಧಾಸಾಗರಮಧ್ಯಸ್ಥಾ ನೌಕಾಕ್ರೀಡಾದಿಭಿಶ್ಶಿವಾ ।
ಕ್ಷೇಪಿಣೀಕ್ಷೇಪಿತಜಲೈಸ್ಸಖೀಭಿರ್ಗಾನಧಾರಯಾ ॥೬೪॥

ಸ್ವಯಂ ರುದ್ರಮಹಾವೀಣಾಂ ಗೃಹೀತ್ವಾ ಗಾನಧಾರಯಾ ।
ಶಿವನಾಮಾನಿ ಗಾಯಂತೀ ತೋಷಯಾಮಾಸ ಮಾತರಂ ॥೬೫॥

ಉದ್ಯಚ್ಛಶಾಂಕಧವಲರತ್ನಪ್ರಾಸಾದಮೌಲಿಗಾ ।
ರತ್ನಮಂಚೇಷು ಸಾ ದೇವೀ ಪುಷ್ಪಪ್ರಸ್ತರಕೇಷು ಚ ॥೬೬॥

---

ಆದೇ ರೀತಿ ವನಾಂತರ್ವರ್ತಿಯಾದ ಮಂಟಪದಲ್ಲಿ ಕುಳಿತು, ಬಿಸಿಲಿನ ಬೇಗೆಯ ಕಾಲದಲ್ಲಿ, ಜಲಧಾರಾಯಂತ್ರಗೃಹದಲ್ಲಿ ಕುಳಿತವಳಾಗಿ, ನವಿಲು, ಗಿಳಿ, ಶಾರಿಕ, ಕಲಹಂಸ ಮುಂತಾದ ಪಕ್ಷಿಗಳ ಧ್ವನಿಯನ್ನು ಕೇಳುತ್ತಾ ಸಂತೋಷಾತಿಶಯದಿಂದ ಹಲ್ಲೀಸ ನಾಟ್ಯವನ್ನಾರಂಭಿಸಿದಳು. ॥೬೦-೬೨॥

ಆಮೇಲೆ ಮರಕ್ಕೆ ಕಟ್ಟಿದ ಉಯ್ಯಾಲೆಯಲ್ಲಿ ತೂಗಾಡುತ್ತಾ ಕೆಲವು ಕಾಲ ವಿದ್ದು ಮುಂದೆ ಮಣಿದ್ವೀಪಕ್ಕೆ ಪ್ರಯಾಣಮಾಡಿದಳು. ಅಲ್ಲಿದ್ದ ಅಮೃತಸಾಗರದ ಮಧ್ಯದಲ್ಲಿ ದೋಣಿಯಲ್ಲಿ ಕುಳಿತು, ನೌಕಾದಂಡವನ್ನು ಕೈಯಲ್ಲಿ ಹಿಡಿದು ನೀರನ್ನು ತಳ್ಳುತ್ತಿದ್ದ ಸಖಿಯರ ಜೊತೆಯಲ್ಲಿ ಶಿವಕೀರ್ತನೆಗಳನ್ನು ಹಾಡುತ್ತಾ ತಾಯಿಯೊಡನೆ ವಿಹರಿಸಿದಳು. ॥೬೩-೬೪॥

ಅಲ್ಲಿಯೇ ರುದ್ರವೀಣೆಯನ್ನು ಹಿಡಿದು ತಾನೇ ಶಿವನಾಮಾವಳಿಗಳಿಂದ ಕೂಡಿದ ಕೀರ್ತನೆಗಳನ್ನು ಹಾಡಲುಪಕ್ರಮಿಸಿದಳು. ಅಲ್ಲಿಂದ, ಅಲ್ಲಿಯೇ ಇರುವ ಸೌಧಾಗ್ರಭಾಗಕ್ಕೆ ಹೋಗಿ ಅಲ್ಲಿ ಚಂದ್ರಿಕೆಯಿಂದ ಕೂಡಿ ಶೋಭಿಸುವ ಉಪ್ಪರಿಗೆ

ಚಂದ್ರಚಂದನಲಿಪ್ತಾಂಗೀ ಮೇನಯಾ ವೀಜಿತಾ ತದಾ ।
ಸಖೀಭಿಸ್ಸೇವಿತಾ ದೇವೀ ನಾನಾಸೇವಾರಸೈಸ್ತದಾ ॥೬೭॥

ಶಯಾನಾ ಪುಷ್ಪಪರ್ಯಂಕೇ ದೇವೀ ರಾತ್ರಿಮನೀನಯತ್ ।
ಏವಂ ನಾನಾವಿಧಾಃ ಕ್ರೀಡಾ ದೇವ್ಯಾ ಹರ್ಷೋರುಧಾರಯಾ ॥೬೮॥

ಕೈಲಾಸೇ ಚ ಮಣಿದ್ವೀಪೇ ಹ್ಯವಾಸ ಚಿರಮಂಬಿಕಾ ।
ಮೇನಯಾ ಸಾ ಸಖೀಭಿಶ್ಚ ಪ್ರಮೋದಾನಂದನಿರ್ಭರಾ ॥೬೯॥

ವರ್ಷಾಣಾಂ ಶತಕಂ ಸದಾ ಗಿರಿವರಾಜ್ಞಾತಾ ಸಖೀಭಿಸ್ಸುಖಂ
ಸಾ ಮೇನಾ ನಗರಾಜಮೂರ್ಧನಿ ಶಿವಾ ದಿವ್ಯಾಂಗರಾಗೈಸ್ಸುಮೈಃ ।
ಭಕ್ಷ್ಯೈರ್ಭೋಜ್ಯರಸೈಸ್ಸದಾರಸಭರೈಃ ಕ್ರೀಡಾದಿಭಿಸ್ತೋಷಯ
ದ್ವಿಶ್ವೇಶಾನುಮತೇನ ಭಾಗ್ಯನಿವಹೈರ್ದೇವೀ ಸಖೀನಾಂ ಗಣೈಃ ॥೭೦॥

ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ದೇವೀವಿಹಾರೋ
ನಾಮ ಏಕವಿಂಶೋಧ್ಯಾಯಃ

---

ಯಲ್ಲಿ ರತ್ನಮಂಚಗಳಲ್ಲಿಯೂ, ಹೂವಿನ ಗುರುತುಗಳಿರುವ ಕಲ್ಲುಹಲಗೆಯ ಮೇಲೆಯೂ ಕುಳಿತು ಸಂತೋಷಪಡುವಳು. ||೬೫-೬೬||

ಅನೇಕ ಜನ ಸಖಿಯರೂ ಮತ್ತು ಮೇನಾದೇವಿಯೂ ಪಾರ್ವತಿಯನ್ನು ನಾನಾವಿಧವಾಗಿ ಉಪಚರಿಸಿದರು. ಚಂದನಲಿಪ್ತಾಂಗಿಯಾದ ದೇವಿಯು ಪುಷ್ಪ ಶಯ್ಯೆಯಲ್ಲಿ ಪವಡಿಸಿದವಳಾಗಿ, ನಾನಾವಿಧವಾದ ಸಂತೋಷಜನಕವಾದ ಕ್ರೀಡಾ ದಿಗಳ ಅನಂತರ ಸುಖನಿದ್ರೆಗೈಯ್ಯುತ್ತಾ ಆ ರಾತ್ರಿಯನ್ನು ಕಳೆದಳು. ||೬೭-೬೮||

ಹೀಗೆ ಕೈಲಾಸಪರ್ವತದ ಮಣಿದ್ವೀಪದಲ್ಲಿ ದೇವಿಯು ಬಹುಕಾಲ ತಾಯಿ ಯೊಡನೆಯೂ, ಇತರ ಸಖಿಯರೊಡನೆಯೂ, ಆನಂದಭರಿತಗಳಾಗಿ ಕಾಲವನ್ನು ಕಳೆದಳು. ||೬೯||

ಹೀಗೆ ಪರ್ವತರಾಜಪುತ್ರಿಯಾದ ಪಾರ್ವತಿಯು ತಾಯಿಯ ಜೊತೆಯಲ್ಲಿ ಕೈಲಾಸಶಿಖರದ ಮಣಿದ್ವೀಪಕ್ಷೇತ್ರದಲ್ಲಿ ನೂರು ವರ್ಷಗಳು ವಾಸಮಾಡಿದಳು. ಆ ಕಾಲದಲ್ಲೆಲ್ಲಾ, ದಿವ್ಯಾಭರಣಗಳಿಂದಲೂ, ವಿಧವಿಧವಾದ ಭಕ್ಷ್ಯಭೋಜ್ಯಗ

ಳಿಂದಲೂ, ವಿಧವಿಧವಾದ ಕ್ರೀಡಾದಿಗಳಿಂದಲೂ, ಆನಂದವನ್ನನುಭವಿಸುತ್ತಾ ಪರಮೇಶ್ವರನ ಅನುಮತಿಯಂತೆ ಪರಶಿವಧ್ಯಾನದಿಂದ ಕೂಡಿ, ಸಖೀಗಣದೊಂದಿಗೂ, ತಾಯಿಯೊಂದಿಗೂ ಸಂತೋಷದಿಂದ ಕಾಲಕಳೆದಳು. ||೭೦||

ಇಲ್ಲಿಗೆ ಶ್ರೀಶಿವರಹಸ್ಯದ ಎರಡನೆಯ ಅಂಶದಲ್ಲಿ ದೇವೀವಿಹಾರವರ್ಣನೆಯೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ದ್ವಾವಿಂಶೋಽಧ್ಯಾಯಃ

### ಕೈಲಾಸದರ್ಶನಂ

|| ಸ್ಕಂದ ಉವಾಚ ||

ಏವಂ ದೇವ್ಯಾ ಪೂಜಿತಾ ಸಾ ಮೇನಾ ಧನ್ಯಮನೋರಥಾ ।
ದೇವ್ಯಾ ಕ್ರೀಡಾರಸಭರೈರ್ವಿಹಾರಶಯನಾಶನೈಃ ॥೧॥

ನಿನಾಯ ದಿವಸಾಂಸ್ತತ್ರ ಕೈಲಾಸೇ ನಂದಿತಾ ಭೃಶಂ ।
ಭೂಧರೋಽಪಿ ಸಮ್ಮೈನಾಕಃ ಪೂಜಿತಶ್ಶಂಕರೇಣ ಹಿ ॥೨॥

ರತ್ನಸೌಧೇ ಮಹಾಮಂಚೇ ಭಕ್ಷ್ಯಭೋಜ್ಯೈಶ್ಚ ಪರ್ವತಃ ।
ಸ್ರಗ್ಗಂಧವಾಸಸ್ತಾಂಬೂಲೈರ್ಗಣನಾಂ ಪೂಜನೈಸ್ತಥಾ ॥೩॥

---

ಶ್ರೀ ಶಿವರಹಸ್ಯದ ದ್ವಿತೀಯಾಂಶದಲ್ಲಿ ಇಪ್ಪತ್ತೆರಡನೆಯ ಅಧ್ಯಾಯ

ಹೀಗೆ ಮೇನಾದೇವಿಯು ಪಾರ್ವತಿಯಿಂದ ಸತ್ಕರಿಸಲ್ಪಟ್ಟವಳಾಗಿ, ಮಗಳೊಡನೆ ಅನೇಕ ಸರಸಸಲ್ಲಾಪಗಳಿಂದಲೂ, ಆಟಪಾಟಗಳಿಂದಲೂ, ಆಹಾರವಿಹಾರಾದಿಗಳಿಂದಲೂ ಕೈಲಾಸಪರ್ವತದಲ್ಲಿ ಬಹುಕಾಲ ಕಳೆದಳು. ಹಾಗೆಯೇ ಶಂಕರನಿಂದ ಪೂಜಿತನಾದ ಹಿಮವಂತನೂ ಸಹ ಮೈನಾಕನೊಡನೆ ಸುಖವಾಗಿದ್ದನು. ||೧-೨||

ಹಿಮವಂತನು ರತ್ನಮಯವಾದ ಉಪ್ಪರಿಗೆಯಲ್ಲಿ ದೊಡ್ಡ ಆಸನದಲ್ಲಿ ಮಂಡಿಸಿದವನಾಗಿ, ಭಕ್ಷ್ಯಭೋಜ್ಯಾದಿಗಳಿಂದಲೂ, ಹೂವು, ಗಂಧ, ತಾಂಬೂಲ

ನಾಗ್ಭಿಸ್ಸಂಭಾವಯಾಮಾಸ ನಿತ್ಯಂ ಹರ್ಷೋರುಧಾರಯಾ ।
ಫಲಂ ಮೂಲಂ ತಥೈವಾನ್ನಂ ವಾಸೋ ಗಂಧಸುಮಾದಿಕಂ ॥೪॥

ಯದ್ಯತ್ಪ್ರಿಯಕರಂ ಶಂಭೋಃ ಪ್ರಿಯಂ ದೇವೀ ಚ ಸಾ ಮುದೇ ।
ಪರ್ವತೇಂದ್ರಾಯ ಸಾ ದೇವೀ ಪ್ರೇಷಯಾಮಾಸ ನೋದಿತಾ ॥೫॥

ಶಿವಸ್ಯಾನುಮತೇನೈವ ನಿತ್ಯಂ ವೃದ್ಧ್ಯಾ ಸುಖೋದಕೈಃ ।
ಏವಂ ದೇವ್ಯಾ ಚ ದೇವೇನ ಹಿಮವಾನ್ ಭೂಧರೋತ್ತಮಃ ॥೬॥

ಪೂಜಿತೋ ಮೇನಯಾ ಸಾರ್ಧಂ ಮೈನಾಕೇನ ತದಾ ಗಿರಿಃ ।
ನಾನಾಹಾರವಿಹಾರೈಶ್ಚ ಪ್ರೀತ್ಯಾ ತತ್ರಾನುಮೋದಿತಃ ॥೭॥

ಏಕದಾ ಸನ್ನಿಧಿಂ ಪ್ರಾಪ್ಯ ಶಂಭೋಸ್ತತ್ರ ಗಿರೀಶ್ವರಃ ।
ತುಷ್ಟಾವ ದೇವಂ ದೇವೀಂ ಚ ಕೈಲಾಸೇ ಶಂಕರಾಲಯೇ ॥೮॥

ದಿಕ್ಚೇಲ ಫಾಲತಿಲಕಾನಲ ಕಾಲಕಾಲ
ವ್ಯಾಲೇಂದ್ರಮಾಲ ಗರನೀಲ ಕರಾಬ್ಜಶೂಲ ।

---

ಇವೇ ಮೊದಲಾದ ಸತ್ಕಾರಗಳಿಂದಲೂ, ಮೃದುಮಧುರವಾದ ಮಾತುಗಳಿಂದಲೂ ಸದಾ ಸತ್ಕೃತನಾಗಿದ್ದನು. ||೩-೪||

ಅಲ್ಲದೆ ಪರಶಿವನಿಗೆ ಇಷ್ಟವಾದ ಫಲ, ಮೂಲ, ಅನ್ನ, ವಸ್ತ್ರ, ಗಂಧಪುಷ್ಪಾದಿಗಳು ಇವೆಲ್ಲವನ್ನೂ ತನ್ನ ತಂದೆಯಾದ ಹಿಮವಂತನಿಗೂ ಪಾರ್ವತಿಯು ಕಳುಹಿಸುತ್ತಿದ್ದಳು. ಪರಮೇಶ್ವರನೂ ಅದಕ್ಕೆ ಸಮ್ಮತಿಸಿ ದಿನದಿನಕ್ಕೂ ಆ ವಸ್ತುಗಳನ್ನು ಹೆಚ್ಚಿಸಿ, ಹೆಚ್ಚಿಸಿ ಕಳುಹಿಸುತ್ತಿದ್ದನು. ಹೀಗೆ ಪಾರ್ವತೀಪರಮೇಶ್ವರರಿಂದ, ಮೇನಾ ಹಿಮವಂತರು ಸತ್ಕೃತರಾಗಿ ಬಹುಕಾಲ ಅಲ್ಲಿ ವಾಸಮಾಡತೊಡಗಿದರು. ||೫-೬||

ಹೀಗೆ ದೇವಶ್ರೇಷ್ಠರಿಂದ ಸತ್ಕೃತನಾದ ಪರ್ವತರಾಜನು ಪತ್ನೀಪುತ್ರರೊಡಗೂಡಿ, ಒಂದು ಸಾರಿ ಪರಮೇಶ್ವರನ ಸನ್ನಿಧಿಗೆ ಹೋಗಿ, ಅಲ್ಲಿದ್ದ ಪಾರ್ವತೀ ಪರಶಿವರನ್ನು ದೃಢಭಕ್ತಿಯಿಂದ ಸ್ತುತಿಸಲಾರಂಭಿಸಿದನು. ||೭-೮||

"ಓ ಪರಮೇಶ್ವರನೇ, ನೀನು ದಿಗಂಬರನು. ಅಗ್ನಿಯನ್ನೇ ಹಣೆಯಲ್ಲಿ ತಿಲಕವನ್ನಾಗಿ ಮಾಡಿಕೊಂಡಿರುವೆ. ಆದಿಶೇಷನನ್ನೇ ಹಾರವನ್ನಾಗಿ ನಿರ್ಮಿಸಿ

ಲೀಲಾಕೃತಾಂಗ ನಿಖಿಲಾಗಮತತ್ತ್ವಮೂಲ
ಬಾಲಾರ್ಧಗಾತ್ರ ಮುನಿಬಾಲಕೃತಾಲವಾಲ ॥೯॥

ತಿಗ್ಮಾಂಶುಶೀತಾಂಶುಜಹವ್ಯವಾಹ
ನೇತ್ರೋಜ್ಜ್ವಲನ್ಮದನಕಾಯ ಉಮಾಸಹಾಯ ।
ಭೂದಾರದಾರ ನರಸಿಂಹವಿದಾರಣೇಶ
ದೈತ್ಯೋರುಸಿಂಧುರಕಟೀತಟಚರ್ಮವಸ್ತ್ರ ॥೧೦॥

ಗಂಗಾತುಂಗಜಟೋರುಶೇಖರ ಸುಧಾಧಾಮಾರ್ಧಖಂಡೋಜ್ಜ್ವಲ
ಸ್ಫೂಲಾಪಾರದ್ವಿಜಿಹ್ವಹಾರವಲಯ ಪ್ರೋದ್ಯಜ್ಝಣನ್ನೂಪುರ ।
ಉಕ್ಷೇಂದ್ರೋತ್ತಮವಾಹನಾವ್ಯಯ ಹರಾಧಾರೋರುಸಂಸ್ಯಂದನ
ಸೋಮಾರ್ಯಮ್ಣಕಚಕ್ರಕರ್ಷಣ ಮಹಾವಾಹಃ ರ್ವವೇದೋತ್ತಮ ॥೧೧॥

---

ಕೊಂಡು, ಯಮನಿಗೂ ಯಮನಂತಿರುವೆ. ನಿನ್ನ ಕಂಠವು ವಿಷದ ಗುರುತಿನಿಂದ ನೀಲವಾಗಿದೆ. ಕೈಯ್ಯಲ್ಲಿ ತ್ರಿಶೂಲವಿರುವುದು. ಲೀಲಾಮಾತ್ರದಿಂದ ಶರೀರಿಯಾಗಿ ಕಾಣುವೆ. ಸಕಲಾಗಮಗಳಿಗೂ ನೀನೇ ಮೂಲಕಾರಣನಲ್ಲವೇ? ಅರ್ಧನಾರೀಶ್ವರನೂ, ಮಾರ್ಕಂಡೇಯ ರಕ್ಷಕನೂ ಆದ ನಿನಗೆ ನಮಸ್ಕಾರ. ||೯||

ಸೂರ್ಯ, ಚಂದ್ರ, ಅಗ್ನಿ ಇವರನ್ನೇ ಮೂರು ಕಣ್ಣುಗಳನ್ನಾಗಿ ಮಾಡಿಕೊಂಡು, ಅಗ್ನಿನೇತ್ರದಿಂದ ಮನ್ಮಥನ ಶರೀರವನ್ನು ಧ್ವಂಸಮಾಡಿರುವೆಯಲ್ಲವೇ? ಪಾರ್ವತೀಪತಿಯೊದ ಶಂಕರನೇ, ನೀನು ವರಾಹಾವತಾರಿಯೂ, ನರಸಿಂಹಾವತಾರಿಯೂ ಆದ ಮಹಾವಿಷ್ಣುವಿನ ಗರ್ವವನ್ನು ಶರಭಾವತಾರದಿಂದ ಕಮ್ಮಿ ಮಾಡಿರುವೆ. ಅಲ್ಲದೆ ಶೂರದೈತ್ಯರೆಂಬ ಮದ್ದಾನೆಗಳನ್ನೆಲ್ಲಾ ಕೊಂದು, ಅವರ ಚರ್ಮವನ್ನೇ ವಸ್ತ್ರವನ್ನಾಗಿ ಮಾಡಿಕೊಂಡಿರುವೆ. ||೧೦||

ಮಹಾದೇವನೇ, ಶ್ರೇಷ್ಠವಾದ ಗಂಗಾನದಿಯು ನಿನ್ನ ದಿವ್ಯವಾದ ಜಟೆಯಲ್ಲಿ ಅಡಗಿರುವುದು. ಅರ್ಧಚಂದ್ರನನ್ನೇ ಅಲಂಕಾರವಸ್ತುವನ್ನಾಗಿ ಮಾಡಿಕೊಂಡಿರುವೆ. ಸರ್ಪವೇ ನಿನಗೆ ಹಾರವಾಗಿರುವುದು. ವೃಷಭರಾಜನಮೇಲೆ ಕುಳಿತು, ಸಕಲ ಪ್ರಪಂಚಕ್ಕೂ ಆಧಾರವಾಗಿರುವ ಭೂಮಿಯನ್ನೇ ರಥವನ್ನಾಗಿ ಮಾಡಿಕೊಂಡಿರುವೆ. ಚಂದ್ರ ಸೂರ್ಯರ ಮಂಡಲಗಳನ್ನೇ ಎಳೆದು ಬಿಡುವಂತಹ ಶಕ್ತಿಯು

ಶಂಭೋ ಮೇ ದಿಶ ಭದ್ರಮದ್ಯ ದಯಯಾ ಮಾಂ ಪಾಹಿ ಸರ್ವೇಶ್ವರ
ಪಾಥೋಜಾತಭವೋತ್ತಮಾಂಗಹರಣಾಪಾರವ್ಯಥಾಂ ಸಂಹರ ।
ಪದ್ಮೋತ್ಥಾಪತಿನೇತ್ರಪದ್ಮನಿವಹಾಪಾರಾರ್ಚಿತಾಬ್ಜಾಂಘ್ರಿಕ
ಭೂಧೃಗ್ಧುರ್ಯಶರಾಸನೋರುವಿಹಿತಾಮೌರ್ವೀಮಹೀಧಾರಕ ॥೧೨॥
ಪಾಹ್ಯದ್ರೀಶ್ವರಮೌಲಿಲಿಂಗವಸತೇ ಶಂಭೋ ಮೃಡಾನೀಪತೇ ॥೧೩॥

ಕುಲಾಚಲಶರಾಸನಂ ಕುಲಿಶಪಾಣಿಭೋಗಪ್ರದಂ
ಕುಜಾಪತಿಶರೋತ್ತಮಂ ಕುಸುಮಬಾಣದಗ್ಧಾಂಗಕಂ ।
ಕುಲೀರಕವರಪ್ರದಂ ಕುಟಿಲಸೌರಿದರ್ಪಾಪಹಂ
ಕುಸೀದಜನದೂರಗಂ ಕುಮತಿದುಃಖದಂ ತ್ವಾಂ ಭಜೇ ॥೧೪॥

---

ನಿನ್ನಲ್ಲಿರುವುದು. ಸಕಲ ವೇದಗಳನ್ನೇ ನೀನು ಕುದುರೆಗಳಂತೆ ಅಧೀನದಲ್ಲಿಟ್ಟು ಕೊಂಡಿರುವೆ. ॥೧೧॥

ಕಮಲಭವನಾದ ಬ್ರಹ್ಮನ ಶಿರಸ್ಸನ್ನು ಕತ್ತರಿಸಿ, ಆದರಿಂದುಂಟಾದ ದುಃಖವನ್ನು ಅವನಿಗೆ ಹೋಗಲಾಡಿಸಿದವನು ನೀನು. ಹಾಗೆಯೇ ಕಮಲಾಪತಿಯಾದ ವಿಷ್ಣುವಿನ ನೇತ್ರಕಮಲದಿಂದ ಪೂಜಿತನಾದವನು ನೀನು. ಮತ್ತು ಭೂಭಾರವನ್ನು ಹೊತ್ತಿರುವ ಆದಿಶೇಷನನ್ನೇ ಬಿಲ್ಲಿನ ಹಗ್ಗವನ್ನಾಗಿ ಮಾಡಿಕೊಂಡವನು ನೀನು. ಇಂತಹ ಮಹಾಮಹಿಮನೂ, ಲಿಂಗಾಂತರ್ವರ್ತಿಯೂ, ಪಾರ್ವತೀಪತಿಯೂ ಆದ ಸರ್ವೇಶ್ವರನೇ, ಮಹಾದೇವನೇ, ನನಗೆ ದಯೆಯಿಂದ ಸರ್ವವಿಧದಲ್ಲಿಯೂ ಸೌಖ್ಯವನ್ನುಂಟುಮಾಡುವವನಾಗು. ॥೧೨-೧೩॥

ತ್ರಿಪುರಾಸುರರ ನಾಶಕಾಲದಲ್ಲಿ ಮೇರುಪರ್ವತವನ್ನೇ ಧನುಸ್ಸನ್ನಾಗಿ ಮಾಡಿಕೊಂಡವನೇ, ಇಂದ್ರನಿಗೆ ಸಕಲಭೋಗಗಳನ್ನೂ ಒದಗಿಸಿದವನೇ? ಮಹಾವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡ ಮಹೇಶ್ವರನೇ, ನೀನು ಕುಸುಮಬಾಣನಾದ ಮನ್ಮಥನನ್ನು ಧ್ವಂಸಮಾಡಿದೆಯಲ್ಲವೆ? ವಟುವಾದ ಮಾರ್ಕಂಡೇಯನಿಗೆ ವರಪ್ರದಾನಮಾಡಿ, ಕ್ರೂರನಾದ ಯಮನ ಅಹಂಕಾರವನ್ನು ಮುರಿದು, ದುಷ್ಟರನ್ನು ಶಿಕ್ಷಿಸಿ, ದುಷ್ಟರಿಗೆ ದುಃಖಪ್ರದನಾಗಿರುವ ಸರ್ವೇಶ್ವರನೇ ನಿನಗೆ ನಮಸ್ಕರಿಸುವೆನು" ॥೧೪॥

ತತ್ಸ್ತುತಿಂ ಸ ಶಿವಶ್ಶ್ರುತ್ವಾ ಹರ್ಷನಿರ್ಭರಮಾನಸಃ
ಉವಾಚ ನಂದಿನಂ ವೀಕ್ಷ್ಯ ದೇವದೇವೋದ್ರಿಜಾಸಖಃ ।
ಪ್ರಣಮಂತಂ ಚ ಶೈಲಾದಿಂ ಸ್ವರ್ಣವೇತ್ರಲಸತ್ಕರಂ ॥೧೫॥

ಭೂಧರೇಂದ್ರೇಣ ಗಚ್ಛ ತ್ವಂ ವಿಮಾನೇನಾರ್ಕರೋಚಿಷಾ ।
ದರ್ಶಯಾಸ್ಮೈ ಮದೀಯೋಽಯಂ ಕೈಲಾಸಸ್ಸ ಶಿವಾಲಯಃ ॥೧೬॥

ನ ಗ್ಲಾನಿರ್ನಶ್ರಮೋ ವಾ ಸ್ಯಾತ್ತತ್ತಥಾ ಸಂವಿಧೀಯತಾಂ ।
ಗಚ್ಛತೋ ಮೇನಯಾ ಸಾರ್ಧಂ ಮೈನಾಕೇನ ನಗೇಶಿತುಃ ॥೧೭॥

॥ ಈಶ್ವರ ಉವಾಚ ॥

ಇತಿ ಶಂಭೋರ್ವಚಶ್ಶ್ರುತ್ವಾ ನಂದಿಕೇಶಃ ಕೃತಾಂಜಲಿಃ ।
ಹಿಮಾಚಲಂ ಸಮೈನಾಕಂ ಗೃಹೀತ್ವಾ ಕರಪಲ್ಲವೈಃ ॥೧೮॥

॥ ಸ್ಕಂದ ಉವಾಚ ॥

ಅತ್ಯರ್ಕಂ ಸುವಿಚಿತ್ರಂ ಚ ಪತಾಕಾವಲಿಭಾಸುರಂ ।
ಪುಷ್ಪಮಾಲಾಪರಿಕ್ಷಿಪ್ತಂ ಮುಕ್ತಾಮಾಲಾಪರಿಷ್ಕೃತಂ ॥೧೯॥

---

ಎಂದು ಸ್ತುತಿಸಿದ ಹಿಮವಂತನ ಸ್ತುತಿಗೆ ಶಂಕರನು ಮೆಚ್ಚಿ, ಹರ್ಷಭರಿತನಾಗಿ, ಹತ್ತಿರದಲ್ಲಿಯೇ ಚಿನ್ನದ ಬೆತ್ತವನ್ನು ಹಿಡಿದು ನಮಸ್ಕರಿಸಿ ನಿಂತಿದ್ದ ನಂದೀಶ್ವರನನ್ನು ನೋಡಿ ಹೀಗೆಂದನು. ॥೧೫॥

"ನಂದೀಶ್ವರನೇ, ನೀನು ಮೇನಾ ಮತ್ತು ಪರ್ವತರಾಜರನ್ನೂ, ಮೈನಾಕನನ್ನೂ, ದಿವ್ಯವಾದ ವಿಮಾನದಲ್ಲಿ ಕೂರಿಸಿಕೊಂಡು ಇಲ್ಲಿರುವ ಶಿವಾಲಯಗಳನ್ನೆಲ್ಲಾ ಸರಿಯಾಗಿ ತೋರಿಸು. ಹಾಗೆ ಸಂಚರಿಸುವಾಗ ಈ ಮೇನಾದಂಪತಿಗಳಿಗೂ ಮೈನಾಕನಿಗೂ, ಶ್ರಮವಾಗಲಿ, ಜುಗುಪ್ಸೆಯಾಗಲಿ, ಇಲ್ಲದಿರುವಂತೆ ನೋಡಿಕೊ." ॥೧೬-೧೭॥

ಹಾಗೆ ಅಪ್ಪಣೆಮಾಡಿದ ಶಂಕರನ ಮಾತಿನಂತೆ ನಂದಿಯು ಹಿಮಾಚಲನನ್ನೂ, ಮೈನಾಕನನ್ನೂ, ಕೈಹಿಡಿದು ಕರೆದುಕೊಂಡುಹೋಗಿ ದಿವ್ಯವಿಮಾನದಲ್ಲಿ ಕೂರಿಸಿದನು. ಆ ವಿಮಾನವು ಕಾಂತಿಯಲ್ಲಿ ಸೂರ್ಯನನ್ನು ಮೀರಿಸಿತ್ತು. ಧ್ವಜ

ಫಲಪುಷ್ಪಾಂಬುಸಂಯುಕ್ತಂ ಭಕ್ಷ್ಯಭೋಜ್ಯಸಮನ್ವಿತಂ ।
ಮೃದಂಗಮುರಜೋದ್ಘುಷ್ಟಂ ರುದ್ರಕನ್ಯಾವೃತಂ ತಥಾ ॥೨೦॥

ಗಣತೌರ್ಯತ್ರಿಕಾಸಾರವಿನಾದಿತದಿಶಾಮುಖಂ ।
ಶಿವಾಜ್ಞಯಾ ಗಿರಿವರಂ ರತ್ನಸಿಂಹಾಸನೇ ವರೇ ॥೨೧॥

ಉಪವೇಶ್ಯಾಸನೇ ನಂದೀ ಸಮೈನಾಕಂ ಸ್ವಯಂ ತದಾ ।
ರತ್ನಸಿಂಹಾಸನೇ ವಿಪ್ರಗಣಬೃಂದೈಸ್ಸಮನ್ವಿತಃ ॥೨೨॥

॥ ನಂದಿಕೇಶ ಉವಾಚ ॥

ದರ್ಶಯಾಮಾಸ ಶೈಲೇಂದ್ರಂ ಗಣೇಂದ್ರೋ ಭೂಧರಂ ತದಾ ।
ಪ್ರಾಹ ಪ್ರಾಲೇಯಶೈಲೇಂದ್ರಂ ನಂದೀ ನಂದಿತಮಾನಸಃ ॥೨೩॥

ಪಶ್ಯ ಧನ್ಯೇನ ನೇತ್ರೇಣ ಕೈಲಾಸಂ ಶಂಕರಸ್ಯ ಹಿ ।
ಯತ್ರೈಕಂ ವಾ ಶಿವಾಗಾರಂ ತತ್ಕ್ಷೇತ್ರಂ ಯೋಜನಾಯುತಂ॥೨೪॥

---

ಪತಾಕೆಗಳಿಂದ ಪ್ರಕಾಶಮಾನವಾಗಿತ್ತು. ಪುಷ್ಪಮಾಲೆಗಳಿಂದಲೂ, ಮುತ್ತಿನ ಸರಗಳಿಂದಲೂ, ಫಲ, ಪುಷ್ಪ, ಜಲ, ಇವುಗಳಿಂದಲೂ, ವಾದ್ಯಧ್ವನಿ ಗೈಯ್ಯುತ್ತಿರುವ ರುದ್ರಾಣಿಯರಿಂದಲೂ ಕೂಡಿ ಬಹು ಮನೋಹರವಾಗಿತ್ತು. ॥೧೮-೧೯-೨೦॥

ಆ ವಿಮಾನದಲ್ಲಿರುವ ಪ್ರಮಥಗಣಗಳು ಧ್ವನಿಮಾಡುವ ತುತ್ತೂರಿಯ ವಾದ್ಯವು ದಿಗಂತವನ್ನು ಮುಟ್ಟುತ್ತಿತ್ತು. ಇಂತಹ ವಿಮಾನದಲ್ಲಿ ನಂದಿಯು ಹಿಮವಂತನನ್ನು ಶಂಕರನ ಅಪ್ಪಣೆಯಂತೆ ರತ್ನಸಿಂಹಾಸನದಲ್ಲಿ ಕೂರಿಸಿ, ಮೈನಾಕನೂ ತಾನೂ ಬೇರೆ ಬೇರೆ ದಿವ್ಯಪೀಠಗಳಲ್ಲಿ ಕುಳಿತುಕೊಂಡು, ವಿಪ್ರಗಣಗಳಿಂದ ಕೂಡಿದವನಾಗಿ ಪ್ರಯಾಣಮಾಡಿದನು. ॥೨೧-೨೨॥

ಅನಂತರ ಮುಂದೆ ಮುಂದೆ ಹೋಗುತ್ತಾ ನಂದಿಯು, ಪರ್ವತರಾಜನಿಗೆ ಕೈಲಾಸಪರ್ವತದ ಸೊಬಗನ್ನು ತೋರಿಸುತ್ತಾ, ಸಂತುಷ್ಟಾಂತರಂಗನಾಗಿ ಹಿಮವಂತನನ್ನು ಕುರಿತು ಹೀಗೆಂದನು. ॥೨೩॥

"ಪರ್ವತರಾಜನೇ, ಈ ಪರ್ವತವನ್ನು ನೋಡುವುದರಿಂದ ನಿನ್ನ ನೇತ್ರವು ಪವಿತ್ರವಾಗುವುದು. ಅನೇಕ ಯೋಜನಾತ್ಮಕವಾಗಿರುವ ಶಿವಕ್ಷೇತ್ರದಲ್ಲಿ ಒಂದು

ತತ್ರೈವ ವಸತಾಂ ಪುಂಸಾಮಪಿ ಕೀಟಪಿಪೀಲಿಕಂ ।
ಮುಕ್ತಿರೀಶಪ್ರಸಾದೇನ ಪಶ್ಯತಾಂ ಪಾಪನಾಶನಂ ॥೨೫॥

ಅತ್ರಾನಂತಶಿವಾಗಾರೇ ಮೌಲಿಕುಂಭೈಕದರ್ಶನಾತ್ ।
ನ ಜಾನೇ ಮಹಿಮಾಂ ವಕ್ತುಂ ಶಿವೋ ಜಾನಾತಿ ನೇತರಃ ॥೨೬॥

ಕೈಲಾಸಂ ಶಂಕರಾವಾಸಂ ನಾನಾದ್ರುಮಲತಾಯುತಂ ।
ರತ್ನಪುಷ್ಕರಿಣೀಫುಲ್ಲಸರೋಜಕುಲಸಂಕುಲಂ ॥೨೭॥

ನಾನಾವಲ್ಲೀವೇಷ್ಟಿತೋರುವನಸ್ಪತಿಶತಾಯುತಂ ।
ನಾನಾಪಕ್ಷಿರುತಾಪಾರವನನಿರ್ಝರಕಂಧರಂ ॥೨೮॥

ಮೃಗೇಂದ್ರಸಿಂಧುರೇಂದ್ರಾದಿಚಮರೀಮಹಿಷಾವೃತಂ ।
ಕೋಕಿಲಾಕಾಹಲೀಗಾನಶುಕಶಾರಿಕಸಾರಸೈಃ ॥೨೯॥

ಕುರರಾಕ್ರಂದಬಹುಲಂ ಹಂಸನಾದವಿನಾದಿತಂ ।
ನಗಮೌಲಿಗತೋತ್ತುಂಗಸಾಲತಾಲದ್ರುಮಾಕುಲಂ ॥೩೦॥

---

ಶಿವದೇವಾಲಯವನ್ನು ದರ್ಶನಮಾಡಿ, ಅಲ್ಲಿ ವಾಸಮಾಡಿದರೂ, ಶಿವಾನುಗ್ರಹವು ದೊರೆತು ಪಾಪವು ನಾಶವಾಗಿ ಶಾಶ್ವತವಾದ ಮುಕ್ತಿಯು ಲಭಿಸುವುದು. ಕೇವಲ ಮನುಷ್ಯರಿಗೆ ಮಾತ್ರವಲ್ಲದೆ ಕ್ರಿಮಿಕೀಟಾದಿಗಳೂ ಅದರಿಂದ ಮುಕ್ತವಾಗುವುವು. ||೨೪-೨೫||

ಇಲ್ಲಿ ಅನಂತವಾದ ಶಿವದೇವಾಲಯಗಳಿರುವುವು. ಈ ದೇವಾಲಯಗಳ ಕಲಶವನ್ನು ದರ್ಶನಮಾಡಿದರೆ ಸಾಕು. ಆ ದರ್ಶನದಿಂದ ಒದಗುವ ಪುಣ್ಯವನ್ನು ಬಾಯಿಂದ ಹೇಳಲು ಸಾಧ್ಯವಿಲ್ಲ. ಈ ಕೈಲಾಸವು ಸಾಕ್ಷಾತ್ಪರಮೇಶ್ವರನಿಗೆ ಆವಾಸಭೂತವಾದದ್ದು. ಇಲ್ಲಿ ನಾನಾವಿಧವಾದ ಮರಬಳ್ಳಿಗಳೂ, ರತ್ನಪುಷ್ಕರಿಣಿಗಳೂ, ಅದರಲ್ಲಿ ಕಮಲಪಂಕ್ತಿಗಳೂ ಅತಿಶಯವಾಗಿ ಕಂಡುಬರುತ್ತಿರುವುವು. ||೨೬-೨೭||

ವಿಧವಿಧವಾದ ಬಳ್ಳಿಗಳಿಂದಲೂ, ಅಸಂಖ್ಯವಾದ ಮೂಲಿಕೆಗಳಿಂದಲೂ ಈ ಪರ್ವತವು ಸುಂದರವಾಗಿರುವುದು. ಪಕ್ಷಿಗಳ ಮಂಜುಳಧ್ವನಿ, ಗಿರಿನದಿಗಳಿಂದ ಭೋರ್ಗರೆಯುವ ಗುಹೆಗಳು, ಸಿಂಹ, ಮದ್ದಾನೆ, ಚಮರೀಮೃಗ, ಕಾಡೆಮ್ಮೆ

ಸುರಮ್ಯಬಂಧುರಾಮೋದಪುಷ್ಪಕಿಂಜಲ್ಕಮಾರುತಂ ।
ಪುಷ್ಪಗುಚ್ಛಭರಾಲೋಲಮಾರುತಾಮಲಭೂತಲಂ ॥೩೧॥

ತಲಶೋಭಿತಪುಷ್ಪೌಘಫಲತಾರಾಯಿತೋತ್ತಮಂ ।
ಪ್ರಭಾತವಾತಪೋತೋದ್ಯಚ್ಛೀತಲಾಯಿತಭೂತಲಂ ॥೩೨॥

ದ್ರೋಣೀಜಾಲಂಬಿಸಕ್ಷೌದ್ರರಸಾಕ್ತಸಸುಧಾಂಗಣಂ ।
ಭ್ರಮದ್ಭ್ರಮರಝಂಕಾರಮಧೂಕೋದ್ದಾಮಗಂಧಿನಂ ॥೩೩॥

ಕೇತಕೀಪುಷ್ಪಸೌರಭ್ಯಸುಗಂಧಾಯಿತದಿಕ್ತಟಂ ।
ಕುರವೋದ್ದಾಮಗಂಧೋದ್ಯಚ್ಚಂದನಾನಂದಿತಾನನಂ ॥೩೪॥

ತಿಲಕಾಯಿತದೇವದ್ರುಮೌಲಿಸ್ಥತಿಲಕೈರ್ಯುತಂ ।
ವಾತಪೋತಮುಖಾಹಾರವಲ್ಮೀಕೋತ್ಥಿತಪನ್ನಗಂ ॥೩೫॥

---

ಮುಂತಾದ ದಿವ್ಯವೃಕ್ಷಗಳ ಸಾಲು, ಇವುಗಳಿಂದ ಈ ಕೈಲಾಸಶಿಖರವು ಬಹು ಮನೋಹರವಾಗಿರುವುದು. ||೨೮-೨೯-೩೦||

ಸುವಾಸನೆಯುಳ್ಳ ಪುಷ್ಪಗಳ ಮಕರಂದವನ್ನು ಹೊಂದಿ ಮಂದಮಾರುತವು ಸರ್ವವ್ಯಾಪಿಯಾಗಿದೆ. ಹೂವಿನ ಗೊಂಚಲುಗಳನ್ನು ತಂದು ಭೂಮಿಗೆ ಹರಡುವ ವಾಯುವು ನೆಲದಲ್ಲಿ ಹೂವುಗಳನ್ನು ಎರಚಿ, ವೃಕ್ಷಗಳ ಅಧೋಭಾಗದಲ್ಲಿ ನಕ್ಷತ್ರಗಳ ಭ್ರಾಂತಿಯನ್ನುಂಟುಮಾಡುತ್ತಿದೆ. ಬೆಳಗಿನ ಹೊತ್ತಿನಲ್ಲಿ ಬೀಸುವ ಶೀತಮಾರುತದಿಂದ ಈ ಪ್ರದೇಶವೆಲ್ಲಾ ಶೀತಲವಾಗಿದೆ. ||೩೧-೩೨||

ದೊಡ್ಡ ಗಡಿಗೆಯ ಆಕಾರದಲ್ಲಿ ಕಟ್ಟಿರುವ ಜೇನುಹುಟ್ಟಿಯು ಪ್ರತಿ ಹರ್ಮ್ಯಗಳಲ್ಲಿಯೂ ಕಂಗೊಳಿಸುತ್ತಿದೆ. ಹಾಗೆಯೇ ಮಕರಂದ ಪಾನಮತ್ತಗಳಾದ ದುಂಬಿಗಳು ಝೇಂಕಾರಮಾಡುತ್ತಾ ಹಾರಾಡುತ್ತಿರುವುದು ಮನೋಹರವಾಗಿ ಕಾಣುತ್ತಿದೆ. ತಾಳೆಹೂವಿನ ಸುಗಂಧವು ದಿಗಂತವಿಶ್ರಾಂತವಾಗಿದೆ. ಗೋರಂಟಿ ಹೂವಿನ ವಾಸನೆಯು ಚಂದನವೃಕ್ಷವನ್ನು ಮುಸುಗಿ ಗಮಗಮಿಸುತ್ತಿದೆ. ||೩೩-೩೪||

ಕೈಲಾಸದ ಅಗ್ರಭಾಗದಲ್ಲಿ ದೇವವೃಕ್ಷಗಳಿಗೆಲ್ಲಾ ತಿಲಕದಂತೆ ಕಾಣುವ ತಿಲಕವೃಕ್ಷಗಳು ಜನಮನೋಹರವಾಗಿರುವುವು. ಹುತ್ತದಮೇಲೆ ಸರ್ಪಗಳು

**ಕರಟೀಕಟಧಾರಾದ್ರೀಕೃತಗಂಧಿತಭೂತಲಂ।**
**ರೋಮಂಥಫೇನಬಿಂದೂದ್ಯನ್ಮಹಿಷೀಣಾಂ ಗವಾಂ ತಥಾ ॥೩೬॥**

**ಊಧೋನಿರ್ಯತ್ಪಯಃಪೂರಪಂಕಿಲಾಯಿತಭೂತಲಂ।**
**ತತ್ಪಂಕಪಂಕ್ತಿಸಂಲಗ್ನವರೈಣಖುರಭೂತಲಂ ॥೩೭॥**

**ಮುಸ್ತಾಮ್ರೇಡನಕೋದ್ಘೃಷ್ಟಕೋಲದಂಷ್ಟ್ರೋತ್ಥಿತೋಪಲಂ।**
**ಗೌರಿಕಾಪೀತಹರಿತರಕ್ತಮಾಂಜಿಷ್ಠಧಾತುಭಿಃ ॥೩೮॥**

**ಸ್ರವಂತಂ ರೀತಿಭಿಶ್ಶೈಲಂ ಗಜೇಂದ್ರಮಿವ ಚ ತ್ರಿಧಾ।**
**ಉತ್ತುಂಗಶಿಖರಾಪಾರಶೃಂಗೈರುಲ್ಲಿಖಿತಾಂಬರಂ ॥೩೯॥**

॥ ಸ್ಕಂದ ಉವಾಚ ॥

**ದರ್ಶಯಾಮಾಸ ನಂದೀಶೋ ನಗರಾಜಾಯುತಂ ನಗಂ।**
**ಕೈಲಾಸಂ ಕಲಧೌತೋದ್ಯದ್ರಮ್ಯಕಾಂತಿವಿರಾಜಿತಂ ॥೪೦॥**

---

ಕುಳಿತು ಮಂದಮಾರುತವನ್ನು ಸೇವಿಸುತ್ತಿರುವುವು. ಕಾಡಿನಲ್ಲಿರುವ ಮದ್ದಾನೆಗಳು ತಮ್ಮ ಸುಗಂಧಮಯವಾದ ಮದೋದಕವನ್ನು ಸುರಿಸುತ್ತಾ ಆ ಪ್ರದೇಶವನ್ನೆಲ್ಲಾ ಸುವಾಸನೆಯುಳ್ಳದ್ದನ್ನಾಗಿ ಮಾಡಿರುವುವು. ಎಮ್ಮೆಗಳೂ, ಹಸುಗಳೂ ಮೆಲುಕು ಹಾಕುತ್ತಾ ತಮ್ಮ ಬಾಯಿಂದ ಹೊರಡುವ ನೊರೆಯನ್ನು ಬಿಂದುಬಿಂದುಗಳಾಗಿ ಹರಡಿರುವುವು. ॥೩೫-೩೬॥

ಹಸುಗಳ ಕೆಚ್ಚಲಿನಿಂದ ಹೊರಟ ಹಾಲಿನ ಧಾರೆಯಿಂದ ಭೂಮಿಯೆಲ್ಲಾ ಕೆಸರಾಗಿದ್ದಿತು. ಅಂತಹ ಕೆಸರಿನಲ್ಲಿ ಜಿಂಕೆಗಳು ಓಡಾಡಿರುವುದರಿಂದ ಅವುಗಳ ಗೊರಸುಗಳು ಅಲ್ಲಿ ಪ್ರತಿಬಿಂಬಿಸುತ್ತಿರುವುವು. ಕಲ್ಲಿನ ಪೊಟರೆಗಳಲ್ಲಿ ಬೆಳೆದಿರುವ ಮುಸ್ತಾಬಳ್ಳಿಯನ್ನು ತಿನ್ನುವ ಸಲುವಾಗಿ ಹಂದಿಗಳು ತಮ್ಮ ಕೋರೆದಾಡೆಗಳಿಂದ ಕಲ್ಲುಗಳನ್ನು ಎತ್ತಿ ಮೇಲಕ್ಕೆ ಹಾಕಿರುವುವು. ಅಲ್ಲಲ್ಲಿ ಬಿಳುಪು, ಹಳದಿ, ನೀಲಿ, ಕೆಂಪು ಮುಂತಾದ ವರ್ಣದ ಗೈರಿಕಾದಿ ಧಾತುಗಳು ಬಣ್ಣಬಣ್ಣವಾಗಿ ಕಾಣುತ್ತಿರುವುವು. ॥೩೭-೩೮॥

ಗೈರಿಕಾದಿಧಾತುವರ್ಣಗಳಿಂದ ರಂಜಿತವಾಗಿರುವ ಪರ್ವತವು ಮೂರುವಿಧವಾದ ವರ್ಣಗಳಿಂದ ಅಲಂಕೃತವಾಗಿ ದೊಡ್ಡ ಮದ್ದಾನೆಯಂತೆ ಕಾಣುತ್ತಿರುವುದು.

ಪ್ರಾಹ ತಂ ನಂದಿಕೇಶೋಽಪಿ ಶಿಖರೀಂದ್ರಂ ಶಿವಾಜ್ಞಯಾ ॥೪೧॥
ಪಶ್ಯ ಶೈಲಂ ಮಹಾಶೈಲ ಮಹೇಶಸ್ಯ ದೃಶಾ ತವ ।

॥ ನಂದಿಕೇಶ್ವರ ಉವಾಚ ॥

ಪಶ್ಯ ಪಶ್ಯೇದಮತುಲಂ ಪ್ರಾಕಾರಂ ವರಗೋಪುರಂ ॥೪೨॥

ನಾನಾಗೋಪುರಸೌಧೈಶ್ಚ ಮದಾಲಯಮಿದಂ ತತಂ ।
[1]ನಿಕೇಶಸ್ಯೇದಮತುಲಂ ಪ್ರಾಕಾರಂ ವರಗೋಪುರಂ ॥೪೩॥

ಏಷ ರತ್ನಗಿರಿರ್ಭಾತಿ ರತ್ನಕಾಂತಶಿಲೋಚ್ಚಯಃ ।
ತತ್ರ ರತ್ನಾಗ್ರಶಿಖರಃ ಪ್ರಾಸಾದೋಽಯಂ ಮಹೇಶಿತುಃ ॥೪೪॥

ಉದ್ಯತ್ಪತಾಕರುಚಿರೋ ರತ್ನತೋರಣಮಂಡಿತಃ ।
ಹರಿನ್ಮಣಿಮಯೋ ಭಾತಿ ಸಹಸ್ರಸ್ತಂಭಮಂಟಪಃ ॥೪೫॥

---

ಅಲ್ಲದೆ, ಅದರ ಎತ್ತರವಾದ ಶಿಖರದ ಅಗ್ರಭಾಗವು ಆಕಾಶವನ್ನು ಗೀಚುತ್ತಿದೆಯೋ ಎನ್ನುವಷ್ಟು ಎತ್ತರವಾಗಿರುವುದು. ಇಂತಹ ಪರ್ವತವನ್ನು ನಂದೀಶ್ವರನು ಹಿಮರಾಜನಿಗೆ ಪರಿಚಯಮಾಡಿಕೊಡುತ್ತಾ, ಅಲ್ಲಿರುವ ರಜತಮಯವಾದ ಶಿಖರಗಳ ರಮ್ಯಕಾಂತಿಯಿಂದ ವಿರಾಜಿಸುವ ಕೈಲಾಸಶಿಖರವನ್ನು ತೋರಿಸುತ್ತಾ ಹೀಗೆಂದನು. ॥೩೯-೪೦-೪೧॥

"ಪರ್ವತರಾಜನೇ, ಈ ಮಹೇಶ್ವರನ ಆವಾಸಸ್ಥಾನವಾದ ಕೈಲಾಸಪರ್ವತವನ್ನು ನೋಡು. ಇದರ ಪ್ರಾಕಾರವೂ ಗೋಪುರವೂ ಎಷ್ಟು ಮನೋಹರವಾಗಿದೆ? ನನ್ನ ಮನೆಯಾದ ನಂದಿಕೇಶಾಲಯವು ನಾನಾವಿಧವಾದ ಗೋಪುರಗಳಿಂದಲೂ, ಸೌಧಗಳಿಂದಲೂ ರಮಣೀಯವಾಗಿ ಕಾಣುತ್ತಿರುವುದು. ಇದರಲ್ಲಿರುವ ಅಂಬಿಕೇಶಾಲಯವೆಂಬ ಶಿವಲಿಂಗಾಲಯದ ಗೋಪುರವನ್ನು ನೋಡು. ॥೪೨-೪೩॥

ಇಲ್ಲಿ ಕಾಣುವುದೇ ರತ್ನಗಿರಿ. ಅನೇಕ ಅಮೂಲ್ಯರತ್ನಗಳಿಂದ ಕೂಡಿದ ಪರ್ವತವಿದು. ಇದರ ಮೇಲೆ ಕಾಣುವ ಪ್ರಾಸಾದವು ರತ್ನಗಿರಿಯ ಶಿಖರದಲ್ಲಿರುವುದು. ಈ ಪ್ರಾಸಾದಕ್ಕೆ ಹೊಳೆಯುವ ಧ್ವಜಗಳೂ, ರತ್ನಮಯವಾದ ತೋರಣ

---

1 ಅಂಬಿಕೇಶಾಖ್ಯ (ಪಾ. ರ)

ಮಧ್ಯಶೈಲಂ ಸದಾ ಭಾತಿ ಹರಮಾನಸಮೋದಭೂಃ ।
ಕೋಟಿಲಿಂಗಾಲಯಾನಾಂ ಚ ಶಿಖರಾಣ್ಯಪಿ ಪಶ್ಯ ಭೋ ॥೪೬॥

ದರ್ಶನೇನಾಪಿ ಪಾಪಾನಾಂ ಪ್ರಲಯೋದ್ಯ ಭವಿಷ್ಯತಿ ।
ಏಷ ದಕ್ಷಿಣತೋ ಮೇರೋಃ ಪ್ರಾಕಾರೋ ಮಣಿಕಲ್ಪಿತಃ ॥೪೭॥

ಚಂಡೀಶ್ವರಾಲಯಂ ಪಶ್ಯ ರತ್ನಸೌಧವರಾನ್ವಿತಂ ।
ಚಂಡೀಶ್ವರೇಶಶಿಖರಂ ಪಶ್ಯ ತಚ್ಚ ನಮಸ್ಕುರು ॥೪೮॥

ಲಿಂಗಾಯುತಮಹಾಪದ್ಮಪ್ರೋದ್ಯತ್ಕುಂಭೈಕಭಾಸುರಂ ।
ಪಶ್ಯ ಶೈಲೇಶ್ವರಾಪಾರಗೋಪುರಾಣಾಂ ತಲಾನ್ಯಪಿ ॥೪೯॥

ಸುರತ್ನಪದ್ಮಿನೀ ಚೇಯಂ ರತ್ನಸೋಪಾನಮಂಟಪೈಃ ।
ಪರಿತಃ ಪರಿಪೀತಾ ಚ ರತ್ನಕುಂಡಲಹಲ್ಲಕೈಃ ॥೫೦॥

---

ಗಳೂ, ಹರಿನ್ಮಣಿಕೃತವಾದ ಸಹಸ್ರ ಕಂಬಗಳ ಮಂಟಪಗಳೂ ಸುಂದರವಾಗಿ ಕಾಣುತ್ತಿರುವುವು. ||೪೪-೪೫||

ಪರಶಿವನ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ ಮಧ್ಯಶೈಲವು ಕೋಟಿಲಿಂಗಾಲಯಗಳಿಂದಲೂ, ಅವುಗಳ ಶಿಖರಗಳಿಂದಲೂ, ಕೂಡಿ ಇಲ್ಲಿ ಕಾಣುತ್ತಿರುವುವು. ಇವುಗಳ ದರ್ಶನಮಾತ್ರದಿಂದಲೇ ಮನುಷ್ಯನು ಸಕಲ ಪಾಪಗಳನ್ನೂ ಕಳೆದುಕೊಳ್ಳುವನು. ಅದೇ ರೀತಿ ದಕ್ಷಿಣಭಾಗದಲ್ಲಿ ರತ್ನಖಚಿತವಾದ ಮೇರುಪರ್ವತದ ಪ್ರಾಕಾರವಿರುವುದು. ||೪೬-೪೭||

ಈ ಪ್ರಾಕಾರದಲ್ಲಿ ಚಂಡೀಶ್ವರಾಲಯವಿರುವುದು. ಅದರ ಶಿಖರವನ್ನು ನೋಡಿ ಅದಕ್ಕೆ ನಮಸ್ಕರಿಸು. ಹಾಗೆಯೇ ಮುಂದೆ ನೋಡಿದರೆ ಹತ್ತುಸಾವಿರ ಶಿವಲಿಂಗಾಲಯಗಳೂ, ಅಷ್ಟೇ ದೇವಾಲಯ ಶಿಖರಗಳೂ, ಅಷ್ಟೇ ಗೋಪುರಗಳೂ ಕಾಣುತ್ತಿರುವುವು. ಇವುಗಳನ್ನು ನೋಡಿ ಸಂತುಷ್ಟನಾಗು. ||೪೮-೪೯||

ಅಲ್ಲಿಯೇ ರತ್ನಕೊಳವಿರುವುದು. ಅದಕ್ಕೆ ನವರತ್ನಗಳಿಂದ ಮಂಟಪಗಳನ್ನೂ, ಮೆಟ್ಟಿಲುಗಳನ್ನೂ ರಚಿಸಿರುವರು. ಇದರಲ್ಲಿ ರತ್ನಕುಂಡಲಗಳಂತಿರುವ ಸೌಗಂಧಿಕ ಪುಷ್ಪಗಳನ್ನು ನೋಡಬಹುದಾಗಿದೆ. ಕಮಲಗಳ ಪರಾಗದಿಂದ ರಂಜಿಸುವ ಮಣಿ

ಮಣಿಚ್ಛೈರರವಿಂದೋದ್ಯತ್ಪರಾಗರಸರಂಜಿತಾ ।
ಕೈಲಾಸೇಶಸ್ಯ ಶಿಖರಂ ಪಶ್ಯ ಭೂಧರನಾಯಕ ॥೫೧॥

ಉದ್ಯತ್ಪತಾಕಕಲಶರತ್ನಗೋಪುರಭಾಸುರಂ ।
ಅತ್ರ ಸ್ವಯಂ ಮಹಾದೇವಸ್ಸಂಪೂಜಯತಿ ಸರ್ವದಾ ॥೫೨॥

ತಲ್ಲಿಂಗಂ ವರಿವಸ್ಯಾತೋ ಹರ್ಷತೋ ದೇವನಾಯಕಃ ।
ಪ್ರದೋಷೇಷು ವಿಶೇಷೇಣ ಪಶ್ಯನ್ನೃತ್ತ್ಯೇರುಮಂಟಪೇ ॥೫೩॥

ಅಭ್ರಂಲಿಹೈರ್ಮಸ್ತಕುಂಭೈರ್ವಿಶಾಲೈರ್ಮಣಿಭಾಸುರೈಃ ।
ಸುರಮ್ಯರತ್ನವೇದೀಭಿಃ ಪರಿತಃ ಪರಿವೇಷ್ಟಿತೈಃ ॥೫೪॥

ಅತ್ರ ದೇವೀಂ ಸಮಾವೇಶ್ಯ ರತ್ನಸಿಂಹಾಸನೇ ಶಿವಃ ।
ಮಣಿರಂಗೇ ಸದಾ ಸಾಯಂ ನೃತ್ಯತ್ಯಾನಂದನಿರ್ಭರಃ ॥೫೫॥

---

ಮಯವಾದ ತಾವರೆಗಳು ಇಲ್ಲಿ ರಂಜಿಸುತ್ತಿರುವುವು. ಇಷ್ಟು ಪ್ರಕೃತಿರಮಣೀಯವಾದ ಕೈಲಾಸಶಿಖರವು ನೋಡುವುದಕ್ಕೆ ಬಹು ರಮಣೀಯವಾಗಿರುವುದು. ||೫೦-೫೧||

ಈ ಶಿಖರಕ್ಕೆ ಅನೇಕ ಧ್ವಜಗಳೂ, ಕಲಶಗಳೂ, ರತ್ನಗೋಪುರಗಳೂ ಪ್ರಕಾಶಮಾನವಾಗಿ ಕಾಣುತ್ತಿರುವುವು. ಈ ಶಿಖರದಲ್ಲಿ ಸಾಕ್ಷಾನ್ಮಹಾದೇವನೇ ಕೈಲಾಸೇಶ್ವರಲಿಂಗವನ್ನು ಆರಾಧಿಸುವನು. ಪ್ರದೋಷಕಾಲಾರ್ಚನೆಯಾದ ಅನಂತರ ಭಕ್ತ್ಯತಿರೇಕದಿಂದ ಶಂಕರನು ಪ್ರತಿದಿವಸ ಮಂಟಪದಲ್ಲಿ ನರ್ತನಮಾಡಲಾರಂಭಿಸುವನು. ||೫೨-೫೩||

ಈ ಗೋಪುರದ ಶಿಖರವು ವಿಶಾಲವಾದ ರತ್ನಕಲಶಗಳಿಂದಲೂ, ಅಂತರ್ಭಾಗದಲ್ಲಿರುವ ರತ್ನವೇದಿಕೆಗಳಿಂದಲೂ ಸುತ್ತುವರಿಯಲ್ಪಟ್ಟಿರುತ್ತದೆ. ಇಂತಹ ದಿವ್ಯಮಂಟಪದಲ್ಲಿ ರತ್ನಮಯವಾದ ಸಿಂಹಾಸನದ ಮೇಲೆ ದೇವಿಯನ್ನು ಕೂರಿಸಿ, ಪರಮೇಶ್ವರನು ತಾನು ನಾಟ್ಯವಾಡುವನು. ||೫೪-೫೫||

ಮಯಾ ಚ ಗಣನಾಥೇನ ಸ್ಕಂದೇನ ಗಣಸೈರ್ವೃತಃ ।
ವೇಣುಮದ್ದಲಮಡ್ಡೂತ್ಥತಾಲಕಾಹಲನಿಸ್ವನೈಃ ॥೫೬॥

ಸಭಾಃ ಪಶ್ಯಾತ್ರ ವಿತತಾ ಮಣಿಮೌಲಿಪತಾಕಕಾಃ ।
ಸಹಸ್ರಸ್ತಂಭಸಂಯುಕ್ತಾಶ್ಚತುರ್ದಿಕ್ಷು ಮನೋಹರಾಃ ॥೫೭॥

ಸೌವರ್ಣೀ ರಾಜತೀ ಚಾಪಿ ಚಿತ್ಸಭಾತ್ರ ಮಹೇಶಿತುಃ ।
ಅನ್ಯಾ ರತ್ನಸಭಾ ಚೈವಂ ರತ್ನಸಾರೈಕಕಾಂತಿಯುಕ್ ॥೫೮॥

ಸಾಯಂ ನೃತ್ಯತಿ ವಿಶ್ವೇಶೋ ದೇವ್ಯಗ್ರೇಽತ್ರ ಸಭಾಸು ಚ ।
ರಮ್ಯಂ ಸಹಸ್ರಲಿಂಗಾನಾಮಿದಮಾಲಯಮುತ್ತಮಂ ॥೫೯॥

ಉದ್ಯದ್ದಿವಾಕರಪ್ರಖ್ಯಂ ಕುಂಭಜಾಲಕಿತಾಂಬರಂ ।
ಪಶ್ಯಾತ್ರ ದೇವದೇವಸ್ಯ ಕೋಟಿಸ್ತಂಭೋರುಮಂಟಪಂ ॥೬೦॥

---

ಆ ನರ್ತನಕಾಲದಲ್ಲಿ ಸ್ಕಂದಸ್ವಾಮಿಯೂ, ನಾನೂ, ಗಣಪತಿಯೂ ಇನ್ನೂ ಪ್ರಮಥಗಣಗಳೂ ಅಲ್ಲಿ ಸೇರುವೆವು. ನಾಟ್ಯಸಭೆಯೆಲ್ಲವೂ ಕೊಳಲು, ಮದ್ದಲೆ, ತಾಲ, ತುತ್ತೂರಿಯೇ ಮೊದಲಾದ ವಾದ್ಯಘೋಷದಿಂದ ತುಂಬಿಹೋಗುವುದು. ಇಂತಹ ನಾಲ್ಕು ಮಂಟಪಗಳು ಸಹಸ್ರಸ್ತಂಭಗಳಿಂದ ಅಲಂಕೃತವಾಗಿ ನಾಲ್ಕು ದಿಕ್ಕುಗಳಲ್ಲಿಯೂ ರಂಜಿಸುತ್ತಿರುವುವು. ||೫೬-೫೭||

ಈ ನಾಲ್ಕು ಸಭೆಗಳಿಗೂ ಪ್ರತ್ಯೇಕವಾಗಿ ಸುವರ್ಣಸಭೆ, ರಜತಸಭೆ, ಚಿತ್ಸಭಾ, ರತ್ನಸಭಾ ಎಂಬ ಹೆಸರುಗಳಿವೆ. ಇವುಗಳೆಲ್ಲಾ ರತ್ನಮಯವಾದವುಗಳೇ. ಇಂತಹ ಸಭೆಗಳಲ್ಲಿ ಪರಶಿವನು ಸಾಯಂಕಾಲದಲ್ಲಿ ದೇವಿಯ ಮುಂದೆ ನರ್ತನ ಮಾಡುವನು. ಹಾಗೆಯೇ ಸಹಸ್ರ ಲಿಂಗಾಲಯವೆಂಬ ಹೆಸರಿನ ಮತ್ತೊಂದು ದೇವಾಲಯವು ಇಲ್ಲಿ ಶೋಭಿಸುತ್ತಿರುವುದು. ಇದು ಬಾಲಸೂರ್ಯನಂತೆ ಹೊಳೆಯುತ್ತಲೂ, ಅನೇಕ ಕಲಶಗಳಿಂದಲೂ, ಕೋಟಿಸ್ತಂಭಗಳಿಂದಲೂ ವಿರಾಜಿಸುತ್ತಲೂ ಇರುವುದು. ||೫೮-೫೯-೬೦||

ಧೂಪದೀಪಮಣಿಜ್ಯೋತಿರುದ್ರಕ್ರೀಡನಮುತ್ತಮಂ ।
ಮೌಲಿಜಾಲಕಮಧ್ಯಸ್ಥಮಣಿಕುಂಭೋಜ್ಜ್ವಲದ್ವೃಷಂ ॥೬೧॥

ಸುರಮ್ಯವಾಪಿಕಾ ಚೇಯಂ ಸುಧಾಕಲ್ಲೋಲಮಾಲಿನೀ ।
ದೇವಗಂಗಾತಟಂ ಪಶ್ಯ ಲಿಂಗಸೌಧೋರುಮಂಟಪಾ ॥೬೨॥

ಸುಧಾಸಾಗರಗಾ ಚೈಷಾ ಗಂಗಾ ಕೈಲಾಸಮೌಲಿಗಾ ।
ಪಂಚವಕ್ತ್ರೇಶ್ವರಸ್ಯಾಪಿ ಸಭಾಂ ಪಶ್ಯ ಮನೋಹರಾಂ ॥೬೩॥

ರತ್ನಕುಂಭಮಹಾಕಾಂತಿತಿರಸ್ಕೃತದಿವಾಕರಾಂ ।
ತಲ್ಲಿಂಗಪಂಚವಕ್ತ್ರೋತ್ಥಾ ನದ್ಯಃ ಪಂಚಾದ್ಯ ಸುಸ್ರುವುಃ ॥೬೪॥

ಶಿವಗಂಗಾ ದೇವಗಂಗಾ ರತ್ನಗಂಗೇತಿ ವಿಶ್ರುತಾಃ ।
ಕೈಲಾಸಗಂಗಾ ಶೈಲೇಂದ್ರ ಮಧುಗಂಗೇತಿ ಚ ಕ್ರಮಾತ್ ॥೬೫॥

ಸರ್ವಾಸ್ತಾಸ್ತೀರಬದ್ಧೋರುಮಣಿಸೋಪಾನಮಂಟಪಾಃ ।
ಪರಿತಶ್ಶೋಭಿತಾಪಾರಶಿವಸೌಧವಿರಾಜಿತಾಃ ॥೬೬॥

---

ಈ ಮಂಟಪಗಳು ಧೂಪ, ದೀಪ, ಮಣಿಜ್ಯೋತಿ ಇವುಗಳಿಂದಲೂ, ರುದ್ರಕ್ರೀಡನಗಳಿಂದಲೂ ಉತ್ತಮವೆನಿಸಿವೆ. ಅನೇಕ ರತ್ನಕಲಶಗಳ ಮಧ್ಯ ಭಾಗದಲ್ಲಿ ಅಮೃತಪ್ರವಾಹದಿಂದ ತುಂಬಿರುವ ಬಾವಿಯೂ, ಲಿಂಗಾಲಯಗಳಿಂದ ಕೂಡಿರುವ ದಿವ್ಯಮಂಟಪಗಳುಳ್ಳ ದೇವಗಂಗಾ ತೀರವೂ ಮನೋಹರವಾಗಿರುವುದು. ॥೬೧-೬೨॥

ಸುಧಾಸಮುದ್ರವನ್ನು ಸೇರುವ ಈ ಕೈಲಾಸಮೌಲಿಸ್ಥವಾದ ದೇವಗಂಗೆಯು ಪಂಚವಕ್ತ್ರೇಶ್ವರನ ಪಂಚಮುಖಗಳಿಂದಲೂ, ಐದು ಹೆಸರಿನಿಂದ ಬೇರೆ ಬೇರೆ ಹರಿಯುತ್ತಿರುವುದು. ಈ ಪಂಚವಕ್ತ್ರೇಶ್ವರನ ದಿವ್ಯಸಭೆಯಾದರೋ ರತ್ನಕಲಶಗಳ ಕಾಂತಿಯಿಂದ ಸೂರ್ಯನ ಕಾಂತಿಯನ್ನೇ ತಿರಸ್ಕರಿಸುತ್ತಿರುವುದು. ॥೬೩-೬೪॥

ಪಂಚಪ್ರಕಾರವಾಗಿ ಹರಿಯುವ ಗಂಗಾನದಿಗೆ, ಶಿವಗಂಗಾ, ದೇವಗಂಗಾ, ರತ್ನಗಂಗಾ, ಕೈಲಾಸಗಂಗಾ, ಮಧುಗಂಗಾ ಎಂದು ಐದು ಹೆಸರುಗಳಿವೆ. ಈ ಎಲ್ಲಾ ಶಾಖೆಗಳ ತೀರಭಾಗವೂ ರತ್ನಮಯವಾದ ಸೋಪಾನಗಳಿಂದಲೂ, ಮಂಟಪ

ಲಿಂಗಸದ್ಮಮಹಾಕುಂಭಬಿಂಬಿತೋತ್ತುಂಗನೀರಕಾಃ ।
ರತ್ನಕರ್ಕಟಮತ್ಸ್ಯೈಶ್ಚ ಪದ್ಮಹಂಸೈಕಕೋಕಕಾ ॥೬೭॥

ನೀಲೋತ್ಪಲಾಮಲಮಣಿಪ್ರಾಸಾದೋ ರತ್ನರಂಜಿತಃ ।
ಉದ್ಯತ್ಕುಂಭಸ್ಸದಾ ಭಾತಿ ದಿವ್ಯಸಿಂಹಾಸನಾಂಚಿತಃ ॥೬೮॥

ರತ್ನೇಶ್ವರಾಲಯಂ ಪಶ್ಯ ನವರತ್ನವಿಚಿತ್ರಿತಂ ।
ಪಶ್ಯ ಬಿಲ್ವವನಂ ಶಂಭೋರ್ನವಾರುಣದಲಾನ್ವಿತಂ ॥೬೯॥

ತನ್ಮೂಲಮಣಿಲಿಂಗೋದ್ಯದ್ಧಾರಾರಸವಿಜೃಂಭಿತಂ ।
ಕಲ್ಪವಾಟೀಮಿಮಾಂ ಪಶ್ಯ ರತ್ನವೇದಿಕಚಿತ್ರಿತಾಂ ॥೭೦॥

ಕಂದಲೇಶಾಲಯಂ ಪಶ್ಯ ಶೈಲಾತ್ರ ಸುಮನೋಹರಂ ।
ಕುಲ್ಯಾಶ್ಚಾದ್ಯ ಪ್ರಪಶ್ಯಾತ್ರ ಮಧುಕ್ಷೀರಘೃತಸ್ರವಾಃ ॥೭೧॥

---

ಗಳಿಂದಲೂ ಶಿವದೇವಾಲಯಗಳಿಂದಲೂ ಕೂಡಿ ಮನೋಹರವಾಗಿ ರಂಜಿಸುತ್ತಿರುವುದು. ॥೬೫-೬೬॥

ಆ ಗಂಗಾನದಿಗಳ ನೀರಿನಲ್ಲಿ ತೀರದಲ್ಲಿರುವ ಶಿವಾಲಯಗಳ ರತ್ನಕಲಶಗಳು ಪ್ರತಿಬಿಂಬಿಸುತ್ತಿರುವುವು. ನೀರಿನಲ್ಲಿ ರತ್ನದಂತೆ ಹೊಳೆಯುವ ಏಡಿಗಳೂ, ಮೀನುಗಳೂ, ಪದ್ಮಗಳೂ, ಹಂಸಗಳೂ, ಚಕ್ರವಾಕಗಳೂ, ನೀಲೋತ್ಪಲಗಳೂ, ಇನ್ನೂ ಅಮೂಲ್ಯವಾದ ರತ್ನವಿಶೇಷಗಳೂ ಕಂಡುಬರುತ್ತಿರುವುವು. ಆ ಪ್ರಾಸಾದಗಳಾದರೋ, ರತ್ನರಂಜಿತಗಳಾಗಿ, ದಿವ್ಯಕಲಶಗಳಿಂದಲೂ, ದಿವ್ಯ ಸಿಂಹಾಸನಗಳಿಂದಲೂ ಶೋಭಿಸುತ್ತಿರುವುವು. ॥೬೭-೬೮॥

ನವರತ್ನಗಳಿಂದ ಚಿತ್ರವಿಚಿತ್ರವಾಗಿರುವ ರತ್ನೇಶ್ವರಾಲಯವು ಇಲ್ಲಿ ಶೋಭಿಸುತ್ತಿರುವುದು. ಅದರ ಪಕ್ಕದಲ್ಲಿ ಈಶ್ವರನಿಗೆ ಬಹು ಮೆಚ್ಚಿಗೆಯಾಗಿ ಕೆಂಪುದಳಗಳಿಂದ ಕೂಡಿರುವ ಬಿಲ್ವವನವೊಂದು ಕಾಣುತ್ತಿರುವುದು. ಆ ಪ್ರತಿ ಬಿಲ್ವವೃಕ್ಷದ ಕೆಳಭಾಗದಲ್ಲಿಯೂ ಒಂದೊಂದು ಮಣಿಮಯವಾದ ಶಿವಲಿಂಗವಿರುವುದು. ಅದೇ ರೀತಿ ಅದರ ಪಕ್ಕದಲ್ಲಿ ರತ್ನವೇದಿಕೆಗಳಿಂದ ಕಂಗೊಳಿಸುತ್ತಿರುವ ಕಲ್ಪವಾಟಿಕೆಯೊಂದಿರುವುದು. ॥೬೯-೭೦॥

ಪರ್ವತರಾಜನೇ, ಇಲ್ಲಿ ಅತ್ಯಂತ ಮನೋಹರವಾಗಿರುವ ಕಂದಲೇಶಾಲಯವನ್ನು ನೋಡು. ಇದರ ಪಕ್ಕದಲ್ಲಿ ಜೇನುತುಪ್ಪದ ಮತ್ತು ಹಾಲಿನ, ತುಪ್ಪದ

ದೇವೀಶ್ವರಾಲಯಂ ಪಶ್ಯ ಸದಾ ದೇವ್ಯಾಃ ಪ್ರಿಯಂಕರಂ ।
ತತ್ರ ಸಾಲವನಂ ಪಶ್ಯ ಪರಿಚ್ಛದಫಲಾನ್ವಿತಂ ॥೭೨॥

ವಿಲೋಕಯ ದೃಶಾ ಶೈಲ ಪಶ್ಚಿಮೇ ಗೋಪುರಂ ಸ್ಥಿತಂ ।
ಸಹಸ್ರತಲಸಂಯುಕ್ತಂ ಗವಾಕ್ಷವೃಷಭೈರ್ಯುತಂ ॥೭೩॥

ರತ್ನೋತ್ತುಂಗಮಣಿದ್ಯೋತಿಶಿಖರಾಗ್ರಪತಾಕಕಂ ।
ಉಗ್ರೇಶ್ವರಾಲಯಂ ಪಶ್ಯ ಚೋಗ್ರಪಾತಕನಾಶನಂ ॥೭೪॥

ಭೃಂಗಿಸೌಧೋಽಯಮತುಲೋ ಬಾಣಸ್ಯಾತ್ರ ಗೃಹಂ ಮಹತ್ ।
ಹರಿಕೇಶಾಲಯಂ ಪಶ್ಯ ಪಶ್ಯ ಸ್ಕಂಧಾಲಯಂ ಮಹತ್ ॥೭೫॥

ಅಂಬಿಕೇಶಸ್ಯ ಶಿಖರಂ ಪಶ್ಯ ಪ್ರಣತಿಗೋ ನಗ ।
ನವರತ್ನಮಹಾಶೈಲಾನ್ ಪಶ್ಯ ಸೌಧೋತ್ತಮೈರ್ವೃತಾನ್ ॥೭೬॥

---

ಸಣ್ಣಸಣ್ಣ ಕೊಳಗಳೇ ನಿರ್ಮಿತವಾಗಿರುವುವು. ಅಲ್ಲಿಂದ ಮುಂದೆ ಕಾಣುವುದೇ ದೇವೀಶ್ವರಾಲಯವು. ಅದು ದೇವಿಗೆ ಬಹು ಪ್ರಿಯವಾದದ್ದು. ಅಲ್ಲಿಯೇ ಫಲಭರಿತ ವಾದ ಸಾಲವೃಕ್ಷಗಳ ತೋಪಿರುವುದು. ॥೭೧-೭೨॥

ಗಿರಿರಾಜನೇ, ಹಾಗೆಯೇ ಪಶ್ಚಿಮದಿಕ್ಕಿನಲ್ಲಿರುವ ಗೋಪುರವನ್ನು ನೋಡು. ಅದು ಸಹಸ್ರ ಅಂತಸ್ತುಗಳಿಂದಲೂ, ಗವಾಕ್ಷಗಳಿಂದಲೂ, ವೃಷಭವಿಗ್ರಹಗಳಿಂದಲೂ ವಿರಾಜಿಸುತ್ತಿರುವುದು. ಆ ಗೋಪುರದ ಶಿಖರವು ರತ್ನಕಾಂತಿಗಳಿಂದಲೂ, ಸುವರ್ಣ ಪತಾಕೆಗಳಿಂದಲೂ ಶೋಭಿಸುತ್ತಿರುವುದು. ಆ ಗೋಪುರವುಳ್ಳ ದೇವಾಲಯವೇ ಉಗ್ರೇಶ್ವರಾಲಯವು. ಅದರ ದರ್ಶನದಿಂದ ಭಯಂಕರವಾದ ಪಾಪರಾಶಿಯೆಲ್ಲವೂ ನಿರ್ಮೂಲವಾಗುವುದು. ॥೭೩-೭೪॥

ಇಲ್ಲಿ ದಿವ್ಯವಾದ ಭೃಂಗಿಯ ಮನೆ, ಬಾಣನ ಗೃಹ, ಹರಿಕೇಶಾಲಯ, ಸ್ಕಂದಸದನ, ಇವೆಲ್ಲವೂ ಸಾಲಾಗಿ ಕಾಣುತ್ತಿರುವುವು. ಹಾಗೆಯೇ ಅಂಬಿಕೇಶಾ ಲಯವನ್ನು ನೋಡಿ ಅದಕ್ಕೆ ವಂದಿಸು. ಇಲ್ಲಿ ನವರತ್ನಮಯವಾದ ಪರ್ವತ ಗಳೂ, ದಿವ್ಯಸೌಧಗಳೂ ಪ್ರಕಾಶಿಸುತ್ತಿರುವುವು. ॥೭೫-೭೬॥

ಉತ್ತಮೇಶಮಹಾಧಾಮ ಪಶ್ಯಾತ್ರ ಸುಮನೋಹರಂ ।
ಗರ್ಭೇಶಗರ್ಭಭವನಂ ಪಶ್ಯ ಕುಂಭೈಕಭಾತತಂ ॥೭೭॥

ಮಂಟಪಂ ದಶಸಾಹಸ್ರಸ್ತಂಭಕುಂಭವಿರಾಜಿತಂ ।
ಕೈಲಾಸನಲಿನೀ ಚೇಯಂ ರತ್ನಫುಲ್ಲಾಂಬುಜಾವೃತಾ ॥೭೮॥

ತನ್ಮಧ್ಯಸೌಧಗರ್ಭಸ್ಥಮಣಿಮಂಚಂ ಪ್ರಪಶ್ಯ ಭೋಃ ।
ಕುಲಿಶೇಶಾಲಯಂ ಪಶ್ಯ ಪಾಪಾದ್ರಿಕುಲಿಶಂ ಹಿ ತತ್ ॥೭೯॥

ಕುಲಶೈಲ ಪ್ರಪಶ್ಯಾದ್ಯ ಚಂದ್ರಕಾಂತಶಿಲಾತಲಂ ।
ಸಹಸ್ರಯೋಜನಾಯಾಮಂ ತತ್ರ ಚಂದ್ರೇಶ್ವರಾಲಯಂ ॥೮೦॥

ಕುಲಾಚಲಮಹಾಸೌಧಾನ್ ಪ್ರಪಶ್ಯ ನಗಸತ್ತಮ ।
ಅಯುತಂ ಲಿಂಗಸದನಂ ಮದನಾಂತಕರಪ್ರಿಯಂ ॥೮೧॥

ಆಲೋಕಯ ಮಹಾಶೈಲ ಶೈಲೇಶಸ್ಯ ವರಾಲಯಂ ।
ಕ್ಷೀರೋದವಾಪಿಕಾ ಚೇಯಂ ರತ್ನಸೋಪಾನಮಂಟಪಾ ॥೮೨॥

---

ಇಲ್ಲಿ ಉತ್ತಮೇಶಾಲಯವು ಬಹು ಮನೋಹರವಾಗಿರುವುದು. ಮತ್ತು ಕಲಶಗಳ ಕಾಂತಿಯಿಂದ ಆವೃತವಾದ ಗರ್ಭೇಶನ ಗರ್ಭಗೃಹವೂ ಇಲ್ಲಿ ಕಾಣುತ್ತಿರುವುದು. ಅದರ ಪಕ್ಕದಲ್ಲಿ ಹತ್ತುಸಾವಿರ ಕಂಬಗಳಿಂದ ಅಲಂಕೃತವಾದ ದಿವ್ಯ ಮಂಟಪವೂ, ಅರಳಿದ ಕಮಲಗಳಿಂದ ಪರಿವೃತವಾದ ಕೈಲಾಸ ನಳಿನಿಯೆಂಬ ದಿವ್ಯ ಸರೋವರವೂ ತೋರಿಬರುತ್ತಿರುವುದು. ॥೭೭-೭೮॥

ಆ ಸರಸ್ಸಿನ ಮಧ್ಯದಲ್ಲಿ ಒಂದು ಸೌಧವೂ ಅದರಲ್ಲಿ ಮಣಿಮಂಚವೂ ಹೊಳೆಯುತ್ತಿರುವುದು. ಆ ಸೌಧವೇ ಕುಲಿಶೇಶ್ವರಾಲಯ. ಅದರ ದರ್ಶನವು ಪಾಪರಾಶಿಯನ್ನು ವಜ್ರಾಯುಧದಂತೆ ನಿರ್ಮೂಲಮಾಡುವುದು. ಹಾಗೆಯೇ ಮುಂದೆ ಚಂದ್ರಕಾಂತಶಿಲಾಮಯವಾದ ಚಂದ್ರೇಶ್ವರಾಲಯವಿರುವುದು. ಅದು ಸಹಸ್ರಯೋಜನ ವೈಶಾಲ್ಯದಲ್ಲಿರುವುದು. ॥೭೯-೮೦॥

ಪರ್ವತರಾಜನೇ, ಹಾಗೆಯೇ ಸಪ್ತಕುಲಾಚಲಗಳು ವಾಸಿಸುವ ದಿವ್ಯಸೌಧಗಳನ್ನು ನೋಡು. ಅಲ್ಲಿ ಹತ್ತು ಸಾವಿರ ಲಿಂಗಾಲಯಗಳಿರುವುವು. ಅವೆಲ್ಲವೂ ಶಿವಪ್ರೀತಿಕರಗಳೇ. ಇಂತಹ ಶಿವಾಲಯಗಳನ್ನೂ ಹಾಗೆಯೇ ಕೈಲಾಸಪರ್ವತದ

ಕ್ಷೀರೇಶ್ವರಾಲಯಂ ತೀರೇ ತಸ್ಯಾಃ ಪಶ್ಯ ಮನೋಹರಂ ।
ಮಯೂರೇಶಸ್ಯ ಸದ್ಮೈತದ್ವನಗರ್ಭೇ ವಿಲೋಕಯ ॥೮೩॥

ರಿಟಿರಾಸ್ತೇಽತ್ರ ಸೌಧೇ ತು ಚಾಜ್ಞಯಾ ಶೂಲಿನೋ ನಗ ।
ಪೂರ್ವತೋಽಹಂ ದಕ್ಷಿಣತಶ್ಚಂಡೀ ಭೃಂಗೀ ರಿಟಿಸ್ತಥಾ ॥೮೪॥

ಪಶ್ಚಾದಥೋತ್ತರೇ ಶೈಲ ಚಂದ್ರಚೂಡಸ್ಯ ಶಾಸನಾತ್ ।
ಪಾಲಯಾಮೋ ಗಣೌಘೈಶ್ಚ ಸದಾ ಶೂಲವರಾಯುಧೈಃ ॥೮೫॥

ಏತಲ್ಲಿಂಗಕುಲಂ ತ್ವಪಾರಮಣಿಜೈಸೌಧೈಶ್ಚ ಸದ್ಗೋಪುರೈ
ರನ್ಯೋತ್ತುಂಗನಿಖಾತಸಾಗರಮಹಾಪ್ರಾಕಾರಭೂಭೃದ್ಗಣೈಃ ।
ಫುಲ್ಲಾಬ್ಜೈಸ್ಸರಸೀಗಣೈಸ್ಸುಮವನೈಃ ಕ್ಲೃಪ್ತೋದ್ಯ ನೈ ಭೂಧರೋ
ವಿಶ್ವೇಶೇನ ವಿಚಿತ್ರಚಿತ್ರಮನಸಾ ಸಂಪಶ್ಯ ಶೈಲೋತ್ತಮ ॥೮೬॥

---

ಗೃಹವನ್ನೂ, ಅದರ ಪಕ್ಕದಲ್ಲಿ ರತ್ನಸೋಪಾನ ವಿರಾಜಿತವಾಗಿ ಕ್ಷೀರಪೂರಿತವಾದ ಬಾವಿಯನ್ನೂ ನೋಡುವವನಾಗು. ॥೮೧-೮೨॥

ಅದರ ಹತ್ತಿರದಲ್ಲಿ ಕಾಣುವುದೇ ಕ್ಷೀರೇಶ್ವರಾಲಯ. ಹಾಗೆಯೇ ವನ ಮಧ್ಯವಲ್ಲಿ ಕಾಣುವ ಮತ್ತೊಂದು ಸದನವೇ ಮಯೂರೇಶಾಲಯ. ಅಲ್ಲಿ ಕಾಣುವ ಸೌಧಗಳಲ್ಲಿ ಶಂಕರನ ಅಪ್ಪಣೆಯಂತೆ ಒಂದೊಂದು ದಿಕ್ಕಿನಲ್ಲಿಯೂ, ರಿಟಿ, ಭೃಂಗಿ, ನಾನು (ನಂದಿ) ಚಂಡೀ, ನೆಲಸಿರುವೆವು. ಹಾಗೆಯೇ ಈ ಕೈಲಾಸದ ರಕ್ಷಣೆಗಾಗಿ ನಾವು ಸರ್ವದಾ ಜಾಗರೂಕರಾಗಿರುವೆವು. ನಮ್ಮ ಸಹಾಯಕ್ಕೆ ಶಸ್ತ್ರಪಾಣಿಗಳಾದ ಪ್ರಮಥಗಣಗಳು ಸಿದ್ಧರಾಗಿರುವರು. ॥೮೩-೮೪-೮೫॥

ಪರ್ವತರಾಜನೇ, ಈಶ್ವರನ ಮನಃಕಲ್ಪಿತವಾದ ಈ ಶಿವಲಿಂಗಸಮೂಹ ವನ್ನೂ, ರತ್ನಮಯವಾಗಿ ಗೋಪುರಗಳಿಂದ ರಂಜಿಸುವ ದಿವ್ಯಸೌಧಗಳನ್ನೂ, ಪರ್ವತದ ಸುತ್ತಲೂ ಇರುವ ಪರ್ವತಪ್ರಾಕಾರಗಳನ್ನೂ, ಅದರ ಹಿಂಭಾಗದಲ್ಲಿರುವ ಆಳವಾದ ಸಾಗರಗಳ ಕಂದಕಗಳನ್ನೂ ನೋಡುವವನಾಗು. ಮಧ್ಯಮಧ್ಯದಲ್ಲಿ ಅರಳಿದ ಕಮಲಗಳಿಂದಲೂ, ನೈದಿಲೆಗಳಿಂದಲೂ ರಂಜಿತವಾಗಿರುವ ಕೊಳಗಳನ್ನೂ ಪುಷ್ಪೋದ್ಯಾನಗಳನ್ನೂ ನೋಡಿ ಆನಂದಿಸು. ಪರ್ವತರಾಜನೇ, ಇವೆಲ್ಲವೂ ಶಂಕರನ ಮಹಿಮಾಕಲ್ಪಿತವಾದವುಗಳೇ. ॥೮೬॥

ತಾರಾರಾಜನಿರಾಜಿತೋರುಶಿರಸೋ ವಾಸೋಽಹ್ಯಯಂ ಶೈಲರಾ
ಡ್ರ್ರಾಜದ್ರಾಜತಕಾಂತಿಸಾರನಿವಹೈಶ್ಶ್ರೀವಿಪ್ರರಾಜಾಧಿಕಃ।
ರಾಜಲ್ಲಿಂಗಗಣೈ ರರಾಜಭುವನೇ ವಿಶ್ವೇಶ್ವರಸ್ಯಾಜ್ಞಯಾ
ರಾಜದ್ರಾಜಸಖಸ್ಯ ರಾಜತಿ ಪರಂ ಶೈಲಾಧಿರಾಜೇಕ್ಷಯಾ ॥೮೭॥

ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಹಿಮಾಚಲಾಯ
ಕೈಲಾಸದರ್ಶನಂ ನಾಮ ದ್ವಾವಿಂಶೋಽಧ್ಯಾಯಃ

---

ಚಂದ್ರಶೇಖರನಾದ ಮಹೇಶ್ವರನ ನಿವಾಸಸ್ಥಾನವಾದ ಈ ಕೈಲಾಸವು ರಜತಕಾಂತಿಯಿಂದ ಕೂಡಿ ಸ್ವಚ್ಛತೆಯಲ್ಲಿ ಚಂದ್ರನನ್ನು ಸಹ ತಿರಸ್ಕರಿಸುವಂತಿರುವುದು. ಅಲ್ಲದೆ ಅನೇಕ ಶಿವಲಿಂಗಗಳ ಸಮೂಹದಿಂದಲೂ, ಪ್ರಕೃತಿಸೌಂದರ್ಯದಿಂದಲೂ ಕೂಡಿ ಶೋಭಿಸುತ್ತಿರುವ ಈ ಕುಬೇರಮಿತ್ರನಾದ ಮಹೇಶ್ವರನ ಪರ್ವತವು ಎಷ್ಟು ಸುಂದರವಾಗಿರುವುದು ಎಂಬುದನ್ನು ನೋಡು, ಎಂದು ನಂದೀಶ್ವರನು ಪರ್ವತರಾಜನಿಗೆ ವಿವರಿಸಿದನು. ॥೮೭॥

ಇಲ್ಲಿಗೆ ಶ್ರೀಶಿವರಹಸ್ಯದ ಎರಡನೆಯ ಅಂಶದಲ್ಲಿ ಪರ್ವತರಾಜನಿಗೆ ನಂದೀಶ್ವರನು
ಕೈಲಾಸವನ್ನು ತೋರಿಸಿದನೆಂಬ ವಿಷಯವುಳ್ಳ ಇಪ್ಪತ್ತೆರಡನೆಯ ಅಧ್ಯಾಯವು
ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ತ್ರಯೋವಿಂಶೋಽಧ್ಯಾಯಃ

## ಕೈಲಾಸ ದರ್ಶನಂ

|| ನಂದೀಶ್ವರ ಉವಾಚ ||

**ಗಣೇಶ್ವರಸ್ಯ ಸದನಂ ಪಶ್ಯ ಕುಂಭವಿರಾಜಿತಂ ।**
**ಹೀರಸೌಧಮಿಮಂ ಪಶ್ಯ ಚಾತ್ಯರ್ಕಚ್ಛದಸುಂದರಂ ||೧||**

**ಪಾಟಲೀನಾಂ ವನಂ ಪಶ್ಯ ಬಹುಧಾನೋದಗಂಧಿತಂ ।**
**ಪಾಟಲೀಶಾಗಾರಮೇತತ್ಪಾಪಪಾಟನಚಂಚುರಂ ||೨||**

**ಸ್ವರ್ಣತಾಲೀವನಂ ಪಶ್ಯ ಯತ್ರ ಘುರ್ಘುರಮಾರುತಂ ।**
**ತಾಲೇಶಶಿಖರಂ ಭಾತಿ ದಧಿಕಲ್ಲೋಲಿನೀ ತ್ವಿಯಂ ||೩||**

---

## ಇಪ್ಪತ್ತುಮೂರನೆಯ ಅಧ್ಯಾಯ

ನಂದೀಶ್ವರನು ಗಿರಿರಾಜನನ್ನು ಮುಂದಕ್ಕೆ ಕರೆದುಕೊಂಡು ಹೋಗುತ್ತಾ ಅಲ್ಲಿ ಸಿಕ್ಕಿದ ಗಣೇಶ್ವರದೇವಾಲಯವನ್ನು ತೋರಿಸಿ ಹೀಗೆಂದನು. “ನಗರಾಜನೇ, ಇದು ಗಣೇಶ್ವರಾಲಯ. ಇದರ ಉಪ್ಪರಿಗೆಯೆಲ್ಲಾ ಹೀರಮಣಿನಿರ್ಮಿತವಾದದ್ದೇ. ಇದರ ಮೇಲ್ಛಾವಣಿಯ ಕಾಂತಿಯಿಂದ ಸೂರ್ಯನ ತೇಜಸ್ಸು ಮಂಕಾಗಿದೆ. ಅಲ್ಲಿಯೇ ಪಾಟಲವೃಕ್ಷಗಳ ವನವೊಂದಿರುವುದು. ಅದು ಸುಗಂಧಮಯವಾಗಿ, ಪಾಟಲೀಶಾಗಾರವೆಂಬ ದೇವಾಲಯವನ್ನು ಒಳಗೊಂಡಿರುವುದು. ||೧-೨||

ಘುರ್ಘುರಧ್ವನಿಗೈಯ್ಯುವ ಮತ್ತು ಸುವರ್ಣದಂತೆ ಹೊಳೆಯುವ ತಾಳೇಮರಗಳ ವನವನ್ನು ನೋಡು. ಅಲ್ಲಿ ತಾಲೇಶ್ವರನ ದೇವಾಲಯವಿರುವುದು. ಮೊಸರಿನಿಂದ

ಮುಂಜಿಕೇಶಕ್ಷಯಂ ಪಶ್ಯ ಪಶ್ಯ ನಾಗೇಶ್ವರಾಲಯಂ ।
ವಿದ್ಯೇಶಸ್ಯ ನಿವೇಶಂ ಚ ಪಶ್ಯ ಸೋಮೇಶ್ವರಾಲಯಂ ॥೪॥

ಶರಣಂ ಶರಣಂ ಶಂಭೋಃ ಪುನ್ನಾಗವನಮಧ್ಯಗಂ ।
ಬಿಲ್ವೇಶ್ವರಸ್ಯ ಶಿಖರಂ ಪಶ್ಯ ಬಿಲ್ವವನಾಂತರೇ ॥೫॥

ಗಂಧರ್ವೇಶಶಿಖರಂ ಪಶ್ಯ ಸಾಲವನಂ ಮಹತ್ ।
ದಶಸಾಹಸ್ರಗಂಭೀರರತ್ನಸ್ತಂಭೋರುಮಂಟಪಃ ॥೬॥

ಸಿಂಹೇಶ್ವರಾಲಯಂ ಪಶ್ಯ ಪಶ್ಯ ರುದ್ರಾಕ್ಷಕಾನನಂ ।
ರುದ್ರರೂಪಮಹಾವೃಕ್ಷೈರ್ಯುತಂ ಪಾಪಭಯಾಪಹಂ ॥೭॥

ಭಸ್ಮಾಧಾರಸರಶ್ಚಾಪಿ ಪಶ್ಯಾದ್ಯ ಕುಮುದೋಜ್ಜ್ವಲಂ ।
ಭಸ್ಮೇಶ್ವರಾಲಯಂ ಪಶ್ಯ ದರ್ಶನಾತ್ಪಾಪಭಸ್ಮಕೃತ್ ॥೮॥

---

ತುಂಬಿದ ಕೊಳವು ಅದರ ಪಕ್ಕದಲ್ಲಿ ಕಾಣುತ್ತಿರುವುದು. ಹಾಗೆಯೇ, ಮುಂಜಕೇಶ್ವರ, ನಾಗೇಶ್ವರ, ವಿದ್ಯೇಶ್ವರ, ಸೋಮೇಶ್ವರ ಮುಂತಾದ ಶಿವಾಲಯಗಳು ಸಾಲಾಗಿ ಕಾಣುತ್ತಿರುವುವು. ॥೩-೪॥

ಪುನ್ನಾಗಪುಷ್ಪವನ ಮಧ್ಯದಲ್ಲೆಲ್ಲಾ ಮೇಲೆ ಹೇಳಿದ ಈಶ್ವರ ದೇವಾಲಯಗಳಿರುವುವು. ಹಾಗೆಯೇ, ಬಿಲ್ವವನದ ಮಧ್ಯದಲ್ಲಿ ಬಿಲ್ವೇಶ್ವರಾಲಯವೂ, ಸಾಲವನದಲ್ಲಿ ಗಂಧರ್ವೇಶಾಲಯವೂ, ಅಲ್ಲಿಯೇ ಹತ್ತುಸಾವಿರ ರತ್ನಸ್ತಂಭಗಳಿಂದ ಅಲಂಕೃತವಾದ ದಿವ್ಯಮಂಟಪವೂ ಪ್ರಕಾಶಿಸುತ್ತಿರುವುದು. ॥೫-೬॥

ಸಿಂಹೇಶ್ವರಾಲಯವೂ, ರುದ್ರಾಕ್ಷಿಯವನವೂ, ಅಲ್ಲಿ ಕಾಣುತ್ತಿರುವುದು. ಅಲ್ಲಿರುವ ಮಹಾವೃಕ್ಷಗಳೆಲ್ಲಾ ರುದ್ರರೂಪದಲ್ಲಿ ಕಾಣುತ್ತಿರುವುವು. ಇದರ ದರ್ಶನದಿಂದ ಭಕ್ತರ ಪಾಪರಾಶಿಯೆಲ್ಲವೂ ನಿವಾರಿತವಾಗುವುದು. ಭಸ್ಮಕ್ಕೆ ಆಧಾರಭೂತವಾದ ಸರೋವರವೂ ಇಲ್ಲಿ ಕುಮುದಗಳಿಂದ ಅಲಂಕೃತವಾಗಿರುವುದು. ಅಲ್ಲಿರುವ ಭಸ್ಮೇಶ್ವರಾಲಯವನ್ನು ದರ್ಶನಮಾಡಿದರೆ ಪಾಪರಾಶಿಯೆಲ್ಲವೂ ಭಸ್ಮವಾಗಿ ಹೋಗುವುದು. ॥೭-೮॥

ಗಂಧಶೈಲೋರುಶಿಖರೇ ಪಶ್ಯ ಗಂಧೇಶ್ವರಾಲಯಂ ।
ಚಂದನಾನಾಂ ವನಂ ಪಶ್ಯ ನಯನಾನಂದದಾಯಕಂ ॥೯॥

ಘೃತಕುಲ್ಯಾಮಿಮಾಂ ಪಶ್ಯ ಶಸ್ತಾಚ್ಛಘೃತಗಂಧಿತಾಂ ।
ಘೃತೇಶಧಾಮ ಪಶ್ಯಾತ್ರ ನಗೇಶ್ವರ ದೃಶೋರ್ದ್ವಯಂ ॥೧೦॥

ತ್ವಂ ಕೃತಾರ್ಥೀಕುರು ಕ್ಷಿಪ್ರಂ ಕ್ಷಿಪ್ರೇಶಾಲಯಲೋಕನಾತ್ ।
ಉತ್ತರಂ ಗೋಪುರಂ ಪಶ್ಯ ಮಹಾವೃಷಭಶೇಖರಂ ॥೧೧॥

ಗರುಡೋದ್ಗಾರಿರತ್ನಾಚ್ಛಮಂಟಪಂ ಪಶ್ಯ ಭೂಧರ ।
ಪುಷ್ಪರಾಗೋತ್ಥಶಿಖರಂ ಪಶ್ಯಾಗರುವನಂ ಮಹತ್ ॥೧೨॥

ದೇವದಾರುವನಂ ಪಶ್ಯ ದೇವದಾರೇಶ್ವರಾಲಯಂ ।
ಕಾಲಾಗ್ನಿರುದ್ರಸದನಂ ಪಶ್ಯಾದ್ಯ ಸುಮನೋಹರಂ ॥೧೩॥

ಗಂಧರ್ವೇಶಾಲಯಂ ಪಶ್ಯ ವೇದೇಶಶಿಖರಂ ಮಹತ್ ।
ತರಣೀಶಾಲಯಂ ಪಶ್ಯ ಪದ್ಮಗರ್ಭೇಶ್ವರಾಲಯಂ ॥೧೪॥

---

ಶ್ರೀಗಂಧ ವೃಕ್ಷಪೂರಿತವಾದ ಗಂಧಶೈಲದ ದೊಡ್ಡ ಶಿಖರದಲ್ಲಿ ಗಂಧೇಶ್ವರಾಲಯವಿರುವುದು. ಆ ಚಂದನವನವಂತೂ ನೋಡಲು ಬಹು ಮನೋಹರವಾಗಿರುವುದು. ಅದರ ಸಮೀಪದಲ್ಲಿ ತುಪ್ಪದ ಕೊಳವಿರುವುದು. ಅದು ಸುಗಂಧದಿಂದ ಗಮಗಮಿಸುತ್ತಿರುವುದು. ಅಲ್ಲಿಯೇ ಘೃತೇಶ್ವರಾಲಯವು ಕಣ್ಣಿಗೆ ಕಾಣುತ್ತಿರುವುದು. ಇಂತಹ ಘೃತೇಶ್ವರನನ್ನು ನೋಡಿಕೊಂಡು ಪರ್ವತರಾಜನೇ, ನಿನ್ನ ನೇತ್ರಗಳನ್ನು ಸಾರ್ಥಕಮಾಡಿಕೋ. ॥೯-೧೦॥

ನೀನು ಇಲ್ಲಿಯೇ ಕಾಣುವ ಕ್ಷಿಪ್ರೇಶಾಲಯವನ್ನು ನೋಡು. ಹಾಗೆಯೇ ಉತ್ತರದಿಗ್ಭಾಗದಲ್ಲಿರುವ ವೃಷಭಾಕೃತಿಯಿಂದ ಕೂಡಿದ ಗೋಪುರವನ್ನೂ, ಗರುಡ ಮಣಿಮಯವಾದ ದಿವ್ಯ ಮಂಟಪವನ್ನೂ, ಪುಷ್ಪರಾಗಮಣಿಗಳಿಂದ ಅಲಂಕೃತವಾದ ಶಿಖರವನ್ನೂ ಅಲ್ಲಿಯೇ ಕಾಣುವ ಅಗುರುವನವನ್ನೂ ನೋಡುವವನಾಗು. ॥೧೧-೧೨॥

ದೇವದಾರುವನದಲ್ಲಿರುವ ದೇವದಾರೇಶ್ವರಾಲಯವನ್ನೂ, ಕಾಲಾಗ್ನಿರುದ್ರೇಶ್ವ

ಸುಧಾವಿಪಿನಮಪ್ಯತ್ರ ಪಶ್ಯ ಖರ್ಜೂರಿಕಾವನಂ ।
ಪೂಗೀವನಮಿದಂ ಪಶ್ಯ ದೇವಪರ್ಣಾಲಯಂ ನಗ ॥೧೫॥

ಭೈರವೇಶಾಲಯಂ ಪಶ್ಯ ಮಣಿಖಂಡೇಶ್ವರಾಲಯಂ ।
ಸುಧಾವಾಪೀಯಮತುಲಾ ಸುಧಯಾ ಪೂರಿತಾತ್ರ ತು ॥೧೬॥

ಶ್ರೀಮಹೇಶೇನ ಕರುಣಾಕಟಾಕ್ಷರಸವೀಕ್ಷಣಾತ್ ।
ತತ್ತೀರೇ ಪಶ್ಯ ಸುಭಗಂ ಸುಧಾಧಾಮೇಶ್ವರಾಲಯಂ ॥೧೭॥

ಅಮೃತೇಶಾಲಯಂ ಪಶ್ಯ ಕೂಪಃ ಪಾಪವಿನಾಶನಃ ।
ಜಟೇಶ್ವರಸ್ಯ ಶಿಖರಂ ಪಶ್ಯ ನಂದನಕಾನನಂ ॥೧೮॥

ಪಶ್ಯಾಮ್ರವನಮೇತದ್ವೈ ತರುಣಾರುಣಪಲ್ಲವಂ ।
ಆಮ್ರೇಶ್ವರಾಲಯಂ ಪಶ್ಯ ಪಶ್ಯ ಲಿಂಗಶತಾಷ್ಟಕಂ ॥೧೯॥

ಬಿಲ್ವಮಂದಾರಸನ್ಮೌಲಿಫಣೀಫಣವಿರಾಜಿತಂ ।
ಮಣಿಗರ್ಭಗೃಹಾಂತಸ್ಸ್ಥಂ ತ್ರಿಪುಂಡ್ರೋಜ್ಜ್ವಲಫಾಲಕಂ ॥೨೦॥

---

ರಾಲಯವನ್ನೂ, ಗಂಧರ್ವೇಶಾಲಯ, ತರಣೀಶ್ವರಾಲಯ, ಪದ್ಮಗರ್ಭೇಶ್ವರಾಲಯ ಇವೇ ಮೊದಲಾದ ಶಿವದೇವಾಲಯಗಳನ್ನು ನೋಡುವವನಾಗು. ||೧೩-೧೪||

ಖರ್ಜೂರವನ, ಸುಧಾವನ, ಪೂಗೀವನ ಮುಂತಾದ ವನಗಳನ್ನೂ, ದೇವಪರ್ಣೇಶ್ವರಾಲಯ, ಭೈರವೇಶ್ವರಾಲಯ, ಮಣಿಖಂಡೇಶ್ವರಾಲಯ ಮುಂತಾದ ಶಿವಾಲಯಗಳನ್ನೂ ದರ್ಶನಮಾಡುವವನಾಗು. ಈ ಸುಧಾವಾಪಿಯಂತೂ ಪ್ರಸಿದ್ಧವಾದ ಅಮೃತದಿಂದ ತುಂಬಿದ್ದಾಗಿ ಕಂಡುಬರುತ್ತಿರುವುದು. ||೧೫-೧೬||

ಈ ಅಮೃತವನದ ಪಕ್ಕದಲ್ಲಿ ಮಹೇಶ್ವರನ ದಯಾರಸಕ್ಕೆ ಮುಖ್ಯಪಾತ್ರವಾದ ಸುಧಾಧಾಮೇಶ್ವರಾಲಯವಿರುವುದು. ಆ ಅಮೃತೇಶಾಲಯ ಮತ್ತು ಅಮೃತಕೂಪ ಇವುಗಳ ದರ್ಶನಮಾತ್ರದಿಂದಲೇ ಸಮಸ್ತ ಪಾಪವೂ ಪರಿಹಾರವಾಗುವುದು. ಹಾಗೆಯೇ ನಂದನವನದಲ್ಲಿರುವ ಜಟೇಶ್ವರಾಲಯವನ್ನು ನೋಡು. ||೧೭-೧೮||

ಇಲ್ಲಿ ಕೆಂಪುಚಿಗುರುಗಳಿಂದ ಸುಂದರವಾಗಿ ಕಾಣುವ ಆಮ್ರವನವನ್ನೂ, ಅಲ್ಲಿಯೇ ಇರುವ ಆಮ್ರೇಶ್ವರಾಲಯವನ್ನೂ ನೋಡು. ಅಲ್ಲಿಯೇ ಸರ್ಪಗಳಿಂದ ಅಲಂಕೃತವಾಗಿ, ಬಿಲ್ವ ಮತ್ತು ಮಂದಾರವೃಕ್ಷಗಳ ಅಧೋಭಾಗದಲ್ಲಿ ಮಣಿಗೃಹಾಂ

ಉದ್ಯದರ್ಕಕರಪ್ರಖ್ಯಂ ಶಿವಪ್ರಾಸಾದಮೀಕ್ಷಯ ।
ಕುರುವಿಂದಮಣಿಸ್ತಂಭಮಣಿಮಂಟಪಮೀಕ್ಷಯ ॥೨೧॥

ಪಿಪ್ಪಲೇಶಾಲಯಂ ಪಶ್ಯ ಪಶ್ಯಾಶೋಕವನಂ ಮಹತ್ ।
ವಿಶೋಕಸದನಂ ಪಶ್ಯ ಪಶ್ಯ ಮಂದಾರಕಾನನಂ ॥೨೨॥

ಶುಕೇಶ್ವರಸ್ಯ ಸದನಂ ಪಶ್ಯಾದ್ಯ ವರಭೂಧರ ।
ವೃಶೇಶಸ್ಯ ಮಹಾಸದ್ಮ ಪಶ್ಯ ಪ್ರಾಸಾದಕೇಶ್ವರಂ ॥೨೩॥

ಉರಗೇಶಾಲಯಂ ಪಶ್ಯ ಚೇಶಾನಸದನಂ ಮಹತ್ ।
ರುದ್ರೇಶಸ್ಯಾಲಯಂ ಪಶ್ಯ ಪಾರಿಜಾತವನಂ ಮಹತ್ ॥೨೪॥

ರತ್ನಪ್ರಾಸಾದಶಿಖರಂ ಪಶ್ಯಾದ್ಯ ಸುಮನೋಹರಂ ।
ಗಿರಿಕೇಶಾಲಯಂ ಪಶ್ಯ ಹರಿಕೇಶವನಂ ನಗ ॥೨೫॥

ಸರೋವರಂ ತ್ವಂ ಪಶ್ಯಾದ್ಯ ಸಾಗರಾಖ್ಯಮಿದಂ ನಗ ।
ಸಾಗರೇಶಸ್ಯ ಶಿಖರಂ ಪಶ್ಯಾದ್ಯ ಸುಮನೋಹರಂ ॥೨೬॥

---

ತರ್ವರ್ತಿಯಾಗಿ, ತ್ರಿಪುಂಡ್ರಗಳಿಂದ ಶೋಭಿಸುವ ನೂರೆಂಟುಲಿಂಗಗಳ ಸಮೂಹವನ್ನೂ ನೋಡುವವನಾಗು. ||೧೯-೨೦||

ಬಾಲಸೂರ್ಯನಂತೆ ಹೊಳೆಯುವ ಶಿವಾಲಯವನ್ನೂ, ಕುರುವಿಂದ ಮಣಿಮಯವಾದ ಕಂಬಗಳಿಂದ ಕೂಡಿರುವ ದಿವ್ಯಮಂಟಪವನ್ನೂ ಇಲ್ಲಿನೋಡು. ಇದೇ ಪಿಪ್ಪಲೇಶ್ವರಾಲಯ. ಅಲ್ಲಿ ಕಾಣುವುದೇ ಅಶೋಕವನ. ಅಲ್ಲಿ ಕಾಣುವುದು ಮಂದಾರವನ. ಅದರಲ್ಲಿ ವಿಶೋಕೇಶ್ವರ ದೇವಾಲಯವಿರುವುದು. ||೨೧-೨೨||

ಶುಕೇಶ್ವರ, ವೃಶೇಶ್ವರ, ಪ್ರಾಸಾದಕೇಶ್ವರ, ಉರಗೇಶ್ವರ, ಈಶಾನೇಶ್ವರ, ರುದ್ರೇಶ್ವರ, ಪಾರಿಜಾತವನ ಮುಂತಾದ ಶಿವಮಹಾನಿಲಯಗಳನ್ನು ನೋಡಿ ಧನ್ಯನಾಗು. ||೨೩-೨೪||

ರತ್ನಮಯವಾದ ಪ್ರಾಸಾದ, ಶಿಖರ ಇವುಗಳಿಂದ ಮನೋಹರವಾಗಿರುವ ಗಿರಿಕೇಶಾಲಯವನ್ನೂ, ಹರಿಕೇಶವನವನ್ನೂ, ಸಾಗರವೆಂಬ ಹೆಸರಿನ ಸರೋವರವನ್ನೂ, ಅಲ್ಲಿರುವ ಸುಂದರವಾದ ಸಾಗರೇಶಾಲಯವನ್ನೂ ನೋಡುವವನಾಗು. ||೨೫-೨೬||

ಉತ್ಪಲೇಶಾಲಯಂ ಪಶ್ಯ ಕುಮುದೇಶಾಲಯಂ ತತಃ ।
ಹಂಸೇಶ್ವರಮಹಾಧಾಮ ಧಾಮ ಭದ್ರೇಶ್ವರಸ್ಯ ಚ ॥೨೭॥

ತತ್ಪ್ರಾಕಾರಸ್ಯ ಸೌಧಾಗ್ರಂ ಪಶ್ಯೈತದ್ವೃಷಲಾಂಛಿತಂ ।
ಮಣಿಜ್ಯೋತೀಶ್ವರಂ ಪಶ್ಯ ಮೌಲಿಂ ಕಾಮೇಶ್ವರಸ್ಯ ಚ ॥೨೮॥

ಮಧೂಕಖಂಡಮತ್ರ ದ್ರಾಕ್ಷಾವಲ್ಲೀವನಂ ತತಃ ।
ಕೈಲಾಸಗಂಗಾಂ ತತ್ರೈವ ವೀಕ್ಷಯಾದ್ಯ ನಗೋತ್ತಮ ॥೨೯॥

ತತ್ಪ್ರಾಂತಾರ್ಬುದಲಿಂಗಾನಾಂ ಸೌಧಮಾಲಾಂ ವಿಲೋಕಯ ।
ಕುಂಭಾವಲೀಮಿಮಾಂ ಪಶ್ಯ ದರ್ಶನಾತ್ಪಾಪನಾಶಿನೀಂ ॥೩೦॥

ತಮಾಲವನಮಧ್ಯಸ್ಥಂ ಮಾಲೀಶಶಿಖರಂ ದೃಶಾ ।
ಪಶ್ಯ ತ್ವಂ ಸುಂದರೇಶಸ್ಯ ಕಪರ್ದೀಶಾಲಯಂ ತಥಾ ॥೩೧॥

ಯಕ್ಷೇಶ್ವರಸ್ಯಾಭಯದಂ ಪಾಪಭಕ್ಷೇಶ್ವರಸ್ಯ ಚ ।
ವನೇಶೋಽಯಂ ಮತಂಗೇಶಃ ಪ್ಲಕ್ಷೇಶೋಽಯಂ ದ್ರುತೀಶ್ವರಃ ॥೩೨॥

---

ಉತ್ಪಲೇಶಾಲಯ, ಕುಮುದೇಶಾಲಯ, ಹಂಸೇಶ್ವರದೇವಾಲಯ, ಭದ್ರೇಶ್ವರಸದನ ಇವುಗಳನ್ನೂ, ಇವುಗಳ ಪ್ರಾಕಾರಗಳಮೇಲೆ ವೃಷಭವಿಗ್ರಹಗಳನ್ನೂ, ಕಾಮೇಶ್ವರದೇವಾಲಯದ ಮತ್ತು ಮಣಿಜ್ಯೋತೀಶ್ವರಾಲಯದ ಸೊಬಗನ್ನು ನೋಡಿ ಆನಂದಪಡು. ॥೨೭-೨೮॥

ಮಧೂಕವನ, ದ್ರಾಕ್ಷಾವನ, ಕೈಲಾಸಗಂಗೆ ಮೊದಲಾದ ಪವಿತ್ರಸ್ಥಳಗಳನ್ನೂ, ಆವುಗಳ ಪ್ರಾಂತಭಾಗದಲ್ಲಿರುವ ಕೋಟಿಸಂಖ್ಯೆಯ ಶಿವಲಿಂಗಗಳನ್ನೂ, ಸೌಧಮಾಲೆಯನ್ನೂ, ಕಲಶಪಂಕ್ತಿಗಳನ್ನೂ ನೋಡಿ ಧನ್ಯನಾಗು. ಇದರ ದರ್ಶನದಿಂದ ಪಾಪರಾಶಿಯೆಲ್ಲಾ ನಿವಾರಣೆಯಾಗುವುದು. ॥೨೯-೩೦॥

ಹೊಂಗೆಯಮರದ ಕಾಡಿನ ಮಧ್ಯದಲ್ಲಿ ಕಂಡುಬರುವ ಮಾಲೀಶ್ವರಾಲಯದ ಗಿರಿಶಿಖರವನ್ನೂ, ಸುಂದರೇಶ್ವರಾಲಯ, ಕಪರ್ದೀಶ್ವರಾಲಯ, ಯಕ್ಷೇಶ್ವರಾಲಯ' ಪಾಪಭಕ್ಷೇಶ್ವರಾಲಯ, ವನೇಶ್ವರಾಲಯ, ಮತಂಗೇಶ, ಪ್ಲಕ್ಷೇಶ, ದ್ರುತೀಶ್ವರ ಮೊದಲಾದ ಶಿವದೇವಾಲಯಗಳ ಶಿಖರಗಳನ್ನೂ ದರ್ಶನಮಾಡು. ॥೩೧-೩೨॥

ಶಿಖರಂ ವಿನತೇಶಸ್ಯ ವಸತೀಶಸ್ಯ ಲೋಕಯ ।
ಏಲಾವನಮಿದಂ ಪಶ್ಯ ರತ್ನಗುಚ್ಛೈರ್ವಿರಾಜಿತಂ ॥೩೩॥

ಕುಲಾಚಲಾನಾಂ ಸೌಧೋರುಲಿಂಗಕುಂಭಾನ್ ವಿಲೋಕಯ ।
ತವ ಧಾಮ ಮಹಾಮೌಲಿಲಿಂಗಂ ಚ ಹಿಮಭೂಧರ ॥೩೪॥

ತತ್ಪುರಸ್ತಾದ್ರತ್ನಭೂಮಿಸ್ಸುಧಾಸಿಂಧುರ್ವಿರಾಜತೇ ।
ತರಂಗಮಾಲಾವಿತತಸ್ಸುಧಾಪಿಂಡೋರುಫೇನವಾನ್ ॥೩೫॥

ತನ್ಮಧ್ಯೇ ಚ ಮಣಿದ್ವೀಪಶ್ಚಾಕಚಕ್ಯೈಶ್ಚಕಾಸ್ತಿ ವೈ ।
ಮಣಿದ್ವೀಪೋಯಮತುಲಶ್ಶ್ರೀಪುರಂ ತತ್ರ ರಾಜತೇ ॥೩೬॥

ಮಣಿದ್ವೀಪೇಶಶಿಖರಂ ಮಧ್ಯೇ ಪಶ್ಯ ನಗೋತ್ತಮ ।
ಮಣಿಗಂಗಾತಟಂ ಪಶ್ಯ ಮಣಿಗಂಗಾಸುಧಾಬ್ಧಿಗಾ ॥೩೭॥

ಕರಂಜವನಮಧ್ಯಸ್ಥಂ ಕರಂಜೇಶಶಿವಾಲಯಂ ।
ಏವಂ ಶತಾಷ್ಟೌ ಪ್ರಾಕಾರಾಶ್ಶ್ರೀಮಹೇಶೇನ ಕಲ್ಪಿತಾಃ ॥೩೮॥

---

ವಿನತೇಶ್ವರ, ವಸತೀಶ್ವರ ನಾಮಕಗಳಾದ ಶಿವಾಲಯಗಳನ್ನು ನೋಡು. ಅಲ್ಲಿಯೇ, ಎಲ್ಲಾ ವನವು ರತ್ನಗುಚ್ಛಗಳಿಂದ ಅಲಂಕೃತವಾಗಿರುವುದು. ಕುಲಾಚಲಗಳ ಪ್ರಾಸಾದಗಳನ್ನೂ, ಅವುಗಳಲ್ಲಿರುವ ಶಿವಲಿಂಗಾಕಾರದ ಕಲಶಗಳನ್ನೂ ನಿನ್ನ ಸೌಧವನ್ನೂ ಶಿರೋಭಾಗದಲ್ಲಿ ಹೊಳೆಯುವ ಮಹಾಲಿಂಗವನ್ನೂ ಇಲ್ಲಿ ಕಾಣುವೆ. ||೩೩-೩೪||

ಅಲ್ಲಿಂದ ಮುಂದೆ ರತ್ನಮಯವಾದ ಭೂಮಿಯೂ, ಸುಧಾಸಮುದ್ರವೂ ವಿರಾಜಿಸುತ್ತಿರುವುದು. ಸುಧಾಸಮುದ್ರವು ಅಮೃತದ ಅಲೆಗಳಿಂದಲೂ, ಅಮೃತದ ನೊರೆಗಳಿಂದಲೂ ಕೂಡಿ ನೋಡಲು ಬಹು ಮನೋಹರವಾಗಿರುವುದು. ಅದರ ಮಧ್ಯದಲ್ಲಿ ಚಕಚಕತೆಯಿಂದ ಪ್ರಕಾಶಿಸುವ ಮಣಿದ್ವೀಪವೂ, ದೇವಿಯ ಆವಾಸಸ್ಥಾನವಾದ ಶ್ರೀಪುರವೂ ವಿರಾಜಿಸುತ್ತಿರುವುದು. ||೩೫-೩೬||

ಅಲ್ಲಿ ಮಣಿದ್ವೀಪೇಶ್ವರಾಲಯವಿರುವುದು. ಅಲ್ಲಿಯೇ ಗಂಗಾಭೇದವಾದ ಮಣಿಗಂಗೆಯು ಹರಿದು ಸುಧಾಸಮುದ್ರವನ್ನು ಸೇರುತ್ತಲಿರುವುದು. ಹಾಗೆಯೇ ಕರಂಜ (ಹುಲಿಯುಗುರಿನಗಿಡ) ವನ ಮಧ್ಯದಲ್ಲಿ ಪ್ರಕಾಶಿಸುವ ಕರಂಜೇಶ್ವರಾಲಯ

ಕೈಲಾಸಮೌಲೌ ವಿತತಾ ರತ್ನಲಿಂಗಾಲಯೈಸ್ಸಹ ।
ತತ್ರಾಂತರೇ ಚ ಭವನಂ ಸ್ಕಂದಸ್ಯ ಗಣಪಸ್ಯ ಚ ॥೩೯॥

ಸ್ಕಂದೇಶ್ವರಸ್ಯ ಶಿಖರಂ ಪಶ್ಯ ವಿಘ್ನೇಶ್ವರಸ್ಯ ಚ ।
ದೇವ್ಯಾಂತಸ್ಸದನಂ ಪಶ್ಯ ಮಣಿಸೌಧಂ ವಿಲೋಕಯ ॥೪೦॥

ನಾನಾಸ್ಕಂದಗಣಾಸ್ತತ್ರ ವಿಘ್ನೇಶಸ್ಯ ಮಹಾಗಣಾಃ ।
ಶಕ್ತಿಪಾಶಾಂಕುಶಕರಾಸ್ತತ್ರ ಪ್ರಾಕಾರರಕ್ಷಕಾಃ ॥೪೧॥

ನವಲಕ್ಷಂ ಪಂಚಲಕ್ಷಂ ತಾಭ್ಯಾಂ ತತ್ರೈವ ರಕ್ಷಿತಂ ।
ಸದ್ಯೋಜಾತೋ ವಾಮದೇವಸ್ತತ್ಪುರುಷೋಽಘೋರ ಏವ ಚ॥೪೨॥

ಈಶಾನಸ್ತತ್ರ ಚಾಂತರ್ಹಿ ಪ್ರಾಕಾರಪರಿರಕ್ಷಕಾಃ ।
ಸ್ವಗಣೈಸ್ತಾದೃಶೈಶ್ಚೈವ ಪ್ರತ್ಯೇಕಂ ಲಕ್ಷಸಂಖ್ಯಯಾ ॥೪೩॥

---

ವನ್ನು ನೋಡು. ಹೀಗೆ ಮಹೇಶ್ವರನಿಂದ ನೂರೆಂಟು ಪ್ರಾಕಾರಗಳು ಈ ಪರ್ವತ ಪ್ರಾಂತದಲ್ಲಿ ನಿರ್ಮಿತಗಳಾಗಿರುವುವು. ||೩೭-೩೮||

ಕೈಲಾಸಶಿಖರದಲ್ಲಿ ಆ ಪ್ರಾಕಾರಗಳೆಲ್ಲಾ ರತ್ನಲಿಂಗಾಲಯಗಳಿಂದಲೂ, ರತ್ನ ಶಿಖರಗಳಿಂದಲೂ ರಂಜಿಸುತ್ತಿರುವುವು. ಅಲ್ಲಲ್ಲಿ ಸ್ಕಂದನ, (ನನ್ನ) ಗಣಪತಿಯ ಮನೆಗಳಿರುವುವು. ಅಲ್ಲೆಲ್ಲಾ ಸ್ಕಂದೇಶ್ವರ, ವಿಘ್ನೇಶ್ವರ ದೇವಾಲಯಗಳೂ, ದೇವಿಯ ವಾಸಸ್ಥಾನವಾದ ಮಣಿಸೌಧಗಳೂ ಪ್ರಕಾಶಿಸುತ್ತಿರುವುವು. ||೩೯-೪೦||

ಈ ಪ್ರಾಕಾರಗಳನ್ನು ಒಂಬತ್ತುಲಕ್ಷ ಸ್ಕಂದಗಣಗಳೂ, ಐದುಲಕ್ಷ ವಿಘ್ನೇಶ್ವರನ ಗಣಗಳೂ, ಶಕ್ತಿ, ಪಾಶ, ಅಂಕುಶ ಮುಂತಾದ ಆಯುಧಗಳನ್ನು ಧರಿಸಿದವರಾಗಿ ಸರ್ವದಾ ರಕ್ಷಿಸುತ್ತಿರುವರು. ಒಳಭಾಗದಲ್ಲಿ ಸದ್ಯೋಜಾತ, ವಾಮದೇವ, ತತ್ಪುರುಷ, ಅಘೋರ, ಈಶಾನಗಳೆಂಬ ಪಂಚ ರುದ್ರಮೂರ್ತಿಗಳು ಲಕ್ಷಸಂಖ್ಯೆಯಿಂದ ಕೂಡಿದ ತಮ್ಮ ಶೂರ ಸೈನ್ಯದೊಡನೆ ಪ್ರಾಕಾರರಕ್ಷಕರಾಗಿ ನಿಂತಿರುವರು. ||೪೧-೪೨-೪೩||

ಸ್ವನಾಮ್ನಾ ಸ್ಥಾಪ್ಯ ಲಿಂಗಾನಿ ದಿವ್ಯಧಾಮುಗತಾನಿ ತೇ ।
ಸದಾಪಚಿತಿಭಿಸ್ತತ್ರ ಪೂಜಯಂತಿ ವಿಲೋಕಯ ॥೪೪॥

ತನ್ಮೌಲಿಕುಂಭಜಾಲಾನಿ ವೀಕ್ಷ್ಯ ತಾನಿ ನಮಸ್ಕುರು ।
ಏವಂ ತತ್ರಾಂತರೇಪ್ಯನ್ಯಾಃ ಪಂಚವಿಂಶತಿಮೂರ್ತಯಃ ॥೪೫॥

ಪಂಚ ಪಂಚಾಂತರಾಸ್ತತ್ರ ಪ್ರಾಕಾರಪರಿರಕ್ಷಕಾಃ ।
ಸ್ವನಾಮ್ನಾ ಸ್ಥಾಪ್ಯ ಲಿಂಗಾನಿ ಕೈಲಾಸಾಮಲಪರ್ವತೇ ॥೪೬॥

ತತ್ರಾಂತರೇ ಮಹಾದೇವ್ಯಾ ವಸತಿಶ್ಶಿವಕಲ್ಪಿತಾ ।
ನಾಸ್ಮಾಕಂ ಪ್ರಸರಸ್ತತ್ರ ನಾನಾಮಣಿಗೃಹಾಂತರೇ ॥೪೭॥

ಸಖ್ಯಸ್ತತ್ರ ಮಹಾದೇವ್ಯಾಸ್ಸಂಚರಂತಿ ಗೃಹಾಂತರೇ ।
ತತ್ರ ಲಿಂಗೋರುಸದ್ಮಾನಿ ಮಣಿಕುಂಭೋಜ್ಜ್ವಲಾನಿ ಚ ॥೪೮॥

ತತ್ರ ದೇವ್ಯಾ ಮಹಾದೇವೋ ವಿಹರತ್ಯೇವ ನಿಶ್ಚಿತಂ ॥೪೯॥

---

ಆ ಸದ್ಯೋಜಾತಾದಿ ಈಶ್ವರಮೂರ್ತಿಗಳು ತಮ್ಮ ತಮ್ಮ ಹೆಸರಿನಿಂದ ಶಿವ ಲಿಂಗಗಳನ್ನು ಪ್ರತಿಷ್ಠಿಸಿ, ಅವುಗಳಿಗೆ ದೇವಾಲಯ, ಶಿಖರ, ಕಲಶ ಮುಂತಾದುವು ಗಳನ್ನು ನಿರ್ಮಿಸಿ, ಸರ್ವದಾ ಆ ಶಿವಲಿಂಗವನ್ನು ಪೂಜಿಸುತ್ತಾ ಪ್ರಾಕಾರರಕ್ಷಕರಾಗಿ ರುವರು. ಇಂತಹ ಸದ್ಯೋಜಾತೇಶ್ವರನಾಮಕಗಳಾದ ಶಿವಾಲಯಗಳನ್ನೂ, ಶಿವಾ ಲಯಗಳ ಕಲಶಗಳನ್ನೂ, ಅವುಗಳ ಮಧ್ಯಭಾಗದಲ್ಲಿರುವ ಇಪ್ಪತ್ತೈದು ಶಿವಮೂರ್ತಿ ಗಳನ್ನೂ ದರ್ಶನಮಾಡುವವನಾಗು. ॥೪೪-೪೫॥

ಈ ಕೈಲಾಸಪರ್ವತದಲ್ಲಿ ಈಶ್ವರನ ಪಂಚಮೂರ್ತಿಗಳೂ ತಮ್ಮ ಹೆಸರಿನಿಂದ ಇಪ್ಪತ್ತೈದು ಶಿವಲಿಂಗಗಳನ್ನೂ, ಐದು ಐದು ಶಿವಲಿಂಗಗಳನ್ನು ಒಂದೊಂದು ಸಾಲಿಗೆ ಸ್ಥಾಪಿಸಿ, ಅವುಗಳಿಗೆ ತಮ್ಮ ಹೆಸರುಗಳನ್ನೇ ಇಡಿಸಿ ಪೂಜಿಸುತ್ತಿರುವರು. ಅವುಗಳ ಮಧ್ಯದಲ್ಲಿ ಸಾಕ್ಷಾಚ್ಛಿವನಿಂದ ಕಲ್ಪಿತವಾದ ಮಹಾದೇವಿಯ ರತ್ನಖಚಿತ ವಾದ ಆವಾಸಸ್ಥಾನವಿರುವುದು. ಆ ರಹಸ್ಯವಾದ ಸ್ಥಾನಗಳಿಗೆ ನಾವು ಯಾರೂ ಪ್ರವೇಶಿಸುವಂತಿಲ್ಲ. ॥೪೬-೪೭॥

ಆ ಗೃಹಮಧ್ಯದಲ್ಲಿ ಓಡಾಡುವವರು ದೇವಿಯ ಸಖಿಯರು ಮಾತ್ರ. ಅಲ್ಲಿ ವಿಶೇಷವಾಗಿ ಶಿವಮೂರ್ತಿಗಳು, ಶಿವಾಲಯಗಳೇ ಕಾಣುವುವು. ಅವೆಲ್ಲವೂ ರತ್ನ

|| ಸ್ಕಂದ ಉವಾಚ ||

ಇತ್ಥಂ ನಂದೀಶವಾಕ್ಯೇನ ಸಂತುಷ್ಟಃ ಪ್ರಾಹ ಭೂಧರಃ ।
ಸಮುದ್ಯತ್ಪುಲಕಸ್ಸಾಸ್ರೋ ಧನ್ಯಂ ಮನ್ಯೇ ದೃಶೋರ್ದ್ವಯಂ ॥೫೦॥

|| ಹಿಮವಾನುವಾಚ ||

ಕೈಲಾಸಮೌಲಿವರಲಿಂಗಸುರತ್ನಧಾಮ
ಕಾಂತೋರುಕುಂಭಕಲನೇನ ನಯಾಮಿ ಜನ್ಮ ।
ಅತ್ರೈವ ವಾಸಮಭಿರೋಚಯತೇ ಮನೋ ಮೇ
ಸತ್ಯಂ ಬ್ರವೀಮಿ ಗಣಪೇಂದ್ರ ನಮೋ ನಮಸ್ತೇ ॥೫೧॥

ಧನ್ಯೇ ಮೇ ನಯನೇ ಜನುಶ್ಚ ಸಫಲಂ ಧನ್ಯೋ ಗಿರೀಂದ್ರೋಽಪ್ಯಯಂ
ಯಸ್ಯಾಪಾರಶಿಖಾಶ್ರಯೋ ಹಿ ಭಗವಾನ್ ಲಿಂಗಾಕೃತಿಶ್ಶಂಕರಃ ।

---

ಕಲಶಗಳಿಂದ ಪ್ರಕಾಶಿಸುತ್ತಿರುವುವು. ಇಂತಹ ಸ್ಥಳದಲ್ಲಿ ಶಂಕರನು ತನ್ನ ಪತ್ನಿಯಾದ ಮಹಾದೇವಿಯೊಡನೆ ಸಂಚರಿಸುತ್ತಿರುವನು. ||೪೮-೪೯||

ಹೀಗೆ ವಿವರಿಸಿದ ನಂದೀಶ್ವರನ ಮಾತುಗಳನ್ನು ಕೇಳಿ ಸಂತುಷ್ಟನಾದ ಪರ್ವತರಾಜನು ಆನಂದಬಾಷ್ಪವಿಶಿಷ್ಟನಾಗಿ ತಾನು ಅಲ್ಲಿನವರೆಗೆ ಮಾಡಿದ ದರ್ಶನದ ಫಲವಾಗಿ ತನ್ನ ಕಣ್ಣುಗಳನ್ನು ಧನ್ಯವನ್ನಾಗಿ ತಿಳಿದು ಹೀಗೆಂದನು. ||೫೦||

" ಈ ಕೈಲಾಸಶಿಖರದಲ್ಲಿರುವ ರತ್ನಮಯವಾದ ದಿವ್ಯಶಿವಲಿಂಗಗಳ ಮತ್ತು ಶಿವಾಲಯಗಳ ದರ್ಶನದಿಂದ ನಾನು ನನ್ನ ಜನ್ಮವನ್ನು ಸಾರ್ಥಕಮಾಡಿಕೊಂಡೆನು. ಈ ಪರ್ವತದ ಸೌಂದರ್ಯಕ್ಕೆ ಆಸೆಪಟ್ಟು ನನ್ನ ಮನಸ್ಸು ಇಲ್ಲಿಯೇ ಸ್ಥಿರವಾಗಿ ನಿಲ್ಲಲು ತವಕಪಡುತ್ತಿರುವುದು. ಇದು ನಿಶ್ಚಯ. ಮಹೇಶ್ವರನೇ, ಜಗತ್ಪತಿಯೇ; ನಿನಗೆ ವಂದನೆ. ||೫೧||

ಈಗ ನನ್ನ ಕಣ್ಣುಗಳು ಧನ್ಯವಾದವು. ಜನ್ಮವು ಸಫಲವಾಯಿತು. ಪರಶಿವನನ್ನು ಧರಿಸಿಕೊಂಡಿರುವ ಈ ಪರ್ವತವೇ ಧನ್ಯವಾದದ್ದು. ಅನೇಕ ಶಿವಲಿಂಗಗಳ ಆಕಾರದಲ್ಲಿ ಮಹೇಶ್ವರನು ಈ ಪರ್ವತದಲ್ಲಿ ನೆಲಸಿರುವನಲ್ಲವೆ? ಯಾವ ಪ್ರಾಕಾರದಲ್ಲಾಗಲಿ, ಯಾವ ಗೋಪುರದಲ್ಲಿಯೇ ಆಗಲಿ, ಭಿನ್ನ ಭಿನ್ನ ರೂಪ ಭಾವದಿಂದ

ಪ್ರಾಕಾರೇಷು ಚ ಗೋಪುರೇಷು ವಿಪಿನೇ ರುದ್ರಾವತಾರಃ ಪ್ರಭು
ಶ್ಚಾಸ್ತೇ ಸೌಧವರೇಷು ದೇವತಿಲಕಃ ಕಸ್ತಸ್ಯ ವ್ಯಂಕ್ತೇ ಗುಣಾನ್ ॥೫೨॥

ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಹಿಮಾಚಲಸ್ಯ
ಕೈಲಾಸದರ್ಶನಂ ನಾಮ ವಿಂಶೋಽಧ್ಯಾಯಃ

---

ಶ್ರೇಷ್ಠನಾದ ಮಹಾದೇವನೇ ಕಾಣುತ್ತಿರುವನು. ಇಂತಹ ಮಹಾಮಹಿಮನ ಸಕಲ ಗುಣಗಳನ್ನೂ ಯಾವನುತಾನೇ ವರ್ಣಿಸಬಲ್ಲನು ?" ಎಂದು ಹಿಮವಂತನು ಶಂಕರನನ್ನೂ ಕೈಲಾಸಪರ್ವತವನ್ನೂ ಸ್ತುತಿಸಿ ತನ್ನನ್ನು ಧನ್ಯನೆಂದು ತಿಳಿದುಕೊಂಡನು. ||೫೨||

ಇಲ್ಲಿಗೆ ಶ್ರೀಶಿವರಹಸ್ಯದ ಭವನಾಮಕವಾದ ಎರಡನೆಯ ಅಂಶದಲ್ಲಿ ಹಿಮಾಚಲವು
ಕೈಲಾಸವನ್ನು ದರ್ಶನಮಾಡಿದ ಪ್ರಕರಣದಲ್ಲಿ ಇಪ್ಪತ್ತುಮೂರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಚತುರ್ವಿಂಶೋಽಧ್ಯಾಯಃ

## ಹಿಮಾಲಯಸ್ಯ ಕೈಲಾಸದರ್ಶನಂ



॥ ನಂದೀಶ್ವರ ಉವಾಚ ॥

**ಪ್ರಾಚ್ಯಾಂ ಪಶ್ಯ ನಗಶ್ರೇಷ್ಠ ಶ್ರೇಷ್ಠೋಽಯಂ ಧರಣೀಧರಃ ।**
**ನಿಷ್ಟಪ್ತಕನಕಾಕಾರೋ ನಾನಾಸುರವರಾಶ್ರಯಃ ॥೧॥**

**ಸಹಸ್ರಶಿಖರಾಪಾರಕಾಂತಿಕಾಂಚಿತದಿಕ್ತಟಃ ।**
**ವೃಷಸ್ತಂಭನಿಭೋ ಭಾತಿ ಕೈಲಾಸಾಗ್ರೇ ನಗೋತ್ತಮ ॥೨॥**

**ಪಶ್ಯ ತಾನ್ ಪರಿಘಾಕಾರಾನ್ ಸಮುದ್ರಾನ್ ಸನದೀನದಾನ್ ।**
**ಪಶ್ಯ ದ್ವೀಪಾನ್ ಮಹಾಶೈಲಸಮುದ್ರೇಷು ವಿಶೇಷತಃ ॥೩॥**

---

## ಇಪ್ಪತ್ತನಾಲ್ಕನೆಯ ಅಧ್ಯಾಯ

ನಂದೀಶ್ವರನು ಹಿಮವಂತರಾಜನನ್ನು ಜೊತೆಯಲ್ಲಿ ಕರೆದುಕೊಂಡು ಪೂರ್ವ ದಿಕ್ಕಿಗೆ ಪ್ರಯಾಣಮಾಡಿ ಅಲ್ಲಿನ ಸೌಂದರ್ಯವನ್ನು ಹೀಗೆ ವಿವರಿಸಲಾರಂಭಿಸಿದನು. " ನಗರಾಜನೇ, ಈ ಕೈಲಾಸದ ಪೂರ್ವಭಾಗವು ಅಪರಂಜಿಚಿನ್ನದಂತೆ ಹೊಳೆಯುತ್ತಿರುವುದು. ಇಲ್ಲಿ ಅನೇಕ ಸುರರು ವಾಸಿಸುತ್ತಿರುವರು. ಇಲ್ಲಿರುವ ಸಾವಿರಾರು ಶಿಖರಗಳ ದಿವ್ಯಕಾಂತಿಯಿಂದ ಸಕಲ ದಿಕ್ಕುಗಳೂ ಪ್ರಕಾಶಿಸುತ್ತಿರುವುವು. ವೃಷಾಚಲದಂತೆ ಪ್ರಕಾಶಿಸುವ ಈ ಭಾಗವು ಎಷ್ಟು ರಮ್ಯವಾಗಿದೆ ನೋಡು ! ॥೧-೨॥

ಈ ಭಾಗದ ಕೈಲಾಸಕ್ಕೆ ಅನೇಕ ಸಮುದ್ರಗಳೂ, ನದಿಗಳೂ, ನದಗಳೂ, ಕಂದಕದಂತೆ ಕಾಣುತ್ತಿವೆ. ಅಲ್ಲದೆ ಅವುಗಳ ಮಧ್ಯದಲ್ಲಿ ಅನೇಕ ದ್ವೀಪಗಳೂ,

ವಿಪಿನಾವನಿಜಾತಾನಾಂ ಪ್ರಾಸಾದಾನಾಂ ಚ ಮೌಲಯಃ ।
ಪ್ರೋದ್ಯತ್ಪತಾಕಾ ರಾಜಂತಿ ಮಣಿಕುಂಭಾಗ್ರಶೋಭಿತಾಃ ॥೪॥

ಏಷ ನೀಲಸ್ತಥಾ ವಿಂಧ್ಯೋ ಮಂದರೋ ದರ್ದುರೋ ನಗಃ ।
ಸುಮಾಲೀ ಕೇತುಮಾಲಶ್ಚ ಭದ್ರಾಶ್ವೌ ತತ್ರ ಧಾರ್ಷಕೌ ॥೫॥

ರೈವತಶ್ಶತಶೃಂಗಶ್ಚ ಮಣಿಬಭ್ರುಶ್ಚ ಪಿಂಗಲಃ ।
ಉದಯಶ್ಚಕ್ರವಾಲಶ್ಚ ಮೈನಾಕೋಽಯಮಧುರ್ಗಿರಿಃ ॥೬॥

ಅಸ್ತಾಚಲಃ ಪಾರಿಯಾತ್ರೋ ನಿಷಧಃ ಕಂದಲಾಚಲಃ ।
ತವ ಮೂರ್ತಿರಿಯಂ ಶೈಲೀಮೌಲಿಕೇದಾರಲಿಂಗತಃ ॥೭॥

ತ್ವಮತ್ಯಂತಮಹಾಶೃಂಗೈರುಪೇತೋಽಸಿ ಮಹಾನಗ ।
ತ್ವತ್ತೋ ಮಾನುಷಗಂಗೇಯಂ ನಿರ್ಗತಾ ಲಿಂಗರಂಗಿತಾ ॥೮॥

---

ಮಹಾಗಿರಿಗಳೂ, ಅನೇಕ ದೊಡ್ಡಕಾಡುಗಳೂ, ದಿವ್ಯಪ್ರಾಸಾದಗಳೂ, ಮೇಲೆ ಕಟ್ಟಿದ ಪತಾಕೆಗಳೂ, ಮಣಿಮಯವಾದ ಕಲಶಗಳೂ, ಬಹಳವಾಗಿ ಶೋಭಿಸುತ್ತಿರುವುವು. ॥೩-೪॥

ಇಲ್ಲಿ ಕಾಣುವುವೇ ನೀಲ, ವಿಂಧ್ಯ, ಮಂದರ, ದರ್ದುರ, ಸುಮಾಲಿ, ಕೇತುಮಾಲ, ಭದ್ರಾಶ್ವ ಮುಂತಾದ ಪರ್ವತಗಳು. ಅಲ್ಲದೆ ರೈವತ, ಶತಶೃಂಗ, ಮಣಿಬಭ್ರು, ಪಿಂಗಲ, ಉದಯ, ಚಕ್ರವಾಲ, ಮೈನಾಕ ಮುಂತಾದ ಪರ್ವತಗಳೂ ಇಲ್ಲಿ ರಂಜಿಸುತ್ತಿರುವುವು. ॥೫-೬॥

ಅಸ್ತಾಚಲ, ಪಾರಿಯಾತ್ರ, ನಿಷಧ, ಕಂದಲಾಚಲ ಮುಂತಾದ ಪರ್ವತಗಳೂ ವಿರಾಜಿಸುತ್ತಿರುವುವು. ಅಲ್ಲದೆ ನಿನ್ನ ಪರ್ವತವೂ ಸಹ ಕೇದಾರೇಶ್ವರಲಿಂಗದಿಂದಲೂ ದೊಡ್ಡ ದೊಡ್ಡ ಪರ್ವತಶಿಖರಗಳಿಂದಲೂ ಕೂಡಿ, ಶೋಭಿಸುತ್ತಿರುವುದು. ಮಾನುಷಗಂಗಾನದಿಯು ಈಶ್ವರಲಿಂಗದಿಂದ ಹೊರಟು ನಿನ್ನ ಗಿರಿಶಿಖರದಲ್ಲಿ ಹರಿದು ಭೂಲೋಕಕ್ಕೆ ಹರಿದುಬರುತ್ತಿರುವುದು. ॥೭-೮॥

ಭಗೀರಥಸ್ಯ ತಪಸಾ ಪ್ಲಾವಯಂತೀ ಚ ಭೂತಲಂ ।
ಅನ್ಯಾ ವಿಕ್ರಮತೋ ವಿಷ್ಣೋಃ ಪಾದತೋ ನಿರ್ಗತಾ ನಗ ॥೯॥

ಗಂಗಾದ್ವಾರಾತ್ಪ್ರತೀಚ್ಯಾಬ್ಧಿಂ ಸಂಗತಾ ಮಾಲವಾನಿ ಮೇ ।
ಇಯಂ ಗರ್ವಭರಾಕ್ರಾಂತಾ ಚೇಶಾನಶಶಿಮೌಲಿನಾ ॥೧೦॥

ಜಟಾಕೋಟೀರನಿಲಯಾಂ ಚಕ್ರೇ ಸಾ ಚ ವಿಸರ್ಜಿತಾ ।
ದೇವೈಸ್ಸಂಪ್ರಾರ್ಥಿತೋ ದೇವಸ್ತಾಂ ಭೂಮೌ ಪರಿಮುಕ್ತವಾನ್ ॥೧೧॥

ಆನಂದಕಾನನಂ ಪ್ರಾಪ್ತಾ ಚಕ್ರತೀರ್ಥೇ ಸರಿದ್ವರಾ ।
ತತ್ತೀರೇ ಪಶ್ಯ ಸುಭಗಂ ವಿಶ್ವೇಶಶಿಖರಂ ಮಹತ್ ॥೧೨॥

ಭಾರತೇ ಭೂಮಿಸರ್ವಸ್ವಖಂಡೇ ವೈ ಜಾಹ್ನವೀ ಯತಃ ।
ಅವಿಮುಕ್ತಂ ಪ್ರಪಶ್ಯಾದ್ಯ ಮೃತಾಯತ್ರಾಪುನರ್ಭವಾಃ ॥೧೩॥

---

ಈ ಮಾನುಷಗಂಗೆಯು ಭಗೀರಥನ ತಪಸ್ಸಿನಿಂದ ಭೂಲೋಕಕ್ಕೆ ಬಂದು ಅದನ್ನು ಪವಿತ್ರಗೊಳಿಸಿರುವುದು. ಮತ್ತೊಂದು ಶಾಖೆಯು ತ್ರಿವಿಕ್ರಮಾವತಾರ ಮಾಡಿದ ವಿಷ್ಣುವಿನ ಪಾದ ಮೂಲದಿಂದ ಹೊರಟು ಭೂಮಿಯನ್ನು ಹೊಕ್ಕಿರುವುದು. ಈ ಗಂಗಾಶಾಖೆಗಳು ಪಶ್ಚಿಮಸಮುದ್ರಕ್ಕೆ ಸೇರುವ ಉದ್ದೇಶದಿಂದ ಗಂಗಾದ್ವಾರದ ಮೂಲಕ ವೇಗವಾಗಿ ಹರಿಯಲು ಆರಂಭಿಸಿದುವು. ಈ ಗರ್ವವನ್ನು ನೋಡಿ ಶಂಕರನು ತನ್ನ ಜಟಾಕಲಾಪದಿಂದ ಗಂಗೆಯನ್ನು ಬಿಗಿದು ಕಟ್ಟಿದನು. ||೯-೧೦||

ಅನಂತರ ಶಂಕರನು ದೇವತೆಗಳಿಂದಲೂ, ಭಗೀರಥನಿಂದಲೂ ಪ್ರಾರ್ಥಿಸಲ್ಪಟ್ಟವನಾಗಿ ಆ ಗಂಗೆಯನ್ನು ಭೂಮಿಗೆ ಹರಿಸಿಬಿಟ್ಟನು. ಆ ಗಂಗೆಯು ಶಂಕರನ ಜಟಾಜೂಟದಿಂದ ಹೊರಟು ಆನಂದಕಾನನವನ್ನು ಪ್ರವೇಶಿಸಿ, ಅಲ್ಲಿಂದ ಚಕ್ರತೀರ್ಥಕ್ಕೆ ಹರಿದು, ಮುಂದುವರಿಯುವುದು. ಈ ಗಂಗಾನದಿಯ ದಡದಲ್ಲಿ ಕಂಡು ಬರುವ ಸುಂದರವಾದ ವಿಶ್ವೇಶ್ವರಕ್ಷೇತ್ರವನ್ನು ನೋಡುವವನಾಗು. ||೧೧-೧೨||

ಗಂಗಾನದಿಯು ಭೂಲೋಕದಲ್ಲಿ ಅತ್ಯಂತ ಶ್ರೇಷ್ಠವೆನಿಸಿದ ಭರತಖಂಡದಲ್ಲಿ ಹರಿಯುವುದು. ಅಲ್ಲಿರುವ ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ಮೃತರಾದವರು ಪುನರ್ಜನ್ಮರಹಿತವಾದ ಮುಕ್ತಿಯನ್ನು ಪಡೆಯುವರು. ಅಂತಹ ಮುಕ್ತಿಯನ್ನು

ವಿಮುಕ್ತಿಂ ದಾಸ್ಯತೇ ದೇವೋ ಯತ್ರ ವಿಶ್ವೇಶ್ವರಃ ಸ್ವಯಂ ।
ತತ್ಪಶ್ಚಾತ್ಸಾಗರಪ್ರಾಂತೇ ಕುರುಕ್ಷೇತ್ರಂ ಪ್ರಭಾಸಕಂ ॥೧೪॥

ರುದ್ರಕೋಟಿಃ ಪುಷ್ಕರಂ ಚ ಗಂಗಾದ್ವಾರಂ ಪವಿತ್ರಕಂ ।
ಪಿಂಡಾರಕಂ ಕಾಲಜರಂ ತಾಪಿತೀರೇ ಮನೋಹರಂ ॥೧೫॥

ಯತ್ರ ಪಾಶುಪತೋ ಯೋಗೀ ಮುನೀನಾಂ ಚೋಪ[1]ದೇಶತಃ ।
ದೇವದೇವೇನ ತತ್ರೈವ ಪಶ್ಯೈತನ್ಮಣಿಕುಂಭಕಂ ॥೧೬॥

ಶ್ರೀಶೈಲಶಿಖರಂ ಪಶ್ಯ ಪಶ್ಯ ತ್ರ್ಯಂಬಕಭೂಧರಂ ।
ಕ್ಷಿಪ್ರಾತೀರೇ ಮಹಾಕಾಲಂ ಕಾಮದಂ ವೈದ್ಯನಾಥಕಂ ॥೧೭॥

ಪಶ್ಚಾತ್ತಥೋತ್ತರಾಶ್ಚೇಮೇ ಕುರವಃ ಪಶ್ಯ ಭೂಧರ ।
ತಾಮ್ರಸ್ವರ್ಣಮಯೀ ಭೂಮಿಸ್ತತ್ರ ದ್ವೀಪೇ ಘೃತೋದಧೌ ॥೧೮॥

---

ಕೊಡುವವನು ಆ ಕ್ಷೇತ್ರಾಧಿಪತಿಯಾದ ವಿಶ್ವೇಶ್ವರನೇ ಅಲ್ಲವೆ? ಅಲ್ಲಿಂದ ಪಶ್ಚಿಮ ದಿಕ್ಕಿಗೆ ಬಂದರೆ ಪ್ರಭಾಸಕ್ಷೇತ್ರ, ಕುರುಕ್ಷೇತ್ರ ಮುಂತಾದ ದಿವ್ಯಕ್ಷೇತ್ರಗಳಿರುವುವು. ॥೧೩-೧೪॥

ರುದ್ರಕೋಟಿ, ಪುಷ್ಕರತೀರ್ಥ, ಗಂಗಾದ್ವಾರ, ಪಿಂಡಾರಕ, ಕಾಲಜರ, ತಾಪಿನೀನದಿಯತೀರದ ಕ್ಷೇತ್ರ ಇವೆಲ್ಲವೂ ಅತಿಪವಿತ್ರವೆನಿಸಿದವುಗಳು. ಹಾಗೆಯೇ ಮಹೇಶ್ವರನು ಪಾಶುಪತಯೋಗಿಯ ವೇಷದಿಂದ ಬಂದು ಯೋಗಿಗಳಿಗೆ ಶಿವ ಮಂತ್ರವನ್ನು ಉಪದೇಶಮಾಡಿದ ಶ್ರೀಶೈಲಕ್ಷೇತ್ರವು ದಿವ್ಯಕಲಶಗಳಿಂದ ವಿರಾಜಿಸುತ್ತಿರುವುದು. ಅಲ್ಲಿಂದ ಮುಂದೆ ಹರಿಯುವ ಕ್ಷಿಪ್ರಾನದಿಯ ತೀರದಲ್ಲಿ ಮಹಾಕಾಲೇಶ್ವರ, ಇಷ್ಟಾರ್ಥಪ್ರದನಾದ ವೈದ್ಯನಾಥೇಶ್ವರ ಮುಂತಾದ ಶಿವಲಿಂಗಗಳನ್ನು ನೋಡಬಹುದು. ॥೧೫-೧೬-೧೭॥

ಅಲ್ಲಿಂದ ಉತ್ತರಕ್ಕೆ ಪ್ರಯಾಣಮಾಡಿದರೆ ಕುರುದೇಶಗಳು ಸಿಕ್ಕುವುವು. ಅಲ್ಲಿಯೇ ಘೃತಸಮುದ್ರವಿರುವುದು. ಅಲ್ಲಿಯ ಭೂಮಿಯಲ್ಲಿ ತಾಮ್ರ, ಸುವರ್ಣ ಮುಂತಾದುವುಗಳು ತುಂಬಿಹೋಗಿರುವುವು. ಅಲ್ಲಿ ವಾಸಿಸುವವರು ಕಿಂಪುರುಷರು ಮಾತ್ರ. ತುರಗವದನವುಳ್ಳ ಗಂಧರ್ವರೂ, ಕಾಕಮುಖಗಳುಳ್ಳ ಕಿಂಪುರುಷ

---

1 ಉಪದೇಶಿತಾ (ಪಾ ರ)

ಸ ಹಿ ಕಿಂಪುರುಷಾವಾಸಃ ಪುರುಷಾಸ್ತುರಗಾನನಾಃ ।
ಶಿಲಾನದೀಮಿಮಾಂ ಪಶ್ಯ ತತ್ಪ್ರಾಂತೇ ಕಾಕವಕ್ತ್ರಕಾಃ ॥೧೯॥

ಪುರುಷಾಣಾಂ ಪ್ರವೇಶೋತ್ರ ತಾವದೇವ ನಗೋತ್ತಮ ।
ಮರುಭೂಮಿಸ್ತತೋದ್ವೀಪೌ ಶಾಕಕ್ರೌಂಚೌ ಮನೋರಮೌ ॥೨೦॥

ಕುಶಕಾಶೌ ತತಃ ಪ್ರಾಚ್ಯಾಂ ಕ್ಷೀರೋದೇನಾವೃತೌ ನಗ ।
ದೇವಭೂಮಿಸ್ತತೋ ರಮ್ಯಾ ದಧ್ಯೋದೇ ಪರಿಕಲ್ಪಿತಾ ॥೨೧॥

ಚಕ್ರವಾಲೋ ಗಿರಿಃ ಪ್ರಾಚ್ಯಾಂ ತತ್ಪ್ರಾಚ್ಯಾಮುದಯಾಚಲಃ ।
ಪಶ್ಚಾದಪಿ ಪ್ರಪಶ್ಯೇಮಾಂ ಭೂಮಿಂ ಸ್ವಾದೋದಧೀವೃತಾಂ ॥೨೨॥

ಸ್ವರ್ಣಾರಂ ಪಶ್ಯ ಸುಭಗಂ ವರುಣಾವಾಸಮುತ್ತಮಂ ।
ಶೋಣೋ ನಾಮ ನದೋ ವಿಪ್ರ ಪ್ರತೀಚ್ಯಾಂ ವಹತೇ ನಗ ॥೨೩॥

ರಮ್ಯಸಾಲವನಪ್ರಾಂತೇ ಗಂಧರ್ವಾಣಾಂ ಪ್ರಮೋದಭೂಃ ।
ಅಸ್ತಾಚಲಾವಧಿ ನಗ ತತ್ಪ್ರಾಂತೇ ಶಲ್ಮಲೀದ್ವೀಪಃ ॥೨೪॥

---

ವಿಶೇಷಗಳೂ ಈ ಕ್ಷೇತ್ರದಲ್ಲಿ ವಾಸಿಸುವರು. ಮತ್ತಾರಿಗೂ ಇಲ್ಲಿ ಸುಲಭವಾದ ಪ್ರವೇಶವಿರಲಾರದು. ಅಲ್ಲಿಂದ ಮುಂದೆ ಮರುಭೂಮಿಯಿರುವುದು. ಅಲ್ಲಿಯೇ ಶಾಕ, ಕ್ರೌಂಚ ಮುಂತಾದ ದಿವ್ಯವನಗಳಿರುವುವು. ||೧೮-೧೯-೨೦||

ಕ್ಷೀರಸಮುದ್ರದಿಂದ ಆವೃತಗಳಾಗಿರುವ ಕುಶ, ಕಾಶದ್ವೀಪಗಳು ಬಹು ಪವಿತ್ರವಾದವುಗಳು. ದಧಿಸಮುದ್ರದಿಂದ ಸುತ್ತುವರಿಯಲ್ಪಟ್ಟ ದೇವಭೂಮಿಯು ಅತಿರಮ್ಯಪ್ರದೇಶವಾಗಿದೆ. ಈ ಕೈಲಾಸದ ಪೂರ್ವಭಾಗದಲ್ಲಿ ಚಕ್ರವಾಲಪರ್ವತವೂ, ಅದರಮುಂದೆ ಉದಯಾಚಲವೂ, ಪಶ್ಚಿಮಭಾಗದಲ್ಲಿ ಸ್ವಾದೂದಕದಿಂದ ಸುತ್ತುವರಿದ ಭೂಭಾಗವೂ ಕಂಡುಬರುತ್ತಿರುವುದು. ||೨೧-೨೨||

ಪಶ್ಚಿಮಭಾಗದಲ್ಲಿ ವರುಣನಿಗೆ ಆವಾಸಸ್ಥಾನವಾದ ಸ್ವರ್ಣಪ್ರದೇಶವೂ, ಶೋಣಾನದವೂ ಕಂಗೊಳಿಸುತ್ತಿರುವುದು. ||೨೩||

ಮನೋಹರವಾದ ಸಾಲವನದ ಹತ್ತಿರದಲ್ಲಿ ಗಂಧರ್ವರಿಗೆ ಆಶ್ರಯವಾದ ಸುಂದರಭೂಮಿಯೊಂದಿರುವುದು. ಅದು ಅಸ್ತಾಚಲದವರೆಗೂ ಹಬ್ಬಿರುವುದು.

ದಕ್ಷಿಣೇ ಭಾರತೇ ವರ್ಷೇ ಜಂಬೂನಾಮನದೀ ನಗ ।
ಪ್ರತ್ಯೇವ ನಿಯತಂ ತಸ್ಯಾಂ ದ್ವೀಪಂ ಜಾಂಬೂನದಂ ಸ್ಮೃತಂ ॥೨೫॥

ದೇವಭೋಗ್ಯಂ ಮಹಚ್ಛೈಲ ನಿಷ್ಟಪ್ತಕನಕಂ ಹಿ ತತ್ ।
ಪ್ರತಿಷ್ಠಾನಪುರಂ ಪಶ್ಯ ಕರಹಟ್ಟಪುರಂ ತಥಾ ॥೨೬॥

ಕರವೀರಪುರಂ ಚಾಪಿ ಪಶ್ಯ ವಿಂಧ್ಯನಿವಾಸಿನೀಂ ।
ಪಶ್ಯ ವೇಣುವನಂ ಪಶ್ಯ ನಗನಾಥ ಶಿವಾಲಯಂ ॥೨೭॥

ಓಂಕಾರಂ ನರ್ಮದಾತೀರೇ ಕುಂಡಂ ಚೋಂಕಾರನಾಮಕಂ ।
[1]ಆವಾಟಕಮಿದಂ ಪಶ್ಯ ಪಶ್ಯೈತದ್ಘುಸೃಣೇಶ್ವರಂ ॥೨೮॥

ನೈಮಿಷಂ ಪಶ್ಯ ವಿಪುಲಂ ವಿಶಾಲಂ ಬದರೀಮನು ।
ಗೋದಾಂ ಚ ನರ್ಮದಾಂ ಚೈವ ಬಾಹುದಾಂ ಕೃಷ್ಣವೇಣಿಕಾಂ॥೨೯॥

---

ಅದನ್ನೇ ಶಾಲ್ಮಲೀದ್ವೀಪವೆನ್ನುವರು. ಹಾಗೆಯೇ ದಕ್ಷಿಣಭಾರತದಲ್ಲಿಯೂ ಜಂಬೂನದಿಯೊಂದು ಹರಿಯುವುದು. ಆ ನದಿಗೆ ಸಂಬಂಧಿಸಿದ ದ್ವೀಪವನ್ನೇ ಜಾಂಬೂನದವೆಂದು ಕರೆಯುವರು. ॥೨೪-೨೫॥

ಆ ಜಾಂಬೂನದದ್ವೀಪವು ದೇವಭೋಗ್ಯವಾದದ್ದು. ಮತ್ತು ಸುವರ್ಣಮಯವಾದದ್ದು. ಅದರ ಸಮೀಪದಲ್ಲಿಯೇ ಪ್ರತಿಷ್ಠಾನಪುರ, ಕರಹಟ್ಟಪುರ ಎಂಬ ಎರಡು ಕ್ಷೇತ್ರಗಳಿರುವುವು. ವಿಂಧ್ಯಾಚಲದ ಪಕ್ಕದಲ್ಲಿರುವ ಕರವೀರಪುರವೂ, ವೇಣುವನವೂ ಅದರಲ್ಲಿರುವ ಶಿವಾಲಯವೂ ಅತ್ಯಂತ ಪವಿತ್ರವಾದವುಗಳು. ಅವುಗಳನ್ನು ನೋಡಿ ಆನಂದಪಡು. ॥೨೬-೨೭॥

ನರ್ಮದಾನದೀತೀರದಲ್ಲಿ ಓಂಕಾರೇಶ್ವರವಿಗ್ರಹವೂ, ಓಂಕಾರವೆಂಬ ಹೆಸರಿನ ತೀರ್ಥವೂ ಇರುವುದು. ಹಾಗೆಯೇ ಅದೇ ಓಂಕಾರೇಶ್ವರನಾಮಕವಾದ ಉದ್ಯಾನವನದಲ್ಲಿ ಘುಸೃಣೇಶ್ವರ ಶಿವಲಿಂಗವಿರುವುದು. ಅದರಂತೆಯೇ ವಿಶಾಲವಾದ ನೈಮಿಷಾರಣ್ಯವೂ, ಬದರಿಕಾಶ್ರಮವೂ ಕಂಡುಬರುತ್ತಿರುವುದು. ಮತ್ತು ನರ್ಮದಾ, ಗೋದಾವರೀ, ಬಾಹುದಾನದಿಯೂ, ಕೃಷ್ಣವೇಣಿಕಾ ನದಿಯೂ ಹರಿಯುತ್ತಿರುವುವು. ॥೨೮-೨೯॥

---

1 ಆವಾಟಕ್ಯಮಿತಿ ಪಾಠಾಂತರಂ.

ನೀರಾಂ ಪಯೋಷ್ಣೀಂ ಪಶ್ಯಾಗನೀರಜಾವಲಿಭಾಸುರಾಂ ।
ಕಾಳಿಂದೀ ಗಂಗಯಾ ಯುಕ್ತಾ ಯತ್ರ ವೇದೀ ಪ್ರಜಾಪತೇಃ ॥೩೦॥

ಪ್ರಯಾಗವನಮೇತದ್ವೈ ಚಿತ್ರಕೂಟಗಿರಿಸ್ತತಃ ।
ಶೂಲಟಂಕಾಲಯಂ ಪಶ್ಯ ಗಯಾಂ ಚ ಪಿತೃತೃಪ್ತಿದಾಂ ॥೩೧॥

ಸೋಮೇಶ್ವರಾಲಯಂ ಶೈಲ ಪಶ್ಯಾಯೋಧ್ಯಾಂ ಮಹಾಪುರೀಂ ।
ಸುಧೇಶ್ವರಾಲಯಂ ಪಶ್ಯ ಸರಯೂತೀರಸಂಗತಂ ॥೩೨॥

ಪಶ್ಚಾತ್ಕೋಕಾಮುಖಂ ಪಶ್ಯ ಗಂಗಾಂ ಪಶ್ಯಾಬ್ಧಿಸಂಗತಾಂ ।
ಕಾಮೋದಕಮಿದಂ ಪಶ್ಯ ಪಶ್ಯ ಕೊಂಕಣಭೂತಲಂ ॥೩೩॥

ಪಶ್ಚಿಮಾಂಬುಧಿಕೋಣೇ ಚ ಪಶ್ಯ ಗೋಕರ್ಣಮುತ್ತಮಂ ।
ರಮ್ಯಂ ಶೇಷಾಚಲಂ ಪಶ್ಯ ಸ್ಕಂದೋ ಯತ್ರ ಪ್ರತಿಷ್ಠಿತಃ ॥೩೪॥

ಶ್ರೀಮದ್ದಕ್ಷಿಣಕೈಲಾಸಶಿಖರಂ ಪಶ್ಯ ಭೂಧರ ।
ಪಶ್ಯ ಕಾಂಚೀಂ ಚ ವಿಪುಲಾಮೇಕಾಮ್ರಶಿಖರಂ ನಗ ॥೩೫॥

---

ಬಿಸಿನೀರಿನ ಪ್ರವಾಹದಿಂದಲೂ, ಬೆಟ್ಟದಾವರೆಯ ಹೂಗಳಿಂದಲೂ ಶೋಭಿಸುತ್ತಿರುವ ಪಯೋಷ್ಣೀನದಿಯು ಇಲ್ಲಿ ಹರಿಯುತ್ತಿರುವುದು. ಯಮುನಾ ಗಂಗಾ ನದಿಗಳು ಒಟ್ಟಾಗಿ ಸೇರುವ ಪ್ರಯಾಗಕ್ಷೇತ್ರವನ್ನೂ, ಚಿತ್ರಕೂಟಗಿರಿಯನ್ನೂ, ಶೂಲಟಂಕೇಶ್ವರ ದೇವಾಲಯವನ್ನೂ, ಸರ್ವಪಿತೃದೇವತೆಗಳಿಗೆ ಅತ್ಯಂತತೃಪ್ತಿಕರವಾದ ಗಯಾಕ್ಷೇತ್ರವನ್ನೂ ಇಲ್ಲಿ ನೋಡುವವನಾಗು. ॥೩೦-೩೧॥

ಹಿಮವಂತರಾಜನೇ, ಸೋಮೇಶ್ವರಾಲಯವನ್ನೂ, ಅಯೋಧ್ಯಾನಗರಿಯನ್ನೂ, ಸರಯೂ ತೀರದಲ್ಲಿರುವ ಸುಧೇಶ್ವರಾಲಯವನ್ನೂ, ಚಕ್ರವಾಕದ ಆಕಾರದಲ್ಲಿರುವ ಶಿವಮೂರ್ತಿಯನ್ನೂ, ಕಾಮೋದಕತೀರ್ಥ, ಹಾಗೆಯೇ ಕೊಂಕಣ ಕ್ಷೇತ್ರವನ್ನೂ ನೋಡುವವನಾಗು. ॥೩೨-೩೩॥

ಪಶ್ಚಿಮಸಮುದ್ರದ ಪಕ್ಕದಲ್ಲಿರುವ ಗೋಕರ್ಣಕ್ಷೇತ್ರವೂ, ಹಾಗೆಯೇ ದಕ್ಷಿಣಭಾರತದಲ್ಲಿ ತಿರುಪತಿಯೆಂದು ಪ್ರಸಿದ್ಧವಾಗಿರುವ ಬಾಲಸುಬ್ರಹ್ಮಣ್ಯ ಕ್ಷೇತ್ರವೂ, ರಮ್ಯವಾಗಿದ್ದು ಪ್ರಸಿದ್ಧಿಗೊಂಡಿರುವುವು. ಆ ತಿರುಪತಿಯೇ ದಕ್ಷಿಣ

ಪಶ್ಯಾರುಣಾದ್ರಿಶಿಖರಂ ಸ್ಮರಣಾತ್ಪಾಪನಾಶನಂ ।
ವೃದ್ಧಾಚಲಾದ್ರಿಂ ಪಶ್ಯಾದ್ರೇ ರಮ್ಯಾಮಭ್ರಸಭಾಂ ದೃಶಾ ॥೩೬॥

ಪಶ್ಯ ನರ್ತನಮೀಶಸ್ಯ ದೇವದೇವಸ್ಯ ಧೂರ್ಜಟೇಃ ।
ಗೋಪರ್ವತಂ ತತ್ರ ಪಶ್ಯ ಪುಣ್ಯಂ ಮಾರ್ಗಸಹಾಯಕಂ ॥೩೭॥

ಸಹ್ಯಾದ್ರಿಂ ಪಶ್ಯ ತುಂಗಾದ್ರೇ ಯತೋ ಜಾತಾ ಕವೇರಜಾ ।
ಪುಣ್ಯಂ ಶ್ರೀಕಂಠಶಿಖರಂ ತತೋ ರತ್ನಗಿರೀಶ್ವರಂ ॥೩೮॥

ತೃಣಜ್ಯೋತೀಶಶಿಖರಂ ಮಾತೃಭೂತಾದ್ರಿರೇಷ ವೈ ।
ತದ್ದಕ್ಷಿಣೇ ದ್ವಾದಶಾಂತಂ ತತೋ ವೇಣುವನಂ ನಗ ॥೩೯॥

ಮಹೇಂದ್ರಶಿಖರಂ ಪಶ್ಯ ದಕ್ಷಿಣಾಂಭೋನಿಧೌ ಸ್ಥಿತಂ ।
ತಾಮ್ರಪರ್ಣೀ ತತ್ರ ನದೀ ಕೃತಮಾಲಾ ಚ ವೇಗಿನೀ ॥೪೦॥

---

ಕೈಲಾಸವೆಂದು ಪ್ರಸಿದ್ಧಿಗೊಂಡಿರುವ ಗಿರಿಶಿಖರ. ಅಲ್ಲಿಂದ ಮುಂದೆ ಏಕಾಮ್ರೇಶ್ವರ ನಿಲಯವಿರುವ ಕಾಂಚೀಕ್ಷೇತ್ರವಿರುವುದು. ||೩೪-೩೫||

ಕೇವಲ ಸ್ಮರಣೆಯಿಂದಲೇ ಭಕ್ತರ ಪಾಪವನ್ನು ನಾಶಗೊಳಿಸುವ ಅರುಣಾಚಲವೂ, ವೃದ್ಧಾಚಲವೂ ಎಷ್ಟು ಸೊಗಸಾಗಿ ಕಾಣುತ್ತಿರುವುದು ನೋಡು. ಅಲ್ಲಿಯೇ ಶಂಕರನ ನಾಟ್ಯಕ್ಕೆ ಅತಿ ದಿವ್ಯವಾಗಿ ಕಾಣುವ ಅಭ್ರಸಭೆಯನ್ನೂ, ಪರಶಿವನಿಗೆ ಆಶ್ರಯಸ್ಥಾನವಾಗಿ ಪುಣ್ಯಪ್ರದವಾಗಿರುವ ವೃಷಾಚಲವನ್ನೂ ನೋಡುವವನಾಗು. ||೩೬-೩೭||

ಪಶ್ಚಿಮಭಾಗದಲ್ಲಿ ಕಾವೇರಿನದಿಗೆ ಮೂಲಸ್ಥಾನವೆನಿಸಿದ ಸಹ್ಯಾದ್ರಿಯಿರುವುದು. ಅದರ ಅಕ್ಕಪಕ್ಕಗಳಲ್ಲಿ ಬ್ರಹ್ಮಗಿರಿ, ಶ್ರೀಕಂಠಗಿರಿ, ರತ್ನಗಿರಿ ಎಂಬ ಹೆಸರಿನ ಪರ್ವತಗಳೂ, ಅವುಗಳ ಮೇಲೆ ಅದೇ ಹೆಸರಿನ ಶಿವಲಿಂಗಗಳೂ ಕಂಡುಬರುತ್ತಿರುವುವು. ತೃಣಜ್ಯೋತೀಶ್ವರ, ಮಾತೃಭೂತೇಶ್ವರ ಮುಂತಾದ ಶಿವಾಲಯಗಳಿಂದ ಕೂಡಿದ ಸಣ್ಣಸಣ್ಣ ಗಿರಿಗಳೂ ಅಲ್ಲಿ ಕಾಣುತ್ತಿರುವುವು. ಅದರ ದಕ್ಷಿಣಭಾಗದ ಮೂರ್ಧಸ್ಥಾನದಲ್ಲಿ ವೇಣುವನವೊಂದಿರುವುದು. ||೩೮-೩೯||

ದಕ್ಷಿಣಸಮುದ್ರದ ದಡದಲ್ಲಿರುವ ಮಹೇಂದ್ರಾಚಲ, ತಾಮ್ರಪರ್ಣೀನದೀ, ಅತ್ಯಂತ ವೇಗವುಳ್ಳ ಕೃತಮಾಲಾನದೀ, ಕಣ್ವತೀರ್ಥ ಅದಕ್ಕೆ ಪೂರ್ವಭಾಗದಲ್ಲಿ

ಕನ್ಯಾತೀರ್ಥಂ ತತಃ ಪ್ರಾಚ್ಯಾಂ ಪಶ್ಯ ಚಾದ್ರೇ ಶುಚೀಶ್ವರಂ ।
ಗಂಧಮಾದನಶೈಲೇಶಶಿಖರಂ ಪಶ್ಯ ಭೂಧರ ॥೪೧॥

ಗಜಾರಣ್ಯಂ ತತೋದೀಚ್ಯಾಂ ತತಃ ಪಂಚನದಾಹ್ವಯಂ ।
ಕುಂಭೇಶಶಿಖರಂ ಪಶ್ಯ ಪಶ್ಯ ಮಧ್ಯಾರ್ಜುನೇಶ್ವರಂ ॥೪೨॥

ತ್ರಿಕೋಟೀಂ ಮಂಗಲಂ ಪಶ್ಯ ಮಾಯೂರಂ ಶ್ವೇತಕಾನನಂ ।
ಸಂಗತಾಂ ಸಿಂಧುನಾ ಪಶ್ಯ ಸಹ್ಯಜಾಂ ಪುಣ್ಯನಿಮ್ನಗಾಂ ॥೪೩॥

ವಾಂಛೇಶ್ವರಂ ಛಾಯಾವನಂ ಪುಣ್ಯಂ ತತ್ತೇಜನೀಪುರಂ ।
ಘಟೇಶ್ವರಂ ತತ್ರ ಪಶ್ಯ ಯತ್ರ ಕಾಲೋ ಹತಃ ಪುರಾ ॥೪೪॥

ಶ್ರೀಮಹೇಶೇನ ಪುಣ್ಯಾದ್ರೇ ಮೃಕಂಡುತನಯಾವನೇ ।
ಬ್ರಹ್ಮೇಶಂ ಚೈವ ವೈದ್ಯೇಶಂ ತಂಜೇಶಂ ತತ್ಪ್ರತೀಚ್ಯಕೇ ॥೪೫॥

ಕಮಲಾಲಯಸಂಜ್ಞಂ ಚ ತಥೈವಾನ್ಯೇ ಶಿವಾಲಯಾಃ ।
ಶ್ರುತಿಕಾನನಮೀಕ್ಷಸ್ವ ವೇದತೀರ್ಥಸ್ತಥಾಬ್ಧಿರಾಟ್ ॥೪೬॥

---

ರುವ ಶುಚೀಶ್ವರ, ಗಂಧಮಾದನಪರ್ವತ, ಶೈಲೇಶ್ವರಶಿಖರ ಇವೇ ಮೊದಲಾದ ಪವಿತ್ರಕ್ಷೇತ್ರಗಳಿರುವುವು. ॥೪೦-೪೧॥

ಉತ್ತರಭಾಗದಲ್ಲಿ ಗಜಾರಣ್ಯಕ್ಷೇತ್ರ, ಪಂಚನದಕ್ಷೇತ್ರ, ಕುಂಭಕರ್ಣಕ್ಷೇತ್ರ, ಮಧ್ಯಾರ್ಜುನೇಶ್ವರದೇವಾಲಯ, ತ್ರಿಕೂಟಾಚಲ, ಮಯೂರೇಶ್ವರ, ಶ್ವೇತಾರಣ್ಯ, ಕಾವೇರಿಯು ಸಮುದ್ರದೊಡನೆ ಕೂಡುವ ಪವಿತ್ರವಾದ ಸಂಗಮಸ್ಥಾನ ಇವೆಲ್ಲ ವನ್ನೂ ಇಲ್ಲಿಂದಲೇ ನೋಡುವವನಾಗು. ॥೪೨-೪೩॥

ಛಾಯಾವನದಲ್ಲಿ ವಾಂಛೇಶ್ವರ, ತೇಜೀನೀನಗರ, ಘಟೇಶ್ವರ ಮುಂತಾದ ಪುಣ್ಯಕ್ಷೇತ್ರಗಳಿವೆ. ಘಟೇಶ್ವರದಲ್ಲಿಯೇ ಹಿಂದೆ ಮಹೇಶ್ವರನು ಮಾರ್ಕಂಡೇಯನನ್ನು ರಕ್ಷಿಸುವ ಸಲುವಾಗಿ ಯಮನನ್ನು ನಿಗ್ರಹಿಸಿದುದು. ಹಾಗೆಯೇ ಮುಂದೆ ಬ್ರಹ್ಮೇಶ್ವರ, ವೈದ್ಯೇಶ್ವರ, ತಂಜೇಶ್ವರ ಮುಂತಾದ ಶಿವ ದೇವಾಲಯಗಳಿವೆ. ॥೪೪-೪೫॥

ಕಮಲಾಲಯೇಶ್ವರನೇ ಮೊದಲಾದ ಅನೇಕ ಶಿವಾಲಯಗಳನ್ನೊಳ ಗೊಂಡ, ವೇದವನ, ವೇದತೀರ್ಥ ಮುಂತಾದುವುಗಳನ್ನೂ ಹಾಗೆಯೇ ಕಾವೇರೀ

ಕಾವೇರೀತೀರಜೋದ್ಭಾಸಿಲಿಂಗಧಾಮಾನಿ ಲೋಕಯ ।
ಭಾರತಂ ಪಶ್ಯ ವಿಪುಲಂ ಖಂಡಂ ತಲ್ಲಿಂಗಮಂಡಲಂ ॥೪೭॥

ಪ್ರಾಕ್ಪಶ್ಚಾದ್ದಕ್ಷಿಣೇ ಚಾಪಿ ಭೂಧರೇಂದ್ರ ತಥೋತ್ತರೇ ।
ಬ್ರಹ್ಮಾಂಡಭಿತ್ತಿರೇಷಾತ್ರ ಖಂಡಾನ್ಯಪಿ ವಿಲೋಕಯ ॥೪೮॥

ಶಿವಾಜ್ಞಯಾ ಮಯಾ ಶೈಲ ದರ್ಶಿತೋಽಯಂ ನಗೋತ್ತಮಃ ।
ಪುಣ್ಯೋಽಯಂ ರಮಣೀಯೋಽಯಂ ಕೈಲಾಸಶ್ಶಂಕರಾಲಯಃ ॥೪೯॥

ಭದ್ರಾಶ್ವಂ ಕೇತುಮಾಲಂ ಚ ಪ್ರಾಚ್ಯಾಮೀಕ್ಷಸ್ವ ಸನ್ನಗ ।
ಪಶ್ಚಾದ್ಧರಿಶ್ಚ ಕಿಂಪೂರ್ಷಃ ಖಂಡೇ ದ್ವೇ ಸಾಗರಾವೃತೇ ॥೫೦॥

ದೇವಭೂಮಿರಿಯಂ ಪಶ್ಯ ಸುರಕಿನ್ನರಹರ್ಷದಾ ।
ತತ್ರೋತ್ತರೇ ಮಂದರೋ ಹಿ ಶಂಭೋರಾನಂದವಾಸಭೂಃ ॥೫೧॥

---

ನದೀತೀರದಲ್ಲಿ ವಿರಾಜಿಸುವ ಅನೇಕ ಶಿವದೇವಾಲಯಗಳನ್ನೂ ಇಲ್ಲಿ ಕಾಣುವೆ. ಒಟ್ಟಿನಲ್ಲಿ ಪರ್ವತರಾಜನೇ ! ಅಖಂಡಭಾರತವೇ ಒಂದು ಶಿವಲಿಂಗಮಂಡಲವೆನ್ನ ಬಹುದು. ॥೪೬-೪೭॥

ಅಲ್ಲದೆ ಈ ಪರ್ವತದ ನಾಲ್ಕು ದಿಕ್ಕುಗಳಲ್ಲಿಯೂ ಬ್ರಹ್ಮಾಂಡವೆಲ್ಲಾ ಕಾಣು ತ್ತಿರುವುದು. ಅನೇಕ ಭೂಖಂಡಗಳು ಸುತ್ತಲೂ ವಿರಾಜಿಸುತ್ತಿರುವುವು. ಪರ್ವತ ರಾಜನೇ, ಶಂಕರನ ಅಪ್ಪಣೆಯಂತೆ ನಾನು ಇದೆಲ್ಲವನ್ನೂ ನಿನಗೆ ನಿರ್ದೇಶಮಾಡಿ ತೋರ್ಪಡಿಸಿರುವೆನು. ಒಟ್ಟಿನಲ್ಲಿ ಪಾವಿತ್ರ್ಯದಲ್ಲಿ ಮೇಲಾದ ಪ್ರದೇಶವು ಕೈಲಾಸ ಕ್ಕಿಂತ ಬೇರೊಂದು ದೊರೆಯಲಾರದು. ॥೪೮-೪೯॥

ಭದ್ರಾಶ್ವ, ಕೇತುಮಾಲ ಎಂಬ ಖಂಡಗಳು ಪೂರ್ವದಿಕ್ಕಿನಲ್ಲಿಯೂ, ಪಶ್ಚಿಮ ದಲ್ಲಿ ಹರಿ, ಕಿಂಪುರುಷ ಮುಂತಾದ ಎರಡು ಖಂಡಗಳೂ ಸಾಗರಗಳಿಂದ ಆವರಿಸಲ್ಪ ಟ್ಟಿವೆ. ಈ ಕಿಂಪುರುಷಖಂಡವು ದೇವಭೂಮಿಯೆನಿಸಿಕೊಂಡಿರುವುದು. ಅದು ಸುರರಿಗೂ, ಕಿನ್ನರರಿಗೂ ಅತ್ಯಂತ ಹರ್ಷದಾಯಕವಾದದ್ದು. ಇದರ ಉತ್ತರಭಾಗ ದಲ್ಲಿ ಶಂಕರನಿಗೆ ಅತ್ಯಂತ ಹರ್ಷದಾಯಕವಾದ ಮಂದರಪರ್ವತವಿರುವುದು. ॥೫೦-೫೧॥

ಇಲಾವೃತೋ ಮಣೀವರ್ಷೋ ಭಾರತೋ ದಕ್ಷಿಣೇ ನಗ ।
ಕಲ್ಪಿತಾಸ್ತೇ ಮಹೇಶೇನ ವರ್ಷಾಶ್ಚ ಕುಲಪರ್ವತಾಃ ॥೫೨॥

ಇತ್ಯೇಷ ತೇ ಸಮಾಸೇನ ಕಥಿತೋ ವಿಸ್ತರಃ ಕ್ರಮಾತ್ ।
ಶ್ರುತ್ವಾಧ್ಯಾಯಮಿಮಂ ಪುಣ್ಯಂ ಕೈಲಾಸೇ ಗಣಪೋ ಭವೇತ್ ॥೫೩॥

॥ ಸ್ಕಂದ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ಹೃಷ್ಟರೋಮಾ ಮಹೀಧರಃ ।
ಪ್ರೋವಾಚ ನಂದಿನಂ ವೀಕ್ಷ್ಯ ಜಾತಹರ್ಷೋ ಮುನೀಶ್ವರಾಃ ॥೫೪॥

॥ ಹಿಮವಾನುವಾಚ ॥

ಧನ್ಯಸ್ತ್ವಂ ತ್ರಿಪುರಾರಿಪಾದಕಮಲಧ್ಯಾನಾನುರಾಗಾದರಃ
ಕಿಂ ತ್ವತ್ತುಲ್ಯಗುಣಂ ವದಾಮಿ ವಚಸಾ ಕೋ ವೇದ ಶಂಭೋರ್ಗುಣಾನ್।
ಚಾರಿತ್ರಂ ವಿವಿಧಾಂಡಕೋಟಿಘಟನೇ ಪಾಂಡಿತ್ಯಮಸ್ಯಂತತೋ
ವೇದಾ ವಾ ವಿಧಯೋಽಪಿ ವಾ ಹರಿಹರಾ ಜಾನಂತಿ ನೋ ವಾಪ್ಯಣು ॥೫೫॥

---

ದಕ್ಷಿಣದಿಕ್ಕಿನಲ್ಲಿ ಇಲಾವೃತ, ಮಣೀವರ್ಷ, ಭಾರತವರ್ಷ ಎಂಬ ಮೂರು ಖಂಡಗಳಿರುವುವು. ಮಹೇಶ್ವರನೇ, ಮೇಲೆ ಹೇಳಿದ ಭೂಖಂಡ (ವರ್ಷ)ಗಳನ್ನೂ, ಕುಲಪರ್ವತಗಳನ್ನೂ ಸೃಷ್ಟಿಮಾಡಿರುವನು. ನಗರಾಜನೇ, ಮಹೇಶ್ವರಾಜ್ಞೆಯಂತೆ ಈ ಎಲ್ಲಾ ವಿಷಯಗಳನ್ನೂ ಸಂಕ್ಷೇಪವಾಗಿ ನಿನಗೆ ವಿವರಿಸಿರುವೆನು. ಈ ಪುಣ್ಯ ಕ್ಷೇತ್ರವಿವರಣಾತ್ಮಕವಾದ ಅಧ್ಯಾಯವನ್ನು ಕೇಳಿದವರು ಶಂಕರಾನುಗ್ರಹದಿಂದ ಶಂಕರಗಣಗಳಿಗೆ ಅಧಿಪರಾಗುವರು ಎಂದು ನಂದಿಯು ಹಿಮಾಲಯರಾಜನಿಗೆ ಸರ್ವವನ್ನೂ ತಿಳಿಸಿದನು. ॥೫೨-೫೩॥

ಹಾಗೆ ನಂದೀಶ್ವರನು ಹೇಳಿದ ಮಾತುಗಳನ್ನೆಲ್ಲಾ ಕೇಳಿದ ನಗರಾಜನು ಆನಂದಪುಲಕಿತನಾಗಿ ಅತಿಶಯವಾದ ಆನಂದದಿಂದ ನಂದೀಶ್ವರನನ್ನು ನೋಡಿ ಮತ್ತೆ ಹೀಗೆಂದನು. ॥೫೪॥

ನಂದೀಶ್ವರನೇ, ನೀನೇ ಧನ್ಯನು. ತ್ರಿಪುರಾರಿಯಾದ ಶಂಕರನ ಪಾದಕಮಲ ದಲ್ಲಿ ಅಚಲವಾದ ಭಕ್ತಿಯನ್ನಿಟ್ಟಿರುವೆ. ಅಲ್ಲದೆ ಮಹೇಶ್ವರನ ಅಮೋಘಗುಣಗಳ ನ್ನೆಲ್ಲಾ ತಿಳಿದು ನಿನಗೆ ಸದೃಶನಾಗಿರುವವನು ಮತ್ತಾವನೂ ದೊರೆಯಲಾರನು.

ಕಿಂ ವಕ್ತವ್ಯಮುಮಾಸಹಾಯಚರಣಾಂಭೋಜಪ್ರಭಾಭಾವತ
ಶ್ಚಾನಂದಾಂಬುಧಿಮಗ್ನಸರ್ವಹೃದಯೋ ಜಾನೇ ನ ಕಿಂಚಿತ್ಪ್ರಿಯಮ್ ।
ಅತ್ರತ್ಯಾಮಲಲಿಂಗಸೌಧಕುಲಗಂ ಕಿಂ ವಾ ಮಮಾನ್ಯತ್ಪ್ರಿಯಂ
ಶಂಭೋಃ ಪಾದಪರಾಗರಂಜಿತಮನಾಃ ಕಾಲಂ ನಯಾಮೀಕ್ಷಣಾತ್ ॥೫೬॥

ತ್ವಂ ನಂದಿನ್ ಗಣಪೋತ್ತಮೋಽಸಿ ಭಗವನ್ ಕ್ಷೇಮಾಸ್ಪದೋ ಮೇ ಸಖಾ
॥೫೭॥

॥ ಸ್ಕಂದ ಉವಾಚ ॥

ಇತ್ಯುಕ್ತ್ವಾ ಹಿಮವಾನ್ ಶಿಲಾದತನಯಂ ಚಾನಂದಬಾಷ್ಪಾಕುಲೋ
ಮೈನಾಕೇನ ಚ ಮೇನಯಾ ಶಶಿಶಿಲಾಗಾರಸ್ಥಲಿಂಗೋತ್ತಮಮ್ ।
ಕೃತ್ವಾರ್ಚಾದಿಭರೈರಪಾರವಿಭವೈಸ್ತುಷ್ಟಾವ ಶಂಭುಂ ತದಾ
ಶಂಭೌ ನಿಶ್ಚಲಮಾನಸೋಽಪ್ಯಗಕುಲಶ್ರೇಷ್ಠೋ ಹಿಮಾದ್ರೀಶ್ವರಃ ॥೫೮॥

ಭಕ್ತ್ಯಾರಾಧಿತವಾನ್ ಸುಬಿಲ್ವವಿಪಿನೋದ್ಭೂತೈಸ್ಸುಮೈಸ್ತತ್ಫಲೈಃ ।
ವರ್ಷಾಣಾಂ ದಶಕಂ ಮಹೇಶ್ವರದಯಾಸಾರಪ್ರಭಾವಾಧಿಕಃ ॥೫೯॥

---

ಮತ್ತು ನಿಖಿಲಬ್ರಹ್ಮಾಂಡವನ್ನೆಲ್ಲಾ ಕೂಡಿಸುವುದರಲ್ಲಿ, ಅಗಲಿಸುವುದರಲ್ಲಿ, ಪರಮೇಶ್ವರನಿಗಿರುವ ನೈಪುಣ್ಯವನ್ನು ಹರಿಯಾಗಲಿ, ಬ್ರಹ್ಮನಾಗಲಿ, ರುದ್ರನಾಗಲಿ, ಚತುರ್ವೇದಗಳೇ ಆಗಲಿ ಸ್ವಲ್ಪವೂ ಅರಿಯಲಾರರು. ||೫೫||

ನಂದೀಶ್ವರನೇ, ಪಾರ್ವತೀಸಮೇತನಾದ ಪರಶಿವನ ಪ್ರಭಾವಿಶೇಷದಿಂದಲೂ, ಆತನ ಪಾದಪೂಜಾಮಹಿಮೆಯಿಂದಲೂ ನನಗೆ ಅನಿರ್ವಚನೀಯವಾದ ಆನಂದಸಾಗರವು ಲಭಿಸಿದಂತಾಗಿರುವುದು. ಇಲ್ಲಿ ಪ್ರತಿಷ್ಠಿತವಾಗಿರುವ ಈ ಶಿವಲಿಂಗ ಸಮೂಹವನ್ನೆಲ್ಲಾ ನೋಡಿ, ನನಗೆ ಇದಕ್ಕಿಂತ ಪ್ರಿಯವಾದ ವಸ್ತುವು ಮತ್ತೊಂದಿಲ್ಲ ಎಂಬ ಭಾವವುಂಟಾಗಿದೆ. ನಂದೀಶ್ವರನೇ, ನೀನು ಮಹೇಶ್ವರನ ಪ್ರಮಥಗಣಗಳಿಗೆ ಅಧಿಪನಾಗಿದ್ದು, ಶಂಕರನ ಸಂಪೂರ್ಣವಾದ ಅಭಿಮಾನಕ್ಕೆ ಪಾತ್ರನಾಗಿರುವೆಯಲ್ಲವೆ? ಇಷ್ಟು ಶಂಕರನ ಮಹಿಮೆಯನ್ನು ವಿವರಿಸಿ ಹೇಳಿದ ನೀನೇ ನನ್ನ ಆಪ್ತಮಿತ್ರನು. ||೫೬-೫೭||

ಹೀಗೆ ಹಿಮವಂತನು ನಂದೀಶ್ವರನನ್ನು ಹೊಗಳಿ, ಅನಂತರ ಚಂದ್ರಕಾಂತಿ ಶಿಲಾಮಯವಾದ ಶಿವಾಲಯದಲ್ಲಿ ಪತ್ನೀಪುತ್ರರೊಡಗೂಡಿ ಬಿಲ್ವವನದಿಂದ

॥ ಹಿಮವಾನುವಾಚ ॥

ಶಶಿಧರ ಗರಧರ ಮಾರಹರಾವ್ಯಯೇಶ ಶಂಭೋ
ಗಣಸಾತೀತ ಗುಣಪ್ರಕೃಷ್ಟ ದೇವ ।
ತವ ಲಿಂಗಸುಪೂಜನಾನ್ಮನೋ ಮೇ
ನ ಕದಾನ್ಯತ್ರಗತೀಷು ಭಾವಯಾಮಿ ॥೬೦॥

॥ ಸ್ಕಂದ ಉವಾಚ ॥

ತಸ್ಮೈ ಚಾಪಿ ವರಂ ದದೌ ಪಶುಪತಿರ್ಭಕ್ತ್ಯೈಕನಿಷ್ಠಾಯ ತೇ
ಕಾಮಾನ್ ಪೂರಯಿತಾಸ್ಮಿ ವೈಭವವತೇ ತದ್ವಾಂಛತಾಂ ಮತ್ಪರಃ ।
ಇತ್ಯುಕ್ತೋ ಗಿರಿರಾಟ್ ತದಾ ಹರಗಿರಂ ಶ್ರುತ್ವಾಹ ಭಕ್ತ್ಯಾ ಶಿವಂ ॥೬೧॥

ದೇವ್ಯಾಸ್ತೇ ಭವನೇ ನಿವಾಸಮತುಲಂ ದೂರ್ವಾಸವಾಕ್ಯಂ ಶಿವೇ ।
ಭಕ್ತಿಂ ಚಾಪಿ ಭವಾಂಘ್ರಿಪಂಕಜಭರಾಂ ಸಂಸಾರಮುಕ್ತಿಪ್ರದಾಂ ॥೬೨॥

---

ತರಿಸಲ್ಪಟ್ಟ ಬಿಲ್ವಪತ್ರಾದಿಗಳಿಂದ ಶಂಭುವನ್ನು ಭಕ್ತಿಪೂರ್ವಕವಾಗಿ ಪೂಜಿಸಿದನು. ಅದೇ ರೀತಿ ನಿತ್ಯವೂ ಶಂಕರಾರಾಧನೆಯನ್ನೇ ನೆರವೇರಿಸುತ್ತಾ, ಮಹೇಶ್ವರಾನುಗ್ರಹಕ್ಕೆ ಪಾತ್ರನಾಗಿ ಹತ್ತು ವರ್ಷಗಳು ಪೂರ್ತಿಯಾಗಿ ಕಾಲಕಳೆದನು. ಮತ್ತು ಸರ್ವದಾ ಹೀಗೆ ಶಂಭುವನ್ನು ಪ್ರಾರ್ಥಿಸುತ್ತಿದ್ದನು. ॥೫೮-೫೯॥

ಚಂದ್ರಶೇಖರನೇ, ವಿಷಕಂಠನೇ, ಮನ್ಮಥಾರಿಯೇ, ನಾಶರಹಿತನಾದ ಶಂಕರನೇ, ಪ್ರಕೃಷ್ಟಗುಣಶಾಲಿಯೇ, ನಿನ್ನ ಶಿವಲಿಂಗಾರಾಧನೆಯಿಂದ ನನ್ನ ಮನಸ್ಸು ಈಗ ಪರಿಶುದ್ಧಿಗೊಂಡಿದೆ. ನಿನ್ನ ಆರಾಧನೆಯನ್ನು ಬಿಟ್ಟು ಮತ್ತಾವ ಕಾರ್ಯಗಳಲ್ಲಿಯೂ ನನ್ನ ಮನಸ್ಸು ಓಡಲಾರದು ಎಂದು ಹಿಮವಂತನು ಮಹೇಶ್ವರನನ್ನು ಪ್ರಾರ್ಥನೆಮಾಡಿದನು. ॥೬೦॥

ಅನಂತರ ಮಹೇಶ್ವರನು ಹಿಮವಂತನ ಭಕ್ತಿಗೂ, ಪ್ರಾರ್ಥನೆಗೂ ಮೆಚ್ಚಿ ಅವನು ಅಪೇಕ್ಷಿಸಿದ ವರಗಳನ್ನು ತಾನು ಅನುಗ್ರಹಿಸುವಂತೆ ಭರವಸೆಯಿತ್ತನು. ಅದರಂತೆಯೇ ಪರ್ವತರಾಜನು ಕೈಲಾಸಗಿರಿಯನ್ನು ನೋಡುತ್ತಾ, ತನ್ನ ಮಗಳಾದ ದೇವಿಯು ಸರ್ವದಾ ಶಿವಸನ್ನಿಧಿಯಲ್ಲಿಯೇ ಇರುವಳೆಂದು ಹೇಳಿದ ದೂರ್ವಾಸಮಹರ್ಷಿಯ ಮಾತನ್ನು ಸ್ಮರಿಸಿಕೊಂಡು, ದೂರ್ವಾಸಮಹರ್ಷಿಗೆ

॥ ನಂದಿಕೇಶ್ವರ ಉವಾಚ ॥

**ಧನ್ಯಃ ಕೇದಾರಲಿಂಗೋತ್ತಮಮಿಲಿತಶಿರಾಶ್ಚಾಶ್ರಯಸ್ತ್ವಂ ಮುನೀನಾಂ**
**ತ್ವನ್ಮೌಲೌ ವಸತಾಂ ತಪಃಫಲಮಹೋ ದಾತುಂ ಪ್ರವೃತ್ತೋ ಹರಃ।**
**ಕಿಂ ಚಾಂಬಾಜನಕೋ ಹ್ಯುದಾರಚರಿತೋ ವೃದ್ಧಃ ಕುಲಾಧೀಶ್ವರಃ**
**ಕಸ್ತೇ ತುಲ್ಯನಗೋ ಯತೋ ನಗವರೇ ಲಿಂಗಪ್ರತಿಷ್ಠಾರ್ಚಕಃ ॥೬೩॥**

॥ ಸ್ಕಂದ ಉವಾಚ ॥

**ವಿಮಾನವರ್ಯೇಣ ನಗೇಂದ್ರಮಿಷ್ಟಂ**
**ತುಷ್ಟಂ ಪ್ರಕೃಷ್ಟಂ ಶಿವಪೂಜನೇನ।**
**ನಿನಾಯ ಶಂಭೋಸ್ಸವಿಧಂ ಗಣೇಶೋ**
**ಹೃಷ್ಟೋ ಗಿರಿಶ್ರೇತಿ ಹ್ಯುವಾಚ ಪ್ರಾಂಜಲಿಃ ॥೬೪॥**

---

ಅನುಗ್ರಹಮಾಡುವಂತೆಯೂ, ತನಗೆ ಯಾವಾಗಲೂ ಶಂಕರನ ಪಾದಕಮಲದಲ್ಲಿ ಅನ್ಯಾದೃಶವಾದ ಭಕ್ತಿಯಿರುವಂತೆಯೂ ಮಹೇಶ್ವರನಲ್ಲಿ ವರವನ್ನು ಬೇಡಿದನು. ॥೬೧-೬೨॥

ಹೀಗೆ ಶಂಕರನಿಂದ ಅನುಗೃಹೀತನಾಗಿರುವ ಹಿಮವಂತನನ್ನು ಗಣಾಧೀಶನಾದ ನಂದಿಯು ನೋಡಿ "ಪರ್ವತರಾಜನೇ, ನೀನೇ ಧನ್ಯನು. ನಿನ್ನ ಪರ್ವತದ ತಪ್ಪಲುಭಾಗದಲ್ಲಿ ಕೇದಾರೇಶ್ವರವೇ ಮೊದಲಾದ ದಿವ್ಯಕ್ಷೇತ್ರಗಳೂ, ದಿವ್ಯಲಿಂಗಗಳೂ ಅದ್ಯಾಪಿ ಶೋಭಿಸುತ್ತಿರುವುವು. ಅನೇಕ ದಿವ್ಯಮಹರ್ಷಿಗಳು ನಿನ್ನಾಶ್ರಯದಲ್ಲಿ ಶಂಕರನನ್ನು ಕುರಿತು ತಪಸ್ಸುಮಾಡುತ್ತಿರುವರು. ಇದರಿಂದಲೇ ಮಹೇಶ್ವರನು ತೃಪ್ತಿಗೊಂಡು ಈಗ ವರಪ್ರದಾತನಾಗಿ ನಿಂತಿರುವನು. ಇದರ ಮೇಲೆ ಜಗನ್ಮಾತೆಯಾದ ಪಾರ್ವತಿಗೆ ತಂದೆಯೆನಿಸಿರುವೆ. ಉದಾರನೆನಿಸಿ ಸಕಲ ಪರ್ವತಗಳ ಒಡೆತನವನ್ನೂ ಸಂಪಾದಿಸಿರುವೆ. ಮತ್ತು ಈಗ ಇಲ್ಲಿರುವ ಶಿವಲಿಂಗಗಳನ್ನೆಲ್ಲಾ ಅತಿಶಯವಾದ ಭಕ್ತಿಯಿಂದ ಪೂಜೆಮಾಡಿರುವೆ. ಇಷ್ಟು ಗುಣಗಣಭರಿತನಾದ ನಿನಗೆ ಸಮವಾದ ಗಿರಿಯು ತ್ರಿಭುವನದಲ್ಲಿ ಮತ್ತಾವುದಿರುವುದು?" ಎಂದು ಬಹುವಾಗಿ ಶ್ಲಾಘನೆಮಾಡಿದನು. ॥೬೩॥

ಈ ರೀತಿ ಸಕಲ ಗಣಾಧೀಶ್ವರನಾದ ನಂದಿಯು, ಶಂಕರನ ಅಪ್ಪಣೆಯಂತೆ ದಿವ್ಯವಿಮಾನದಲ್ಲಿ ಹಿಮವಂತನನ್ನು ಸ್ತುತಿಸಿ, ಅವನಿಂದ ಈಶ್ವರಾರಾಧನೆಯನ್ನು

## ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಹಿಮಾಲಯಸ್ಯ ಕೈಲಾಸದರ್ಶನಂ ನಾಮ ಚತುರ್ವಿಂಶೋಽಧ್ಯಾಯಃ

---

ಮಾಡಿಸಿ, ಈ ವಿಷಯಗಳೆಲ್ಲವನ್ನೂ ಶಂಕರನಿಗೆ ವರದಿಯಾಗಿ ಒಪ್ಪಿಸಿ, ಗಿರಿರಾಜನು ಅತ್ಯಂತ ಹರ್ಷಗೊಂಡಿರುವನೆಂಬುದನ್ನು, ಮಹೇಶ್ವರನಿಗೆ ಅಂಜಲಿಬದ್ಧನಾಗಿ ತಿಳಿಸಿದನು. ||೬೪||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಭವವೆಂಬ ಎರಡನೆಯ ಅಂಶದಲ್ಲಿ
ಹಿಮಾಲಯಕ್ಕೆ ಕೈಲಾಸವನ್ನು ದರ್ಶನಮಾಡಿಸಿದ ಇಪ್ಪತ್ತುನಾಲ್ಕನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಪಂಚವಿಂಶೋಽಧ್ಯಾಯಃ

### ಶಿವವಾಕ್ಯಂ

—∘∘✣∘∘—

|| ಸ್ಕಂದ ಉವಾಚ ||

ತತೋ ಹಿಮಾದ್ರಿರ್ದೇವೇಶಂ ಕೈಲಾಸಾಮಲಸೌಧಗಂ ।
ಪಾರ್ವತ್ಯಾ ಸಹಿತಂ ಶಂಭುಂ ದಿವ್ಯಸಿಂಹಾಸನೇ ಸ್ಥಿತಂ ॥೧॥

ಚತುರ್ಭುಜಮುದಾರಾಂಗಂ ಸರ್ವರತ್ನವಿಭೂಷಿತಂ ।
ಕಿರೀಟಕೋಟಿಗೋದ್ಭಾಸಿ ಚಂದ್ರಾರ್ಧಕೃತಶೇಖರಂ ॥೨॥

ಕುಂಡಲಾಯಿತಕರ್ಣೋದ್ಯತ್ಕುಂಡಲೀಫಣಭೂಷಿತಂ ।
ನವರತ್ನಾಂಗದಲಸತ್ಕಂಕಣಾಂಗದಮುದ್ರಿತಂ ॥೩॥

---

## ಇಪ್ಪತ್ತೈದನೆಯ ಅಧ್ಯಾಯ

ಅನಂತರ ಒಂದುಸಾರಿ ಹಿಮವಂತನು ಕೈಲಾಸಶಿಖರದಲ್ಲಿರುವ ದಿವ್ಯಪ್ರಾಸಾದ ದಲ್ಲಿ ರತ್ನಪೀಠದಮೇಲೆ ಕುಳಿತಿರುವ ಮಹೇಶ್ವರನನ್ನು ನೋಡಿದನು. ಮಹೇಶ್ವರ ನಾದರೋ ಪಾರ್ವತೀಸಮೇತನಾಗಿ, ಸರ್ವರತ್ನಾಭರಣಗಳಿಂದ ಅಲಂಕೃತನಾಗಿ, ನಾಲ್ಕುಕೈಗಳಿಂದಲೂ, ಉದಾರತರವಾದ ಅವಯುವಗಳಿಂದಲೂ, ಕೂಡಿದವನಾಗಿ ದ್ದನು. ಶಂಕರನ ಕಿರೀಟದಲ್ಲಿ ಅರ್ಧಚಂದ್ರನು ತನ್ನ ಕಾಂತಿಯಿಂದ ಮಹೇಶ್ವರನ ಶಿರೋಭಾಗವನ್ನೆಲ್ಲಾ ಬೆಳಗಿಸುತ್ತಿದ್ದನು. ||೧-೨||

ಕಿವಿಗಳಲ್ಲಿ ಆದಿಶೇಷನ ಹೆಡೆಗಳೇ ಪರಶಿವನಿಗೆ ಕರ್ಣಕುಂಡಲಗಳಂತಾಗಿದ್ದುವು. ಕೈಬಳೆಗಳಲ್ಲಿಯೂ, ತೋಳು ಬಳೆಗಳಲ್ಲಿಯೂ ನವರತ್ನಗಳ ಕಾಂತಿಯು ಪ್ರತಿಫಲಿಸು

ಸೋಮಧಾಮಸಮಾನಾಸ್ಯಂ ತಪನಾನಲಲೋಚನಂ ।
ಧೃತತ್ರಿಪುಂಡ್ರರಚನಾ ತದಧಸ್ತಿಲಕೋಜ್ಜ್ವಲಂ ॥೪॥

ಉತ್ಫುಲ್ಲರಕ್ತಕಮಲರತ್ನಮಾಲಾಧರಂ ವಿಭುಂ ।
ದಿವ್ಯಚಂದನಲಿಪ್ತಾಂಗಂ ದಿವ್ಯಪುಷ್ಪಾರ್ಚಿತಾಂಘ್ರಿಕಂ ॥೫॥

ಧೂಪಿತಂ ಪರಿತೋ ಧೂಪೈಸ್ತಗರಾಗರುಸಂಭವೈಃ ।
ಶುದ್ಧಾಂಬರಧರಂ ಸೌಮ್ಯಂ ಪಶ್ಯಂತಮನಿಶಂ ಶಿವಾಂ ॥೬॥

ಮಣಿಹರ್ಮ್ಯಚ್ಛವಿಪ್ರೋದ್ಯದ್ದೀಪ್ತಕೈಲಾಸಪರ್ವತಂ ।
ವಾಮಾಂಕಸನ್ನಿವಿಷ್ಟಾಂಬಾವದನಸ್ಮಿತಕಾಂತಿಭಿಃ ॥೭॥

ಧಾವಲ್ಯತರನಿರ್ಯಚ್ಛ್ರೀದೇವಾಂಗಪ್ರಭಯಾ ತತಂ ।
ನಮ್ರಾನನಾಂ ಮಹಾದೇವೀಂ ಶಿವಾಂಕಸ್ಥಾಂ ಮಹೇಶ್ವರೀಂ ॥೮॥

---

ತ್ತಿದ್ದಿತು. ಮಹೇಶ್ವರನ ಮುಖವು ಪೂರ್ಣಚಂದ್ರನಂತೆಯೂ, ಅಲ್ಲಿ ಸೂರ್ಯಚಂದ್ರಾಗ್ನಿಗಳೇ ಕಣ್ಣುಗಳಂತೆಯೂ ಆಗಿದ್ದುವು. ಹಣೆಯಲ್ಲಿ ಭಸ್ಮತ್ರಿಪುಂಡ್ರವೂ ಅದರ ಕೆಳಭಾಗದಲ್ಲಿ ತಿಲಕವೂ ವಿರಾಜಿಸುತ್ತಿದ್ದಿತು. ॥೩-೪॥

ಅರಳಿದ ಕೆಂಪುಕಮಲಗಳ ಮತ್ತು ನವರತ್ನಗಳ ಮಾಲೆಯನ್ನು ಕಂಠದಲ್ಲಿ ಧರಿಸಿಕೊಂಡಿದ್ದನು. ಶಂಕರನ ದೇಹವು ದಿವ್ಯಗಂಧದಿಂದಲೂ, ಪಾದವು ದಿವ್ಯಪುಷ್ಪಗಳಿಂದಲೂ ಪೂಜಿತವಾಗಿದ್ದಿತು. ತಗರುವೃಕ್ಷವೇ ಮೊದಲಾದ ಸುಗಂಧಮಯವಾದ ವೃಕ್ಷವಿಶೇಷಗಳಿಂದ ಹೊರಟ ಧೂಪವು ಸರ್ವವ್ಯಾಪಿಯಾಗಿದ್ದಿತು. ಶುದ್ಧವಾದ ವಸ್ತ್ರಗಳನ್ನು ಧರಿಸಿ, ಸರ್ವದಾ ಪಾರ್ವತಿಯನ್ನೇ ನೋಡುತ್ತಾ ಕುಳಿತಿದ್ದನು. ॥೫-೬॥

ಶಂಕರನ ಪ್ರಾಸಾದದಲ್ಲಿ ಹೊಳೆಯುವ ರತ್ನದೀಪಗಳಿಂದ ಕೈಲಾಸಪರ್ವತವೇ ಬೆಳಗುತ್ತಿತ್ತು. ಮಹೇಶ್ವರನ ಎಡತೊಡೆಯಮೇಲೆ ಕುಳಿತಿರುವ ದೇವಿಯ ಮುಗುಳ್ನಗೆಯ ಕಾಂತಿಯಿಂದಲೂ, ಶುಭ್ರತರವಾದ ತನ್ನ ದೇಹಕಾಂತಿಯ ಪ್ರಭೆಯಿಂದಲೂ, ಮಹೇಶ್ವರನು ಪ್ರಕಾಶಿಸುತ್ತಿದ್ದನು. ದೇವಿಯಾದರೋ, ಬಗ್ಗಿದ ಮುಖವುಳ್ಳವಳಾಗಿ ಮಹೇಶ್ವರನ ತೊಡೆಯಮೇಲೆ ಮಂಡಿಸಿದವಳಾಗಿದ್ದಳು. ॥೭-೮॥

ಭಸ್ಮತ್ರಿಪುಂಡ್ರನಿಟಿಲಾಂ ಕಸ್ತೂರಿತಿಲಕೋಜ್ವಲಾಂ ।
ಬಿಂಬಾಧರಾಂ ಪ್ರಸನ್ನಾಸ್ಯಾಂ ಲಲನ್ನಾಸಾಗ್ರಮೌಕ್ತಿಕಾಂ ॥೯॥

ಮುಕುಟೋದ್ಭಾಸಿಚಂದ್ರಾಂಕಾಂ ಕಚಬದ್ಧಸುಮಲ್ಲಿಕಾಂ ।
ತಪನೋಡುಪವಿಭ್ರಾಜಿತಾಟಂಕಯುಗಲಶ್ರವಾಂ ॥೧೦॥

ಮಣಿಹೀರಾಚ್ಛಪದಕಲಸದ್ಗ್ರೀವಾಮನೋಹರಾಂ ।
ಕನಕಾಂಗದಕೇಯೂರನಾಗಬಂಧವಿರಾಜಿತಾಂ ॥೧೧॥

ಕಸ್ತೂರೀರಸಪಾಟೀರಚಂದ್ರಚಂದನಚರ್ಚಿತಾಂ ।
ತಾಂಬೂಲಪೂರಿತಮುಖೀಂ ತಿರ್ಯಗ್ಲೋಚನಕೋಟಿತಃ ॥೧೨॥

ಪಶ್ಯಂತೀ ವದನಾಂಭೋಜಂ ಶಂಭೋಸ್ಸುಂದರಮೇದುರಂ ।
ಸುರಮ್ಯಪಾದಕಮಲಂ ಮುಕ್ತಾಮಂಜೀರಶೋಭಿತಂ ॥೧೩॥

---

ದೇವಿಯ ಹಣೆಯಲ್ಲಿ ಭಸ್ಮತ್ರಿಪುಂಡ್ರವಿದ್ದಿತು. ಅದರಮೇಲೆ ಕಸ್ತೂರಿಯ ತಿಲಕವು ಶೋಭಿಸುತ್ತಿದ್ದಿತು. ತೊಂಡೆಯ ಹಣ್ಣಿನಂತಿರುವ ತುಟಿಯೂ, ಪ್ರಸನ್ನವಾದ ಮುಖವೂ, ಮೂಗುತಿಯಿಂದ ಕೂಡಿದ ಮೂಗೂ, ಕಿರೀಟದಲ್ಲಿ ಹೊಳೆಯುವ ಅರ್ಧಚಂದ್ರ ಚಿಹ್ನೆಯೂ, ಜಡೆಯಲ್ಲಿ ಪ್ರಕಾಶಿಸುವ ಮಲ್ಲಿಕಾಪುಷ್ಪವೂ, ದೇವಿಯ ಎರಡು ಕಿವಿಗಳಲ್ಲಿ ಓಲೆಗಳಂತೆ ಕಂಗೊಳಿಸುವ ಸೂರ್ಯಚಂದ್ರರೂ, ದೇವಿಯ ದೇಹವನ್ನು ವಿರಾಜಿಸುತ್ತಿದ್ದುವು. ॥೯-೧೦॥

ಹೀರರತ್ನಗಳಿಂದ ನಿರ್ಮಿತವಾದ ಪದಕಗಳಿಂದ ಮನೋಹರವಾದ ಮಾಲೆಯು ದೇವಿಯ ಕಂಠದಲ್ಲಿ ರಂಜಿಸುತ್ತಿರುವುದು. ದೇವಿಯ ಬಾಹುವಿನಲ್ಲಿ ಸುವರ್ಣಮಯವಾದ ನಾಗಬಂಧವು ಪ್ರಕಾಶಿಸುತ್ತಿರುವುದು. ದೇವಿಯ ದೇಹವಾದ್ಯಂತವೂ ಚಂದ್ರದಿಂದಲೂ ಚಂದನದಿಂದಲೂ ಲಿಪ್ತವಾಗಿದ್ದಿತು. ವದನವು ತಾಂಬೂಲರಾಗದಿಂದ ರಕ್ತವರ್ಣವಾಗಿತ್ತು. ॥೧೧-೧೨॥

ದೇವಿಯು ತನ್ನ ಕುಡಿಗಣ್ಣಿನ ನೋಟದಿಂದ ಮಹೇಶ್ವರನ ದಿವ್ಯಸುಂದರ ಮುಖವನ್ನೂ, ಮುತ್ತಿನಹಾರಗಳಿಂದಲಂಕೃತವಾದ ಪಾದಕಮಲಗಳನ್ನೂ ನೋಡುತ್ತಿದ್ದಳು. ದೇವಿಯು ಸುತ್ತಲೂ ರುದ್ರಾಣಿಯರೂ, ಸಖಿಯರೂ, ಗಣಾಧಿಪರೂ,

ದೇವೀ ಸಖೀಭಿಶ್ಚ ವೃತಂ ಗಣೇಂದ್ರೈಶ್ಚ ಮಹೇಶ್ವರಂ ।
ಮಯಾ ಚ ಗಣಪೇನಾಪಿ ಧೃತಚಾಮರವೀಜಿತಂ ॥೧೪॥

ಛತ್ರೈಃ ಪತಾಕಾನಿಚಯಧಾರಿಭಿರ್ಗಣಪುಂಗವೈಃ ।
ಜಯಂತೀ ವಿಜಯಾ ಹಸ್ತಧೃತಚಾಮರವೀಜಿತಾ ॥೧೫॥

ರಮ್ಯಪತ್ರಾವೃತಮುಖೀ ದಂಡಿನ್ಯಾದರ್ಶಹಸ್ತಯಾ ।
ಬಾಲಯಾ ವೀಟಿಕಾಮತ್ಸ್ಯಪೇಟೀವಿಧೃತಯಾ ತದಾ ॥೧೬॥

ಮುದ್ರಿಣ್ಯಾ ಖಡ್ಗಕೋಶೋದ್ಯತ್ಕರಯಾ ಸೇವಿತಾ ಶಿವಾ ।
ತಂಡುಹಸ್ತೇ ಮಹಾಶೂಲಂ ಖಡ್ಗಕೋಶಂ ಚ ದಂಡಿನಾ ॥೧೭॥

ಭೈರವೋದ್ಭಾವಿತಮಹಾನಿಷಂಗವರಕಾರ್ಮುಕೈಃ ।
ಕಾಲಾಗ್ನಿರುದ್ರೋ ಮಾಯೂರವ್ಯಜನೇನಾಪ್ಯವೀಜಯತ್ ॥೧೮॥

---

ನಾನೂ, ವಿಘ್ನೇಶ್ವರನೂ ಚಾಮರಗಳಿಂದ ದೇವಿಯನ್ನು ಸೇವಿಸುತ್ತಾ ಕುಳಿತಿದ್ದೆವು. ||೧೩-೧೪||

ಅನೇಕ ಗಣದೇವತೆಗಳು ಕೈಯ್ಯಲ್ಲಿ ಛತ್ರಿ, ಚಾಮರ, ಧ್ವಜ, ಜಯಂತೀ ಮಾಲೇ, ವಿಜಯಮಾಲೇ, ದಂಡ, ಕನ್ನಡಿ ಮುಂತಾದ ಮರ್ಯಾದಾಸೂಚಕವಾದ ವಸ್ತುಗಳನ್ನು ಹಿಡಿದು ನಿಂತಿದ್ದರು. ಸಖಿಯರಲ್ಲಿ ಒಬ್ಬಳು ತಾಂಬೂಲದ ಮಡಿಕೆಗಳನ್ನು ಹೊಂದಿರುವ, ಮೀನಿನಾಕಾರದ ಪೆಟ್ಟಿಗೆಯೊಂದನ್ನು ಹಿಡಿದು ನಿಂತಿದ್ದಳು. ||೧೫-೧೬||

ಮುದ್ರೆಯುಂಗುರವನ್ನು ಒಬ್ಬಳೂ, ಕತ್ತಿಯ ಒರೆಯನ್ನು ಮತ್ತೊಬ್ಬಳೂ, ಹಿಡಿದು ನಿಂತಿದ್ದರು. ತಂಡುವು ಮಹಾಶೂಲವನ್ನೂ, ದಂಡಿಯು ಕತ್ತಿಯನ್ನೂ, ಭೈರವನು ದೊಡ್ಡ ಬತ್ತಳಿಕೆ, ಬಿಲ್ಲು ಇವುಗಳನ್ನೂ, ಕಾಲಾಗ್ನಿರುದ್ರನು, ನವಿಲುಗರಿಯಿಂದ ನಿರ್ಮಿತವಾದ ಬೀಸಣಿಗೆಯನ್ನು ಹಿಡಿದು ದೇವಿಯನ್ನು ಸೇವಿಸುತ್ತಿದ್ದರು ||೧೭-೧೮||

ಏವಂ ಗಣವೃತಂ ದೇವಂ ದೇವ್ಯಾ ಸಿಂಹಾಸನಸ್ಥಿತಂ ।
ದೃಷ್ಟ್ವಾ ಪ್ರಣಮ್ಯ ನಂದೀಶೋ ಗಿರಿಂ ದೇವಾಯ ಜಿಜ್ಞಪತ್ ॥೧೯॥

ಪ್ರವೇಶ್ಯತಾಮಿತ್ಯಶಾಚ್ಚ ದೇವದೇವೋ ಮಹೇಶ್ವರಃ ।
ಪ್ರಾಂಜಲಿಸ್ಸತ್ವರಂ ಗತ್ವಾ ತತೋಗ್ರೇ ಹಿಮಭೂಧರಂ ॥೨೦॥

ದೃಷ್ಟ್ವಾಯಾಂತಂ ಚ ಮೈನಾಕಂ ದತ್ತಹಸ್ತಂ ಚ ನಂದಿನಾ ।
ಗೌರೀಗುರುಂ ಮಹಾಶೈಲಂ ಜಾತಹರ್ಷಂ ತದಾ ನಗಂ ॥೨೧॥

ಪ್ರಾವೇಶಯಚ್ಚ ಸವಿಧಂ ಶಂಭೋರ್ದೇವ್ಯಾ ಗಣಾಗ್ರಣೀಃ ।
ದೃಷ್ಟ್ವಾ ದೇವಂ ಮಹಾದೇವಂ ಸ ನಗೋ ಹರ್ಷನಿರ್ಭರಃ ॥೨೨॥

ಪ್ರಣಮ್ಯ ಪ್ರಾಂಜಲಿರ್ವಿಪ್ರಾ ಮಮ ಮಾತಾಮಹೋದ್ರಿರಾಟ್ ।
ಅಗಜಾಪತಿಮಾಶಾಸ್ಯಂ ತುಷ್ಟಾವ ಪುಲಕಾಂಗಕಃ ॥೨೩॥

---

ಹೀಗೆ ಸಕಲ ಗಣಗಳಿಂದ ಕೂಡಿ ದೇವಿಯೊಡನೆ ಸಿಂಹಾಸನದಲ್ಲಿ ಮಂಡಿಸಿರುವ ಮಹಾದೇವನನ್ನು ನೋಡಲು ಹಿಮವಂತನು ಬಂದನು. ಒಡನೆಯೇ ನಂದೀಶ್ವರನು ಪರಶಿವನ ಸನ್ನಿಧಿಗೆ ಹೋಗಿ ವಿನಯದಿಂದ ಈ ವಿಷಯವನ್ನು ತಿಳಿಸಲು ಕೂಡಲೇ ಒಳಗೆ ಕರೆತರುವಂತೆ ಶಂಕರನು ಅಪ್ಪಣೆಮಾಡಿದನು. ಅದರಂತೆಯೇ ನಂದೀಶ್ವರನು ಹಿಮಾಚಲರಾಜನೊಡನೆ ಒಳಭಾಗದಲ್ಲಿ ಶಂಕರನಿಗೆ ಅಭಿಮುಖನಾಗಿ ಬರುತ್ತಿದ್ದನು. ॥೧೯-೨೦॥

ಜೊತೆಯಲ್ಲಿ ಮೈನಾಕನೂ ಬರುತ್ತಿದ್ದನು. ನಂದಿಯು ಮರ್ಯಾದಾಪುರಸ್ಸರವಾಗಿ ಹಿಮರಾಜನಿಗೆ ಹಸ್ತಲಾಘವವನ್ನಿತ್ತು ಶಂಕರ ಮತ್ತು ದೇವಿಯಿರುವ ಸಭೆಗೆ ಕರೆತಂದನು. ನನ್ನ ಮಾತಾಮಹನಾದ ನಗರಾಜನು, ನನ್ನ ಮಾತಾಪಿತೃಗಳಾದ ಪಾರ್ವತೀಪರಶಿವರನ್ನು ನೋಡಿ ಆನಂದಪುಲಕಿತಗಾತ್ರನಾಗಿ, ಮಹೇಶ್ವರನನ್ನು ವಿಧವಿಧವಾದ ಸ್ತುತಿವಚನಗಳಿಂದ ಬಹುವಾಗಿ ಸ್ತುತಿಸಲಾರಂಭಿಸಿದನು. ॥೨೧-೨೨-೨೩॥

|| ಹಿಮವಾನುವಾಚ ||

ಭವ ಹರ ಭಗವನ್ ಪುರಾಂತಕಾರೇ
ಪ್ರಮಥಾಧೀಶ ಹರೀಂದ್ರರುದ್ರಪೂಜ್ಯ ।
ವಿಬುಧಾಧಿಪ ಸರ್ವಮಂಗಳಾಧಿನಾಥ,
ಹರ ಗರಕಂಧರ ಸೋಮಚಂದ್ರಚೂಡ ॥೨೪॥

ಅಹಿವರವರಹಾರಶೋಭಿತಾಂಗ
ಹ್ಯಗಪತಿವಾಸ ಮಹೋರುಲಿಂಗವಾಸ ।
ಖಗಪತಿವಹನೇತ್ರಪೂಜ್ಯಪಾದ ಶಂಭೋ
ವಿಧಿಮಸ್ತಾಭರಣ ಪ್ರಸೀದ ದೇವದೇವ ॥೨೫॥

ಬಲಿಬಲಮಥನಪ್ರಮಾಥ ಶಂಭೋ
ಗಿರಿಜಾನಾಥ ಸನಾಥಯಾಶು ಮಾಂ ।
ಮಥನೋದ್ಭೂತಸಮುದ್ರತೋದ್ಯ
ದ್ಗರಹಾರಿನ್ ಪ್ರಮಥೈಕನಾಥ ಪಾಹಿ ॥೨೬॥

---

ಸಂಸಾರದುಃಖವನ್ನು ಸಂಪೂರ್ಣ ನಾಶಗೊಳಿಸುವ ಪರಮಾತ್ಮನೇ, ತ್ರಿಪುರಾರಿಯೇ, ಬ್ರಹ್ಮ, ವಿಷ್ಣು, ರುದ್ರ ಇವರಿಂದ ಪರಿಪೂಜ್ಯನಾದವನೇ, ದೇವತಾಧಿಪನಾಗಿ, ಸರ್ವಮಂಗಳೆಯಾದ ಪಾರ್ವತಿಗೆ ಪತಿಯೆನಿಸುವ ವಿಷಕಂಠನೇ, ಚಂದ್ರಶೇಖರನೇ ನಿನಗೆ ವಂದನೆ. ||೨೪||

ಮಹೇಶ್ವರನೇ, ನಿನಗೆ ಆದಿಶೇಷನೇ ದಿವ್ಯಹಾರವಾಗಿರುವನು. ಕೈಲಾಸ ಪರ್ವತದಲ್ಲಿರುವ ದಿವ್ಯವಾದ ಶಿವಲಿಂಗಗಳ ಮಧ್ಯವರ್ತಿಯಾಗಿ ಪ್ರಕಾಶಿಸುತ್ತಿರುವೆ. ಪುಂಡರೀಕಾಕ್ಷನಾದ ಶ್ರೀಮನ್ನಾರಾಯಣನಿಂದ ಪೂಜಿತವಾದ ಪಾದಪದ್ಮವುಳ್ಳವನೇ, ಶಂಭುವೇ, ಬ್ರಹ್ಮಕಪಾಲದಿಂದ ಭೂಷಿತನಾದ ದೇವದೇವನೇ ನನಗೆ ಪ್ರಸನ್ನನಾಗು. ||೨೫||

ಬಲಿಷ್ಠನಾದ ಬಲಾಸುರನನ್ನು ಕೊಂದ ಇಂದ್ರನ ಗರ್ವವನ್ನು ನೀನು ನಾಶಮಾಡಿದವನಾಗಿರುವೆ. ಪಾರ್ವತೀಪತಿಯಾದ ಶಂಕರನೇ, ಕ್ಷೀರಸಮುದ್ರಮಥನದಿಂದ ಹುಟ್ಟಿದ ಹಾಲಾಹಲವಿಷವನ್ನು ಸಂಪೂರ್ಣವಾಗಿ ಧರಿಸಿ ಅದರ ಭಯವನ್ನು ಜಗತ್ತಿಗೆ

ಧೃತಗಂಗಾಮಲಚಂದ್ರಸತ್ಕಪರ್ದ
ನಿಗಮೋತ್ತಂಸವಿಶೇಷವಾಕ್ಯತುಷ್ಟ ।
ಭವ ಭಾವಹೃದಂತರಾಯನಾಶ
ಗಿರಿಕೈಲಾಸನಿವಾಸ ಪಾಹಿ ಶಂಭೋ ॥೨೭॥

ಗಜಮುಖಷಣ್ಮುಖಸನ್ಮುಖ ಶಂಕರ
ಚಿತ್ಸುಖ ಕಮಲಜಮುಖಮೌಳೇ ।
ಶಶಿಮುಖಲೋಕನ ಪಂಚಮುಖೋದ್ಯತ
ಲೋಚನ ಲೇಖವರೋತ್ತಮ ಪಾಹಿ ॥೨೮॥

ಅವ ಶಿವ ಸದಯಂ ಭವ ಭವಹೃದಯಂ
ಕುರು ಕುರು ಕರುಣಾಂ ಶಶಿಮೌಳೇ ।
ವಿತರ ವಿಮುಕ್ತಿಂ ಪರಿಹರ ಬಂಧಂ
ಸ್ಮರಹರ ಯಮಹರ ಭಗಹರ ಶಂಭೋ ॥೨೯॥

---

ತಪ್ಪಿಸಿರುವೆ. ಪ್ರಮಥಾಧೀಶ್ವರನಾದ ಮಹಾದೇವನೇ, ನನಗೆ ನೀನೇ ರಕ್ಷಕನಾಗಿರು. ನಮ್ಮನ್ನು ಕಾಪಾಡು. ॥೨೬॥

ಶಿರಸ್ಸಿನಲ್ಲಿ ಗಂಗೆಯನ್ನೂ. ಚಂದ್ರನನ್ನೂ ಧರಿಸಿರುವೆ. ದಿವ್ಯವಾದ ವೇದ ವಾಕ್ಯಗಳಿಂದ ತುಷ್ಟನಾಗಿರುವೆ. ಭಾವಪೂರಿತರಾಗಿರುವ ಯೋಗಿಗಳ ಮನೋ ದೌರ್ಬಲ್ಯವನ್ನು ದೂರೀಕರಿಸುತ್ತಿರುವೆ. ಕೈಲಾಸವಾಸಪ್ರಿಯನಾದ ಶಂಭುವೇ, ನನ್ನನ್ನು ಜಾಗ್ರತೆಯಾಗಿ ಉದ್ಧರಿಸು. ॥೨೭॥

ಗಣಪತಿ, ಸ್ಕಂದಸ್ವಾಮಿ ಇವರಲ್ಲಿ ಅಭಿಮಾನವಿಟ್ಟಿರುವ. ಶಂಕರನೇ, ನೀನು ಜ್ಞಾನಪ್ರದನು. ಮತ್ತು ಆನಂದಮಯನು, ಬ್ರಹ್ಮಕಪಾಲಧಾರಿಯಾಗಿ, ಚಂದ್ರನೇ ಮನೋಹರವಾದ ದೃಷ್ಟಿಯುಳ್ಳ ಪಂಚಮುಖಗಳಿಂದ ಕೂಡಿದ ದೇವಶ್ರೇಷ್ಠನೇ, ನಮ್ಮನ್ನು ರಕ್ಷಿಸು. ॥೨೮॥

ಚಂದ್ರಶೇಖರನೇ, ಸಂಸಾರ ಬಂಧನಗಳಿಗೆ ಸಿಕ್ಕಿದ ನಮ್ಮನ್ನೆಲ್ಲಾ ದಯೆ ಯಿಂದ ಕಾಪಾಡು. ನಮ್ಮಲ್ಲಿ ಅನ್ಯಾದೃಶವಾದ ಕರುಣೆಯನ್ನಿಡು. ಶಾಶ್ವತವಾದ ಮುಕ್ತಿಯನ್ನು ನಮಗೆ ಅನುಗ್ರಹಿಸು. ಭವಬಂಧನವನ್ನು ತೊಲಗಿಸು. ಸ್ಮರನನ್ನೂ,

ಭವ ಪದಕಮಲೇ ವಿದಿಶ ಸುಭಕ್ತಿಂ
ತವ ಲಿಂಗಾರ್ಚನತಃ ಪ್ರಕೃಷ್ಟಭಾವಂ ।
ತವ ಪದಕಮಲಾದರಂ ಚ ಶಂಭೋ
ಮಮ ಸನ್ಮಾನಸಮೇತದದ್ಯ ಚಾಸ್ತು ॥೩೦॥

ತವ ಲಿಂಗಾಮಲಲೋಕನೇಽಸ್ತು ನೇತ್ರೇ
ತವ ಪಾದಪ್ರಣತೌ ಶಿರೋಽಪಿ ಮೇದ್ಯ ।
ತವ ಲಿಂಗೋತ್ತಮಪೂಜನಾಯ ಹಸ್ತೌ
ತವ ಲಿಂಗಾಲಯಪ್ರಕ್ರಮಾಯ ಪಾದೌ ॥೩೧॥

ಶಶಧರಧರ ಹರ ರಥಧರಧರಹರ
ಪುರಹರ ಶಂಕರ ಗರಧರ ಶಂಭೋ ।
ಜಲಧರವಹನಗಧರ ಶೂಲಧರಾವ್ಯಯ
ಹರಿಭಸ್ಮಾರುಣಧರ ಪಾಹಿ ॥೩೨॥

---

ಯಮನನ್ನೂ, ಇತರ ಶೋಕಗಳನ್ನೂ ನಾಶಮಾಡಿದ ಮಹೇಶ್ವರನೇ ನಮ್ಮನ್ನು ದ್ಧರಿಸು. ॥೨೯॥

ಮಹೇಶ್ವರನೇ, ನನಗೆ ಯಾವಾಗಲೂ ನಿನ್ನ ಪಾದಕಮಲದಲ್ಲಿ ಅನ್ಯಾದೃಶವಾದ ಭಕ್ತಿಯಿರುವಂತೆ ಅನುಗ್ರಹಿಸು. ನಿನ್ನ ಲಿಂಗಾರ್ಚನೆಯಲ್ಲಿ ಪ್ರಕೃಷ್ಟವಾದ ಸ್ಥಿರಭಾವವನ್ನೂ, ನಿನ್ನ ಪಾದಕಮಲಧ್ಯಾನದಲ್ಲಿ ಅತ್ಯಾದರವನ್ನು ಕರುಣಿಸು. ಇದನ್ನೇ ನಾನು ನಿನ್ನಿಂದ ಬಹುಮಾನರೂಪವಾಗಿ ಪ್ರಾರ್ಥಿಸುತ್ತಿರುವೆನು. ॥೩೦॥

ನನ್ನ ಕಣ್ಣುಗಳು ಯಾವಾಗಲೂ ನಿನ್ನ ಶಿವಲಿಂಗದರ್ಶನದಿಂದ ಪವಿತ್ರಗಳಾಗಲಿ. ನನ್ನ ಶಿರಸ್ಸನ್ನು ನಿನ್ನ ಪಾದಗಳಿಗೆ ವಂದಿಸುವುದರಲ್ಲಿಯೂ, ಕೈಗಳು ಉತ್ತಮಲಿಂಗಗಳ ಆರಾಧನೆಯಲ್ಲಿಯೂ, ಕಾಲುಗಳು ಶಿವಾಲಯಗಳಿಗಾಗಿ ಸಂಚರಿಸುವುದರಲ್ಲಿಯೂ, ವಿನಿಯೋಗವಾಗಲಿ. ನಿನ್ನ ಸೇವೆಯಿಂದಲೇ ನನ್ನ ದೇಹವು ಚಾರಿತಾರ್ಥ್ಯವನ್ನು ಪಡೆಯಲಿ. ॥೩೧॥

ಹರನೇ, ನೀನು ಚಂದ್ರನನ್ನು ಮೌಲಿಯಲ್ಲಿ ಧರಿಸಿರುವೆ. ಚಕ್ರಧಾರಿಯಾದ ವಿಷ್ಣುವನ್ನು ಸಹ ಮಹಿಮೆಯಲ್ಲಿ ಸೋಲಿಸಿರುವೆ. ತ್ರಿಪುರಗಳನ್ನು ನಾಶಮಾಡಿರುವೆ. ವಿಷವನ್ನು ಧರಿಸಿರುವೆ. ಸಕಲ ಮೇಘಗಳನ್ನೂ ತಡೆಗಟ್ಟುವ ಕೈಲಾಸದಲ್ಲಿ ವಾಸ

॥ ಸ್ಕಂದ ಉವಾಚ ॥

ತತ್ಸ್ತುತ್ಯಾ ತೋಷಿತಶ್ಶಂಭುಸ್ತಮಭ್ಯರ್ಣೇ ನಗಾಧಿಪಂ ।
ಏಹೀತ್ಯವೋಚತ್ಕೃಪಯಾ ಸ್ವಾಗತೇನಾಭ್ಯನಂದಯತ್ ॥೩೩॥

॥ ಈಶ್ವರ ಉವಾಚ ॥

ದೃಷ್ಟಃ ಕೈಲಾಸಶೈಲೋ ಮೇ ತ್ವಯಾ ನಗವರೋತ್ತಮ ।
ದೃಷ್ಟಾನಿ ಶಿವಲಿಂಗಾನಿ ಸರ್ವಪಾಪಹರಾಣ್ಯಗ ॥೩೪॥

ಕೋಟ್ಯರ್ಬುದಾನಿ ಲಿಂಗಾನಿ ಗೋಪುರಾಣ್ಯತ್ರ ಸತ್ತಮ ।
ಪ್ರಾಸಾದವರಸೌಧಾಶ್ಚ ಕಿಂ ದೃಷ್ಟಾ ಮಂಟಪಾವಲಿಃ ॥೩೫॥

ಸರಾಂಸಿ ರತ್ನಕಮಲಭ್ರಾಜಿಷ್ಣೂಂತಿ ನಗೋತ್ತಮ ।
ರತ್ನಾನಾಂ ಗಿರಯೋಽಪ್ಯದ್ರೇ ತನ್ಮೌಲಿಮಣಿಮಂಟಪಾಃ ॥೩೬॥

---

ಮಾಡುತ್ತಿರುವೆ. ತ್ರಿಶೂಲವನ್ನು ಧರಿಸಿ ನಾಶರಹಿತನೆನಿಸಿಕೊಂಡಿರುವೆ. ಸರ್ಪವನ್ನೂ, ಭಸ್ಮವನ್ನೂ, ಸೂರ್ಯನನ್ನೂ ಧರಿಸಿಕೊಂಡಿರುವ ಮಹಾದೇವನೇ, ನಮ್ಮನ್ನುದ್ಧರಿಸು. ॥೩೨॥

ಎಂದು ನಾನಾರೀತಿಯಿಂದ ಸ್ತೋತ್ರಮಾಡಿದ ಹಿಮವಂತನನ್ನು ನೋಡಿ ಪರಮೇಶ್ವರನು ಪ್ರೀತಿಯಿಂದ ಸ್ವಾಗತಿಸಿ, ಅನುಗ್ರಹಪೂರ್ವಕವಾದ ಕೆಲವು ಮಾತುಗಳನ್ನಾಡಿದನು. “ಪರ್ವತರಾಜನಾದ ಹಿಮವಂತನೇ, ಈಗ ನೀನು ನನ್ನ ಆಶ್ರಯಸ್ಥಾನವಾದ ಕೈಲಾಸಶಿಖರದಲ್ಲಿ ಪಾಪನಾಶಕಗಳಾಗಿರುವ ಎಲ್ಲಾ ಶಿವಲಿಂಗಗಳನ್ನೂ ದರ್ಶನಮಾಡಿದೆಯಲ್ಲವೆ? ॥೩೩-೩೪॥

ನಗರಾಜನೇ, ಈ ಕೈಲಾಸನಗರದಲ್ಲಿ ಕೋಟ್ಯಂತರ ಸಂಖ್ಯೆಯಲ್ಲಿ ಶಿವಲಿಂಗಗಳೂ, ಗೋಪುರಗಳೂ ಹೇರಳವಾಗಿರುವುವು. ಅನೇಕ ಪ್ರಾಸಾದಗಳೂ, ಸೌಧಗಳೂ, ಮಂಟಪಗಳೂ ಅಸಂಖ್ಯಾತವಾಗಿರುವುವು. ಹಾಗೆಯೇ ರತ್ನಕಮಲಗಳಿಂದ ಅಲಂಕೃತವಾಗಿರುವ ಸರೋವರಗಳೂ, ರತ್ನಮಯವಾದ ಸಣ್ಣಸಣ್ಣ ಗಿರಿಗಳೂ ಇಲ್ಲಿರುವುದನ್ನು ನೀನು ನೋಡಿರಬಹುದು. ॥೩೫-೩೬॥

ಕೈಲಾಸೇಶ್ವರಲಿಂಗಂ ಮೇ ದೃಷ್ಟಂ ಮುಕ್ತಿಪ್ರದಾಯಕಂ ।
ಅಂಬಿಕೇಶಂ ಸದಾಂಬಾಯಾ ಹೃದಯಾಗಾರಸಂಸ್ಥಿತಂ ॥೩೭॥

ಗಣಾನಾಂ ಭವನಾನ್ಯತ್ರ ಕಿಂ ದೃಷ್ಟಾನಿ ತ್ವಯಾ ನಗ ।
ಮಹಾವನಾನಿ ಪುಷ್ಪೋದ್ಯತ್ಸುರಭೀಣಿ ಸಮಂತತಃ ॥೩೮॥

ಸಹಸ್ರಲಿಂಗಧಾಮೋದ್ಯತ್ಕಲಶಾಲೀ ಸುಪುಣ್ಯದಾ ।
ಕ್ರೀಡಾರತ್ನಮಹಾಸೌಧಪಂಕ್ತೀ ದೃಷ್ಟಾ ತ್ವಯಾ ನಗ ॥೩೯॥

ರಮ್ಯಂ ಬಿಲ್ವವನಂ ದೃಷ್ಟಂ ಮಣಿಲಿಂಗೋರುಮೂಲಕಂ ।
ಪುಣ್ಯಾಶ್ಚಾತ್ರ ಸಭಾ ದೃಷ್ಟಾಸ್ಸೇಯಂ ಮೇ ನರ್ತನಸ್ಯ ಹಿ ॥೪೦॥

ಸಹಸ್ರಾಯುತಲಕ್ಷೋದ್ಯತ್ಕೋಟಿಸ್ತಂಭೋರುಮಂಟಪಾಃ ।
ತ್ವಯಾ ದೃಷ್ಟಾ ನಗಶ್ರೇಷ್ಠ ಸಾಗರಾ ಮೇರುಪರ್ವತಃ ॥೪೧॥

ಶೈಲಪ್ರಾಕಾರರಾಜಶ್ರೀ ಗೋಪುರಾಲಿವೃಷಾವಲೀ ।
ದೃಷ್ಟಂ ಭುವನಗೋಲಂ ತೇ ಶಿವಕ್ಷೇತ್ರಾಣ್ಯಪಿ ಕ್ರಮಾತ್ ॥೪೨॥

---

ಕೇವಲ ದರ್ಶನದಿಂದಲೇ ಮುಕ್ತಿಪ್ರದವಾದ ಕೈಲಾಸೇಶ್ವರಲಿಂಗವನ್ನು ನೋಡಿದೆಯಲ್ಲವೇ? ಹಾಗೆಯೇ ಗರ್ಭಗೃಹದಲ್ಲಿ ಕಂಡುಬರುವ ಅಂಬಾಸಹಿತನಾದ ಅಂಬಿಕೇಶಸ್ವಾಮಿಯನ್ನೂ ದರ್ಶನಮಾಡಿರಬಹುದು. ಮತ್ತು ಪ್ರಮಥಗಣಗಳ ಆವಾಸಸ್ಥಾನವಾದ ದಿವ್ಯದೇವಾಲಯಗಳನ್ನೂ, ಫಲಪುಷ್ಪಭರಿತಗಳಾಗಿ ಸುಗಂಧಮಯವಾದ ದೊಡ್ಡ ದೊಡ್ಡ ಉದ್ಯಾನವನಗಳನ್ನೂ ನೋಡಿದ್ದೀಯೆ. ॥೩೭-೩೮॥

ಸಹಸ್ರ ಶಿವಲಿಂಗಗಳ ದೇವಾಲಯಗಳಿಗೂ ಸಹಸ್ರ ಕಲಶಗಳು ಸಾಲಾಗಿ ಗೋಚರವಾಗುತ್ತಿರುವುವು. ಹಾಗೆಯೇ ಆ ದೇವಾಲಯಗಳ ಸೌಧಪಂಕ್ತಿಯು ನೋಡುವವರಿಗೆ ಅತಿಶಯವಾದ ಸುಕೃತವನ್ನು ಒದಗಿಸತಕ್ಕದ್ದಾಗಿರುವುದು. ಹಾಗೆಯೇ ಅಲ್ಲಿರುವ ಸುಂದರವಾದ ಬಿಲ್ವವನ, ರತ್ನಮಯವಾದ ದಿವ್ಯಲಿಂಗಗಳು ದಿವ್ಯನಾಟ್ಯಸಭೆಗಳು ಇವೆಲ್ಲವನ್ನೂ ನೀನು ಪ್ರೀತಿಯಿಂದ ನೋಡಿರುವೆಯಲ್ಲವೆ? ॥೩೯-೪೦॥

ಸಾವಿರ, ಹತ್ತುಸಾವಿರ, ಲಕ್ಷ, ಕೋಟಿ, ಈ ಸಂಖ್ಯೆಯ ಕಂಬಗಳಿಂದ ವಿರಾಜಿಸುವ ದಿವ್ಯಮಂಟಪಗಳನ್ನೂ ನೀನು ನೋಡಿರಬಹುದು. ಹಾಗೆಯೇ ಸಪ್ತಸಾಗರ

ಧನ್ಯಸ್ತ್ವಂ ನಗಮೂರ್ಧನ್ಯ ಧನ್ಯಃ ಕೈಲಾಸದರ್ಶಕಃ ।
ಕೈಲಾಸದರ್ಶನೇನಾದ್ಯ ಸಫಲಾ ತೇ ಜನುರ್ನಗ ॥೪೩॥

ವಿಷ್ಣುಬ್ರಹ್ಮಾದಯೋ ದೇವಾಸ್ತಥಾನ್ಯೇ ಮುನಯೋ ಗಣಾಃ ।
ಕೈಲಾಸದರ್ಶನಾರ್ಥಾಯ ತಪ್ಯಂತ್ಯದ್ಯಾಪಿ ತೇ ತಪಃ ॥೪೪॥

ಕಿಂ ಮಮಾನುಗ್ರಹೇಣೈವ ಕೈಲಾಸಸ್ಯಾಸ್ಯ ದರ್ಶನಂ ।
ಮಹಾದಾನೈಶ್ಚ ವಿವಿಧೈಷ್ಷೋಡಶೈಶ್ಚ ನಗೋತ್ತಮ ॥೪೫॥

ಮಮ ಕೈಲಾಸಭವನದರ್ಶನಂ ನೈವ ಜಾಯತೇ ।
ಕೋಟಿಯಜ್ಞತಪೋಭಿಶ್ಚ ವ್ರತೋಪೋಷಣಕೃಚ್ಛ್ರಕೈಃ ॥೪೬॥

ಮಮ ಕೈಲಾಸಭವನದರ್ಶನಂ ನೈವ ಜಾಯತೇ ।
ಅಷ್ಟಾಂಗಯೋಗೈರ್ವಿವಿಧೈರ್ಯಮಾದಿನಿಯಮಾಸನೈಃ ॥೪೭॥

---

ಗಳೂ, ಮೇರುಪರ್ವತ, ಕೈಲಾಸಶೈಲಪ್ರಾಕಾರ ಅವುಗಳಲ್ಲಿ ಕಂಡುಬರುವ ವೃಷಭ ವಿಗ್ರಹಗಳು, ಇಲ್ಲಿ ಕಾಣುವ ಭೂಮಂಡಲ, ಅಲ್ಲಿ ರಂಜಿಸುವ ಶಿವಕ್ಷೇತ್ರಗಳು ಇವೆಲ್ಲ ವನ್ನೂ ನೀನು ನೋಡಿರುವೆ. ॥೪೧-೪೨॥

ಹಿಮವಂತನೇ, ಹೀಗೆ ಸಂಪೂರ್ಣವಾಗಿ ಕೈಲಾಸಪರ್ವತವನ್ನೆಲ್ಲಾ ದರ್ಶನ ಮಾಡಿದ ನೀನೇ ಧನ್ಯ. ಇದರಿಂದ ನಿನ್ನ ಜನ್ಮವೇ ಇಂದು ಸಾರ್ಥಕವೆನಿಸಿದೆ. ವಿಷ್ಣು, ಬ್ರಹ್ಮ ಮುಂತಾದ ದೇವಶ್ರೇಷ್ಠರೂ, ಸಪ್ತರ್ಷಿಗಳೂ, ಇನ್ನೂ ಇತರ ವಿಧ ಗಳಾದ ಗಣಾಧಿಪತಿಗಳೂ, ಕೈಲಾಸವನ್ನು ಸಂಪೂರ್ಣವಾಗಿ ದರ್ಶನಮಾಡಲೋಸುಗ ಅದ್ಯಾಪಿ ತಪಸ್ಸನ್ನಾಚರಿಸುತ್ತಿರುವರು. ॥೪೩-೪೪॥

ಈ ಕೈಲಾಸವನ್ನು ದರ್ಶನಮಾಡಬೇಕಾದರೆ ನನ್ನ ಸಂಪೂರ್ಣಾನುಗ್ರಹವಿರ ಬೇಕು. ಮಹಾದಾನಗಳಾಗಲೀ, ವಿಧ್ಯುಕ್ತಗಳಾದ ಷೋಡಶದಾನಗಳಾಗಲಿ, ನನ್ನ ಕೈಲಾಸಪರ್ವತದ ದರ್ಶನಕ್ಕೆ ಸಾಧಕಗಳಾಗಲಾರವು. ಕೋಟಿಯಜ್ಞಗಳು, ದೀರ್ಘ ಕಾಲ ತಪಸ್ಸು, ವ್ರತಗಳು, ಉಪವಾಸಾದಿಗಳೂ, ಚಾಂದ್ರಾಯಣಾದಿವ್ರತಗಳು ಇವೆಲ್ಲವೂ ಕೈಲಾಸದರ್ಶನಕ್ಕೆ ಸಹಾಯಕಗಳಾಗಲಾರವು. ॥೪೫-೪೬॥

ಅಷ್ಟಾಂಗಯೋಗಗಳಾದ ಯಮನಿಯಮಾಸನಾದಿಗಳ ಅಭ್ಯಾಸ, ಕೋಟಿ ಸಂಖ್ಯೆಯಲ್ಲಿ ಗೋವುಗಳು, ಕುದುರೆಗಳು, ಆನೆಗಳು ಇವುಗಳನ್ನು ದಾನ ಕೊಡು

ಮಮ ಕೈಲಾಸಭವನದರ್ಶನಂ ನೈವ ಜಾಯತೇ ।
ಗವಾಂ ಕೋಟಿಪ್ರದಾನೇನಾಪ್ಯಶ್ವಮಾತಂಗಕೋಟಿಭಿಃ ॥೪೮॥

ಮಮ ಕೈಲಾಸಭವನದರ್ಶನಂ ನೈವ ಜಾಯತೇ ।
ಧನಧಾನ್ಯಮಣೀನಾಂ ಚ ವಸ್ತ್ರಾಭರಣದಾನತಃ ॥೪೯॥

ಮಮ ಕೈಲಾಸಭವನದರ್ಶನಂ ನೈವ ಜಾಯತೇ ।
ತೀರ್ಥಪ್ರಕ್ರಮಕನ್ಯಾನ್ನದಾನೈಶ್ಚ ಗೃಹದಾನತಃ ॥೫೦॥

ಮಮ ಕೈಲಾಸಭವನದರ್ಶನಂ ನೈವ ಜಾಯತೇ ।
ಪಾನೀಯದೀಪಧೂಪಾದಿದಾನೇನಾಪಿ ತಪಸ್ವಿಷು ॥೫೧॥

ಮಮ ಕೈಲಾಸಭವನದರ್ಶನಂ ನೈವ ಜಾಯತೇ ।
ವೇದವೇದಾಂತವಾದ್ಯೈಶ್ಚ ವರ್ಣಾಶ್ರಮರತಾತ್ಮನಾಂ ॥೫೨॥

ಮಮ ಕೈಲಾಸಭವನದರ್ಶನಂ ನೈವ ಜಾಯತೇ ।
ಕಿಂ ತು ಪ್ರಸಾದೇನ ಮಮ ಭಕ್ತ್ಯಾ ಚೈವಾಪ್ಯನನ್ಯಯಾ ॥೫೩॥

ಲಭ್ಯತೇ ದರ್ಶನಂ ಶೈಲ ಮಮ ಕೈಲಾಸಮೌಳಿಗಂ ।
ಅನನ್ಯಭಾವಸ್ಸತತಂ ಭಸ್ಮಪುಂಡ್ರೋಜ್ಜ್ವಲೋನಿಶಂ ॥೫೪॥

---

ವುದು, ಧನ, ಧಾನ್ಯ, ಮಣಿ, ವಸ್ತ್ರಾಭರಣಾದಿಗಳು ಇವುಗಳ ದಾನ, ತೀರ್ಥ ಯಾತ್ರಾದಿಗಳು, ಗೃಹದಾನ, ಅನ್ನದಾನ, ಕನ್ಯಾದಾನ ಮುಂತಾದ ಮಹಾದಾನಾಚರಣೆ, ತಪಸ್ವಿಗಳಿಗೆ ಕೊಡುವ ಪಾನೀಯ, ದೀಪ, ಧೂಪ ಮುಂತಾದುವುಗಳ ಉಪಚಾರ, ವೇದವೇದಾಂತಶ್ರವಣ, ವರ್ಣಾಶ್ರಮಧರ್ಮಾನುಷ್ಠಾನ ಇವೇ ಮೊದಲಾದ ಧರ್ಮಕಾರ್ಯಗಳಿಂದ ನನ್ನ ಕೈಲಾಸಪರ್ವತದ ದರ್ಶನವು ಎಂದಿಗೂ ಲಭಿಸಲಾರದು. ಆದರೆ ಯಾರು ನನ್ನನ್ನು ಅನನ್ಯಸಾಧಾರಣವಾದ ಭಕ್ತಿಯಿಂದ ಆರಾಧಿಸಿ, ತನ್ಮೂಲಕ ನನ್ನ ಅನುಗ್ರಹವನ್ನು ಸಂಪಾದಿಸುವರೋ ಅವರಿಗೆ ಮಾತ್ರ ಈ ಕೈಲಾಸ ದರ್ಶನವು ಸುಲಭಸಾಧ್ಯವಾಗುವುದು. ॥೪೭-೪೮-೪೯-೫೦-೫೧-೫೨-೫೩॥

ಯಾರು ಅನನ್ಯಭಾವದಿಂದ ಸಂತತವಾಗಿ ನನ್ನನ್ನೇ ಧ್ಯಾನಿಸುತ್ತಾ ಭಸ್ಮ, ತ್ರಿಪುಂಡ್ರ ಇವುಗಳನ್ನು ಧರಿಸಿಕೊಂಡು, ರುದ್ರಾಕ್ಷಿಯ ಸರವನ್ನು ಕಂಠದಲ್ಲಿಯೂ,

ರುದ್ರಾಕ್ಷಹಾರವಲಯಃ ಪಂಚಾಕ್ಷರಪರಾಯಣಃ ।
ರುದ್ರಲಿಂಗಾರ್ಚನಪರೋ ರುದ್ರಾಧ್ಯಾಯಜಪಾದರಃ ॥೫೫॥

ಶಿವಕ್ಷೇತ್ರೈಕವಸತಿಸ್ತೇನ ಲಭ್ಯೋಽಯಮದ್ರಿರಾಟ್ ।
ಕಿಮುಕ್ತೇನಾಪಿ ಬಹುನಾ ಲಭ್ಯೋಽಯಂ ಮದನುಗ್ರಹಾತ್ ॥೫೬॥

ನ ದೇವಾ ನೈವ ಗಂಧರ್ವಾ ಬ್ರಹ್ಮವಿಷ್ಣುಮಹೇಶ್ವರಾಃ ।
ಮನಸಾ ತೈರಚಿಂತ್ಯೋಽಯಂ ಕೈಲಾಸೋ ಮಮ ಭೂಧರಃ ॥೫೭॥

ಮದ್ಭಕ್ತ್ಯಾ ಜಗತಿ ಪ್ರಚಂಡಸುರತಾಸಂತಾಡನೇ ಪಂಡಿತಾ
ಭದ್ರಾದ್ಯಾಸ್ಸಿಕತಾಶನಾದಿತನಯಾಶ್ಚಂಡಾಂಶು[1]ಪುತ್ರಾಪಹಾಃ ।
ಚಂಡೀಶಃ ಪಿತರಂ ನಿನಾಯ ಚ ಯಮಂ ಶ್ವೇತೋ ಪಿ ಜಿಗ್ಯೇಽಂತಕಂ॥೫೮॥

---

ಕೈಗಳಲ್ಲಿಯೂ ಕಟ್ಟಿಕೊಂಡವರಾಗಿ, ಶಿವಪಂಚಾಕ್ಷರೀ ಮಂತ್ರಪುರಶ್ಚರಣೆಯಿಂದ ಶಿವಲಿಂಗವನ್ನು ಆರಾಧಿಸುತ್ತಾ ರುದ್ರಾಧ್ಯಾಯವನ್ನು ಜಪಿಸುತ್ತಾ ಇರುವರೋ ಅವರಿಗೇ ಈ ಕೈಲಾಸಪರ್ವತದ ದರ್ಶನವು ಲಭಿಸುವುದು. ॥೫೪-೫೫॥

ಸರ್ವದಾ ಯಾರು ಶಿವಕ್ಷೇತ್ರದಲ್ಲಿಯೇ ವಾಸಿಸುತ್ತಾ ದೃಢಚಿತ್ತತೆಯಿಂದ ನನ್ನನ್ನು ಸೇವಿಸಿ ನನ್ನ ಅನುಗ್ರಹವನ್ನು ಸಂಪಾದಿಸುವರೋ, ಅವರಿಗೆ ಕೈಲಾಸವು ಸುಲಭಸಾಧ್ಯವಾಗುವುದು. ಒಟ್ಟಿನಲ್ಲಿ ನನ್ನ ಅನುಗ್ರಹವಿಲ್ಲದವರಿಗೆ ಕೈಲಾಸವು ದುರ್ಲಭವು. ಆದ್ದರಿಂದಲೇ ನನ್ನ ಅನುಗ್ರಹಸಂಪಾದನೆಗಾಗಿ ದೇವತೆಗಳೂ, ಗಂಧರ್ವರೂ, ಬ್ರಹ್ಮವಿಷ್ಣ್ವಾದಿ ತ್ರಿಮೂರ್ತಿಗಳೂ ಯತ್ನಿಸುತ್ತಾ ಕೈಲಾಸವನ್ನು ಹೊಂದುವ ಆಸೆಯನ್ನೇ ಬಿಟ್ಟಿರುವರು. ॥೫೬-೫೭॥

ಬಲಿಷ್ಠರಾದ ದೇವತಾಗಣಗಳೆಲ್ಲವನ್ನೂ ನಾಶಮಾಡುವಷ್ಟು ಶಕ್ತಿಯನ್ನು ಸಂಪಾದಿಸಿದ ಭದ್ರಾದಿಗಳೂ (ಸಿಕತಾಶನಪುತ್ರಾದಿ) ರಾವಣಾದಿಗಳೂ, ನನ್ನನ್ನಾರಾಧಿಸಿಯೇ ಅಷ್ಟು ಶೂರರೆನಿಸಿಕೊಂಡರು. ಚಂಡೀಶ್ವರನು ತನ್ನ ತಂದೆಯಾದ ಸೂರ್ಯನನ್ನು ಜಯಿಸಿದುದೂ, ಶ್ವೇತಕೇತುವು ಯಮನನ್ನು ಸೋಲಿಸಿದುದೂ, ಮಾರ್ಕಂಡೇಯ, ದಧೀಚಿ, ಗೌತಮ ಮೊದಲಾದವರು ಯಮ, ವಿಷ್ಣು, ಇಂದ್ರ

---

1 ಪುತ್ರಾದಯಃ (ಪಾ. ರ.)

ಮಾರ್ಕಂಡೇಯದಧೀಚಿಗೌತಮಮುಖಾ ವಿಷ್ಣುಂ ಯಮಂ ಚೇಂದ್ರಮ ।
ಪ್ರ್ಯಾಜೌ ತೇ ಜಯಶಾಲಿನೋ ಮಮ ಮಹಾಲಿಂಗಾರ್ಚನಾದೇವ ತೇ॥೫೯॥

ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಶಿವವಾಕ್ಯಂ ನಾಮ
ಪಂಚವಿಂಶೋಽಧ್ಯಾಯಃ

---

ಮೊದಲಾದ ದೇವತೆಗಳನ್ನು ಪರಾಭವಗೊಳಿಸಿದುದೂ, ನನ್ನ ಪೂಜಾಫಲದಿಂದಲೇ ಅಲ್ಲವೇ ? ಅಂತೂ ಒಟ್ಟಿನಲ್ಲಿ ಹಿಮವಂತರಾಜನೇ, ನನ್ನ ಅನುಗ್ರಹದಿಂದಲೇ ಸಕಲ ಕಾರ್ಯಗಳೂ ಸಿದ್ಧಿಸುವುವು ಎಂಬುದರಲ್ಲಿ ಲೇಶಮಾತ್ರವೂ ಸಂದೇಹವಿಲ್ಲ" ಎಂದು ಪರಶಿವನು ನಗರಾಜನಿಗೆ ಹೇಳಿದನು. ||೫೮-೫೯||

ಇಲ್ಲಿಗೆ ಶ್ರೀ ಶಿವರಹಸ್ಯದ ದ್ವಿತೀಯಾಂಶದಲ್ಲಿ ಶ್ರೀಶಿವವಾಕ್ಯನಿರೂಪಣವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಷಟ್ತ್ರಿಂಶೋಽಧ್ಯಾಯಃ

### ಶಿವವಾಕ್ಯಂ

|| ಸ್ಕಂದ ಉವಾಚ ||

**ನಂದೀ ವಿಜ್ಞಾಪಯಾಮಾಸ ಶ್ರುತ್ವಾ ಶಂಭೋರ್ವಚಸ್ತದಾ ।**
**ಪ್ರಣಮ್ಯ ವಿನಯೋಪೇತಃ ಪ್ರಾಂಜಲಿಃ ಕರುಣಾನಿಧಿಂ ॥೧॥**

|| ನಂದಿಕೇಶ ಉವಾಚ ||

**ಧನ್ಯೋ ಮಾನ್ಯೋಽಯಮಚಲೋ ದಯಯೇಶ ತವಾಮಲಃ ।**
**ಬ್ರಹ್ಮವಿಷ್ಣ್ವಾದಿಭಿರ್ದೇವೈರ್ನೈವ ತೇ ಗಿರಿರೀಕ್ಷಿತಃ ॥೨॥**

---

## ಇಪ್ಪತ್ತಾರನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳನ್ನು ಕುರಿತು ಅಲ್ಲಿ ನಡೆದ ಸಮಾಚಾರವನ್ನು ಮುಂದುವರಿಸುತ್ತಾ ಹೀಗೆಂದನು. "ಎಲೈ ಮಹರ್ಷಿವರ್ಯರೇ, ಹಾಗೆ ನಂದೀಶ್ವರನು ಹಿಮಾಲಯರಾಜನಿಗೆ ಕೈಲಾಸಪರ್ವತದ ಸೊಬಗನ್ನೆಲ್ಲಾ ತೋರಿಸಿದ ಮೇಲೆ ಶಂಕರನು ಪರ್ವತರಾಜನನ್ನು ಹೊಗಳಿದ್ದನ್ನು ನೋಡಿ, ಮತ್ತೆ ನಂದಿಯು ಕರುಣಾನಿಧಿಯಾದ ಶಂಕರನ ಎದುರಿನಲ್ಲಿ ಕೈಜೋಡಿಸಿ ನಿಂತು ಹೀಗೆ ಹೇಳಿ ಕೊಂಡನು. ||೧||

ಮಹೇಶ್ವರನೇ, ಈ ಪೂಜ್ಯನಾದ ನಗರಾಜನು ನಿನ್ನ ಅನುಗ್ರಹದಿಂದ ಕೈಲಾಸಪರ್ವತವನ್ನೆಲ್ಲಾ ಸಂಪೂರ್ಣವಾಗಿ ನೋಡಿ ಬಂದಿರುವನು. ಬ್ರಹ್ಮ, ವಿಷ್ಣು,

ನ ತಪೋಭಿರಥ ಪ್ರಾಪ್ಯಃ ಕೈಲಾಸೋ ನಗಸತ್ತಮಃ ।
ತ್ವತ್ಕೃಪಾಸಾರವಲನ್ಯೈರ್ನಗೋ ನೇತ್ರಾತಿಥೀಕೃತಃ ॥೩॥

ತವ ಪ್ರಮೋದರಸಭೃದ್ಧರಣೀಭೃದಯಂ ಶಿವ ।
ದರ್ಶನೇನಾದ್ಯ ವಿವಶಃ ಕೈಲಾಸಧರಣೀಭೃತಃ ॥೪॥

ತವಾಪಾರಮಹಾಧಾಮ್ನಿ ಕೈಲಾಸವರಮೌಲಿಕೇ ।
ಅನೇನ ಪರ್ವತೇಂದ್ರೇಣ ವಿಹಿತೋತ್ರ ಶಿವಾಲಯಃ ॥೫॥

ಶಶಿಧಾಮಶಿಲಾಕ್ಲಪ್ತಃ ಪ್ರಾಕಾರವರಗೋಪುರಃ ।
ಹಿಮಾಚಲೇಶ್ವರಂ ನಾಮ ಲಿಂಗಂ ಪ್ರಾತಿಷ್ಠಿಪನ್ನಗಃ ॥೬॥

ಪಂಚಾಮೃತನಿಷೇಕೈಶ್ಚ ಚಂದನೈರ್ಬಿಲ್ವಪೂಜನೈಃ ।
ಧೂಪದೀಪೈಶ್ಚ ನೈವೇದ್ಯೈಸ್ತಾಂಬೂಲಛತ್ರಚಾಮರೈಃ ॥೭॥

---

ರುದ್ರರೇ ಮೊದಲಾದವರಿಗೂ ಈ ಪರ್ವತವು ಅಷ್ಟು ಸುಲಭದೃಷ್ಟವಾಗಿಲ್ಲ. ಎಂತೆಂತಹ ತಪಸ್ಸಿನಿಂದಲೂ ದರ್ಶನಮಾಡಲಾಗದ ಈ ಪರ್ವತವನ್ನು ನಿನ್ನ ಕೃಪಾ ದೃಷ್ಟಿಯಿಂದ ನಗರಾಜನು ನೋಡಿ ಆನಂದಪಟ್ಟಿರುವನು. ||೨-೩||

ನಿನ್ನ ದರ್ಶನದಿಂದಲೂ, ನಿನಗೆ ಆಶ್ರಯವಾದ ಕೈಲಾಸದ ಪ್ರಕೃತಿಸೌಂದ ರ್ಯದ ನೋಟದಿಂದಲೂ, ಈ ನಗರಾಜನು ಆನಂದಾಂಬುಧಿಯಲ್ಲಿ ಮುಳುಗಿಹೋಗಿ ರುವನು. ಅಷ್ಟೇ ಅಲ್ಲದೆ, ನಿನ್ನ ಅನಂತ ಸಂಪತ್ತಿನಿಂದ ರಂಜಿತವಾಗಿರುವ ಕೈಲಾಸ ಶಿಖರದ ಶಿವಾಲಯದಲ್ಲಿ ಶಿವಾರ್ಚನೆ ಮಾಡುತ್ತಾ ಸ್ಥಿರವಾಗಿ ನಿಂತಿರುವನು. ||೪-೫||

ಅಲ್ಲಿ ಚಂದ್ರಕಾಂತಶಿಲೆಯಿಂದಲೇ, ಪ್ರಾಕಾರ ಮತ್ತು ಗೋಪುರ ಸಮೇತ ವಾದ ಶಿವಾಲಯವೊಂದನ್ನು ನಿರ್ಮಾಣಮಾಡಿರುವನು. ಅದರಲ್ಲಿ ಹಿಮಾಚಲೇಶ್ವರ ವೆಂಬ ಶಿವಲಿಂಗವನ್ನು ತನ್ನ ಹೆಸರಿನಿಂದ ಪ್ರತಿಷ್ಠೆಮಾಡಿರುವನು. ಅದಕ್ಕೆ ಪಂಚಾಮೃತಗಳಿಂದಲೂ, ಗಂಧಪುಷ್ಪಾದಿಗಳಿಂದಲೂ, ಬಿಲ್ವಪತ್ರಾದಿಗಳಿಂದಲೂ, ಧೂಪದೀಪನೈವೇದ್ಯಾದಿಗಳಿಂದಲೂ, ತಾಂಬೂಲ, ಛತ್ರಚಾಮರಾದ್ಯುಪಚಾರಗಳಿಂ ದಲೂ ಆ ಶಿವಲಿಂಗವನ್ನು ಬಹುವಾಗಿ ಸೇವಿಸುತ್ತಿರುವನು. ||೬-೭||

ವಾದ್ಯಸಂಘಾರವೈಶ್ಚೈವ ಮೇನಯಾಪೂಜಯನ್ನಗಃ ।
ಮೈನಾಕೇನ ಚ ಲಿಂಗಂ ತೇ ಸ್ವಮೌಲಿಶಶಿಧಾಮುಜಂ ॥೮॥

ತೇನ ಸ್ತುತಂ ಮಹಾದೇವ ತತ್ಸ್ತುತಿಂ ಶ್ರುಣು ಶಂಕರ ॥೯॥

॥ ನಂದೀಶ್ವರ ಉವಾಚ ॥

ಉಮಾಸಹಾಯ ಉರುಕಾಯ ಭವಾದಿಭಾವ
ಪಾಪಾದ್ವಿಹಾಯ ಗುಣರೂಪವಿಹೀನಕಾಯ ।
ದಗ್ಧಾಂಧಕತ್ರಿಪುರಮನ್ಮಥಕಾಯ ಶಂಭೋ
ಮಾಯಾಮಯಾದಿಜನತಾಸು ಚ ಮೋಚಯಾವ ॥೧೦॥

॥ ಸ್ಕಂದ ಉವಾಚ ॥

ನಂದೀಶತಸ್ಸ್ತುತಿಂ ಶ್ರುತ್ವಾ ಸಂತುಷ್ಟೋ ನಿತರಾಂ ಹರಃ ।
ತಮಭ್ಯುವಾಚ ಹೃಷ್ಟಾತ್ಮಾ ಸ್ವಲಿಂಗಾರ್ಚನತಃ ಶಿವಃ ।
ಲಿಂಗಪ್ರತಿಷ್ಠಯಾ ತುಷ್ಟಶ್ಚಾಷ್ಟಮೂರ್ತಿರುವಾಚ ತಂ ॥೧೧॥

---

ಅನೇಕ ವಾದ್ಯಧ್ವನಿಗಳಿಂದ ಕೂಡಿದವನಾಗಿ ಹಿಮವಂತನು ಪತ್ನೀಪುತ್ರರೊಡಗೂಡಿ ಹಿಮಾಚಲೇಶ್ವರಲಿಂಗವನ್ನು ಭಕ್ತಿಯಿಂದರ್ಚಿಸಿ ಈ ರೀತಿ ಪ್ರಾರ್ಥನೆ ಮಾಡಿದನು. ಮಹೇಶ್ವರನೇ, ಅವನು ಪ್ರಾರ್ಥಿಸಿದ ಕ್ರಮವನ್ನು ಈಗ ನಿನಗೆ ವಿವರಿಸಿ ಹೇಳುವೆನು ಲಾಲಿಸಬೇಕು ಎಂದು ನಂದೀಶ್ವರನು ಹಿಮಾಲಯ ರಾಜನ ಸ್ತುತಿವಚನಗಳನ್ನು ಅನುವಾದಮಾಡಲಾರಂಭಿಸಿದನು. ॥೮-೯॥

"ಪಾರ್ವತಿಯೇ, ಭಯಂಕರಾಕಾರನೇ, ಸಂಸಾರಸಂಬಂಧದಿಂದ ದೂರನಾಗಿರುವವನೇ, ನಾಮರೂಪಗುಣಾದಿಗಳನ್ನು ದೂರೀಕರಿಸಿರುವ ಮಹೇಶ್ವರನೇ, ನೀನು ಅಂಧಕಾಸುರ, ತ್ರಿಪುರಾಸುರ, ಮನ್ಮಥ ಮುಂತಾದ ಸೊಕ್ಕಿದ ಪುರುಷರನ್ನೆಲ್ಲಾ ಧ್ವಂಸಮಾಡಿರುವೆಯಲ್ಲವೇ? ಶಂಕರನೇ, ಈ ಮಾಯಾಸಂಬಂಧದಿಂದ ನಮಗೆ ಒದಗುವ ಜನನಮರಣಾದಿದುಃಖಗಳನ್ನು ಪರಿಹರಿಸಿ ನಮ್ಮನ್ನು ರಕ್ಷಿಸುವವನಾಗು" ಎಂದು ಪ್ರಾರ್ಥಿಸಿದನು. ॥೧೦॥

ಹಾಗೆ ಹಿಮವಂತನು ಮಾಡಿದ ಪ್ರಾರ್ಥನೆಯನ್ನು ನಂದೀಶ್ವರನ ಮೂಲಕ ಕೇಳಿದ ಶಂಕರನು ಅದಕ್ಕೆ ಮೆಚ್ಚಿ ಹಿಮವಂತನು ಮಾಡಿದ ಲಿಂಗಾರ್ಚನೆಗೂ,

ಧನ್ಯಸ್ತ್ವಂ ಮಮ ಕೈಲಾಸೇ ಮಲ್ಲಿಂಗಾಲಯಕಲ್ಪಕಃ ।
ಪ್ರತಿಷ್ಠಿತಂ ಮಹಾಲಿಂಗಂ ತೇನ ಸರ್ವಮನುಷ್ಠಿತಂ ॥೧೨॥

ತೇನ ಯಾಗಾಃ ಕೃತಾಸ್ಸಮ್ಯಗ್ದಕ್ಷಿಣಾನ್ನಾದಿಭಿಸ್ಸದಾ ।
ತಪಾಂಸಿ ತೇನ ತಪ್ತಾನಿ ಕೃಚ್ಛ್ರಚಾಂದ್ರಾಯಣಾದಿಭಿಃ ॥೧೩॥

ತ್ರೈಲೋಕ್ಯಂ ತೇನ ಭೂಪೃಷ್ಠೇ ಭೂಧರೇಶ ಪ್ರತಿಷ್ಠಿತಂ ।
ವನೇ ಪುರೇ ವಾ ಗ್ರಾಮೇ ವಾ ಪರ್ವತೇ ವಾ ಸರಿತ್ತಟೇ ॥೧೪॥

ಗಂಗಾತೀರೇ ಕೋಟಿಗುಣಂ ತತಃ ಕೋಟಿಗುಣಂ ನಗ ।
ಕಿಂ ಪುನರ್ಮಮ ಕೈಲಾಸೇ ವಿಷ್ಣುಬ್ರಹ್ಮಾದಿದುರ್ಲಭೇ ॥೧೫॥

---

ಲಿಂಗಪ್ರತಿಷ್ಠೆಗೂ ತೃಪ್ತಿಹೊಂದಿದವನಾಗಿ ಹಿಮಾಲಯರಾಜನನ್ನು ಕುರಿತು ಹೀಗೆಂದನು. ||೧೧||

" ಎಲೈ ರಾಜನೇ, ನೀನೇ ಧನ್ಯನು. ಕೈಲಾಸಪರ್ವತದಲ್ಲಿ ಶಿವಲಿಂಗಾಲಯವನ್ನು ನಿರ್ಮಿಸಿ, ಅಲ್ಲಿ ನಿನ್ನ ಹೆಸರಿನಿಂದ ಶಿವಲಿಂಗವೊಂದನ್ನು ಪ್ರತಿಷ್ಠಿಸಿರುವೆ. ಇದರಿಂದ ನೀನು ಭೂರಿದಕ್ಷಿಣೆಗಳಿಂದ ಕೂಡಿದ ಅನೇಕ ಯಾಗಗಳನ್ನು ಆಚರಿಸಿದಂತಾಗಿರುವುದು. ಬಹುಕಾಲ ತಪಸ್ಸನ್ನಾಚರಿಸಿ, ಕೃಚ್ಛ್ರಚಾಂದ್ರಾಯಣಾದಿ ವ್ರತಗಳನ್ನು ಆಚರಿಸಿದವರಿಗೆ ಲಭಿಸುವ ಪುಣ್ಯವಿಶೇಷವು ನಿನಗೆ ಇಂದು ದೊರಕಿರುವುದು. ||೧೨-೧೩||

ಭೂಲೋಕದಲ್ಲಿ ಒಂದು ಕಾಡಿನಲ್ಲಿಯೋ, ಊರಿನಲ್ಲಿಯೋ, ಹಳ್ಳಿಯಲ್ಲಿಯೋ, ಯಾವುದೋ ಪರ್ವತ, ನದೀ ಈ ಪ್ರದೇಶಗಳಲ್ಲಿಯೋ ಶಿವಪ್ರತಿಷ್ಠೆ ಮಾಡುವುದು ಅತ್ಯಂತ ಪುಣ್ಯಕರವೆಂದು ಹೇಳಿದೆ. ಅದರಲ್ಲೂ ಗಂಗಾತೀರದಲ್ಲಿ ಮಾಡುವ ಶಿವಪ್ರತಿಷ್ಠೆಗೆ ಕೋಟಿಪಾಲು ಹೆಚ್ಚು ಪುಣ್ಯವಿರುವುದೆಂದೂ ಉಕ್ತವಾಗಿದೆ. ಹಾಗಿರುವಾಗ ಬ್ರಹ್ಮಾದಿಗಳಿಗೂ ಅತ್ಯಂತ ದುರ್ಲಭವೆನಿಸಿರುವ ಈ ಕೈಲಾಸಪರ್ವತದಲ್ಲಿಯೇ ನೀನು ಶಿವಪ್ರತಿಷ್ಠೆಮಾಡಿರುವುದರಿಂದ ನಿನ್ನ ಸುಕೃತವೆಷ್ಟೆಂದು ಹೇಳಲಿ ! ||೧೪-೧೫||

ಧನ್ಯಸ್ತ್ವಂ ಮಮ ಹೃತ್ಪದ್ಮಸದ್ಮಗೋಸಿ ನಗೋತ್ತಮ ।
ತವಾದೇಯಂ ಕಿಮಸ್ತ್ಯತ್ರ ತ್ವಮೇವಾಹಂ ನ ಸಂಶಯಃ ॥೧೬॥

ತ್ವಮೇವಾಚಾರಮೂರ್ತಿರ್ಮೇ ಯತೋ ಲಿಂಗವರಾಶ್ರಯಃ ।
ಕೇದಾರೇಶ್ವರಲಿಂಗಂ ತೇ ಯತಸ್ತ್ವನ್ಮೌಲಿಸಂಸ್ಥಿತಂ ॥೧೭॥

ತಲ್ಲಿಂಗದರ್ಶನಾದೇವ ಮುಕ್ತಿಸಾಮ್ರಾಜ್ಯಮಸ್ತು ತೇ ।
ದೇವೈಶ್ಚ ಮುನಿಭಿಶ್ಚೈವ ಗಣೇಂದ್ರೈರಪಿ ಭೂಧರ ॥೧೮॥

ತವ ಮೌಲೌ ತಪಸ್ತಪ್ತಂ ಕೇದಾರೇಶ್ವರಪೂಜಕೈಃ ।
ತಪಸ್ಸ್ಥಾನಂ ಮಹೋತ್ಕೃಷ್ಟಂ ತವ ಮೌಲಿರ್ನಗೋತ್ತಮ ॥೧೯॥

ಧನ್ಯಸ್ತ್ವಂ ಸರ್ವಮಾನ್ಯೋಸಿ ತ್ವತ್ತೋ ಜಾತೇಯಮಂಬಿಕಾ ।
ಮನ್ಯೈಷಾ ಪರಮಾ ಮೂರ್ತಿರಿಯಂ ಶಕ್ತಿಸ್ತದಾ ಮಮ ॥೨೦॥

ಯಸ್ಯಾಃ ಕಟಾಕ್ಷಲೇಶೇನ ಜಗದೇತಚ್ಚರಾಚರಂ ।
ಯಸ್ಯಾಃ ಪದಾಂಬುಜದ್ವಂದ್ವದರ್ಶನೇನ ಸುರಾಸುರಾಃ ॥೨೧॥

---

ಪರ್ವತರಾಜನೇ, ನೀನು ಧನ್ಯನು. ನೀನು ನನ್ನ ಹೃದಯಕುಹರದಲ್ಲಿ ಅಡಗಿರುವವನಾಗಿರುವೆ. ಅತ್ಯಂತ ಪ್ರೀತಿಪಾತ್ರನಾದ ನಿನಗೆ ಕೊಡದಿರುವ ವರವಾವುದಿರುವುದು ? ಹೆಚ್ಚೇನು, ನೀನೇ ನಾನು. ನಾನೇ ನಿನಗೆ ವಶನಾಗಿರುವೆನು. ಇನ್ನೂ ಹೆಚ್ಚಿನದಾಗಿ ಕೇದಾರೇಶ್ವರಲಿಂಗವನ್ನು ನೀನು ನಿನ್ನ ಶಿಖರಪ್ರದೇಶದಲ್ಲಿ ಹೊಂದಿರುವೆಯಲ್ಲವೆ ? ॥೧೪-೧೫-೧೬-೧೭॥

ಆ ಕೇದಾರೇಶ್ವರಲಿಂಗದರ್ಶನದಿಂದಲೇ ನಿನಗೆ ಅತಿಶಯವಾದ ಮುಕ್ತಿಯು ದೊರಕುವುದು. ಅಲ್ಲದೆ ದೇವತೆಗಳೂ, ಮುನಿಗಳೂ, ಗಣನಾಯಕರೂ, ನಿನ್ನ ಶಿಖರಕ್ಕೆ ಬಂದು, ಕೇದಾರೇಶ್ವರಲಿಂಗವನ್ನು ಭಜಿಸುತ್ತಾ, ಅದೇ ತಪಸ್ಸಿಗೆ ಸಿದ್ಧಾಶ್ರಮವೆಂದು ಭಾವಿಸಿ, ಅಲ್ಲಿಯೇ ಚಿರಕಾಲ ತಪಸ್ಸನ್ನಾಚರಿಸಿ ಕೊನೆಗೆ ಮುಕ್ತರಾಗುವರು. ॥೧೮-೧೯॥

ಎಲ್ಲಕ್ಕೂ ಹೆಚ್ಚಿನದಾಗಿ ಪ್ರಪಂಚದ ಸೃಷ್ಟಿಸ್ಥಿತಿಲಯಾದಿಗಳನ್ನು ಕೇವಲ ತನ್ನ ಕಟಾಕ್ಷದಿಂದಲೇ ನಡೆಸುವ ಈ ನನ್ನ ದಿವ್ಯ ಶಕ್ತಿಸ್ವರೂಪಳಾದ ದೇವಿಯು ನಿನ್ನ ಪುತ್ರಿಯಾಗಿ ಜನಿಸಿರುವಳಲ್ಲವೆ? ಈಕೆಯ ಪಾದಕಮಲವನ್ನೇ ಸೇವಿಸುತ್ತಾ

ನಿರ್ವೃತಾಃ ಪರಮಾಂ ಮುಕ್ತಿಂ ಲಭಂತೇ ಮತ್ಪ್ರಸಾದತಃ ।
ಮಾ ವಿಚಾರಯ ಶೈಲೇಂದ್ರ ವರಂ ಮತ್ತೋಽಭಿಕಾಂಕ್ಷಯ ॥೨೨॥

ಪ್ರಸನ್ನೋಽಸ್ಮಿ ನಗಶ್ರೇಷ್ಠ ಮಮ ಲಿಂಗಪ್ರತಿಷ್ಠಯಾ ।
ಕೈಲಾಸಮೌಲೌ ಶೈಲೇಂದ್ರ ಮುಕ್ತೋಽಸಿ ಮಮ ಪೂಜಯಾ ॥೨೩॥

॥ ಸ್ಕಂದ ಉವಾಚ ॥

ಹಿಮವಾನ್ ಶಂಕರಾಚ್ಛ್ರುತ್ವಾ ವಚನಂ ಚಾತಿಹರ್ಷಿತಃ ।
ಮೌಲೌ ಕರಾಂಜಲಿಂ ಕೃತ್ವಾ ಪ್ರಣಮ್ಯ ಪರಮೇಶ್ವರಂ ।
ಪ್ರಾಹಾನಂದಾಶ್ರುಧಾರೋದ್ಯತ್ಪುಲಕಾಂಗೋ ಮಹೀಧರಃ ॥೨೪॥

॥ ಹಿಮವಾನುವಾಚ ॥

ಕಿಮನ್ಯೇನ ವರೇಣೇಶ ಯತೋ ದೃಷ್ಟಂ ಪದಾಂಬುಜಂ ।
ತವಾದ್ಯ ದೇವದೇವಸ್ಯ ಧನ್ಯೋಽಸ್ಮಿ ನಗಸಂಘಕೇ ॥೨೫॥

---

ಅನೇಕ ದೇವಾಸುರರೂ, ಋಷಿವೃಂದಗಳೂ ಶಾಶ್ವತವಾದ ಮುಕ್ತಿಯನ್ನು ಪಡೆದವರಾಗಿರುವರು. ಇದರಿಂದಲೂ ನೀನು ಸರ್ವಮಾನ್ಯನೆನಿಸಿಕೊಂಡಿರುವೆ. ॥೨೦-೨೧॥

ದೇವಿಯ ಆರಾಧನೆಯಿಂದ ನಾನು ತೃಪ್ತನಾಗಿ ದೇವ್ಯಾರಾಧಕರಿಗೆ ಸಕಲ ವರಗಳನ್ನೂ ನಾನು ದಯಪಾಲಿಸಿರುವೆನು. ನಗರಾಜನೇ, ನೀನು ಯೋಚಿಸಬೇಡ. ಬೇಕಾದ ವರಗಳನ್ನು ಕೇಳಿಕೋ. ಶಿವಲಿಂಗಪ್ರತಿಷ್ಠೆಮಾಡಿರುವುದರಿಂದ ನಾನು ನಿನಗೆ ಪ್ರಸನ್ನನಾಗಿರುವೆನು. ಅಲ್ಲದೆ ಇಲ್ಲಿಗೆ ಬಂದು ದೃಢಚಿತ್ತತೆಯಿಂದ ಶಿವಲಿಂಗಾರಾಧನೆ ಗೈದಿರುವುದರಿಂದ ನಿಜವಾಗಿಯೂ ನೀನು ಮುಕ್ತನೆನಿಸಿರುವೆ. ॥೨೨-೨೩॥

ಹೀಗೆಂದು ಹೊಗಳಿದ ಶಂಕರನ ಮಾತುಗಳನ್ನು ಕೇಳಿ, ಹಿಮವಂತನು ಶಿರಸ್ಸಿನಲ್ಲಿ ತನ್ನ ಕೈಗಳನ್ನಿಟ್ಟು ಸಾಷ್ಟಾಂಗಪ್ರಣಾಮಮಾಡಿ, ಆನಂದಾಶ್ರುವಿನಿಂದಲೂ, ರೋಮಾಂಚದಿಂದಲೂ ಕೂಡಿದವನಾಗಿ ಮಹೇಶ್ವರನನ್ನು ಕುರಿತು ಹೀಗೆಂದನು. ॥೨೪॥

ಮಹೇಶ್ವರನೇ, ನಿನ್ನ ಪಾದಾಂಬುಜದರ್ಶನವಾದಮೇಲೆ ನನಗೆ ಬೇರೆ ವರವಿನ್ನೇಕೆ? ಈ ಪರ್ವತಗಳ ಗುಂಪಿನಲ್ಲಿ ನನಗಿಂತ ಧನ್ಯನಾದವನು ಮತ್ತಾವನಿರುವನು? ಎಷ್ಟುಕಾಲ ತಪಸ್ಸು ಮಾಡಿದ್ದರೂ ಈ ಶಿವಲಿಂಗಗಳ ಸಮೂಹ

ತಪಸಾ ನೋ ನ ಶಕ್ಯಂ ತೇ ಕೈಲಾಸಸ್ಯಾಸ್ಯ ದರ್ಶನಂ ।
ಲಿಂಗಸೌಧಾಶ್ಚ ವಿವಿಧಾ ಮೌಲಿಕುಂಭಪತಾಕಕಾಃ ॥೨೭॥

ದೃಷ್ಟಾಹ್ಯನೇಕಾಸ್ಸದೃಶಾಃ ಕೈಲಾಸೇಶೋಽಪಿ ವೀಕ್ಷಿತಃ ।
ಅಂಬಿಕೇಶೋ ಮಯಾ ದೃಷ್ಟೋ ದೇವೀಶೋಽಪಿ ಸ್ತುತೋ ಮಯಾ ॥೨೮॥

ಸ್ಕಂದೇಶಶ್ಚ ಗಣೇಶಶ್ಚ ಮಯ್ಯೈಕ್ಷಿ ಕುಮುದೇಶ್ವರಃ ।
ಸಭಾಶ್ಚಾಪಿ ಮಯಾ ದೃಷ್ಟಾ ಗೋಪುರಾಣ್ಯಪಿ ತೇ ವಿಭೋ ॥೨೯॥

ಪ್ರಾಕಾರಾಃ ಪರಿಘಾಕಾರಾಸ್ಸಾಗರಾಶ್ಚ ತಥಾದ್ರಯಃ ।
ಮಂಟಪಾವಲಿಸಂಘಾಶ್ಚ ಮಮ ನೇತ್ರಾತಿಥೀಕೃತಾಃ ॥೩೦॥

ಕಿಂ ಮುಕ್ತ್ಯಾ ಮಮ ದೇವೇಶ ದೇವ್ಯಾ ದರ್ಶನತೋ ಮಮ ।
ತವ ಪಾದಾಂಬುಜದ್ವಂದ್ವೇ ಭಕ್ತಿರಸ್ತು ಸದಾ ಮಮ ॥೩೧॥

---

ಗಳಿಂದಲೂ, ಈ ದಿವ್ಯ ಕಲಶ, ಪ್ರಾಕಾರ ಇವುಗಳಿಂದಲೂ ತುಂಬಿ ತುಳುಕಾಡುತ್ತಿರುವ ಕೈಲಾಸಗಿರಿಯನ್ನು ನೋಡಲು ಸಾಧ್ಯವಾಗುತ್ತಿದ್ದಿತೆ? ॥೨೬-೨೭॥

ಈ ಕೈಲಾಸದಲ್ಲಿರುವ ಮನೋಹರವಾದ ದೃಶ್ಯಗಳನ್ನೂ ನೋಡಿದೆನು. ಅಂಬಿಕೇಶ್ವರ, ದೇವೀಶ್ವರ, ಸ್ಕಂದೇಶ್ವರ, ಗಣೇಶ್ವರ, ಕುಮುದೇಶ್ವರ ಮುಂತಾದ ಪವಿತ್ರವಾದ ಶಿವಲಿಂಗಗಳ ದರ್ಶನಮಾಡಿದೆನು. ನಿನ್ನ ಅತಿ ಪವಿತ್ರವೂ ಮನೋಹರವೂ ಆದ ನಾಟ್ಯಸಭೆಗಳನ್ನೂ, ಗೋಪುರಗಳನ್ನೂ ಸಂತೋಷದಿಂದ ನೋಡಿದೆನು. ॥೨೮-೨೯॥

ಅನೇಕ ಪ್ರಾಕಾರಗಳನ್ನೂ, ಕಂದಕಗಳಂತಿರುವ ಸಾಗರಗಳನ್ನೂ, ಸಮುದ್ರಗಳನ್ನೂ, ಮಂಟಪಗಳ ಸಮೂಹವನ್ನೂ, ನೋಡಿ ಆನಂದಪಟ್ಟೆನು. ಅಲ್ಲದೆ ಜಗನ್ಮಾತೆಯಾದ ದೇವಿಯ ದರ್ಶನಾನಂತರ ನನಗೆ ಇನ್ನಾವ ಮೋಕ್ಷಸುಖವು ತಾನೇ ಬೇಕಾದೀತು? ಪರಮೇಶ್ವರನೇ, ಯಾವಾಗಲೂ ನಿನ್ನ ಪಾದಕಮಲದಲ್ಲಿಯೇ ನನಗೆ ಅಚಲವಾದ ಭಕ್ತಿಯಿರುವಂತೆ ಅನುಗ್ರಹಿಸಿ ಕಾಪಾಡು. ॥೩೦-೩೧॥

ಅಚಲಸ್ಯಾಪಿ ಮೇ ದೇವ ಹ್ಯಚಲಂ ಮೇ ಮನಸ್ತ್ವಯಿ ।
ದೇವ್ಯಾಃ ಪ್ರಸಾದತೋ ಮೇನಾ ಪಶ್ಯಂತೀ ತವ ಹ್ಯನ್ನಗಂ ॥೩೨॥

ವಿಸ್ಮಯಾನಂದಹೃದಯಾ ಮೈನಾಕೋಪ್ಯಯಮೀಶ್ವರ ।
ದೇವ್ಯಾಶ್ಚಿರಂ ಸಹಾವಾಸಾತ್ತವ ಕೈಲಾಸಪರ್ವತೇ ॥೩೩॥

ದೇವೀಪದಾಂಬುಜದ್ವಂದ್ವಂ ಕಿಂಚಿತ್ಕಾಲಂ ಮಯಿ ಪ್ರಭೋ ।
ಮೌಲೌ ಮೇ ದಧತಾಮದ್ಯ ಮಮ ದೇವೀಪ್ರಸಾದತಃ ॥೩೪॥

ತ್ವತ್ಪ್ರಸಾದಾತ್ಸನಾಥಂ ಮಾಂ ಕುರ್ವಂತೀ ಪರಮೇಶ್ವರೀ ।
ಕೇದಾರೇಶಂ ಮಹಾಲಿಂಗಂ ಮಮ ಮೌಲಿಸ್ಥಿತಂ ಶಿವ ॥೩೫॥

ಸಮರ್ಚಯತು ದೇವೀಯಂ ಕಿಂಚಿತ್ಕಾಲಂ ಸಹೋಷಿತಾ ।
ಮೇನಯಾ ರಮತಾಮೀಶಾ ಲೋಕಯಾತ್ರೇಯಮೀದೃಶೀ ॥೩೬॥

ದೂರ್ವಾಸಾಪಿ ಮಹಾಯೋಗೀ ತಪಸ್ತಪ್ಸ್ಯತಿ ದಾರುಣಂ ।
ಮುನಿಭಿಶ್ಶೈವವರ್ಯೈಶ್ಚ ಭಸ್ಮರುದ್ರಾಕ್ಷಭೂಷಣಃ ॥೩೭॥

---

ಸ್ವಭಾವವಾಗಿಯೇ ನಾನು ಅಚಲನಾಗಿರುವುದರಿಂದ ನನ್ನ ಮನಸ್ಸೂ ನಿನ್ನ ವಿಷಯದಲ್ಲಿ ಅಚಲವಾಗಿರುವಂತೆ ಅನುಗ್ರಹಿಸು. ದೇವಿಯ ಅನುಗ್ರಹದಿಂದ ಮೈನಾಕ ಮತ್ತು ಮೇನಾದೇವಿಯರು, ಈ ದಿವ್ಯ ಕೈಲಾಸಕ್ಷೇತ್ರವನ್ನೂ, ನಿನ್ನ ಪಾದಾಂಬುಜವನ್ನೂ ದರ್ಶನಮಾಡಿ, ಪಾರ್ವತಿಯ ಜೊತೆಯಲ್ಲಿ ಬಹುಕಾಲ ವಾಸ ಮಾಡಿದ್ದರಿಂದ ತಾವು ಧನ್ಯರೆಂದು ತಿಳಿದುಕೊಂಡಿರುವರು. ॥೩೨-೩೩॥

ದೇವಿಯ ಪಾದಕಮಲವನ್ನು ಕೆಲವು ಕಾಲವಾದರೂ ನನ್ನ ಶಿಖರದಲ್ಲಿ ಧರಿಸಿ ನಾನು ಧನ್ಯನೆನಿಸಬೇಕೆಂದಿರುವೆನು. ನಿನ್ನ ಅನುಗ್ರಹದಿಂದ ಕೇದಾರೇಶ್ವರಲಿಂಗವು ನನ್ನ ಶಿಖರಭಾಗದಲ್ಲಿ ನಿಂತು ನನ್ನನ್ನು ಸನಾಥನನ್ನಾಗಿ ಮಾಡಿರುವುದು.

ಆದರೆ ಈಗ ನನ್ನ ಪ್ರಾರ್ಥನೆಯೇನೆಂದರೆ, ಪಾರ್ವತಿಯು ನನ್ನ ಮನೆಯಲ್ಲಿ ತಾಯಿಯೊಡನೆ ಕೆಲವು ಕಾಲ ವಾಸಿಸುತ್ತಾ, ಅಲ್ಲಿಯೇ ಇರುವ ಕೇದಾರೇಶ್ವರ ಲಿಂಗವನ್ನು ಪೂಜಿಸುತ್ತಾ ಇರಲಿ ಎಂಬುದೇ. ಹೀಗೆ ಕನ್ಯಾಪಿತೃಗಳು ಕೇಳಿಕೊಳ್ಳುವುದು ಪ್ರಪಂಚದ ವಾಡಿಕೆ. ಅಲ್ಲದೆ ದೂರ್ವಾಸಮಹರ್ಷಿಯು, ಮುನಿಗಳಿಂದಲೂ,

ಭಸ್ಮಶಾಯೀ ರುದ್ರಜಾಪೀ ಕೇದಾರೇಶಾರ್ಚನೇ ರತಃ ।
ತ್ರಿಕಾಲಂ ಬಿಲ್ವಪತ್ರೈಶ್ಚ ತವ ಭಕ್ತ್ಯಾಪ್ಯನನ್ಯಧೀಃ ॥೩೮॥
ಅನುಗ್ರಹೀಷ್ವ ತಮುನು ಮಮ ಮೌಲಿಕೃತಾಸ್ಪದಂ ॥೩೯॥

॥ ಸ್ಕಂದ ಉವಾಚ ॥

ಇತ್ಯುಕ್ತಂ ಗಿರಿಶೇನೇದಂ ಗಿರೀಶೋ ಭಕ್ತವತ್ಸಲಃ ।
ಪ್ರಾಹ ದೇವೀಂ ಮಹಾದೇವೋ ವೀಕ್ಷ್ಯ ತಂ ಹಿಮಭೂಧರಂ ॥೪೦॥

ಏಷ ಪ್ರಾರ್ಥಯತೇ ಶೈಲಸ್ತ್ವಾಗಮನಮುತ್ತಮಂ ।
ಸ್ವಮೌಲಿಧಾಮಲಿಂಗಂ ಚ ಕೇದಾರೇಶಂ ಚ ವೀಕ್ಷಿತುಂ ॥೪೧॥

ಮದಾಜ್ಞಯೈವ ದೂರ್ವಾಸಾಸ್ತಪಸ್ತಪ್ಯತಿ ತತ್ರ ಹಿ ।
ಧನ್ಯಂ ಕುರು ನಗಶ್ರೇಷ್ಠಂ ಮೇನಾಂ ಮೈನಾಕಮೀಶ್ವರಿ ॥೪೨॥

---

ಶಿವಾನುಗ್ರಹಕಾಂಕ್ಷಿಗಳಿಂದಲೂ ಕೂಡಿದವನಾಗಿ ಭಸ್ಮರುದ್ರಾಕ್ಷಿಗಳನ್ನು ಧರಿಸಿ ಭಯಂಕರವಾದ ರೀತಿಯಲ್ಲಿ ತಪಸ್ಸನ್ನಾಚರಿಸುತ್ತಿರುವನು. ॥೩೭॥

ತಪಸ್ಸುಮಾಡುವಾಗ ದೂರ್ವಾಸಋಷಿಯು ಭಸ್ಮರಾಶಿಯಲ್ಲಿ ಕುಳಿತವನಾಗಿ ತ್ರಿಕಾಲದಲ್ಲಿಯೂ, ಬಿಲ್ವಪತ್ರಾದಿಗಳಿಂದ ಕೇದಾರೇಶ್ವರನನ್ನು ಅರ್ಚಿಸುತ್ತಾ, ರುದ್ರಮಂತ್ರವನ್ನೇ ಜಪಿಸುತ್ತಿರುವನು. ಅನನ್ಯಮನಸ್ಕನಾಗಿ ನಿನ್ನನ್ನೇ ಧ್ಯಾನ ಮಾಡುತ್ತಾ ನನ್ನ ಶಿಖರಭಾಗದಲ್ಲಿ ವಾಸಿಸುತ್ತಿರುವ ಆ ದೂರ್ವಾಸಮಹರ್ಷಿಗೆ ಅನುಗ್ರಹಪ್ರದಾನಮಾಡು." ॥೩೮-೩೯॥

ಹೀಗೆ ಕೇಳಿಕೊಂಡ ಹಿಮವಂತನ ಮಾತಿನಂತೆ ಭಕ್ತವತ್ಸಲನಾದ ಮಹಾ ದೇವನು ದೇವಿಯನ್ನೂ ಹಿಮಾಲಯ ರಾಜನನ್ನೂ ಕುರಿತು ಹೀಗೆಂದನು. ॥೪೦॥

ಎಲೌ ದೇವಿಯೇ, ನಿಮ್ಮ ತಂದೆಯು ನಿನ್ನನ್ನು ಕರೆದುಕೊಂಡು ಹೋಗಲು ತವಕಪಡುತ್ತಿರುವನು. ಅಲ್ಲಿ ನೀನು ಕೇದಾರೇಶ್ವರಲಿಂಗವನ್ನು ನೋಡಲಿ ಎಂದೂ ಅಪೇಕ್ಷಿಸುತ್ತಿರುವನು. ಅಲ್ಲದೆ ಅಲ್ಲಿ ದೂರ್ವಾಸಮಹರ್ಷಿಯು ನನ್ನ ಆಜ್ಞೆಯಂತೆ ತಪಸ್ಸುಮಾಡುತ್ತಿರುವನು. ನೀನು ಈಗ ಹಿಮಾಲಯಕ್ಕೆ ಹೋಗಿ ನಿಮ್ಮ ತಂದೆ ತಾಯಿಗಳಿಗೂ, ಮೈನಾಕನಿಗೂ, ದೂರ್ವಾಸಮಹರ್ಷಿಗೂ ಅನುಗ್ರಹಪ್ರದಾನ ಮಾಡು. ॥೪೧-೪೨॥

ಗಚ್ಛ ಲಗ್ನೇ ಶುಭೇ ದೇವವಿಮಾನೇನಾರ್ಕರೋಚಿಷಾ ।
ಗಣೇಶೈಶ್ಚ ನಗೇಶೈಶ್ಚ ಸೇವಿತಂ ನಗಸದ್ಮ ತತ್ ॥೪೩॥

ದೂರ್ವಾಸಸಂ ಮುನಿವರಂ ಅನುಗೃಹ್ಯಾರ್ಚಯೇಶ್ವರಂ ।
ಕೇದಾರೇಶಂ ತವ ಪಿತುರ್ವರವೌಲಿ ಸಮಾಶ್ರಯಂ ॥೪೪॥

ವಿಗಾಹ್ಯ ತತ್ರ ಗಂಗಾಂ ಚ ತ್ವತ್ಪಿತುರ್ಮೌಲಿಗಾಂ ಸುಖಂ ।
ವಿಹರಸ್ವಾದ್ಯ ದೇವೇಶಿ ಮೇನಯಾ ಪೂಜಿತಾ ಶಿವೇ ॥೪೫॥

ಏಕಾಂಶೇನ ವಸಾತ್ರೈವ ಮಮ ಪಾರ್ಶ್ವೇ ಸನಾತನಿ ।
ವಿಚಿತ್ರಶಕ್ತೇ ದೇವೇಶಿ ತ್ವತ್ಪಿತುರ್ಹರ್ಷದಾಯಿನೀ ॥೪೬॥

ಕಂಚಿತ್ಕಾಲಂ ವಿಹೃತ್ಯೇಶಿ ಪುನರಾಗಚ್ಛ ಸತ್ತಮೇ ।

॥ ಸ್ಕಂದ ಉವಾಚ ॥

ಇತ್ಯುಕ್ತಂ ಶ್ರೀಮಹೇಶೇನ ಪ್ರಾಹ ಭೂಧರಕನ್ಯಕಾ ॥೪೭॥

---

ಎಲೌ ದೇವಿಯೇ, ಸೂರ್ಯನಂತೆ ಹೊಳೆಯುತ್ತಿರುವ ಈ ದಿವ್ಯ ವಿಮಾನದಲ್ಲಿ ಕುಳಿತು ದೇವಗಣಗಳಿಂದಲೂ, ಪರ್ವತವಿಶೇಷಗಳಿಂದಲೂ ಸೇವಿಸಲ್ಪಡುತ್ತಾ ಶುಭಲಗ್ನದಲ್ಲಿ ನಿನ್ನ ತಂದೆಯ ಮನೆಗೆ ಹೋಗು. ಅಲ್ಲಿ ತಪಸ್ಸುಮಾಡುತ್ತಿರುವ ದೂರ್ವಾಸ ಋಷಿಗೆ ಅನುಗ್ರಹಪ್ರದಾನಮಾಡಿ ಅಲ್ಲಿರುವ ಕೇದಾರೇಶ್ವರ ಲಿಂಗವನ್ನು ಭಕ್ತಿಯಿಂದ ಅರ್ಚಿಸುವವಳಾಗು. ॥೪೩-೪೪॥

ಅಲ್ಲಿ ಹರಿಯುವ ಗಂಗಾನದಿಯಲ್ಲಿ ಸ್ನಾನಮಾಡುವವಳಾಗಿ, ಮೇನಾದೇವಿಯಿಂದ ಸತ್ಕೃತಳಾಗಿ ಅಲ್ಲಿಯೇ ಕೆಲವು ಕಾಲವಿರು. ಆದರೆ ಒಂದಂಶದಿಂದ ಮಾತ್ರ ನೀನು ನನ್ನ ಪಾರ್ಶ್ವದಲ್ಲಿಯೇ ಇರಬೇಕು. ವಿಚಿತ್ರಶಕ್ತಿಯುಳ್ಳ ನಿನಗೆ ಇದು ಎಂದಿಗೂ ಅಸಾಧ್ಯವಲ್ಲ. ಅಂತೂ ತಂದೆಗೆ ಹರ್ಷದಾಯಕಳಾಗಿ ಕೆಲವು ಕಾಲ ಪಿತೃಗೃಹದಲ್ಲಿ ವಾಸಮಾಡು. ॥೪೫-೪೬॥

ಹಾಗೆ ಕೆಲವು ಕಾಲ ವಾಸಮಾಡಿ, ಮತ್ತೆ ಈ ಕೈಲಾಸಕ್ಕೇ ಹಿಂದಿರುಗುವವಳಾಗು, ಎಂದು ಹೇಳಿದ ಮಹೇಶ್ವರನ ಮಾತುಗಳನ್ನು ಕೇಳಿದವಳಾಗಿ ಪಾರ್ವತಿಯು ಮಹೇಶ್ವರನೊಡನೆ ಹೀಗೆ ಬಿನ್ನೈಸಿಕೊಂಡಳು. ಮಹಾದೇವನೇ ನನಗೂ

|| ದೇವ್ಯುವಾಚ ||

ಮನೋರಥೋಽಯಮತುಲೋ ಮಮ ಮೇನಾಸುಹರ್ಷದಃ ।
ಪಶ್ಯಾಮಿ ಶಿಖರಂ ದೇವ ಪಿತುರ್ಮಮ ಸುರೇಶ್ವರ ॥೪೮॥

ಕೇದಾರಲಿಂಗಪೂಜಾಂ ಚ ಕುರ್ವೇಽಹಂ ಭಕ್ತಿಭಾವಿತಾ ।
ದೂರ್ವಾಸಾಸ್ತ್ವ ಭಕ್ತ್ರೋಽಯಂ ಕಿಮರ್ಥಂ ತಪ್ತವಾನ್ ತಪಃ ॥೪೯॥

ತದಾಚಕ್ಷ್ವ ಮಹಾಭಾಗ ಶ್ರವಣೇ ಕೌತುಕಂ ಮಮ ।
ದಯಯಾ ಭಗವನ್ ಬ್ರೂಹಿ ಗಮ ತತ್ತಪಸೋ ವಿಧಿಂ ॥೫೦॥

|| ಸ್ಕಂದ ಉವಾಚ ||

ಇತ್ಥಂಚಾವಚನೇನ ಸುಂದರಗಿರಾ ಪ್ರೋವಾಚ ವಿಶ್ವೇಶ್ವರೋ ।
ದೇವೀಂ ವೀಕ್ಷ್ಯ ಮುದಾ ತದಾ ಗಿರಿವರಂ ದೃಷ್ಟ್ವಾ ಗಣೇಂದ್ರಾನಪಿ ।
ಮಾಂ ಚೈವಾಥ ಗಜಾನನಂ ಪ್ರಕಟಯಾ ದೂರ್ವಾಸಸಸ್ತತ್ತಪ ।
ಸ್ವಸ್ಯಾಜ್ಞಾಕರಣೇನ ವಿಶ್ವವಿನತೋ ದೇವೀಂ ಬಭಾಷೇ ಪ್ರಭುಃ॥೫೧॥

---

ಮತ್ತು ಮೇನಾದೇವಿಗೂ ಈ ಅಭಿಪ್ರಾಯವು ಬಹುದಿನದಿಂದಿತ್ತು. ಈಗ ಅದು ಸಫಲವಾಯಿತು. ನಿನ್ನ ಅಪ್ಪಣೆಯಂತೆ ಈಗ ಪಿತೃಗೃಹವನ್ನು ನೋಡುವೆನು. ||೪೭||

ಅಲ್ಲಿ ನಿನ್ನ ಅನುಜ್ಞೆಯಂತೆ ಕೇದಾರೇಶ್ವರಲಿಂಗಾರ್ಚನೆಯನ್ನೂ ಭಕ್ತಿಭಾವದಿಂದ ನೆರವೇರಿಸುವೆನು. ಆದರೆ ದೂರ್ವಾಸಋುಷಿಯು ಅಲ್ಲಿ ತಪಸ್ಸು ಮಾಡುತ್ತಿರುವನೆಂದು ಅಪ್ಪಣೆಕೊಡಿಸಿದೆಯಲ್ಲವೆ? ಅದಕ್ಕೆ ಕಾರಣವೇನು? ಅವನು ಯಾವ ವಿಧಿಯಿಂದ ತಪಸ್ಸನ್ನಾಚರಿಸುತ್ತಿರುವನು? ಅದನ್ನು ಕೇಳಬೇಕೆಂಬ ಕುತೂಹಲವು ನನಗೆ ಬಹಳವಾಗಿರುವುದು. ದಯೆಯಿಂದ ವಿವರಿಸಬೇಕೆಂದು, ಪಾರ್ವತಿಯು ಮತ್ತೆ ಪ್ರಾರ್ಥನೆಮಾಡಿದಳು. ||೪೯-೫೦||

ಪಾರ್ವತಿಯು ಇಷ್ಟದಂತೆ ಪರಶಿವನು, ದೇವಿಯನ್ನೂ ನನ್ನನ್ನೂ (ಕುಮಾರಸ್ವಾಮಿಯನ್ನೂ) ಗಣಪತಿಯನ್ನೂ, ಅಲ್ಲಿ ನೆರೆದಿದ್ದ ಪರ್ವತರಾಜನೇ ಮೊದಲಾದ ಸಕಲ ಪ್ರಮಥಗಣಗಳನ್ನೂ ನೋಡುತ್ತಾ ದೂರ್ವಾಸಮಹರ್ಷಿಯು ತನ್ನ ಅಪ್ಪಣೆ

**ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಶಿವವಾಕ್ಯಂ ನಾಮ ಷಡ್ವಿಂಶೋಽಧ್ಯಾಯಃ**

---

ಯಂತೆ ಮಾಡಿದ ತಪಶ್ಚರ್ಯಾಕ್ರಮವನ್ನು ವಿವರಿಸಲಾರಂಭಿಸಿದನು. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಸಿದನು. ||೫೧||

ಇಲ್ಲಿಗೆ ಶ್ರೀಶಿವರಹಸ್ಯದ ಭವನಾಮಕವಾದ ಎರಡನೆಯ ಅಂಶದಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಸಪ್ತವಿಂಶೋಽಧ್ಯಾಯಃ

### ದೂರ್ವಾಸಸಸ್ತಪಶ್ಚರ್ಯಾವರ್ಣನಂ

|| ಈಶ್ವರ ಉವಾಚ ||

ಕಥಾಮಾಕರ್ಣಯಾಪರ್ಣೇ ದೂರ್ವಾಸೋತ್ರ ಪುರಾ ಮುನಿಃ ।
ತೇನ ತಪ್ತಂ ತಪೋ ಘೋರಂ ವರ್ಷಾಣಾಮಯುತಂ ಶಿವೇ ||೧||

ವರ್ಷಮೇಕಂ ನಿರಾಹಾರೋ ವರ್ಷಮಾತ್ರಾವಕಾಶಕಃ ।
ವರ್ಷಂ ಸ ಜಲಮಧ್ಯಸ್ಥೋ ಜಪನ್ ರುದ್ರಮನನ್ಯಧೀಃ ||೨||

ಪರ್ಣಾಶೀ ವರ್ಷಮೇಕಂ ತು ವರ್ಷಂ ಗಂಧವಹಾಶನಃ ।
ವರ್ಷಂ ಧೂಮಾಶನೋ ದೇವಿ ಪಂಚಾಗ್ನಿಪರಿಮಧ್ಯಗಃ ||೩||

---

## ಇಪ್ಪತ್ತೇಳನೆಯ ಅಧ್ಯಾಯ

ದೇವಿಯೇ ಕೇಳು. ಹಿಂದೆ ದೂರ್ವಾಸಮಹರ್ಷಿಯು ಹತ್ತುಸಾವಿರ ವರ್ಷ ಪರ್ಯಂತವಾಗಿ ಘೋರವಾದ ತಪಸ್ಸನ್ನಾಚರಿಸಿದನು. ಅದರಲ್ಲಿ ಒಂದು ವರ್ಷ ನಿರಾಹಾರಿಯಾಗಿಯೂ, ಒಂದು ವರ್ಷ ಬಯಲಿನಲ್ಲಿ ಕುಳಿತೂ, ಮತ್ತೊಂದು ವರ್ಷ ನೀರಿನ ಮಧ್ಯದಲ್ಲಿ ನಿಂತೂ, ರುದ್ರಾಧ್ಯಾಯವನ್ನು ಜಪಿಸುತ್ತಾ ನನ್ನನ್ನೇ ಕುರಿತು ತಪಸ್ಸನ್ನಾಚರಿಸಿದನು. ||೧-೨||

ಒಂದು ವರ್ಷ ಎಲೆಗಳನ್ನೇ ತಿಂದು ಜೀವಿಸಿದನು. ಒಂದು ವರ್ಷ ವಾಯುವಿನ ಆಹಾರದಿಂದಲೂ ಒಂದು ವರ್ಷ ಧೂಮಾಹಾರದಿಂದಲೂ ಪಂಚಾಗ್ನಿ ಮಧ್ಯದಲ್ಲಿ ನಿಂತು, ಸೂರ್ಯಮಂಡಲಾಂತರ್ವರ್ತಿಯಾದ ನನ್ನನ್ನೇ ಎವೆಯಿಕ್ಕದೆ

ಸದಾ ಚಾನಿಮುಷಸ್ಸೂರ್ಯಮಂಡಲಸ್ಥಂ ವಿಲೋಕ್ಯ ಮಾಂ ।
ಏಕಹಸ್ತೇನ ಗಾಂ ಬಿಭ್ರನ್ನೂರ್ಧ್ವಪಾದಸ್ಥಿತೋ ಮುನಿಃ ॥೪॥

ಪಂಚಾಕ್ಷರಪರೋ ದೇವಿ ಪಂಚಾಸ್ಯಧ್ಯಾನತತ್ಪರಃ ।
ಜಟಾಲಂಬಿ ಶಿರೋತ್ಯರ್ಥಂ ನ್ಯಗ್ರೋಧ ಇವ ವರ್ಷಕೇ ॥೫॥

ಪಾದಾವಾಬಧ್ಯ ವೃಕ್ಷಾಗ್ರೇ ಮುನಿರ್ಲಂಬದಧಶ್ಶಿರಾಃ ।
ವರ್ಷಮೇಕಂ ಮಹಾದೇವಿ ಭಸ್ಮಚ್ಛನ್ನಸ್ತ್ರಿಪುಂಡ್ರಧೃಕ್ ॥೬॥

ಸುರವಿತ್ರಾಸನಕರಂ ವಿಷ್ಣುಬ್ರಹ್ಮಾದಿಭಿಸ್ಸರ್ವೈಃ ।
ಮುನಿಭಿರ್ಗಣಪೈಶ್ಚೈವ ತದಶಕ್ಯಂ ತಪೋಂಬಿಕೇ ॥೭॥

ದೂರ್ವಾಸಸಾ ಯಥಾ ತಪ್ತಂ ತಥಾ ಕೇನಾಪಿ ನೋಂಬಿಕೇ ।
ಏವಂ ಸಂತಪ್ಯಮಾನೋಯಂ ಸದಾ ಮಲ್ಲಿಂಗಪೂಜಕಃ ॥೮॥

---

ನೋಡುವುದರಿಂದಲೂ ಒಂದು ಕೈಯ್ಯಲ್ಲಿ ನೆಲವನ್ನೂರಿಕೊಂಡು, ಊರ್ಧ್ವಪಾದವುಳ್ಳವನಾಗಿಯೂ, ದೂರ್ವಾಸಮಹರ್ಷಿಯು ಕಠಿನವಾಗಿ ತಪಸ್ಸನ್ನಾಚರಿಸಿದನು. ||೩-೪||

ಶಿವಪಂಚಾಕ್ಷರೀಮಂತ್ರವನ್ನೇ ಜಪಿಸುತ್ತಾ, ಪರಮೇಶ್ವರನಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿ, ಆಲದ ಮರವು ಬಿಳಲಿನಿಂದ ಕೂಡಿರುವ ಹಾಗೆ, ದೂರ್ವಾಸ ಋಷಿಯು ಜೋಲು ಜಟೆಯಿಂದ ಅಲಂಕೃತನಾಗಿ ಕಾಣುತ್ತಿದ್ದನು. ಅಲ್ಲದೆ ತನ್ನ ಎರಡು ಕಾಲುಗಳನ್ನೂ ಮರದ ಕೊಂಬೆಗೆ ಕಟ್ಟಿ, ತಲೆಯನ್ನು ಕೆಳಗೆ ನಿಲ್ಲಿಸಿ, ಭಸ್ಮತ್ರಿಪುಂಡ್ರಧಾರಿಯಾಗಿ ನನ್ನನ್ನೇ ಕುರಿತು ತಪಸ್ಸುಮಾಡಿದನು. ||೫-೬||

ಈ ತಪಸ್ಸು ಬಹು ಉಗ್ರವಾಗಿದ್ದು ದೇವತೆಗಳಿಗೂ ಭಯವನ್ನುಂಟು ಮಾಡುವುದಾಯಿತು. ದೂರ್ವಾಸಋಷಿಯು ಮಾಡಿದಂತಹ ತಪಸ್ಸನ್ನು ಯಾವ ಋಷಿಗಳೇ ಆಗಲಿ ಗಣಾಧಿಪತಿಗಳೇ ಆಗಲಿ ಮಾಡಲಾರರು. ಅಷ್ಟು ಭಯಂಕರವಾದ ತಪಸ್ಸನ್ನಾಚರಿಸುತ್ತಾ ನನ್ನ ಶಿವಲಿಂಗವನ್ನಾರಾಧಿಸಿದನು. ||೭-೮||

ಸರ್ವಾವಸ್ಥಾಸ್ವಪಿ ಮುನಿರ್ಬಿಲ್ವಪುಷ್ಪೈರ್ವಿರಾಜಿತೈಃ ।
ತಸ್ಯಾಸನ್ ಬಹವಶ್ಶಿಷ್ಯಾ ಮುನಯೋ ವೀತರಾಗಿಣಃ ॥೯॥

ಭಸ್ಮತ್ರಿಪುಂಡ್ರರುದ್ರಾಕ್ಷಧಾರಿಣಶ್ಚರ್ಮವಾಸಸಃ ।
ಸರ್ವೇ ಲಿಂಗಾರ್ಚನಪರಾ ಗುರುಶುಶ್ರೂಷಣೇ ರತಾಃ ॥೧೦॥

ತಂ ಶುಶ್ರೂಷಂತಿ ನಿಯತಾಸ್ಸದಾ ದೂರ್ವಾಸಸಂ ಮುನಿಂ ।
ತತ್ಕಾಲೋಚಿತಸೇವಾಭಿರ್ನಿಯಮಾತ್ತೋಷಯಂತಿ ತಂ ॥೧೧॥

ಏವಂ ತಪಸ್ಯತಸ್ತಸ್ಯ ಶತಶೃಂಗೇ ಮಹೀಧರೇ ।
ನಾನಾದ್ರುಮಲತಾಕೀರ್ಣೇ ನಾನಾಪಕ್ಷಿಮೃಗಾವೃತೇ ॥೧೨॥

ತಪಸ್ವಿಶರಣೇ ತಸ್ಮಿನ್ ರಮ್ಯಾಪಾರಶಿವಾಲಯೇ ।
ತತ್ರಾಹಮಗಮಂ ದೇವಿ ತತ್ಪ್ರಸಾದಾಯ ಕೇವಲಂ ॥೧೩॥

---

ಮತ್ತು ದೂರ್ವಾಸಮಹರ್ಷಿಯು ಸದಾ ಕಾಲಗಳಲ್ಲಿಯೂ ಬಿಲ್ವಪತ್ರೆ, ಪುಷ್ಪ ಮುಂತಾದ ಪೂಜಾಸಾಮಗ್ರಿಗಳಿಂದ ಶಿವಲಿಂಗವನ್ನು ಆರಾಧಿಸುತ್ತಿದ್ದನು. ಅವನಿಗೆ ಶಿಷ್ಯರಾಗಿ ಅನೇಕ ಋಷಿಗಳು, ಭಸ್ಮತ್ರಿಪುಂಡ್ರಾದಿಗಳನ್ನು ಧರಿಸುತ್ತಾ, ಚರ್ಮಾಂಬರಧಾರಿಗಳಾಗಿ, ಸರ್ವದಾ ಲಿಂಗಾರ್ಚನೆಮಾಡುತ್ತಾ, ಗುರುವಾದ ದೂರ್ವಾಸಮಹರ್ಷಿಯನ್ನು ಬಹುವಾಗಿ ಉಪಚರಿಸುತ್ತಿದ್ದರು. ಅಲ್ಲದೆ ಮಹರ್ಷಿಯ ತಪಸ್ಸಿಗೆ ವಿಘ್ನ ಬಾರದಂತೆ, ಕಾಲಕಾಲಕ್ಕೆ ಬೇಕಾದ ಸಾಮಗ್ರಿಗಳನ್ನು ಒದಗಿಸುತ್ತಾ, ದೂರ್ವಾಸ ಮಹರ್ಷಿಗೆ ಸಂತೋಷವನ್ನುಂಟು ಮಾಡುತ್ತಿದ್ದರು. ||೯-೧೦-೧೧||

ಹೀಗೆ ದೂರ್ವಾಸ ಮಹರ್ಷಿಯು ಶತಶೃಂಗ ಪರ್ವತದಲ್ಲಿ ಬಹುಕಾಲ ತಪಸ್ಸುಮಾಡಿದನು. ಆ ಪರ್ವತವಾದರೋ, ಅನೇಕ ಮರ ಬಳ್ಳಿಗಳಿಂದಲೂ, ಪಕ್ಷಿ ಮೃಗಗಳಿಂದಲೂ ಆವೃತವಾಗಿತ್ತು. ಅನೇಕ ತಪಸ್ವಿಗಳು ಅಲ್ಲಿ ನೆಲಸಿದ್ದರು. ಅಲ್ಲಿ ಮನೋಹರವಾದ ಶಿವಾಲಯವಿದ್ದಿತು. ಅಂತಹ ದಿವ್ಯವಾದ ತಪೋವನಕ್ಕೆ ದೂರ್ವಾಸರನ್ನು ಅನುಗ್ರಹಿಸಲೋಸುಗ ನಾನು ಹೋದೆನು. ||೧೨-೧೩||

ವೃಷಭಾರೂಢನಾಗಿ, ಪ್ರಮಥಗಣಗಳಿಂದ ಕೂಡಿ ಅಲ್ಲಿಗೆ ಹೋಗಿ, ಉಗ್ರವಾದ ತಪಸ್ಸಿನಲ್ಲಿದ್ದ ಆ ಮುನಿಶ್ರೇಷ್ಠನನ್ನು ಕಂಡು ಆಶ್ಚರ್ಯಪಟ್ಟನು. ಆತನ ಶಿಷ್ಯರೇ

ಆರುಹ್ಯ ನೋ ತಂ ವೃಷಭಂ ಗಣಸಂಘನಿಷೇವಿತಃ ।
ತಂ ದೃಷ್ಟ್ವಾ ವಿಸ್ಮಯೋಪೇತಸ್ತತ್ರ ತಂ ಮುನಿಪುಂಗವಂ ॥೧೪॥

ವೃತಂ ಸಹಸ್ರಶಿಷ್ಯೈಶ್ಚ ಸ್ವಸಮಾನೈರ್ಮಹೇಶ್ವರಿ ।
ಅವೋಚಂ ಪರಯಾ ಪ್ರೀತ್ಯಾ ತದಾ ದೂರ್ವಾಸಸಂ ಮುನಿಂ ೧೫॥

ದೂರ್ವಾಸಾಸ್ತ್ವಂ ತಪೋರಾಶಿರ್ವಾರಾಶಿರಿವ ಧೈರ್ಯಯುಕ್ ।
ಅಕಂಪ್ಯೋ ಭೂಮಿಭೃತ್ಕಲ್ಪೋ ಯಶೋಧನತಪೋಧನಃ ॥೧೬॥

ಸದಾ ವಾತಾಶಿಪರ್ಣಾಶೀ ಸಲಿಲಾಶ್ಯನಿಲಾಶಕಃ ।
ತವ ದೃಷ್ಟ್ವಂ ತಪೋ ಘೋರಮಾಗತೋಽಸ್ಮಿ ವರಂ ಶೃಣು ॥೧೭॥

ತಾವನ್ನಿಮೀಲಿತಾಕ್ಷಸ್ಸ ವಿಷಮಾಕ್ಷಮವೈಕ್ಷಿ ಚ ।
ತ್ರ್ಯಕ್ಷಸಂದರ್ಶನಾನಂದಸಂಜಾತಪುಲಕೋ ಮುನಿಃ ॥೧೮॥

ಅಥಾಲುಲೋಕೇ ಸ್ವದೃಶಾ ಸದೃಶಂ ಭಾಸ್ಕರಾಧಿಕಂ ।
ವೃಷಸ್ಥಂ ಗಣಪೈರ್ಯುಕ್ತಂ ಮಾಂ ತುಷ್ಟಾವಾಷ್ಟಪದ್ಯಕೈಃ ॥೧೯॥

---

ಸುಮಾರು ಸಾವಿರಾರು ಸಂಖ್ಯೆಯಲ್ಲಿದ್ದರು. ಅವರೆಲ್ಲರೂ ತಪಸ್ಸಿನಲ್ಲಿ ದೂರ್ವಾಸ ಋಷಿಗೆ ಸರಿಸಮರಾಗಿದ್ದರು. ಅಂತಹ ದೂರ್ವಾಸ ಮುನಿಯನ್ನು ಕಂಡು ನಾನು ಹೀಗೆಂದನು. ||೧೪-೧೫||

"ಎಲೈ ದೂರ್ವಾಸ ಮಹರ್ಷಿಯೇ, ನೀನು ತಪೋನಿಧಿಯು. ಧೈರ್ಯದಲ್ಲಿ ಸಮುದ್ರರಾಜನಂತೆಯೂ, ಸ್ಥೈರ್ಯದಲ್ಲಿ ಪರ್ವತ ರಾಜನಂತೆಯೂ ಇದ್ದು, ಯಶಸ್ಸು, ತಪಸ್ಸು ಇವುಗಳನ್ನೇ ಮುಖ್ಯನಿಧಿಯನ್ನಾಗಿ ತಿಳಿದುಕೊಂಡಿರುವೆ. ನಿನ್ನ ಘೋರ ತಪಸ್ಸಿಗೆ ಮೆಚ್ಚಿ ನಿನಗೆ ವರಪ್ರದಾನಮಾಡಲು ಇಲ್ಲಿಗೆ ಬಂದಿರುವೆನು. ವರವನ್ನು ಕೇಳು." ||೧೬-೧೭||

ಎಂದು ಹೇಳಿದೊಡನೆಯೇ ದೂರ್ವಾಸ ಮಹರ್ಷಿಯು, ಕಣ್ಣನ್ನು ತೆರೆದವನಾಗಿ, ವಿಷಮಾಕ್ಷನಾದ ನನ್ನನ್ನು ನೋಡಿ, ಹರ್ಷನಿರ್ಭರನಾಗಿ ರೋಮಾಂಚವನ್ನು ಪಡೆದನು. ಒಡನೆಯೇ ಸೂರ್ಯನಿಗಿಂತಲೂ ಹೆಚ್ಚು ತೇಜಸ್ವಿಯಾಗಿ, ವೃಷಭಾರೂಢನಾಗಿ, ಪ್ರಮಥಗಣಗಳಿಂದ ಕೂಡಿ ನಿಂತಿರುವ ನನ್ನನ್ನು ನೋಡಿ ದೂರ್ವಾಸ ಮಹರ್ಷಿಯು ವೇದಾಂತ ಸಾರಾರ್ಥಗರ್ಭಿತಗಳಾದ ಎಂಟುಶ್ಲೋಕಗಳಿಂದ ನನ್ನನ್ನು

ವೇದಾಂತಸಾರಸರ್ವಸ್ವೈಸ್ತತ್ಸ್ತುತಿಂ ಶೃಣು ಶೈಲಜೇ ॥೨೦॥

ಇಲಾನಿಲನ್ಮೌಲಿರಥೇಂದುಮೌಲಿಂ
ಮಾಯಾನಿಶಾನಿದ್ರಿತ ಜೀವಿತೇಂದ್ರಂ ।
ವಿದ್ರಾವಿಚಿನ್ಮುದ್ರಕರಾಗ್ರಮುದ್ರಂ
ವ್ಯಾಲೇಂದ್ರಮಾಲಂ ಗರನೀಲಕಂಠ ।
ಮಾಘಾಲಕಾಲಂ ಮುನಿರಾಲುಲೋಕೇ ॥೨೧॥

॥ ದೂರ್ವಾಸಾ ಉವಾಚ ॥

ಸ್ವಧಾಮಾ ಕ್ಷಿಪ್ರೇಷುರ್ಮೃಗ ಇವ ಸುಭೀಮೋ ದಹರಗ
ಸ್ತ್ವಧೂಮೋ ಜ್ಯೋತಿಸ್ತ್ವಂ ಮಹಿಮಗತ ಆದ್ಯಶ್ಚ ಭಗವನ್ ।
ಅಷಾಢಂ ತ್ವಾಮುಗ್ರಂ ಸ್ಥಿರಕರಣಕಾಯೇನ ವಚಸಾ
ನುಮಸ್ತೂಮೋದ್ಧೇಮಸ್ತನುಗತಮಥೈನೋನಿವಪನ ॥೨೨॥

---

ಸ್ತುತಿಸಿದನು, ಪಾರ್ವತಿಯೇ, ಆ ಎಂಟು ಶ್ಲೋಕಗಳನ್ನು ಕೇಳುವವಳಾಗು. ಎಂದು ಶಂಕರನು ದೇವಿಗೆ ಹೇಳಲಾರಂಭಿಸಿದನು. ॥೧೮-೧೯-೨೦॥

ಜೈಗೀಷವ್ಯಾದಿಗಳೇ ಹಾಗೆ ದೂರ್ವಾಸಮಹರ್ಷಿಯು, ಭೂಮಿಯವರೆಗೂ ಬಗ್ಗಿದ ಶಿರಸ್ಸುಳ್ಳವನಾಗಿ, ಚಂದ್ರಶೇಖರನೂ, ಮಾಯಾಪಾಶಕ್ಕೆ ಸಿಕ್ಕಿ ತೊಳಲುತ್ತಿರುವ ಸಕಲ ಜೀವಿಗಳಿಗೂ ಒಡೆಯನಾದವನೂ, (ಚಿನ್ಮುದ್ರೆ) ಜ್ಞಾನಮುದ್ರೆಯಿಂದ ವಿರಾಜಿಸುವ ಕರಕಮಲವುಳ್ಳವನೂ, ನಾಗರಾಜನನ್ನೇ ಮಾಲೆಯನ್ನಾಗಿಯೂ, ವಿಷವನ್ನೇ ಕಂಠಭೂಷಣವನ್ನಾಗಿಯೂ, ಉಳ್ಳಂತಹ ಮಹಾದೇವನನ್ನು ನೋಡುತ್ತಾ ಹೀಗೆ ಪ್ರಾರ್ಥನೆಮಾಡಿದನು. ॥೨೧॥

ಮಹಾದೇವನೇ, ನೀನು ಸ್ವಧಾಮನು. (ಸಕಲ ಪ್ರಾಣಿಗಳಿಗೂ ದೊರಕುವ ಆಹಾರವನ್ನು ಹೊಂದಿರುವವನು) ಶೀಘ್ರಗಾಮಿಯಾದ ಬಾಣಗಳನ್ನು ಹೊಂದಿರುವವನು. ಮೃಗಗಳ ಆಕಾರದಂತೆ ಆಕಾರವನ್ನು ಧರಿಸಿ ಭಕ್ತರಿಗೆ ಭಯಂಕರನಾಗಿ ಕಂಡರೂ, ಸೌಮ್ಯಸ್ವಭಾವವನ್ನು ಬೀರುವ ಸ್ವಭಾವದವನು. ಜ್ವಾಲಾರೂಪವಾದ ಅಂತರಿಕ್ಷದಲ್ಲಿ ನೆಲಸಿ, ಧೂಮರಹಿತವಾದ ಜ್ಯೋತಿಯಂತಿರುವವನು. ಭಗವಂತನೇ, ಸಕಲ ಮಹಿಮೆಗಳಿಗೂ ನೀನೇ ಆದಿಭೂತನಾದವನು. ಶೌರ್ಯಾದಿಗುಣಗಳಲ್ಲಿ ಯಾರಿಗೂ ಕಮ್ಮಿಯಿಲ್ಲದ ಉಗ್ರರೂಪಿಯು ನೀನು. ಪಂಚಭೂತಗಳಿಂದ ನಿರ್ಮಿತ

ಮಾ ನೋ ಮಹಾಂತಮುತಮಾನೋ ಅರ್ಭಕಂ
ಮಾ ನ ಉಕ್ಷಂತಮುತ ಮಾ ನ ಉಕ್ಷಿತಂ ।
ಮಾ ನೋವಧೀಸ್ತನಯಂ ತಂ ಸುತಂ ಮೇ
ಗಾವಶ್ಚಾಶ್ವಾನ್ ಹವಿಷಾ ತ್ವಾಂ ಯಜಾಮಃ ॥೨೩॥

ಶಂಭೋಽಸ್ಮದೀಯವಿವಿಧೇಷು ದುರಾವರೇಷು
ಪಾಪೇಷು ನಿಷ್ಕೃತಿಮುತೋಽಪ್ಯವಿನಾಶಕೇಷು ।
ಏಕದ್ವಿಧಾತ್ರಿಚತುರೇಷ್ವಪಿ ಪಂಚಕೇಷು
ತ್ವಂ ಶೂರಭೂರಿಷುವಧಿಃ ಕರುಣಾರ್ದ್ರದೃಷ್ಟ್ಯಾ ॥೨೪॥

---

ವಾದ ಶರೀರದಲ್ಲಿ ಒದಗುವ ಸಕಲ ಪಾಪಗಳನ್ನೂ ನಿವಾರಿಸುವ ಶಕ್ತಿಯುಳ್ಳ ಮಹಾದೇವನೇ, ಅಂತಹ ನಿನ್ನನ್ನು ಸ್ಥಿರವಾದ ಮನಸ್ಸಿನಿಂದಲೂ ಸಕಲೇಂದ್ರಿಯ ಗಳ ತಡೆಯುವಿಕೆಯಿಂದಲೂ ಸರ್ವದಾ ಸ್ತುತಿಸುತ್ತಿರುವೆನು. ॥೨೨॥

ಎಲೈ ಪರಮೇಶ್ವರನೇ, ನಮ್ಮಲ್ಲಿ ವಯೋವೃದ್ಧರೆನಿಸಿದವರನ್ನೂ, ಶಿಶು ಗಳನ್ನೂ, ಸೇಚನಾದಿ ಕಾರ್ಯಗಳಲ್ಲಿ ಸಮರ್ಥರಾದವರನ್ನೂ, ಗರ್ಭಸ್ಥಶಿಶುಗಳನ್ನೂ ಪುತ್ರರೂಪದಲ್ಲಿ ಪಿತೃಋಣಗಳನ್ನು ಪರಿಹರಿಸಿಕೊಳ್ಳುವವರನ್ನೂ, ಗೋವು, ಅಶ್ವ ಮುಂತಾದ ಪ್ರಾಣಿಗಳನ್ನೂ ಹಿಂಸಿಸಬೇಡ; ಮತ್ತು ಕೊಲ್ಲಬೇಡ. ಅನೇಕ ಹವಿಸ್ಸುಗಳನ್ನು ಅಗ್ನಿಮುಖವಾಗಿ ನಿನಗೆ ಅರ್ಪಿಸಿ ನಿನ್ನನ್ನು ತೃಪ್ತಿಗೊಳಿಸುವೆನು. ॥೨೩॥

ಶಂಕರನೇ, ನಾವು ಒಂದು ಎರಡು, ಮೂರು, ನಾಲ್ಕು, ಐದು ಎಂದು ಸಂಖ್ಯಾತ್ಮಕವಾಗಿ ಎಣಿಸುವಂತೆ ಅನೇಕ ರೀತಿಯಾದ ಮಹಾ ಮಹಾ ಪಾಪಕರ್ಮ ಗಳನ್ನು ನಡೆಸುತ್ತೇವೆ. ಆ ಪಾಪಫಲಗಳು ನಮ್ಮ ಯಾವ ಪ್ರಯತ್ನಗಳಿಂದಲೂ ನಾಶವಾಗದೆ ಅವುಗಳಿಂದ ನಾವು ಬಿಡುಗಡೆ ಹೊಂದುವುದೇ ದುಸ್ತರವಾಗಿದೆ. ಈಗ ಇಂತಹ ಪಾಪಕರ್ಮಗಳನ್ನು ನಾಶಮಾಡುವುದರಲ್ಲಿ ನಿನ್ನ ಕರುಣಾದೃಷ್ಟಿಯೊಂದೇ ಸಮರ್ಥವಾಗಿರುವುದು. ಅದನ್ನೇ ಬಾಣದಂತೆ ಮಾಡಿಕೊಂಡು, ದುರಿತರಾಶಿಗಳನ್ನು ಧ್ವಂಸಮಾಡುವುದರಲ್ಲಿ ನೀನೇ ಶೂರನು. ॥೨೪॥

ಅಂತರ್ಯೇ ನ ಭಜಂತಿ ಮೂಢಮತಯೋ ಧ್ಯಾನಂ ಮುನೀಷಾತತಂ
ರುದ್ರಂ ತ್ರ್ಯಂಬಕಮಂಬಿಕಾವಿಲಸಿತಂ ಶ್ರೀಕಂಠಮೀಶಂ ಸದಾ ।
ಲಿಂಗೇ ಕೋಮಲಬಿಲ್ವಪಲ್ಲವಜಲೈರ್ನಾರ್ಚಂತಿ ಯೇ ಜಿಹ್ವಯಾ
ತ್ವದ್ಭುಕ್ತಾಮಲಶೇಷಭುಕ್ತಿರಹಿತಾ ಗೃಹ್ಣಂತಿ ತೇ ನೈ ಮಲಂ ॥೨೫॥

ದೇವಂ ಲಿಂಗವರೇ ಸದಾ ಸ್ಥಿತಮಹೋ ಬಿಲ್ವೀದಲೈಃ ಕೋಮಲೈಃ
ನೀರೈರ್ವಾಪಿ ಮಖಕ್ರಿಯಾಸು ಭಗವನ್ ಸೋಮಸ್ಯ ವಾ [1]ಗಹ್ವಯಾ ।
ಭೂರ್ಣಿತ್ವಾ ಸವನೇಷು ಕ್ರೋಧಿತವಪುರ್ಭೀಮಂ ಮೃಗೇಂದ್ರೋಪಮಂ
ಯಾಚೇ ದೇವ ಸದಾ ಗಿರಾ ಮಧುರಯಾ ಮಾಚುಕ್ರುಧಶ್ಶಂಕರ ॥೨೬॥

---

ಮಹೇಶ್ವರನೇ, ವಿದ್ವಾಂಸರು ತೋರ್ಪಡಿಸಿರುವ ಧ್ಯಾನಕ್ರಮದಿಂದ ಅಜ್ಞಾನಿಗಳು ನಿನ್ನನ್ನು ಭಜಿಸುವುದಿಲ್ಲ. "ಮಹೇಶ್ವರನು ಕಾಲರುದ್ರರೂಪಿಯು. ಮೂರು ಕಣ್ಣುಳ್ಳವನು. ಪಾರ್ವತೀಪತಿಯು, ಶ್ರೀಕಂಠನು" ಎಂಬ ಭಾವನೆಯಿಂದ ಧ್ಯಾನಿಸುವುದಿಲ್ಲ. ಅಲ್ಲದೆ ಶಿವಲಿಂಗವನ್ನು ಕೋಮಲವಾದ ಬಿಲ್ವಪತ್ರಾದಿಗಳಿಂದ ಅರ್ಚನೆಮಾಡುವುದಿಲ್ಲ. ನಿನಗೆ ನೈವೇದ್ಯಮಾಡಿದ ಪ್ರಸಾದವನ್ನು ಭಕ್ಷಿಸುವುದಿಲ್ಲ. ಇದರಿಂದ ಜನರು ತಾವು ಮಾಡುವ ಪ್ರತಿಕರ್ಮವನ್ನೂ ವ್ಯರ್ಥಮಾಡಿಕೊಳ್ಳುವರಲ್ಲದೆ, ಮಲಪ್ರಾಶನೆಯಂತೆ ಸಿಕ್ಕಿದ ವಸ್ತುಗಳನ್ನೆಲ್ಲಾ ಭುಜಿಸುವವರಾಗುವರು. ॥೨೫॥

ಪೂಜ್ಯನಾದ ಮಹಾದೇವನೇ, ನೀನು ಶ್ರೇಷ್ಠವಾದ ಶಿವಲಿಂಗಗಳಲ್ಲಿ ಸರ್ವದಾ ಸೌಮ್ಯರೂಪದಿಂದಿರುವೆ. ಮತ್ತು ಕೋಮಲವಾದ ಬಿಲ್ವದಳಗಳಿಂದಲೂ ಅಭಿಷೇಕಾದಿಗಳಿಂದಲೂ ಪೂಜಿಸಲ್ಪಡುವೆ. ಯಾಗಕಾರ್ಯಗಳಲ್ಲಿಯೂ, ಸೋಮರಸಹೋಮಕಾಲದಲ್ಲಿಯೂ ಯಾಗಾಭಿಮಾನಿದೇವತೆಯಾಗಿ ಎಣಿಸಲ್ಪಡುವೆ. ಮತ್ತು ಕಾಲರುದ್ರಾಕಾರದಲ್ಲಿ ಭಯಂಕರಾಕಾರನಾಗಿಯೂ ತೋರಿಬರುವೆ. ಸಿಂಹದಂತೆ ಸಕಲರಿಗೂ ಭಯವನ್ನುಂಟುಮಾಡುತ್ತಿರುವೆ. ಅಂತಹ ಸಮಯದಲ್ಲಿಯೂ ನೀನು ನನ್ನಲ್ಲಿ ಮಧುರವಾಗಿ ಮಾತನಾಡುವುದನ್ನು ಈಗ ಪ್ರಾರ್ಥಿಸಿಕೊಳ್ಳುತ್ತಿರುವೆನು. ಇದಕ್ಕಾಗಿ ಕೋಪಿಸಬೇಡ" ಎಂದು ಪ್ರಾರ್ಥಿಸಿದನು. ॥೨೬॥

---

1. ಗಹ್ಲಯಾ (ಪಾ. ರ)

ಕಸ್ತ್ವಾಂ ದೈವತಸಾರ್ವಭೌಮರಹಿತಂ ಯಾಚೇದ್ಯ ಚೇಶಾನಕ
ಮಾಭಿಸ್ತ್ವಾಂ ಭಗವನ್ ಸದೈವ ಚ ನಮೋಗೀರ್ಭಿಶ್ಚ ರುದ್ರೋದ್ಯತೈಃ ।
ನಕ್ತಂ ಚಾಪಿ ದಿವಾ ಮಹೇಶ ಪಿತರಂ ಹೃದ್ಗಂ ಬೃಹಂತಂ ಮೃಧಂ ।
ಮೃಷ್ಟಂ ತ್ವಾಮಜರಂ ಸುಷುಮ್ನಮಪಿ ವೈ ರುದ್ರಾಣ್ಯಯಾ ಸಂಯುತಂ॥೨೭॥

ರಾಜಚ್ಚಂದ್ರಕಲಾಧರಂ ಚ ಭುವನಸ್ಯೇಶಾನಮಿಂದುಪ್ರಭಂ
ತ್ವದ್ಭಕ್ತಾಃ ಕವಯೋ ಹವೇಮ ಸತತಂ ತ್ವಲ್ಲಿಂಗಪೂಜಾದರಾಃ ।
ತ್ವಂ ಶಂಭುಃ ಪ್ರಮತಿಃ ಪಿತಾಸಿ ಹಿತಕೃದ್ಬಂಧುಸ್ತ್ವಮೇವಾಸಿ ಮೇ
ತ್ವಂ ಮಾತಾ ಪರಮೋ ವಯಸ್ಕೃದಪಿ ಮೇ ತ್ವಜ್ಞಾಮಯೋ ವಾ ವಯಂ
॥೨೮॥
ತ್ವಾಂ ದೇವಂ ಚ ಭಜಾಮ ಶಂಕರವಿಭೋ ತ್ವದ್ಭಕ್ತಿಧಾರಾರಸೈಃ ॥೨೯॥

---

"ಮಹಾದೇವನೇ, ದೇವತಾಸಾರ್ವಭೌಮನಾದ ನಿನ್ನನ್ನು ಬಿಟ್ಟು ಮತ್ತಾರನ್ನು ಭಜಿಸೋಣ. ಅಹೋರಾತ್ರಿಯಲ್ಲಿಯೂ, ಸರ್ವ ಲೋಕಜನಕನೂ, ಸರ್ವಲೋಕಾಂತರ್ಯಾಮಿಯೂ, ಜರಾಮರಣಾದಿಗಳಿಗೆ ಸಿಕ್ಕದೆ ಸ್ಥಿರಸ್ವರೂಪ ನಾಗಿರುವವನೂ, ಅಂಬಾಸಮೇತನೂ ಆಗಿರುವ ಬೃಹದ್ರೂಪಿಯಾದ ನಿನ್ನನ್ನು, ನಮಶ್ಶಬ್ದಾಂತಗಳಾದ ರುದ್ರಾಧ್ಯಾಯಗಳಿಂದ ಭಜಿಸುತ್ತಿರುವೆನು. ದೇವತಾಶ್ರೇಷ್ಠ ನಾದ ನಿನ್ನನ್ನು ಈ ರೀತಿ ಧ್ಯಾನಮಾಡುವುದೇ ಉತ್ತಮಮಾರ್ಗವೆಂನು ನಾನು ಅರಿತಿರುವೆನು. ॥೨೭॥

ನಿನ್ನ ಭಕ್ತರಾದ ಅನೇಕ ಕವಿಗಳು ನಿನ್ನ ಲಿಂಗಾರಾಧನೆಯಲ್ಲಿಯೇ ನಿರತರಾಗಿ, ನಿನ್ನನ್ನು ಚಂದ್ರಶೇಖರನೆಂದೂ, ತ್ರಿಲೋಕಾಧಿಪತಿಯೆಂದೂ, ತೇಜಶ್ಶಾಲಿಯೆಂದೂ ಹೇಳುತ್ತಿರುವರು. ಆದರೆ ನಾನು ಹೇಳುವುದಿಷ್ಟು. ನೀನು ಸರ್ವರಿಗೂ ಸುಖಕರನು. ಲೋಕಕ್ಕೆ ಜನಕನು. ಜನರಿಗೆ ಹಿತೈಷಿಯಾಗಿದ್ದು ಬಂಧುವಿನಂತಿರುವವನು. ಮಾತಾಪಿತೃರೂಪದಲ್ಲಿ ಜನರ ಕಾಲಮಾನಗಳನ್ನು ನಡೆಸುವವನು. ನಿನ್ನಿಂದಲೇ ಅಂದರೆ ನಿನ್ನ ಸ್ವರೂಪವನ್ನು ಸರಿಯಾಗಿ ಅರಿಯದೆ ನಾವು ಅಜ್ಞಾನಿಗಳೆನಿಸಿರುವೆವು. ಶಂಕರನೇ, ದೇವದೇವನಾದ ನಿನ್ನನ್ನು ಭಕ್ತಿಧಾರಾ ಪೂರ್ವಕವಾಗಿ ಅತಿಶಯ ರೀತಿಯಿಂದ ಧ್ಯಾನಮಾಡುವೆನು. ಇದರಲ್ಲಿ ಸಂಶಯವಿಲ್ಲ. ॥೨೮-೨೯॥

ದೂರ್ವಾಸಾಷ್ಟಕಮೇತದೇವ ಕಲಿತಂ ಚಿತ್ತೇ ಕುತೋ ದೂರ್ವಸಃ
ಕ್ರೋಧೋ ನಾಮ ಭವಿಷ್ಯತೀಶಭಜನಾತ್ತಂ ವೈ ಶ್ರಿಯೋ ವಾಂಛಿತಾಃ ।
ಉದ್ಯಚ್ಚಾಮರಛತ್ರಪಂಕ್ತಿವಿಲಸನ್ಮತ್ತೇಭಕುಂಭಸ್ಥಿತಾ
ರಾಜದ್ವಂದಿಗಣಸ್ತುತೋ ಮಧುರಯಾ ವಾಚಾ ಸದಾಸ್ತೇ ಸುಖೀ ॥೩೦॥

|| ಈಶ್ವರ ಉವಾಚ ||

ತುಷ್ಟಸ್ತತ್ಪರಯಾ ಭಕ್ತ್ಯಾ ತಂ ಬ್ರುವಂತಂ ಮುನಿಂ ಶಿವೇ ।
ಕಾಮಾನ್ ವೃಣು ತಪೋರಾಶೇ ಸರ್ವಾಲಭ್ಯಾನ್ಯಥೇಪ್ಸಿತಃ ॥೩೧॥

ಇತಿ ಮದ್ವಚನಂ ಶ್ರುತ್ವಾ ಸ ದೂರ್ವಾಸಾ ಮಹಾತಪಾಃ ।
ಪ್ರೋವಾಚ ನಿತ್ಯತಾಂ ತಸ್ಯ ಮತ್ಕೈಲಾಸಾಗಮಸ್ತದಾ ॥೩೨॥

ಸರ್ವಲೋಕೇಷು ನಿಯತಂ ವಾಸಸ್ಸರ್ವತ್ರ ಪೂಜನಂ ।
ಅಮೋಘಕ್ರೋಧಹರ್ಷಾಪ್ತಿಶ್ಯಾಪಾನ್ನೈವ ತಪಃ ಕ್ಷಯಃ ॥೩೩॥

---

ಈ ದೂರ್ವಾಸಋುಷಿಕೃತವಾದ ಎಂಟು ಶ್ಲೋಕಗಳನ್ನು ಯಾರು ಭಕ್ತಿಪೂರ್ವಕವಾಗಿ ಪಠಿಸುವರೋ, ಅಂತಹವರಿಗೆ ಕ್ರೋಧವಾಗಲಿ, ದುಷ್ಟವಾದ ಅಭಿಪ್ರಾಯಗಳಾಗಲಿ ಎಂದಿಗೂ ಬರಲಾರದು. ಈಶ್ವರಭಜನದಿಂದ ಅವರು ಐಹಿಕದಲ್ಲಿ ಸಂಪದ್ಯುಕ್ತರಾಗಿ, ಛತ್ರಿಚಾಮರವೇ ಮೊದಲಾದ ಭೋಗ್ಯವಸ್ತುಗಳಿಂದ ಸೇವಿಸಲ್ಪಡುತ್ತಾ, ಮದ್ದಾನೆಯ ಕುಂಭಸ್ಥಳದಲ್ಲಿ ಕುಳಿತವರಾಗಿ, ಹೊಗಳುಭಟರ ಮೃದುಮಧುರವಾದ ಹೊಗಳಿಕೆಗಳಿಂದ ಸ್ತುತಿಸಲ್ಪಡುತ್ತಾ ಸಂಚರಿಸುವವರಾಗುವರು. ಇದರಲ್ಲಿ ಅನುಮಾನವಿಲ್ಲ. ||೩೦||

ಪಾರ್ವತಿಯೇ, ಹೀಗೆ ಪ್ರಾರ್ಥನೆಮಾಡಿದ ದೂರ್ವಾಸಮಹರ್ಷಿಯ ಭಕ್ತಿಗೆ ಮೆಚ್ಚಿ "ಎಲೈ ತಪೋರಾಶಿಯೇ ನಿನಗೆ ಎಂದೂ, ಎಲ್ಲೂ ದೊರೆಯದಂತಹ ವರಗಳನ್ನು ನನ್ನಲ್ಲಿ ಕೇಳಿಕೊ. ಈಗಲೇ ವರಪ್ರದಾನಮಾಡುವೆನು" ಎಂದು ಹೇಳಿದೊಡನೆಯೇ, ಮಹಾತಪಸ್ವಿಯಾದ ಆ ಋಷಿಯು, ನನಗೆ ಇಷ್ಟಬಂದಾಗ ಕೈಲಾಸಪರ್ವತಕ್ಕೆ ಹೋಗುವಂತೆ ವರವನ್ನು ಕರುಣಿಸಬೇಕು. ||೩೧-೩೨||

ಅಲ್ಲದೆ ಎಲ್ಲಾ ಲೋಕಗಳಲ್ಲಿಯೂ ಯಾವಾಗಲೂ ನನಗೆ ಮರ್ಯಾದೆಯು ಒಂದೇ ಸಮನಾಗಿರಬೇಕು. ಹರ್ಷ, ಕೋಪ ಇವುಗಳ ಪರಮಾವಧಿಯನ್ನು ನಾನು

ಇತ್ಥಂ ಯಯಾಚೇ ಸ ಮುನಿಸ್ತತ್ಸರ್ವಂ ದತ್ತವಾನಹಂ ।
[1]ಕಂ ದತ್ವಾಸ್ಯ ವಮುನ್ ಕಾಮಾಂಸ್ತೇನ ಸಂಪೂಜಿತಸ್ತದಾ ॥೩೪॥

ತಸ್ಮಾದಪಕ್ರಮುನ್ ಶೈಲಾಚ್ಛತಶೃಂಗಾತ್ತದಾ ಕ್ಷಣಾತ್ ।
ಕೈಲಾಸಭೂಧರಂ ಪ್ರಾಪ್ತಶ್ಶಾಂಕರೇಣಾಮುನಾ ಶಿವೇ ॥೩೫॥

ಗಾಯತಾ ಶಂಕರಂ ಸೋಮನಂದಿನಾ ವಿಶ್ವನಂದಿನಾ ।
ಗಣೇನ ರೈವತೇನಾಥ ಸಾಮ ರೈವತಗಾಯಿನಾ ॥೩೬॥

ಸಂತುಷ್ಟೋತಿಪ್ರಸನ್ನಾಸ್ಯಃ ಕೈಲಾಸೇಶ್ವರಪೂಜಕಃ ।
ನಿಶಾಮುಖೇ ಪ್ರದೋಷೇ ಮೇ ಪ್ರದೋಷೇ ತತ್ರ ಶಂಕರಿ ॥೩೭॥

ಸಂಪೂಜ್ಯ ದೇವಂ ಕೈಲಾಸಾದಭಿನ್ನಂ ಲಿಂಗಮೇವ ವಾ ।
ಪೂಜಾಂತೇ ಸ ಮುನಿರ್ದೃಷ್ಟೋ ದೂರ್ವಾಸಾಯಂ ಸಶಿಷ್ಯಕಃ॥೩೮॥

ಹೊಂದುವಂತಿರಬೇಕು. ಮತ್ತು ಕೋಪದಿಂದ ಯಾರಿಗಾದರೂ ಶಾಪಕೊಡುವುದಾದರೆ, ಅದರಿಂದ ನನ್ನ ತಪಸ್ಸು ಕ್ಷೀಣವಾಗಕೂಡದು" ಇಷ್ಟು ವರಗಳನ್ನು ಅನುಗ್ರಹಿಸಬೇಕೆಂದು ಕೇಳಿದ ಋಷಿಯ ಮಾತಿನಂತೆ ಆತನಿಗೆ ಅವೆಲ್ಲವನ್ನೂ ಅನುಗ್ರಹಿಸಿದೆನು. ಅದರಿಂದ ಸಂತುಷ್ಟನಾದ ಆ ಋಷಿಯು ನನ್ನನ್ನು ಬಹುವಿಧವಾಗಿ ಪೂಜಿಸಿದನು. ||೩೩-೩೪||

ಅನಂತರ ನಾನು ಆ ಶತಶೃಂಗಪರ್ವತವನ್ನು ಬಿಟ್ಟು ಕೈಲಾಸಪರ್ವತಕ್ಕೆ ಬಂದು ಬಿಟ್ಟೆನು. ಸೋಮನಂದಿ, ವಿಶ್ವನಂದೀ, ರೈವತಗಣ ಮುಂತಾದ ಗಾಯಕರೆಲ್ಲಾ ಶಿವಗೀತೆಗಳನ್ನು ಹಾಡುತ್ತಾ ಜೊತೆಯಲ್ಲಿಯೇ ಕೈಲಾಸವನ್ನು ಸೇರಿದರು. ರೈವತಗಣಗಳು ಕಿವಿಗಿಂಪಾಗಿ ಸಾಮಗಾನ ಮಾಡುತ್ತಾ ಬಂದರು. ||೩೫-೩೬||

ಅಲ್ಲಿಂದ ಕೈಲಾಸಪರ್ವತಕ್ಕೆ ಬಂದು, ಪ್ರಸನ್ನವಾದ ಮನಸ್ಸಿನಿಂದ ಕೂಡಿ, ಪ್ರದೋಷಕಾಲದಲ್ಲಿ ಕೈಲಾಸೇಶ್ವರಲಿಂಗವನ್ನು ಭಕ್ತಿಯಿಂದ ಆರಾಧಿಸಿದೆನು. ಆ ರೀತಿ ಪೂಜೆಯಾದ ಮೇಲೆ ಇದೇ ದೂರ್ವಾಸಮಹರ್ಷಿಯು ಶಿಷ್ಯರೊಡಗೂಡಿ, ಈ ಕೈಲಾಸಪರ್ವತವನ್ನು ಬಂದು ಸೇರಿದನು. ಆಗ ಅವನನ್ನು ನಾನು ಮತ್ತೆ ನೋಡಿದೆನು. ||೩೭-೩೮||

1 ತಂ ದತ್ವಾ ಸರ್ವಕಾಮಾನ್ ವೈ (ಪಾ ರ)

ಕೈಲಾಸಲಿಂಗಂ ನತ್ವಾ ಮಾಂ ಪ್ರತಿಷ್ಠಾಪ್ಯಾತ್ರ ಲಿಂಗಕಂ ।
ಸ್ವ ನಾಮ್ನಾ ಮಮ ಕೈಲಾಸೇ ದೂರ್ವಾಸೇಶ್ವರನಾಮಕಂ ॥೩೯॥

ಲಿಂಗಂ ತದ್ವಿಕಟೇಶಾನಾತ್ಪಶ್ಚಿಮೇ ದಿವ್ಯಧಾಮಗಂ ।
ನಿತ್ಯಂ ತ್ರಿಕಾಲಮಭ್ಯರ್ಚ್ಯ ಮಾಂ ವೀಕ್ಷ್ಯಾಯಾತಿ ಗಚ್ಛತಿ ॥೪೦॥

ತತ್ರ ತತ್ರ ಸದಾ ದೇವಿ ತಸ್ಮಿನ್ ಕೈಲಾಸಪರ್ವತೇ ।
ತಸ್ಮೈ ಪ್ರೀತ್ಯಾ ಮಯಾ ದತ್ತಾ ಬಿಲ್ವಪುಷ್ಕರಸಂಯುತಾ ॥೪೧॥

ಕೈಲಾಸಲಿಂಗಮೌಲೀತಃ ಪ್ರೀತ್ಯಾ ತಸ್ಯ ಮುನೇಃ ಕರೇ ।
ತಾಂ ಗೃಹೀತ್ವಾ ಮುನಿರ್ಮಾಲಾಂ ನೇತ್ರೇ ಶಿರಸಿ ಚಾರ್ಪಯತ್ ॥೪೨॥

ಪ್ರಸಾದಂ ಚ ಮಯಾ ದತ್ತಂ ನಿರ್ಮಾಲ್ಯಂ ನಿರ್ಮಲಾಯ ಹಿ ।
ಶಾಂಕರಾಯ ಮಯಾ ದತ್ತಸ್ತ್ವನ್ಯೇಷಾಂ ದೇವಿ ದುರ್ಲಭಃ ॥೪೩॥

---

ದೂರ್ವಾಸಮಹರ್ಷಿಯು ತಾನೂ ಕೈಲಾಸೇಶ್ವರಲಿಂಗವನ್ನು ವಂದಿಸಿ, ತನ್ನ ಹೆಸರಿನಿಂದಲೇ ಒಂದು ಶಿವಲಿಂಗವನ್ನು ಅಲ್ಲಿ ಪ್ರತಿಷ್ಠೆಮಾಡಿದನು. ಆ ದೂರ್ವಾಸೇಶ್ವರಲಿಂಗವು ಈಗಲೂ ವಿಕಟೇಶ್ವರಲಿಂಗದ ಪಶ್ಚಿಮಭಾಗದಲ್ಲಿ ದಿವ್ಯ ದೇವಾಲಯಾಂತರ್ಗತವಾಗಿರುವುದು. ಆ ಲಿಂಗವನ್ನು ತ್ರಿಕಾಲದಲ್ಲಿಯೂ ದೂರ್ವಾಸನು ಅರ್ಚನೆಮಾಡಿ, ಹಾಗೆಯೇ ನನ್ನ ದರ್ಶನವನ್ನೂ ತೆಗೆದುಕೊಂಡು ಹೋಗಿ ಬರುತ್ತಲಿರುವನು. ||೩೯-೪೦||

ಎಲೌ ಗೌರಿಯೇ, ದೂರ್ವಾಸಮಹರ್ಷಿಯು ಈ ಕೈಲಾಸಪರ್ವತಕ್ಕೆ ಬಂದಾಗಲೆಲ್ಲಾ ನಾನು ಅವನ ಮೇಲಿನ ಪ್ರೀತಿಯಿಂದ ಕೈಲಾಸೇಶ್ವರಲಿಂಗದ ಮೇಲಿರುವ ಬಿಲ್ವ ಮತ್ತು ಕಮಲದ ಹೂವುಗಳಿಂದ ನಿರ್ಮಿತವಾದ ಪುಷ್ಪಮಾಲೆಯನ್ನು ಈಶ್ವರಪ್ರಸಾದರೂಪವಾಗಿ ಕೊಡುವೆನು. ಆ ಋಷಿಯು ಇದನ್ನು ಸ್ವೀಕರಿಸಿ ಕಣ್ಣಿಗೂ ತಲೆಗೂ ಒತ್ತಿಕೊಳ್ಳುವನು. ||೪೧-೪೨||

ಆ ಶಿವನಿರ್ಮಾಲ್ಯವು ಅತ್ಯಂತ ಪವಿತ್ರವಾದದ್ದು. ದೂರ್ವಾಸಮಹರ್ಷಿಯ ಮನಸ್ಸು ಅತ್ಯಂತ ನಿರ್ಮಲವಾದದ್ದರಿಂದಲೇ ಅದನ್ನು ಅವನಿಗೆ ನಾನು ಅನುಗ್ರಹಿಸಿದೆನು. ಹರಭಕ್ತನಲ್ಲದವನಿಗೆ ಈ ಶಿವನಿರ್ಮಾಲ್ಯವು ಎಂದೂ ಲಭಿಸಲಾರದು.

ಮತ್ತಃ ಪ್ರಸಾದಂ ಸಂಪ್ರಾಪ್ಯ ನಿರ್ಗತೋ ಮಮ ಭೂಧರಾತ್ ।
ಅಟತಾ ತೇನ ವಿಪ್ರೇಣ ದೃಷ್ಟೋ ಮಾರ್ಗೇ ಮಹೇಶ್ವರಿ ॥೪೪॥

ದೇವೈಃ ಪರಿವೃತಶ್ಚೇಂದ್ರಃ ಕುಲಿಶೋದ್ಯತ್ಕರೋ ಯುವಾ ।
ಶಚ್ಯಾಪ್ಯನುಗತಶ್ಚಕ್ರೆಶ್ಛತ್ರಚಾಮರಶೋಭಿತಃ ॥೪೫॥

ನೃತ್ಯದ್ಭಿರಪ್ಸರಸ್ಸಂಘೈಃ ಪರಿತೋ ಯಾಯಿದೈವತೈಃ ।
ಶಾರದಾಭ್ರಘನಪ್ರಖ್ಯಂ ಗಜಮಭ್ರಮುವಲ್ಲಭಂ ॥೪೬॥

ಚತುರ್ದಂತಂ ಮಹಾಕಾಯಮಾರುಹ್ಯ ಪುರತೋ ಮುನೇಃ ।
ಯಯೌ ದೇವೇಶ್ವರಸ್ತತ್ರ ತಸ್ಮೈ ಮಾಲಾಮದಾತ್ತದಾ ॥೪೭॥

ಸೋಽಪ್ಯಖರ್ವಮಹಾಗರ್ವದುರ್ವಾರಾಂಬುಧಿಮಧ್ಯಗಃ ।
ಅಗಣಯ್ಯ ಮುನಿಂ ತಾಂ ಚ ಮಾಲಾಂ ಮೇಧ್ಯ ಪ್ರಸಾದಿತಾಂ ॥೪೮॥

---

ಈಶ್ವರಭಕ್ತಾಗ್ರಗಣ್ಯನಾದ ದೂರ್ವಾಸನು ಈ ಪುಷ್ಪಮಾಲೆಯನ್ನು ತೆಗೆದುಕೊಂಡು ಕೈಲಾಸಪರ್ವತದಿಂದ ಹೊರಟು ಮಧ್ಯದಾರಿಯಲ್ಲಿ ಬರುತ್ತಿದ್ದ ಇಂದ್ರನನ್ನು ನೋಡಿದನು. ||೪೩-೪೪||

ಆ ಇಂದ್ರನು ದೇವತೆಗಳಿಂದ ಪರಿವೃತನಾಗಿ, ವಜ್ರಾಯುಧವನ್ನು ಕೈಯಲ್ಲಿ ಹಿಡಿದು ಶಚೀದೇವಿಯೊಡನೆ ಕುಳಿತು, ಛತ್ರಿಚಾಮರಾದಿಗಳಿಂದ ಸೇವಿತನಾಗಿ, ಅಪ್ಸರಸ್ತ್ರೀಯರ ನಾಟ್ಯವನ್ನು ನೋಡಿ ಆನಂದಿಸುತ್ತಾ, ಶರತ್ಕಾಲದ ಮೇಘದಂತೆ ಶುಭ್ರವಾಗಿ ಪ್ರಕಾಶಿಸುವ ಐರಾವತವನ್ನೇರಿ ಬರುತ್ತಿದ್ದನು. ||೪೫-೪೬||

ಆ ಐರಾವತಕ್ಕೆ ನಾಲ್ಕುದಂತಗಳು, ದೀರ್ಘವಾದ ದೇಹ, ಇಂತಹ ಭವ್ಯವಾದ ಐರಾವತದ ಮೇಲೆ ಕುಳಿತು ಬರುತ್ತಿದ್ದ ದೇವೇಂದ್ರನಿಗೆ ದೂರ್ವಾಸಮಹರ್ಷಿಯು ಪ್ರೀತಿಯಿಂದ ನಾನು ಕೊಟ್ಟಿದ್ದ ಕೈಲಾಸೇಶ್ವರಲಿಂಗದ ಪ್ರಸಾದರೂಪವಾದ ಪುಷ್ಪಮಾಲೆಯನ್ನು ಕೊಟ್ಟನು. ಆ ದೇವೇಂದ್ರನಾದರೋ ಭೋಗಲಾಲಸನಾಗಿ ಗರ್ವಿಷ್ಠನಾಗಿದ್ದುದರಿಂದ, ಆ ಶಿವಪ್ರಸಾದವನ್ನು ಅಷ್ಟಾಗಿ ಗೌರವಿಸಲಿಲ್ಲ.||೪೭-೪೮||

ಅಂಕುಶಾಗ್ರೇಣ ಜಗ್ರಾಹ ಮತ್ತವಾರಣಕುಂಭಗಃ ।
ದೂರ್ವಾಸದತ್ತಾಂ ತಾಂ ಮಾಲಾಂ ಪಾತಯಾಮಾಸ ಹೇಲಯಾ ॥೪೯॥

ಕುಂಭೇ ಕುಂಭೀಪತೇಸ್ತಸ್ಯ ಯಯೌ ಮಂದಂ ಶತಕ್ರತುಃ ।
ಮದಾಂಧಿತಸ್ಸಕರಟಿಶ್ಶುಂಡಾಗ್ರೇಣಾಗ್ರಹೀತ್ತದಾ ॥೫೦॥

ಸ್ವಕಂಠೇ ತಾಡಯಾಮಾಸ ಕುಂಭಾಗ್ರೇ ಕರ್ಣಯೋಸ್ತದಾ ।
ತಂ ತಾದೃಶಂ ಸ ದೃಷ್ಟ್ವೈವ ಕರಂಟಂ ಕರಟಿಸ್ಥಿತಂ ॥೫೧॥

ಚುಕ್ರೋಧ ಕ್ರೋಧಭಾರೇಣಾಪ್ಯಶಪತ್ತಂ ಮುನಿಸ್ತದಾ ।
ಶತಮನ್ಯುಂ ಮನ್ಯುನಾ ಸ ಮಹಾಮನ್ಯುಪ್ರಸಾದಭಾಕ್ ॥೫೨॥

॥ ದೂರ್ವಾಸಾ ಉವಾಚ ॥

ಕ್ರೋಧೀ ಗರ್ವೀಮರಾಧೀಶ ದೇವೀಶಂಭುಪ್ರಸಾದಿತಾಂ ।
ಮಾಲಾಂ ಮೌಲೌ ಗಜಸ್ಯಾದ್ಯ ಪಾತಯಸ್ಯತಿದುರ್ಮತೇ ॥೫೩॥

ವಿನಷ್ಟಭ್ರಷ್ಟರಾಜ್ಯಾಂಗೋ ನಿಶ್ಶ್ರೀಕಸ್ತ್ವಂ ಭವಿಷ್ಯಸಿ ।
ಅಯುಮೈರಾವತಃ ಕ್ಷಿಪ್ರಂ ದಾನವೈಶ್ಚ ಪ್ರಪೀಡಿತಃ ॥೫೪॥

---

ಆ ಮಾಲೆಯನ್ನು ತಾನು ಆನೆಯ ಕುಂಭಸ್ಥಳದಲ್ಲಿಯೇ ಕುಳಿತುಕೊಂಡವನಾಗಿ, ಕೈಯ್ಯಲ್ಲಿ ಹಿಡಿದಿದ್ದ ಅಂಕುಶಾಗ್ರದಿಂದ ಸ್ವೀಕರಿಸಿದನು. ಅಲ್ಲದೆ ಹಾಗೆಯೇ ಆ ಮಾಲೆಯನ್ನು ಆನೆಯ ಕುಂಭಸ್ಥಳದಮೇಲೆ ಎಸೆದುಬಿಟ್ಟನು. ಮುಂದುವರಿಯುತ್ತಿದ್ದ ಮದದಿಂದ ಕೊಬ್ಬಿದ ಆ ಆನೆಯು ಮಾಲೆಯನ್ನು ಸೊಂಡಲಿನಿಂದ ಎಳೆದುಕೊಂಡಿತು. ॥೪೯-೫೦॥

ಒಡನೆಯೇ ತನ್ನ ಕತ್ತಿಗೆ ಹೊಡೆದು ತನ್ನ ಕಿವಿಯಮೇಲಕ್ಕೆ ಎಸೆದುಕೊಂಡಿತು. ಇಂದ್ರನು ಹೀಗೆ ಅಹಂಕಾರದಿಂದ ಪ್ರಸಾದವನ್ನು ತಿರಸ್ಕರಿಸಿದ್ದುದನ್ನು ಸುಲಭಕೋಪಿಷ್ಠನಾದ ಆ ದೂರ್ವಾಸಋಷಿಯು ನೋಡಿ, ದೇವೇಂದ್ರನಿಗೆ ಒಡನೆಯೇ ಶಾಪಕೊಟ್ಟನು. ॥೫೧-೫೨॥

"ಎಲೈ ದೇವೇಂದ್ರನೇ, ನೀನು ಕೋಪಿಷ್ಠನಾಗಿ ಅಹಂಕಾರದಿಂದ ಕೊಬ್ಬಿಹೋಗಿರುವೆ. ಪಾರ್ವತೀಪರಶಿವರ ಪ್ರಸಾದರೂಪವಾದ ಈ ಹಾರವನ್ನು ಆನೆಯ ಕತ್ತಿಗೆ ಹಾಕಿರುವೆ. ಇದರಿಂದ ನಿನ್ನ ಸಂಪತ್ತೆಲ್ಲವೂ ಹಾಳಾಗಲಿ, ರಾಜ್ಯಭ್ರಷ್ಟನಾಗಿ

ತ್ವಯಾ ದುಃಖಂ ಮಹಾತೀವ್ರಂ ಪ್ರಾಪ್ತವ್ಯಂ ಸುರಸತ್ತಮ ।
ತವಾನುಯಾಯಿನೋ ದೇವಾ ಗುರುಸ್ತ್ವದ್ಬೋಧದಾಯಕಃ ॥೫೫॥
ಮಂದೋಽನುಯಾತಸ್ಸಗಣೋ ದುಃಖಂ ಪ್ರಾಪ್ನೋತು ಶಾಶ್ವತಂ ।

॥ ಈಶ್ವರ ಉವಾಚ ॥

ಇತ್ಯುಕ್ತಂ ತದ್ವಚಶ್ಶ್ರುತ್ವಾ ಸಗುರುಸ್ಸಶತಕ್ರತುಃ ।
ಅವರುಹ್ಯ ಗಜಾತ್ಕ್ಷಿಪ್ರಂ ನತ್ವಾ ಚ ಮುನಿಪಾದಯೋಃ ॥೫೬॥
ಶಚ್ಯಾ ಚ ಗುರುಣಾ ದೇವ್ಯೈಸ್ಸ ದೂರ್ವಾಸಾಃ ಪ್ರಸಾದಿತಃ ॥೫೭॥

॥ ಇಂದ್ರ ಉವಾಚ ॥

ಕ್ಷಮಾಪರಾಧಂ ಮೇಽದ್ಯಾಶು ವಿಮೋಕಂ ವದ ಸತ್ತಮ ।
ತವಾಪರಾದ್ಧಂ ಕೇನೈತ್ತದ್ವಾರ್ಯಂ ವಾ ಮುನಿಸತ್ತಮ ॥೫೮॥

ಶಿವದತ್ತಮಹಾಮಾಲಾಲಂಘನೇನಾದ್ಯ ದುರ್ಮತಿಃ ।
ಮದಾಂಧೇನ ಮಯಾಕಾರಿ ಚೇಷ್ಟಿತಂ ತವ ಕೋಪಕೃತ್ ॥೫೯॥

---

ಹೋಗು. ಈ ಐರಾವತವಾದರೋ ರಾಕ್ಷಸರಿಂದ ಹಿಡಿಯಲ್ಪಟ್ಟು ಪರಾಭವ ಹೊಂದಲಿ. ||೫೩-೫೪||

ನಿನಗೆ ಅತಿಶಯವಾದ ದುಃಖಗಳು ಪ್ರಾಪ್ತವಾಗಲಿ. ನಿನ್ನನ್ನು ಹಿಂಬಾಲಿಸುವ ದೇವತೆಗಳೂ ಕಷ್ಟಕ್ಕೆ ಸಿಕ್ಕಿ ನರಳಲಿ. ನಿಮಗೆಲ್ಲಾ ನೀತಿಬೋಧಕನಾದ ಬೃಹಸ್ಪತ್ಯಾಚಾರ್ಯನಿಗೂ ಮಂಕು ಕವಿದು ತನ್ಮೂಲಕವಾದ ತೊಂದರೆಗೆ ಅವನೂ ಈಡಾಗಲಿ." ||೫೫||

ಹೀಗೆ ಶಪಿಸಿದ ದೂರ್ವಾಸಮಹರ್ಷಿಯ ಮಾತುಗಳನ್ನು ಕೇಳಿದೊಡನೆಯೇ ಇಂದ್ರನೂ, ಬೃಹಸ್ಪತಿಯೂ, ಶಚೀದೇವಿಯೂ ಆನೆಯಿಂದಿಳಿದು, ಮುನಿಪಾದಗಳಿಗೆ ಸಾಷ್ಟಾಂಗಪ್ರಣಾಮ ಮಾಡಿದರು. ಶಚೀದೇವಿಯೂ ಬೃಹಸ್ಪತ್ಯಾಚಾರ್ಯನೂ ಋಷಿಯನ್ನು ಬಹುವಾಗಿ ಸಮಾಧಾನಗೊಳಿಸಿದರು. ||೫೬-೫೭||

ಮಹೇಂದ್ರನು ದುಃಖಿತನಾಗಿ ಮಹರ್ಷಿಯನ್ನು ಕುರಿತು "ಋಷಿವರ್ಯನೇ, ನಾನು ಮಾಡಿದ ತಪ್ಪನ್ನು ಮನ್ನಿಸು. ನೀನು ಕೊಟ್ಟಿರುವ ಶಾಪಕ್ಕೆ ವಿಮೋಚನೆಯನ್ನು ಅನುಗ್ರಹಿಸು. ಅಹಂಕಾರದಿಂದ ನಾನು ಶಿವನಿರ್ಮಾಲ್ಯಕ್ಕೆ ಅಪಮಾನ

|| ಈಶ್ವರ ಉವಾಚ ||

ಇತ್ಯುಕ್ತೋ ಬಹುಧಾ ತೇನ ಸ ದೂರ್ವಾಸಾ ಮಹಾಪ್ರಭುಃ ||೬೦||

|| ದೂರ್ವಾಸಾ ಉವಾಚ ||

ಉವಾಚ ತಂ ಗುರುಂ ಚಾಪಿ ಮಾ ತೇ ಬುದ್ಧಿಸ್ಸದಾಮರಃ ।
ಶಿವಮಾಯಾಗೃಹೀತಸ್ಯ ದೇವರಾಜ್ಯೇನ ದುರ್ಮತೇ ||೬೧||

ಮಾಮಪ್ರಣಮ್ಯ ಚಾಗ್ರಾಹೀನ್ಮಮ ವಾಜ್ಞಾನ್ಯತಾ ಭವೇತ್ ।
ವಸ ತ್ವಮಮರೈರ್ಯುಕ್ತಸ್ತಪಸಾಭ್ಯರ್ಚಯನ್ ಹರಂ ||೬೨||

ಅಯುತಂ ದೇವಶರದಾಂ ಹಿಮಾದ್ರೌ ದೇವನಾಯಕ ।
ತತಃ ಪ್ರಾಪ್ಸ್ಯಸಿ ರಾಜ್ಯಂ ತೇಽಸ್ಯಸುರೈರ್ಹೃತಮೋಜಸಾ ||೬೩||

---

ಮಾಡಿದೆನು. ಮದಾಂಧನಾದ ನನ್ನಿಂದ ಮಾಡಲ್ಪಟ್ಟ ಈ ದುಡುಕನ್ನು ಕ್ಷಮಿಸಿ ನನ್ನನ್ನು ಕಾಪಾಡು" ಎಂದು ಪ್ರಾರ್ಥಿಸಿಕೊಂಡನು. ಇಷ್ಟು ಪ್ರಾರ್ಥನೆ ಮಾಡುತ್ತಾ ವಿನಯದಿಂದ ನಿಂತಿದ್ದ ಇಂದ್ರನನ್ನು ನೋಡಿ ಬೃಹಸ್ಪತ್ಯಾಚಾರ್ಯ ನೊಡನೆ ದೂರ್ವಾಸಮಹರ್ಷಿಯು ಹೀಗೆಂದನು. ||೫೮-೫೯-೬೦||

"ಓ ಬೃಹಸ್ಪತಿಯೇ, ನಿನ್ನ ಬುದ್ಧಿಯು ಯಾವಾಗಲೂ ಮಂಕಾಗಿರ ಲಾರದು. ಆ ಬುದ್ಧಿಯು ಶಿವಮಾಯೆಯಿಂದ ಆಕ್ರಮಿಸಲ್ಪಡುವುದು. ದೇವ ರಾಜ್ಯಕ್ಕೆ ಒಂದು ನ್ಯೂನತೆ ಬರುವುದು. ನನಗೆ ಒಂದು ಪ್ರಣಾಮವನ್ನೂ ಮಾಡದೇ ಈ ಶಿವಪ್ರಸಾದವನ್ನು ದೂರೀಕರಿಸಿದ್ದರಿಂದ ಶಾಪಕೊಟ್ಟಿರುವೆನು. ಈ ಶಾಪ ವಿಮೋಚನೆಗಾಗಿ ನೀನು ಸಕಲ ದೇವತೆಗಳೊಡನೆಯೂ ಪರಶಿವನನ್ನು ಕುರಿತು ತಪಸ್ಸುಮಾಡುವವನಾಗು. ||೬೧-೬೨||

ಹಾಗೆ ದೇವಮಾನದಲ್ಲಿ ಹತ್ತುಸಾವಿರವರ್ಷಗಳು ಹಿಮಾಲಯ ಪರ್ವತದಲ್ಲಿ ತಪಸ್ಸುಮಾಡು. ಅನಂತರ ರಾಕ್ಷಸರಿಂದ ಅಪಹರಿಸಲ್ಪಟ್ಟ ರಾಜ್ಯವನ್ನು ಸ್ವಸಾಮ ರ್ಥ್ಯದಿಂದ ಪುನಃ ಪಡೆಯುವಿರಿ" ಎಂದು ಉತ್ತರವಿತ್ತನು. ||೬೩||

|| ಈಶ್ವರ ಉವಾಚ ||

ಇತ್ಯುಕ್ತ್ವಾ ನಿರ್ಗತೋ ದೇವಿ ದೂರ್ವಾಸಾಃ ಕ್ರೋಧಮೂರ್ಛಿತಃ ।
ಇಂದ್ರೋ ಹಿಮಾದ್ರಿಂ ಸಂಪ್ರಾಪ್ಯ ಹೃತರಾಜ್ಯೋಽಸುರೈರ್ದೈತ್ಯೈಃ ||೬೪||

ಬಲಿನಾ ಪಾಲಿತಂ ದೇವಿ ವಿಷ್ಟಪಂ ತುಷ್ಟತಸ್ತತಃ ।
ತತಾಪ ದೇವೈರ್ಗುರುಣಾ ಶಚ್ಯಾ ತ್ರಿದಶನಾಯಕಃ ||೬೫||

ತ್ರಪಾಕಷ್ಟಭರಾಕ್ರಾಂತಃ ಕೇದಾರೇಶ್ವರಮರ್ಚಯತ್ ।
ಕೇದಾರಮುಸ್ತುವದ್ಭುಕ್ತ್ಯಾ ಪುನಃ ಪ್ರಾಪ್ತಾಮರಾವತೀ ||೬೬||

ದೂರ್ವಾಸೋಽಪಿ ಮಹಾಯೋಗೀ ಶಾಂಭವಃ ಕಲ್ಮಷೈರ್ಯುತಃ ।
ಪುನಸ್ತತಾಪ ಶರದಾಂ ಶತಮಾನೇನ ಪಾರ್ವತಿ ||೬೭||

ಅಸ್ಮೈ ದಾಯಿ ಮಯಾ ದತ್ತಂ ನಿರ್ಮಾಲ್ಯಂ ಶಂಕರಸ್ಯ ಹಿ ।
ಇತಿ ತದ್ದೋಷಶಾಂತ್ಯರ್ಥಂ ತಪ್ಯತೇ ಪರಮಂ ತಪಃ ||೬೮||

---

ಹಾಗೆ ಹೇಳಿ ದೂರ್ವಾಸಮಹರ್ಷಿಯು ಕೋಪಾವಿಷ್ಟನಾಗಿಯೇ ಹೊರಟು ಹೋದನು. ಇಂದ್ರನು ಆ ಶಾಪದಂತೆಯೇ ಸಕಲ ರಾಜ್ಯವನ್ನೂ ರಾಕ್ಷಸರಿಂದ ಪರಾಜಿತನಾಗಿ ಕಳೆದುಕೊಂಡನು. ಬಲಿಚಕ್ರವರ್ತಿಯು ಸಕಲ ಲೋಕಗಳಿಗೂ ರಾಜನಾದನು. ದೇವೇಂದ್ರನು ಆತನಿಗೆ ಸೋತವನಾಗಿ, ಶಚೀದೇವಿಯೊಡನೆಯೂ, ಮಂತ್ರಿಯಾದ ಬೃಹಸ್ಪತ್ಯಾಚಾರ್ಯನೊಡನೆಯೂ, ಇತರ ದೇವತೆಗಳೊಡನೆಯೂ ಕೂಡಿಕೊಂಡು ಹಿಮಾಲಯದ ತಪ್ಪಲಿನಲ್ಲಿ ತಪಸ್ಸಿಗೆ ಆರಂಭಿಸಿದನು. ||೬೪-೬೫||

ಸೋಲುವಿಕೆಯಿಂದ ಉಂಟಾದ ನಾಚಿಕೆಯನ್ನು ಹೊಂದಿ ಇಂದ್ರನು, ಹಿಮಾಲಯದ ತಪ್ಪಲಿನಲ್ಲಿರುವ ಕೇದಾರೇಶ್ವರಸ್ವಾಮಿಯನ್ನು ಅರ್ಚನೆಮಾಡಿ, ಆ ಕೇದಾರೇಶ್ವರನ ಅನುಗ್ರಹದಿಂದ ಮತ್ತೆ ಅಮರಾವತಿಯನ್ನು ಗೆದ್ದುಕೊಂಡು ಎಂದಿನಂತೆ ದೇವೇಂದ್ರನೆನಿಸಿದನು. ದೇವಿಯೇ, ಇಷ್ಟಾದಮೇಲೂ ಶಾಂಭವನಿಂದ ದೂರ್ವಾಸಮಹರ್ಷಿಯು, ಅದೇ ಕೇದಾರೇಶ್ವರನ ಸನ್ನಿಧಿಗೆ ಬಂದು ಮತ್ತೆ ನೂರಾರುವರ್ಷ ತಪಸ್ಸನ್ನಾಚರಿಸಿದನು. ||೬೬-೬೭||

ಅವನ ತಪಸ್ಸಿಗೆ ಕಾರಣವೇನೆಂದರೆ, “ಶಂಭುಭಕ್ತನಲ್ಲದ ಈ ದೇವೇಂದ್ರನಿಗೆ ಈಶ್ವರನಿರ್ಮಾಲ್ಯವನ್ನು ಕೊಟ್ಟೆನಲ್ಲಾ” ಎಂಬ ಒಂದು ಭಾವವು ಅವನಿಗೆ

ಹಿಮಾದ್ರಿಮೌಲೌ ದೇವೇಶಿ ಸ ದೂರ್ವಾಸಾ ಮಹಾಮುನಿಃ।
ತವ ಸಂದರ್ಶನಾದೇವ ನಿರಾಗಸ್ಸಂಭವಿಷ್ಯತಿ ॥೧೯॥

ಯಸ್ತೇ ಮದೀಯಂ ಕೈಲಾಸಮಾಗತಸ್ಸ ಮಹಾಮುನಿಃ।
ತಸ್ಮಾನ್ಮದೀಯಂ ನಿರ್ಮಾಲ್ಯಂ ನಿರ್ಮಲೇನೈವ ಚೇತಸಾ ॥೨೦॥

ನಿರ್ಮಲೈಶ್ಶಾಂಭವೈರೇವ ಗ್ರಾಹ್ಯಮನ್ಯೈರ್ನಚಾಂಬಿಕೇ।
ಯದ್ದತ್ತಂ ಚಂದನಂ ಪುಷ್ಪಮನ್ನಂ ಭಕ್ಷ್ಯಂ ಫಲಾದಿಕಂ ॥೨೧॥

ಮದ್ಭಕ್ತೈರೇವ ತದ್ಗ್ರಾಹ್ಯಂ ಪೇಯಂ ತೇಷಾಂ ನ ಚಾನ್ಯತಃ।
ಮರ್ಯಾದಾ ಚ ಕೃತಾ ದೇವಿ ಮನ್ನಿರ್ಮಾಲ್ಯಸ್ಯ ಭಕ್ಷಣೇ ॥೨೨॥

ಧಾರಣೇ ಶಾಂಭವಾ ಏವ ಪಾತ್ರಂ ನಿರ್ಮಾಲ್ಯದರ್ಶನೇ।
ಅಶಾಂಭವೇ ಯಥಾ ದತ್ವಾ ಪರಿತಪ್ತೋ ಮಹಾಮುನಿಃ ॥೨೩॥

---

ಬಂದಿತು. ಆ ಪಾಪಪರಿಹಾರಕ್ಕಾಗಿ, ಈಗಲೂ ಹಿಮಾಲಯದ ತಪ್ಪಲಿನಲ್ಲಿ ತಪಸ್ಸು ಮಾಡುತ್ತಿರುವನು. ಪಾರ್ವತಿಯೇ, ಈಗ ನಿನ್ನ ದರ್ಶನವಾದರೆ ಅದರಿಂದ ಆತನು ಜ್ಞಾನಿಯಾಗಿ ಆ ಯೋಚನೆಯನ್ನು ಕಳೆದುಕೊಳ್ಳುವನು. ||೧೮-೧೯||

ನಿನ್ನ ದರ್ಶನಾರ್ಥವಾಗಿಯೇ ಹಿಂದೆ ಈ ದೂರ್ವಾಸಮಹರ್ಷಿಯು ಕೈಲಾಸಕ್ಕೆ ಬಂದಿದ್ದನು. ಒಟ್ಟಿನಲ್ಲಿ ಎಲೌ ಪಾರ್ವತಿಯೇ, ನನ್ನ ಪ್ರಸಾದ ಸ್ವೀಕಾರಕ್ಕೆ ನನ್ನಲ್ಲಿ ಭಕ್ತಿಯಿಟ್ಟಿರುವವನೇ ಯೋಗ್ಯನಾದವನು. ನನ್ನ ಪ್ರಸಾದರೂಪವಾದ ಗಂಧಪುಷ್ಪಾದಿಗಳನ್ನಾಗಲಿ, ನಿವೇದಿತವಾದ ಭಕ್ಷ್ಯಭೋಜ್ಯಾದಿಗಳನ್ನಾಗಲಿ ನನ್ನ ಭಕ್ತನಿಗೇ ಕೊಡಬೇಕು. ||೨೦-೨೧||

ಸ್ವೀಕಾರ ಮಾಡುವವರೂ ಸಹ ನನ್ನ ಭಕ್ತರೇ ಆಗಿರಬೇಕು. ನನ್ನ ಪ್ರಸಾದ ಸ್ವೀಕಾರಕ್ಕೂ, ನೈವೇದ್ಯಶುದ್ಧವಾದ ಪ್ರಸಾದ ಭಕ್ಷಣೆಗೂ ಇದೇ ನಿಯಮ ವಿರುವುದು. ನನ್ನ ಭಕ್ತನಲ್ಲದವನು ನನ್ನ ನಿರ್ಮಾಲ್ಯದರ್ಶನಕ್ಕೂ ಅನರ್ಹನೆನಿಸುವನು. ದೂರ್ವಾಸಮಹರ್ಷಿಯು ನನ್ನ ಭಕ್ತನಲ್ಲದವನಿಗೆ ಪ್ರಸಾದವನ್ನು ಕೊಟ್ಟು ಕೊನೆಗೆ ಅಷ್ಟು ವ್ಯಥೆಪಟ್ಟನು. ||೨೨-೨೩||

ಮಮ ಪ್ರಿಯೋಽಪಿ ದೂರ್ವಾಸಾಸ್ತಥಾನ್ಯಸ್ಸತ್ಯಮುಚ್ಯತೇ ।
ತಸ್ಮಾನ್ನಿರ್ಮಾಲ್ಯಮೀಶಾನಿ ಶಾಂಭವಾಯೈವ ದಾಪಯೇತ್ ॥೭೪॥

ತಮನುಗ್ರಾಹ್ಯ ದೇವೇಶಿ ತ್ವತ್ಪಿತುಶ್ಶಿಖರೇ ಸ್ಥಿತಂ ।
ಯಾಹಿ ತತ್ರ ವಿಮಾನೇನ ಚೈಕಾಂಶೇನಾತ್ರ ಸಂವಸ ॥೭೫॥

॥ ಸ್ಕಂದ ಉವಾಚ ॥

ಇತ್ಯಾಜ್ಞಾಂ ವಿಪುಲಾಂ ಪ್ರಗೃಹ್ಯ ನಗಜಾ ದೂರ್ವಾಸಸಸ್ತಾಂ ಕಥಾಂ
ಶ್ರುತ್ವಾ ಮೋದಿತದಂತುರಾಶ್ರುಪುಲಕಾ ಪಿತ್ರಾ ಗಣೇಂದ್ರೈರಪಿ ।
ಸ್ಕಂದೇನಾಪಿ ಮಯಾ ತಥಾ ಗಜವರಾಸ್ಯೇನಾಪಿ ಸಂತೋಷತೋ
ಯಾನಾಯಾಶು ತದಾ ತಥಾ ಗಣವರೈರ್ದೇವೀ ಸಖೀನಾಂ ಗಣೈಃ ॥೭೬॥

ಉದ್ಯುಕ್ತಾಭವದೀಶ್ವರೇಶ್ವರರತಾ ದೇವೀ ಮುದಾ ಸ್ವಾಂಶತಃ ।
ಕೃತ್ವಾ ಚಾನ್ಯವಪುಸ್ತದಾ ನಗವರೇ ದೇವಾಂಕಸಂಸ್ಥಾ ಶಿವಾ ॥೭೭॥

---

ನನ್ನ ಪ್ರಿಯನಾದ ದೂರ್ವಾಸನೂ, ಇನ್ನೂ ಇತರರೂ ಶಿವಪ್ರಸಾದವನ್ನು ಅಪಾತ್ರರಿಗೆ ಕೊಟ್ಟು ಖೇದಪಟ್ಟಿರುವರು. ಆದ್ದರಿಂದ ಎಲೌ ದೇವಿಯೇ, ಇನ್ನು ಮೇಲೆ ಪ್ರಸಾದವನ್ನು ಕೊಡುವ ವಿಷಯದಲ್ಲಿ ಶಾಂಭವನೇ ಅದಕ್ಕೆ ಅರ್ಹನೆಂಬುದನ್ನು ತಿಳಿ. ಪ್ರಕೃತ, ಒಂದಂಶದಿಂದ ಇಲ್ಲಿ ವಾಸಿಸುತ್ತಾ ಶಿಷ್ಟಾಂಶಗಳಿಂದ ತಂದೆಯ ಮನೆಯನ್ನು ಸೇರಿ ಅಲ್ಲಿ ದೂರ್ವಾಸಮಹರ್ಷಿಗೆ ಅನುಗ್ರಹಪ್ರದಾನಮಾಡು. ದಿವ್ಯಯಾನಾರೂಢಳಾಗಿ ಈಗಲೇ ಪಿತೃಗೃಹಕ್ಕೆ ನೀನು ಪ್ರಯಾಣಮಾಡು ಎಂದು ಮಹೇಶ್ವರನು ಪಾರ್ವತಿಗೆ ಆಶ್ವಾಸನಕೊಟ್ಟನು. ॥೭೪-೭೫॥

ಹಾಗೆ ದೇವಿಯು ಪತಿಯಾಜ್ಞೆಯನ್ನು ಪಡೆದು, ದೂರ್ವಾಸಮಹರ್ಷಿಯ ಕಥಾಶ್ರವಣದಿಂದ ಪುಲಕಿತಗಾತ್ರಳಾಗಿ, ಅಲ್ಲಿದ್ದ ನಾನು (ಕುಮಾರಸ್ವಾಮಿ) ಗಣಪತಿ ಇನ್ನೂ ಇತರ ಗಣನಾಯಕರು, ಇತರ ಸಖಿಯರು ಇವರೊಡನೆ ಕೂಡಿ, ಪಿತೃಗೃಹಕ್ಕೆ ಪ್ರಯಾಣಮಾಡಲು ವಿಮಾನಾರೋಹಣಕ್ಕೆ ಸಿದ್ಧಳಾದಳು. ॥೭೬॥

ಪರಮೇಶ್ವರನ ಅಪ್ಪಣೆಯಂತೆ ದೇವಿಯು ನಿಜವಾದ ತನ್ನ ಅಂಶವನ್ನು ಕೈಲಾಸದಲ್ಲಿಯೇ ಬಿಟ್ಟು, ಅಂಶಾಂತರಸಹಿತವಾದ ದೇಹದಿಂದ ಕೂಡಿ ತಂದೆಯ

**ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ದೂರ್ವಾಸಸಸ್ತಪಶ್ಚರ್ಯಾ ವರ್ಣನಂ ನಾಮ ಸಪ್ತವಿಂಶೋಽಧ್ಯಾಯಃ**

---

ಮನೆಗೆ ಹೊರಡಲು ಸಿದ್ಧಳಾದಳು, ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಸಿದನು. ||೭೭||

ಇಲ್ಲಿಗೆ ಶ್ರೀಶಿವರಹಸ್ಯದ ಭವನಾಮಕವಾದ ದ್ವಿತೀಯಾಂಶದಲ್ಲಿ
ದೂರ್ವಾಸಋಷಿಯ ತಪಶ್ಚರ್ಯಾವರ್ಣನೆಯೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಅಷ್ಟಾವಿಂಶೋಽಧ್ಯಾಯಃ

## ಓಮಾಚಲಸ್ಯ ದೇವ್ಯಾಗಮನಂ

|| ಜೈಗೀಷವ್ಯ ಉವಾಚ ||

ಕಥಂ ಕೈಲಾಸಸದನಾನ್ನಿರ್ಗತಾ ಜಗದಂಬಿಕಾ ।
ದೂರ್ವಾಸಸಾ ಸ್ತುತಾ ದೇವೀ ಕಥಂ ದೇವಾನುಮೋದಿತಾ ॥೧॥

ಕಿಯಂತಂ ಕಾಲ ಮುವಸತ್ಕಥಂ ದೇವೀ ಪರಾಶಿವಾ ।
ಕಥಂ ಸಾ ಪೂಜಿತಾ ದೇವೀ ಹಿಮಶೈಲೇನ ಮೇನಯಾ ॥೨॥

ಕೇದಾರೇಶ್ವರಪೂಜಾಪಿ ಕಥಂ ದೇವ್ಯಾ ಸುರಾಂಗನಾಃ ।
ಅಶ್ರೌಷಂ ಸಂಗತಾಶ್ಚೇತಿ ತಾರಕಾರೇ ವದಾದ್ಯ ತತ್ ॥೩॥

---

## ಇಪ್ಪತ್ತೆಂಟನೆಯ ಅಧ್ಯಾಯ

ಜೈಗೀಷವ್ಯನು ಮತ್ತೆ ಹೀಗೆ ಪ್ರಶ್ನಿಸಿದನು. ಜಗನ್ಮಾತೆಯಾದ ಗಿರಿಜೆಯು ಕೈಲಾಸವನ್ನು ಬಿಟ್ಟುಹೋಗಲು ಕಾರಣವೇನು? ದೂರ್ವಾಸನು ದೇವಿಯನ್ನು ಸ್ತೋತ್ರಮಾಡಿದ ಬಗೆಹೇಗೆ? ಇದೆಲ್ಲಾ ಪರಮೇಶ್ವರನಿಗೆ ಹೇಗೆ ಸಮ್ಮತವಾಯಿತು? ||೧||

ಕೈಲಾಸದಿಂದ ಬಂದು ಹಿಮಪರ್ವತದಲ್ಲಿ ಎಷ್ಟುದಿವಸ ವಾಸಮಾಡಿದಳು? ಆ ಪರಶಿವಾಸ್ವರೂಪಳಾದ ಪರಮೇಶ್ವರಿಯನ್ನು ಹಿಮವಂತ ಮತ್ತು ಮೇನಾದೇವಿ ಇವರು ಹೇಗೆ ಪೂಜಿಸಿದರು? ||೨||

ಷಣ್ಮುಖಸ್ವಾಮಿಯೇ, ದೇವತಾಸ್ತ್ರೀಯರು ಗಿರಿಜೆಯ ದರ್ಶನಮಾಡಿದರೆಂದು ಹೇಳಿದೆಯಲ್ಲಾ? ಅದು ಹೇಗೆ ಸಂಭವಿಸಿತು? ದೇವಿಯು ಕೇದಾರೇಶ್ವರನ

ಪುರಾರಿಪ್ರೇಮಸದನ ನಗಪೌತ್ರ ನಗಾಂತಕ ॥೪॥

॥ ಸೂತ ಉವಾಚ ॥

ಇತ್ಥಂ ಪೃಷ್ಟಸ್ಯ ಮುನಿನಾ ಸ್ಕಂದೋವಾಚ ಮುನೀನ್ ಗಣಾನ್ ।
ದೇವ್ಯಾ ಹಿಮಾದ್ರಿಗಮನಂ ಶೃಣುಧ್ವಂ ತೇನ ಕೀರ್ತಿತಂ ॥೫॥

॥ ಸ್ಕಂದ ಉವಾಚ ॥

ಜೈಗೀಷವ್ಯ ಜಿತಕ್ರೋಧ ಕಾಮಾರಾತಿಪದಾರ್ಚಕ ।
ಅನಾಖ್ಯೇಯಂ ತ್ವಯಿ ಮುನೌ ನಾಸ್ತಿ ಕಿಂಚಿನ್ಮಮಾಧುನಾ ॥೬॥

ತತೋ ಬಹುತಿಥೇ ಕಾಲೇ ಯಾತೇ ಸ ಪರಮೇಶ್ವರಃ ।
ದೇವ್ಯಾ ವಿಹಾರಶಯನೈರ್ಭೋಗಜಾಲೈರನೇಕಶಃ ॥೭॥

---

ಪೂಜೆಯನ್ನು ಹೇಗೆ ಮಾಡುತ್ತಿದ್ದಳು? ಈ ಎಲ್ಲಾಕಥೆಯನ್ನೂ ದಯೆಯಿಟ್ಟು ಹೇಳು. ॥೩॥

ಷಡಾನನನೇ, ನೀನು ಪರಮೇಶ್ವರನ ಪ್ರೇಮಪುತ್ಥಳಿಯು. ಹಿಮವಂತನ ಪ್ರಿಯಪುತ್ರನು. ನಗಾಸುರಸಂಹಾರಕನೇ ನೀನು. ನಿನಗೆ ಈ ಕಥೆಯೆಲ್ಲಾ ತಿಳಿದಿರುವುದು. ಅದನ್ನು ನನಗೆ ಹೇಳು. ॥೪॥

ಎಂದು ಜೈಗೀಷವ್ಯನು ಸ್ಕಂದಸ್ವಾಮಿಯನ್ನು ಪ್ರಾರ್ಥಿಸಲಾಗಿ, ಅಲ್ಲಿ ನೆರೆದಿದ್ದ ಪ್ರಮಥಗಣಗಳನ್ನೂ ಮತ್ತು ಋಷಿಗಳನ್ನೂ ಕುರಿತು, ಗಿರಿಜೆಯು ಮಾಡಿದ ಹಿಮವತ್ಪರ್ವತಯಾತ್ರೆಯ ಕಥೆಯನ್ನು ಷಣ್ಮುಖಸ್ವಾಮಿಯು ಹೇಳಿದನು. ಅದೇ ಕಥೆಯನ್ನು ನಿಮಗೆ ಹೇಳುವೆನು, ಗಮನವಿಟ್ಟು ಕೇಳಿರಿ. ಎಂದು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ವಿವರಿಸಲಾರಂಭಿಸಿದರು. ॥೫॥

ಕಾಮಕ್ರೋಧಾದಿಗಳನ್ನು ಜಯಿಸಿರುವ ಜೈಗೀಷವ್ಯನೇ, ನೀನು ಸದಾ ಪರಮೇಶ್ವರನ ಪೂಜಾನಿರತನಾಗಿ ಮುನಿಯೆನಿಸಿರುವೆ. ನಿನಗೆ ಹೇಳದ ರಹಸ್ಯವೇನೂ ಇರುವುದಿಲ್ಲ. ಇಂತಹ ದಿವ್ಯಚರಿತ್ರೆಯನ್ನು ಕೇಳಲು ಶಿವಭಕ್ತನಾದ ನೀನೇ ಸತ್ಪಾತ್ರನು. ಹೇಳುವೆನು ಕೇಳು. ॥೬॥

ಕೈಲಾಸದಲ್ಲಿ ಗಿರಿಜೆಯೊಡನೆ ಅನೇಕ ಕಾಲದವರೆಗೆ ಪರಮೇಶ್ವರನು ಕ್ರೀಡಾವಿಹಾರಗಳನ್ನೂ ಶಯನಾಸನಾದಿ ಭೋಗಗಳನ್ನೂ ಅನುಭವಿಸುತ್ತಿರಲು, ಒಂದು

ದೇವ್ಯಾ ಸಂಪ್ರಾರ್ಥಿತೋ ದೇವೋ ಹಿಮಾದ್ರಿಗಮನಂ ಪ್ರತಿ ॥೮॥

॥ ದೇವ್ಯುವಾಚ ॥

ನಗರಾಜೋಽಯಮಧುನಾ ಮೇನಯಾ ಸಹ ಶಂಕರ ।
ಮಾಂ ಪ್ರಾರ್ಥಯತಿ ಕೇದಾರಂ ದ್ರಷ್ಟುಂ ಲಿಂಗಂ ತವ ಪ್ರಭೋ ॥೯॥

ದೂರ್ವಾಸೋಽಪಿ ಮಹಾಯೋಗೀ ತವ ಭಕ್ತೋ ಜಿತೇಂದ್ರಿಯಃ ।
ತಪಸಾ ಕರ್ಶಿತತನುಸ್ತವ ಪಾದಾಬ್ಜಪೂಜಕಃ ॥೧೦॥

ಅನುಗೃಹ್ಯ ಮುನಿಂ ಲಿಂಗಂ ಕೇದಾರಂ ಪೂಜ್ಯಭಾವಿತಾ ।
ಮೇನಯಾ ಭೂಧರೇಣಾದ್ಯ ಪೂಜಿತಾ ತನ್ನಗೋತ್ರಮೇ ॥೧೧॥

---

ದಿನ ಗಿರಿಜೆಯು ತನ್ನ ತಂದೆಯ ಮನೆಗೆ ಒಂದು ಸಲ ಹೋಗಿಬರುವೆನೆಂದೂ, ಅದಕ್ಕೆ ಅಪ್ಪಣೆ ಕೊಡಬೇಕೆಂದೂ ಪರಮೇಶ್ವರನನ್ನು ಪ್ರಾರ್ಥಿಸಿಕೊಂಡಳಷ್ಟೆ. ||೭-೮||

ಪ್ರಭುವಾದ ಶಂಕರನೇ, ನನ್ನ ತಂದೆಯಾದ ಹಿಮವಂತನು ತಾಯಿಯೊಡನೆ ಬಂದು ನನ್ನನ್ನು ಕರೆದುಕೊಂಡುಹೋಗಬೇಕೆಂದು ಒತ್ತಾಯಮಾಡುತ್ತಿದ್ದಾನೆ. ಹಿಮಾಲಯದಲ್ಲಿ ನಾನು ಅಲ್ಲಿ ಕೇದಾರಲಿಂಗದ ಅರ್ಚನೆಯನ್ನೂ, ಕೇದಾರ ಲಿಂಗದ ದರ್ಶನವನ್ನೂ ಮಾಡಬೇಕೆಂದು ಅತ್ಯಂತ ಕುತೂಹಲಿಗಳಾಗಿದ್ದಾರೆ. ||೯||

ಅಲ್ಲದೆ ಅದೇ ಪರ್ವತದಲ್ಲಿ ಮಹಾಯೋಗಿಯಾದ ದೂರ್ವಾಸನು ಆಶ್ರಮ ಮಾಡಿಕೊಂಡಿದ್ದಾನೆ. ಅವನು ಉಗ್ರವಾದ ತಪಸ್ಸಿನಿಂದ ತನ್ನ ಶರೀರವನ್ನೇ ಸವೆಸುತ್ತಾ, ಅತ್ಯಂತ ಜಿತೇಂದ್ರಿಯನಾಗಿ ನಿನ್ನನ್ನೇ ಸದಾ ಪೂಜಿಸುತ್ತಿರುವನು. ಪರಮಶೈವಸಾಧುವಾಗಿರುವನು. ಇನ್ನೂ ಎಷ್ಟು ದಿವಸ ಅವನನ್ನು ಪರೀಕ್ಷಿಸುವುದು ? ಆದಷ್ಟು ಜಾಗ್ರತೆ ಅನುಗ್ರಹಿಸಬೇಕಷ್ಟೆ! ||೧೦||

ಆ ಯೋಗಿಯಾದ ದೂರ್ವಾಸನನ್ನು ಅನುಗ್ರಹಿಸಲು ಹಿಮವತ್ಪರ್ವತಕ್ಕೆ ಹೋಗುವೆನು. ತಂದೆಯ ಮನೆಯಲ್ಲಿ ಕೇದಾರಲಿಂಗದ ಅರ್ಚನೆಯನ್ನು ಮಾಡುವೆನು. ನನ್ನ ತಂದೆತಾಯಿಗಳು ನನಗೆ ಮಾಡುವ ಉಪಚಾರವನ್ನು ಸ್ವೀಕರಿಸುವೆನು. ಇಷ್ಟು ಕೆಲಸವಿರುವುದರಿಂದ ನಾನು ಹೋಗಿಬರಲು ಅಪ್ಪಣೆ ಕೊಡಬೇಕು. ||೧೧||

ವಿಪಿನಾವನಿಮಿಾಶಾನಗಂಗಾಂ ತತ್ರಾಬ್ಧಿನೀಮಪಿ ।
ವಿಗಾಹ್ಯ ಸಖಿಭಿಸ್ಸ್ವೈರಂ ದೃಷ್ಟ್ವಾ ತನ್ಮೌಳಿಭಾಸುರಂ ॥೧೨॥

ಕೈಲಾಸಮಾಗಮಿಷ್ಯಾಮಿ ಯದ್ಯಾಜ್ಞಾ ತವ ಶಂಕರ ॥೧೩॥

॥ ಸೂತ ಉವಾಚ ॥

ಇತ್ಯಂಬಾವಚನಂ ಶ್ರುತ್ವಾ ಸ್ಮಾಹ ದೇವೋಽದ್ರಿಜಾಸಖಃ ।
ಕಿಂಚಿನ್ಮ್ಲಾನಮುಖಾಂಭೋಜೋ ದೇವೀಮಾಹ ಮಹೇಶ್ವರಃ ॥೧೪॥

॥ ಈಶ್ವರ ಉವಾಚ ॥

ಶ್ವಃ ಪ್ರಭಾತೇ ಮಹಾದೇವಿ ಗಚ್ಛ ತ್ವಂ ನಗಮೌಳಿ ತತ್ ।
ವಿಹರಾದ್ಯ ಮಯಾ ಸಾರ್ಧಂ ಕೈಲಾಸಮಣಿಸದ್ಮನಿ ॥೧೫॥

---

ಸ್ವಾಮಿಯೇ, ಹಾಗೆಯೇ ಆ ಹಿಮವತ್ಪರ್ವತದಲ್ಲಿರುವ ರಮ್ಯವಾದ ಅರಣ್ಯವನ್ನು ನೋಡಲು ಮನಸ್ಸು ಆಸೆಪಡುತ್ತಿರುವುದು. ಅಲ್ಲಿ ಸ್ವನಾಮಧನ್ಯವಾದ ಗಂಗಾನದಿಯಲ್ಲಿಯೂ ಸರೋವರಗಳಲ್ಲಿಯೂ ಸ್ನಾನಮಾಡಲು, ಮತ್ತು ಅಲ್ಲಿನ ಶಿಖರಪ್ರದೇಶಗಳ ಸುಂದರವಾದ ದೃಶ್ಯಗಳನ್ನು ಒಂದುಸಲ ನೋಡಬೇಕೆಂದೂ ಮನಸ್ಸಾಗುತ್ತಿದೆ. ಶಂಕರಪ್ರಭೋ, ನಿನ್ನ ಅಪ್ಪಣೆ ದೊರೆತರೆ ಹೋಗಿಬರುವೆನು. ಆಜ್ಞಾಪಿಸಬೇಕು. ॥೧೨-೧೩॥

ಹೀಗೆಂದ ಪಾರ್ವತಿಯ ಮಾತನ್ನು ಕೇಳಿ ಪರಮೇಶ್ವರನ ಮುಖವು ಸ್ವಲ್ಪ ಬಾಡಿತು. ಮುಂದಿನ ವಿರಹವನ್ನು ಯೋಚಿಸಿಕೊಂಡು ಖಿನ್ನಮನಸ್ಕನಾಗಿ, ಆದರೂ ತನ್ನ ಭಾವವನ್ನು ಪ್ರಕಟಿಸದೇ ಗಂಭೀರವಾಗಿ ಪಾರ್ವತಿಯನ್ನು ಕುರಿತು ಹೀಗೆ ಹೇಳಿದನು. ॥೧೪॥

ಪ್ರಿಯೇ, ಗಿರಿಜೇ, ನಿನ್ನ ಅಪೇಕ್ಷೆ ಇದ್ದಂತಾಗಲಿ. ನಾಳೆ ದಿವಸ ಪ್ರಾತಃಕಾಲ ನಿನ್ನ ತಂದೆಯ ಮನೆಗೆ ಹೋಗು. ನಾನು ಸಮ್ಮತಿ ಕೊಡುವೆನು. ಆದರೆ ಈಗ ಈ ಕೈಲಾಸದ ಮಣಿಮಯವಾದ ಸೌಧದಲ್ಲಿ ನನ್ನೊಡನೆ ವಿಶೇಷವಾದ ರೀತಿಯಲ್ಲಿ ವಿಹರಿಸುವವಳಾಗು. ॥೧೫॥

ಸೃಜ ಸ್ವಶಕ್ತಿಂ ದೇವೇಶಿ ತವ ದೇಹಾನ್ಮಮಾಂಕಗಾಂ ।
ಇತ್ಯುಕ್ತಾ ದೇವದೇವೇನ ಸಾ ದೇವೀ ಗಿರಿಜಾ ತದಾ ॥೧೬॥

ಮನಸೋನ್ಮನ್ಯ ಶಕ್ತಿಂ ತಾಂ ನಿರ್ಮಾಯ ಪರಮೇಶ್ವರೀ ।
ರಾಜದ್ಧಮ್ಮಿಲ್ಲಪುಷ್ಪಾಢ್ಯಾಮುದ್ಯದಿಂದುಸಮಾನನಾಂ ॥೧೭॥

ನೀಲೋತ್ಪಲದಳಪ್ರಖ್ಯನಯನದ್ವಯಶೋಭಿತಾಂ ।
ಬಿಂಬಾಧರಾಂ ಗಂಧಫಲೀನಾಸಾಲಂಬಿತಮೌಕ್ತಿಕಾಂ ॥೧೮॥

ರತ್ನಗ್ರೈವೇಯಮಾಲಾಢ್ಯಾಂ ಫುಲ್ಲಹಲ್ಲಕಧಾರಿಣೀಂ ।
ಕನದ್ರತ್ನಾಚ್ಛತಾಟಂಕಾಂ ಚಂದ್ರಾರ್ಧಮುಕುಟೋಜ್ಜ್ವಲಾಂ ॥೧೯॥

---

ಪಾರ್ವತಿ, ನೀನು ನಾಳೆ ಹೊರಟುಹೋಗುವುದಾದರೆ, ನಾನು ಏಕಾಂಗಿಯಾಗಿ ಇರುವುದು ಅಸಾಧ್ಯವಾಗುವುದು. ಆದ್ದರಿಂದ ಅರ್ಧಶರೀರರೂಪವೂ, ವಾಮಾಂಕ ಸ್ಥಾಯಿಯೂ ಆದ ನಿನ್ನ ಚಿಚ್ಛಕ್ತಿಯನ್ನು ದೇವಿಯಾಕಾರದಲ್ಲಿ ನಿರ್ಮಿಸಿ ನನ್ನೊಡನೆ ಬಿಟ್ಟುಹೋಗು. ಹೀಗೆಂಬ ಪರಮೇಶ್ವರನ ಅಪ್ಪಣೆಯನ್ನು ಕೇಳಿ ಪರಮಹರ್ಷ ದಿಂದ ಗಿರಿಜೆಯು ಒಪ್ಪಿದಳು. ॥೧೬॥

ಆ ಕೂಡಲೇ ಪಾರ್ವತಿಯು ತನ್ನ ಮನಸ್ಸನ್ನೇ ಮಥಿಸಿ ತನ್ನ ಶಕ್ತಿಯಾದ ಚಿಚ್ಛಕ್ತಿಯನ್ನು ಹೊರಗೆಡಹಿದಳು. ಆ ಶಕ್ತಿಗೆ ಮನೋನ್ಮನಿ ಎಂದು ಹೆಸರಿಟ್ಟಳು. ಮನಸ್ಸಿನಿಂದ ಸೃಷ್ಟಳಾದ ಆ ಮನೋನ್ಮನಿಯು ದಿವ್ಯಸುಂದರಿಯಾಗಿದ್ದಳು. ಆಕೆಯು ಸೊಗಸಾಗಿ ಜೆಡೆಯತುರುಬು ಕಟ್ಟಿ ಅದರಲ್ಲಿ ಸುವಾಸನೆಯ ಹೂ ಮುಡಿದಿರುವಳು. ಅವಳ ಮುಖವು ಉದಯಕಾಲದ ಚಂದ್ರನಂತೆ ಕಾಂತಿಯುಳ್ಳ ದಾಗಿದ್ದಿತು. ॥೧೭॥

ಆಕೆಯ ಕಣ್ಣುಗಳು ಕನ್ನೈದಿಲೆಯ ದಳಗಳಂತೆ ನೀಲವಾದ ಕಾಂತಿಯಿಂದ ರಮ್ಯವಾಗಿದ್ದುವು. ತುಟಿಗಳು ಕೆಂಪಾದ ತೊಂಡೆಹಣ್ಣಿನಂತೆ ರಂಗನ್ನು ಎಸೆಯುತ್ತಿದ್ದುವು. ಮೂಗು ಗಂಧಫಲದಂತೆ ಎಸಳು ಎಸಳಾಗಿದ್ದಿತು. ಮುತ್ತಿನ ಮೂಗುತಿಯು ಚುಕ್ಕಿಯಂತೆ ಮಿನುಗುತ್ತಿದ್ದಿತು. ॥೧೮॥

ಕತ್ತಿನಲ್ಲಿ ರತ್ನಹಾರವು ಅಲಂಕರಿಸಿದ್ದಿತು. ಉಜ್ಜ್ವಲವಾದ ಪದಕವನ್ನು ಧರಿಸಿ, ಮಿರಿಮಿರಿಮಿಂಚುವ ಕರ್ಣಾಭರಣಗಳನ್ನು ಕಿವಿಯಲ್ಲಿ ಇಟ್ಟುಕೊಂಡಿದ್ದಳು.

ತಿಲಕಾಂಕಿತಸತ್ಫಾಲಾಮಲಕ್ತಾಕ್ತಪದದ್ವಯಾಂ ।
ರತ್ನಾಂಗದಭುಜಾಂ ದೇವೀಂ ರತ್ನಕಾಂಚೀಲಸತ್ಕಟಿಂ ॥೨೦॥

ರತ್ನಾಂಗುಲೀಯವಿಲಸತ್ಕರಶಾಖಾಗ್ರಪಲ್ಲವಾಂ ।
ಪಾದಾಂಬುಜರಣದ್ರತ್ನಶೃಂಖಲಾಂ ನೂಪುರಾನ್ವಿತಾಂ ॥೨೧॥

ದಿವ್ಯಾಂಬರಾವೃತಾಂ ತತ್ರ ದಿವ್ಯಚಂದನಚರ್ಚಿತಾಂ ।
ರಕ್ತಕುಂಕುಮವರ್ಣಾಂ ತಾಂ ತಾಂಬೂಲಾಸ್ಯಾಂ ಸುಮಧ್ಯಮಾಂ ॥೨೨॥

ಮನೋನ್ಮನೀಂ ಸಾ ಸಸೃಜೇ ಮನಸಾ ಸಾ ಮಹೇಶ್ವರೀ ।
ಮನೋನ್ಮನ್ಯಾ ತಯಾ ದೇವೀ ತಸ್ಮಿನ್ ಕೈಲಾಸಪರ್ವತೇ ॥೨೩॥

---

ಅರ್ಧಚಂದ್ರಾಕಾರವಾದ ರತ್ನಕಿರೀಟವನ್ನು ಧರಿಸಿ, ಅರಳಿದ ಸೌಗಂಧಿಕಪುಷ್ಪವನ್ನು ಮುಡಿದಿದ್ದಳು. ॥೧೯॥

ಸ್ವಚ್ಛವಾದ ಫಾಲಪ್ರದೇಶದಲ್ಲಿ ತಿಲಕವು ವಿರಾಜಿಸುತ್ತಿದ್ದಿತು. ಎರಡು ಕಾಲುಗಳಲ್ಲಿಯೂ ಲಾಕ್ಷಾರಸವು ಲಿಪ್ತವಾಗಿತ್ತು. ಎರಡು ತೋಳುಗಳಲ್ಲಿಯೂ ರತ್ನಮಯವಾದ ತೋಳುಬಂದಿಗಳೂ, ಕಟಿಪ್ರದೇಶದಲ್ಲಿ ರತ್ನದ ಒಡ್ಯಾಣವೂ ಅಲಂಕೃತವಾಗಿದ್ದುವು. ॥೨೦॥

ಎಳೇ ಚಿಗುರಿನಂತಿರುವ ಕೈಬೆರಳುಗಳಲ್ಲಿ ರತ್ನದುಂಗುರಗಳನ್ನಿಟ್ಟಿದ್ದಳು. ಕಾಲುಗಳು ಕಮಲದಂತೆ ಕೋಮಲವಾಗಿದ್ದುವು. ಅವುಗಳಿಗೆ ರತ್ನದ ಸರಪಳಿಗಳನ್ನೂ ಮೇಲಾಗಿ ಕಾಲ್ಕಡಗವನ್ನೂ ಧರಿಸಿದ್ದಳು. ॥೨೧॥

ದಿವ್ಯವಾದ ವಸ್ತ್ರವನ್ನು ಉಟ್ಟಿದ್ದಳು. ಮೈಗೆಲ್ಲಾ ದಿವ್ಯವಾದ ಚಂದನವನ್ನು ಲೇಪಿಸಿಕೊಂಡಿದ್ದಳು. ಅವಳ ಶರೀರವರ್ಣವು ಕುಂಕುಮಕೇಸರಿಯಂತೆ ಕೆಂಪಾಗಿದ್ದಿತು. ಸೌಭಾಗ್ಯಶಾಲಿನಿಯಾದ ಅವಳ ಮಧ್ಯಭಾಗವೂ, ಬಾಯಿಯಲ್ಲಿ ಮುಖಶುದ್ಧಿಕರವಾದ ತಾಂಬೂಲವೂ ವಿರಾಜಿಸುತ್ತಿದ್ದಿತು. ॥೨೨॥

ಇಂತಹ ರೂಪ ಗುಣ ಸುಸಂಪನ್ನೆಯಾದ ಮನೋನ್ಮನಿಯನ್ನು ತನ್ನ ಶಕ್ತಿಯ ಪುತ್ಥಳಿಯಂತೆ ಮನಸ್ಸಿನಿಂದಲೇ ಪಾರ್ವತಿಯು ಸೃಜಿಸಿದಳು. ಆಗ ಪಾರ್ವತಿಯು ತನ್ನಿಂದ ಸೃಷ್ಟಳಾದ ಆ ಮನೋನ್ಮನಿಯನ್ನು ತದ್ವಲ್ಲಭನಾದ

ಮನೋನ್ಮನೀಶ್ವರಂ ಲಿಂಗಂ ದಿವ್ಯಪ್ರಾಸಾದಮಧ್ಯಗಂ।
ಪ್ರತಿಷ್ಠಾಪ್ಯಾರ್ಚಯಾಮಾಸ ಪಂಚಾಮೃತನಿಷೇಚನೈಃ ॥೨೪॥

ಗಂಧೈರ್ಧೂಪೈಶ್ಚ ವಾಸೋಭಿರ್ದೀಪೈರ್ಬಿಲ್ವೈಶ್ಚ ಪಂಕಜೈಃ।
ನೈವೇದ್ಯೈಶ್ಚೈವ ತಾಂಬೂಲೈರ್ಮಣಿನೀರಾಜನೋತ್ಸವೈಃ ॥೨೫॥

ಸಾಪಿ ತುಷ್ಟಾವ ತಲ್ಲಿಂಗಂ ದೇವ್ಯಾ ಚಿಚ್ಛಕ್ತಿರೀಶ್ವರೀ ॥೨೬॥

॥ ಮನೋನ್ಮನ್ಯುವಾಚ ॥

ವಾಚಾಮಗೋಚರ ಮನಸೋಽಪಿ ಮನೋನ್ಮನೀಶ
ದೇವೇಶ ದ್ಯೋತಕ ಮನೋಜ್ಞಗುಣಸ್ಯ ಕಾಶ।
ತ್ವಂ ವ್ಯೋಮಕೇಶ ದಯಯಾ ಶಶಿಧಾಮಮೌಳೇ
ಪಾಹೀಂದ್ರಿಯಾದಿರಹಿತ ಪ್ರಣವಪ್ರಕಾಶ ॥೨೭॥

---

ಪರಮೇಶ್ವರನ ಲಿಂಗದ ಜೊತೆಗೆ ಕೂರಿಸಿ, ಮನೋನ್ಮನೀಶ್ವರನೆಂಬ ಒಂದು ಶಿವ ಲಿಂಗವನ್ನು ಪ್ರತಿಷ್ಠಿಸಿ, ಅರ್ಚನೆಮಾಡಿದಳು. ಆಸನಾವಾಹನೆಗಳಿಂದಲೂ, ಪಂಚಾಮೃತವೇ ಮೊದಲಾದ ಎಲ್ಲಾ ಅಭಿಷೇಕಗಳಿಂದಲೂ ಅರ್ಚನೆಮಾಡಿದಳು.॥೨೩-೨೪॥

ಅಭಿಷೇಕವಾದನಂತರ ವಸ್ತ್ರಗಳನ್ನು ಅರ್ಪಿಸಿದಳು. ಹಾಗೆಯೇ ಕ್ರಮವಾಗಿ ಗಂಧ, ಪುಷ್ಪ, ಬಿಲ್ವದಳ, ಕಮಲ ಮುಂತಾದವುಗಳಿಂದ ಅರ್ಚಿಸಿ, ಧೂಪದೀಪಗಳನ್ನು ಅರ್ಪಿಸಿ, ದಿವ್ಯಾನ್ನವನ್ನು ನೈವೇದ್ಯಮಾಡಿ ತಾಂಬೂಲಗಳನ್ನರ್ಪಿಸಿ ಕೊನೆಗೆ ಮಣಿಮಯವಾದ ಆರತಿಯಿಂದ ಮಂಗಲನೀರಾಜನವನ್ನೂ ನಡೆಸಿದಳು. ॥೨೫॥

ದೇವಿಯ ಆತ್ಮಸ್ವರೂಪಳಾದ ಆ ಚಿಚ್ಛಕ್ತಿಮನೋನ್ಮನಿಯೂ ಆ ಪೂಜೆಯಿಂದ ಸಂತುಷ್ಟಳಾಗಿ, ಪಾರ್ವತಿಯೊಡನೆ ತಾನೂ ಆ ಲಿಂಗಸ್ವರೂಪನಾದ ಮನೋನ್ಮನೀಶ್ವರನನ್ನು ನಾನಾವಿಧವಾಗಿ ಸ್ತೋತ್ರಮಾಡಿದಳು. ॥೨೬॥

ಹೇ ಪರಮೇಶ್ವರನೇ, ನೀನು ಮಾತಿಗೂ ಮನಸ್ಸಿಗೂ ಸಿಲುಕದವನು. ಸಕಲ ದೇವತೆಗಳಿಗೂ ಒಡೆಯನು. ಸ್ವಾತ್ಮಪ್ರಕಾಶಕನಾಗಿರುವೆ. ಸುಗುಣಗಳ ಗಣಿಯೆನಿಸಿರುವೆ. ಮನೋನ್ಮನಿಯ ವಲ್ಲಭನೆನಿಸಿರುವ ನಿನ್ನ ಜಡೆಯೇ ಆಕಾಶವಾಗಿರುವುದು. ನೀನು ಇಂದ್ರಿಯಾದಿಗಳಿಂದ ವರ್ಜಿತನು. ಪ್ರಣವಶಬ್ದವಾಚ್ಯನೆನಿಸಿ ಮಹಾಮಹಿಮನಾಗಿರುವೆ. ಹೇ ಚಂದ್ರಶೇಖರ, ನನ್ನನ್ನು ದಯೆಯಿಂದ ಕಾಪಾಡು.॥೨೭॥

ಬಾಲಾರ್ಧಗಾತ್ರ ರಮಣೀಯ ಜಟೋರುಗಂಗಾ-
ತುಂಗೋತ್ತಮಾಂಗ ಶಶಿಧಾಮಲಲಾಮ ಶಂಭೋ ।
ವಿಶ್ವೇಶ ವಿಶ್ವಮದನಾಂತಕರ ಪ್ರಸೀದ
ಕೈಲಾಸವಾಸಿನಿಖಿಲಾಗಮತತ್ತ್ವಸಾರ ॥೨೮॥

ಏವಂ ಸಂಸ್ತುತ್ಯ ತಲ್ಲಿಂಗಂ ತಯಾ ದೇವ್ಯಾ ಶಿವಾ ತದಾ ।
ಪೂಜಯಾ ದೇವದೇವಸ್ಯ ತಾಂ ಪ್ರೀತಮಕರೋಚ್ಛಿವಾ ॥೨೯॥

ತಾಮಾನಿನಾಯ ದೇವಸ್ಯ ಸನ್ನಿಧಿಂ ಪರಮೇಶ್ವರೀ ।
ಪ್ರಣಾಮಂ ಶಂಭುಪಾದಾಬ್ಜೇ ತಯಾ ದೇವ್ಯಾ ತದಾಕರೋತ್ ॥೩೦॥

ತದ್ದರ್ಶನಸುಧಾಸಾರಸ್ಮೇರಾಸ್ಯಂ ಪ್ರಾಹ ಶಂಕರಂ ॥೩೧॥

---

ಎಲೈ ಶಂಭುವೇ, ನೀನು ಅರ್ಧನಾರೀಶ್ವರನು. ಸೋಮಸುಂದರನು. ಉನ್ನತವಾದ ಮಸ್ತಕದಮೇಲೆ ಜಟೆಯಲ್ಲಿ ಗಂಗೆಯನ್ನು ಹೊತ್ತಿರುವೆ. ಹಾಗೆಯೇ ಚಂದ್ರನನ್ನೂ ಅಲಂಕರಿಸಿಕೊಂಡಿರುವೆ. ಎಲ್ಲಾ ಜಗತ್ತಿಗೂ ನೀನೇ ಒಡೆಯನು. ಪ್ರಪಂಚಸ್ವರೂಪನೂ ನೀನೇ ಆಗಿರುವೆ. ನೀನೇ ಉದ್ಧತನಾದ ಮನ್ಮಥನ ಸಂಹಾರಕನು. ಸಕಲ ವೇದಶಾಸ್ತ್ರಗಳ ತತ್ತ್ವವೂ ನೀನೇ ಆಗಿರುವೆ. ಹೇ ಕೈಲಾಸವಾಸಿಯಾದ ಶಂಕರನೇ, ನಮ್ಮಮೇಲೆ ಪ್ರಸನ್ನನಾಗು. ||೨೮||

ಈ ರೀತಿಯಾಗಿ ಆ ಮನೋನ್ಮನಿಯೊಡನೆ ಪಾರ್ವತಿಯು ಲಿಂಗವನ್ನು ಪ್ರಾರ್ಥಿಸಿದಳು. ದೇವದೇವನ ಪೂಜೆಯನ್ನೂ ಮಾಡಿ, ಆ ಪರಮೇಶ್ವರನಲ್ಲಿ ಮನೋನ್ಮನಿಯು ಅನುಕೂಲವಾಗಿ ವರ್ತಿಸುವಂತೆ ಪ್ರೇರಣೆ ಮಾಡಿದಳು. ||೨೯||

ಆ ಮನೋನ್ಮನಿ ದೇವಿಯನ್ನು ಕರೆದುಕೊಂಡುಬಂದು ಪರಮೇಶ್ವರನ ಸನ್ನಿಧಿಯಲ್ಲಿ ಅರ್ಪಿಸಿ, ಆಕೆಯೊಡನೆ ತಾನೂ ಕಾಲುಗಳಿಗೆರಗಿದಳು. ||೩೦||

ಸರ್ವಾಕಾರಸುಂದರಿಯಾದ ಆ ಮನೋನ್ಮನಿಯನ್ನು ನೋಡಿ ಪರಮೇಶ್ವರನಿಗೆ ವಿಸ್ಮಯವೂ ಬಹಳ ಆನಂದವೂ ಆಯಿತು. ಅಮೃತವೃಷ್ಟಿಯೋ ಎಂಬಂತೆ ಪ್ರಸನ್ನಮುಖದಿಂದ ನೋಡುತ್ತಿರುವ ಶಂಕರನನ್ನು ಕುರಿತು ಪಾರ್ವತಿಯು ಹೀಗೆಂದಳು. ||೩೧||

॥ ದೇವ್ಯುವಾಚ ॥

ಮಯ್ಯೈವೋತ್ಪಾದಿತಾ ಶಕ್ತಿಸ್ತವ ವಾಮಾಂಕಸಂಸ್ಥಿತಾ ।
ಮನೋನ್ಮನೀಯಮತುಲಾಪ್ಯನಯಾ ವಿಹರೇಶ್ವರ ॥೩೨॥

ಯತ್ರ ಕುತ್ರಾಪಿ ತ್ವತ್ ಕ್ಷೇತ್ರೇ ಭೂಲೋಕೇ ವಾಮರಾಲಯೇ ।
ತವ ಲಿಂಗಸಮೀಪಸ್ಥಾ ತತ್ಪ್ರೀತ್ಯೈ ಭವತಾಂ ಭವ ॥೩೩॥

ಅಸ್ಮಿನ್ ಕೈಲಾಸಸದನೇ ಅನಯಾ ಸ್ಥಾಪಿತಂ ತವ ।
ಮನೋನ್ಮನೀಶ್ವರಂ ಲಿಂಗಂ ತಸ್ಮಿನ್ ಸನ್ನಿಹಿತೋ ಭವ ॥೩೪॥

ಯಾವದಾಗಮನಂ ಮೇಽದ್ಯ ತವ ಪಾದಾಂಬುಜಾದರಾ ।
ವಿಹಾರಾಹಾರಶಯನೇ ತ್ವಯ್ಯೈಷಾ ಹ್ಯನುಗೃಹ್ಯತಾಂ ॥೩೫॥

---

ಪ್ರಿಯಶಂಕರನೇ, ನಿನ್ನ ಅಪ್ಪಣೇ ಮೇರೆಗೆ ನನ್ನ ಚಿಚ್ಛಕ್ತಿಯನ್ನು ಸೃಷ್ಟಿಸಿದ್ದೇನೆ. ಇವಳೇ ನಿನ್ನ ಎಡತೊಡೆಯನ್ನು ಅಲಂಕರಿಸತಕ್ಕವಳು. ಈಕೆಯ ಹೆಸರು ಮನೋನ್ಮನಿ. ಈಕೆಯೊಡನೆ ನೀನು ಯಥೇಚ್ಛವಾಗಿ ವಿಹರಿಸು. ॥೩೨॥

ಭೂಲೋಕದಲ್ಲಿಯಾಗಲಿ ಸ್ವರ್ಗಲೋಕದಲ್ಲಿಯಾಗಲಿ ಎಲ್ಲೆಲ್ಲಿ ನಿನ್ನ ಆರಾಧನೆಗಾಗಿ ಶಿವಲಿಂಗಪೂಜೆಯು ನಡೆಯುವುದೋ, ಅಲ್ಲಿ ಎಲ್ಲಾ ಕಡೆಯಲ್ಲಿಯೂ ಈಕೆಯ ಸಾನ್ನಿಧ್ಯವಿರುತ್ತದೆ. ಈಕೆಯೇ ನಿನ್ನ ಸಹಸಂಗಿನಿಯು. ಇವಳನ್ನು ಅಂಗೀಕರಿಸಿ ಲಾಲಿಸು. ॥೩೩॥

ಇದೇ ಕೈಲಾಸಸೌಧದಲ್ಲಿ ಈ ಮನೋನ್ಮನಿಯೇ ನಿನ್ನ ಪ್ರತಿಕೃತಿಯಾದ ಮನೋನ್ಮನೀಶ್ವರಲಿಂಗವನ್ನು ಆವಾಹನೆಮಾಡಿ ಪೂಜಿಸಿರುವಳು. ಆ ಲಿಂಗದಲ್ಲಿ ನಿನ್ನ ಸಾನ್ನಿಧ್ಯವನ್ನು ದಯಪಾಲಿಸಿ ಈಕೆಯನ್ನು ಪರಿಗ್ರಹಿಸು. ॥೩೪॥

ನಾನು ನನ್ನ ತಂದೆಯ ಮನೆಗೆ ಹೋಗಿ ತಿರುಗಿ ಬರುವವರೆಗೂ ಈಕೆಯನ್ನು ಪರಿಗ್ರಹಿಸಬೇಕು. ಈಕೆಗೂ ನಿನ್ನ ಚರಣಕಮಲಗಳಲ್ಲಿ ಅಸೀಮಭಕ್ತಿಯಿರುವುದು. ವಿಹಾರ, ಆಹಾರ, ಶಯನ ಇತ್ಯಾದಿ ಎಲ್ಲಾ ಸಮಾರಂಭಗಳಲ್ಲಿಯೂ ಈಕೆಯೊಡನೆಯೇ ಭೋಗಪಡಬೇಕು. ಸಹಚಾರಿಣಿಯನ್ನಾಗಿ ಮಾಡಿಕೊಂಡು ಈಕೆಯನ್ನು ಅನುಗ್ರಹಿಸು. ॥೩೫॥

ತವ ನೋದಾಯ ದೇವೇಶ ಮನಸೇಯಂ ವಿನಿರ್ಮಿತಾ ।
ಇತ್ಯಂಬಾವಚನಾನಂದಸಂದೋಹಪುಲಕಾಂಗಕಃ ॥೩೬॥

ದೃಷ್ಟ್ವಾ ಮನೋನ್ಮನೀಂ ಶಕ್ತಿಂ ತಲ್ಲಿಂಗಂ ಸ್ಥಾಪಿತಂ ತಯಾ ।
ಪ್ರಹರ್ಷಜಾತಸೌಹಾರ್ದಾತ್ತಾಂ ಗಾಢಂ ಪರಿಷಸ್ವಜೇ ॥೩೭॥

ದೇವೀಂ ಸ್ವಾಂಕೇ ಸನ್ನಿವೇಶ್ಯ ತಯಾ ಸ ಬುಭುಜೇಶ್ವರಃ ।
ರತ್ನಪಾತ್ರೇಷು ಸಂಕ್ಲೃಪ್ತಂ ಅನ್ನಜಾತಂ ಚತುರ್ವಿಧಂ ॥೩೮॥

ದಿವ್ಯಾಭರಣವಾಸೋಭಿರ್ಧೂಪೈರ್ದೀಪೈಸ್ತಥಾಂಬಿಕಾಂ ।
ಸುಸ್ನಾತಾಂ ಸಮಲಂಕೃತ್ಯ ಪ್ರಾಹ ನಂದಿನಮೀಶ್ವರಃ ॥೩೯॥

---

ದೇವೇಶನೇ, ನಾನು ಇಲ್ಲಿ ಇಲ್ಲದಿರುವಾಗ, ನಿನ್ನ ವಿಹಾರಾದಿಗಳಿಗಾಗಿ ಈಕೆಯನ್ನು ಸುಂದರಿಯನ್ನಾಗಿ ಮನಸ್ಸಿನಿಂದಲೇ ಸೃಷ್ಟಿಸಿ ಅರ್ಪಿಸುವೆನು. ಈ ಮಾತನ್ನು ಕೇಳಿ ಪರಮೇಶ್ವರನಿಗೆ ಅತ್ಯಂತ ಸಂತೋಷವಾಯಿತು. ಆನಂದದಿಂದ ಮೈಯ್ಯೆಲ್ಲಾ ರೋಮಾಂಚತವಾಯಿತು. ಮನೋನ್ಮನಿಯಾದ ಚಿಚ್ಛಕ್ತಿಯನ್ನು ಕಣ್ಣು ತುಂಬ ನೋಡಿದನು. ಅಲ್ಲಿ ಆವಾಹನೆಮಾಡಿ ಪೂಜಿಸಿದ ಮನೋನ್ಮನೀಶ್ವರಲಿಂಗವನ್ನೂ ನೋಡಿ, ಈ ಎಲ್ಲಾ ನಡೆವಳಿಕೆಗಳಿಂದ ಪರಮಸಂತುಷ್ಟನಾಗಿ ಆ ಮನೋನ್ಮನಿಯನ್ನು ಗಾಢವಾಗಿ ಆಲಿಂಗನೆಮಾಡಿಕೊಂಡನು. ॥೩೬-೩೭॥

ಇಷ್ಟೊಂದು ಸುಖಕ್ಕೆ ಅನುಕೂಲಪಡಿಸಿದ ಪಾರ್ವತಿಯನ್ನು ಪ್ರೀತಿಯಿಂದ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಜೊತೆಯಲ್ಲಿ, ರತ್ನಪಾತ್ರೆಗಳಲ್ಲಿ ತರಿಸಿದ ನಾಲ್ಕು ವಿಧವಾದ ಅನ್ನವನ್ನು ಸಂತೋಷದಿಂದ ಭುಂಜಿಸಿದನು. ಪಾರ್ವತಿಗೂ ಊಟಮಾಡಿಸಿದನು. ॥೩೮॥

ಮಂಗಲಸ್ನಾನದಿಂದ ಉಜ್ಜ್ವಲಳಾದ ಪಾರ್ವತಿಗೆ ಅಲಂಕರಿಸಿಕೊಳ್ಳುವುದಕ್ಕಾಗಿ ಪರಮೇಶ್ವರನು ದಿವ್ಯವಾದ ವಸ್ತ್ರಗಳನ್ನೂ ಆಭರಣಗಳನ್ನೂ ಉಡುಗೊರೆ ಕೊಟ್ಟು, ಧೂಪ, ದೀಪ ಮುಂತಾದ ಸಕಲ ಉಪಚಾರಗಳನ್ನೂ ಮಾಡಿಸಿ, ಅನಂತರ ಪಾರ್ವತಿಯ ಪ್ರಯಾಣದ ಸಿದ್ಧತೆಗಾಗಿ ನಂದಿಕೇಶ್ವರನನ್ನು ಕರೆದು ಹೀಗೆ ಅಪ್ಪಣೆ ಮಾಡಿದನು. ॥೩೯॥

॥ ಶ್ರೀ ಈಶ್ವರ ಉವಾಚ ॥

ದೇವ್ಯಾನಯಾ ಗಣೇಂದ್ರೈಶ್ಚ ನಗೇಂದ್ರೇಣ ಸಹಾಮುನಾ।
ಮೇನಯಾ ಗಣಪೇನ ತ್ವಂ ಸ್ಕಂದೇನ ಚ ಸಖೀಗಣೈಃ ॥೪೦॥

ವಿಮಾನೇನಾರ್ಕವರ್ಣೇನ ಮಣಿಸಿಂಹೋಪಶೋಭಿನಾ।
ಗಚ್ಛ ತ್ವಂ ದ್ರುತ ಏವಾದ್ಯ ಶಿವಯಾ ಹಿಮಭೂಧರಂ ॥೪೧॥

ದೇವ್ಯಾ ಯಥೋದಿತಾಂ ಪೂಜಾಂ ತತ್ರ ತತ್ರ ಪ್ರಕಲ್ಪಯ।
ನ ಗ್ಲಾನಿರ್ನಶ್ರಮೋ ವಾ ಸ್ಯಾತ್ ಸೂರ್ಯಚಂಡಕರೈ ಶ್ಶಿವಾಂ ॥೪೨॥

ಭಕ್ಷ್ಯೈರ್ಭೋಜ್ಯೈಶ್ಚ ವಿವಿಧೈರ್ಗಂಧಧೂಪೈರ್ಮನೋಹರೈಃ।
ಹಿಮಾಚಲಂ ಸಮ್ಯನಾಕಂ ಮೇನಾಮೇನಾಂ ಗಣೋತ್ತಮ ॥೪೩॥

---

ನಂದಿಕೇಶನೇ, ದೇವಿಯಾದ ಪಾರ್ವತಿಯನ್ನು ಹಿಮವತ್ಪರ್ವತಕ್ಕೆ ಕರೆದು ಕೊಂಡು ಹೋಗು. ಜೊತೆಯಲ್ಲಿ ಹಿಮವಂತನೂ, ಮೇನಾದೇವಿಯೂ, ಪರಿವಾರ ವಾಗಿ ಷಣ್ಮುಖನೂ, ಗಣಪತಿಯೂ, ಸಖೀಜನರೂ ಹೋಗಲಿ. ಎಲ್ಲರನ್ನೂ ಕರೆದು ಕೊಂಡು ಹೋಗಿ ಬಿಟ್ಟುಬಾ. ॥೪೦॥

ಪ್ರಯಾಣಕ್ಕೆ ಸೂರ್ಯನಂತೆ ಸ್ವಯಂಪ್ರಕಾಶಕವಾಗಿ ಮಣಿಮಯವಾದ ಸಿಂಹವೇ ಮೊದಲಾದವುಗಳಿಂದ ಅಲಂಕೃತವಾಗಿರುವ ದಿವ್ಯವಿಮಾನವನ್ನು ಸಿದ್ಧ ಗೊಳಿಸು. ಅಂತಹ ದಿವ್ಯವಿಮಾನದಲ್ಲಿ ಕುಳ್ಳಿರಿಸಿಕೊಂಡು ಪಾರ್ವತಿಯನ್ನು ಜೋಪಾನವಾಗಿ ಹಿಮವಂತನ ಮನೆಗೆ ಕರೆದುಕೊಂಡು ಹೋಗು. ॥೪೧॥

ಪ್ರಯಾಣ ಮಾಡುವಾಗ ಮಧ್ಯೆ ಮಧ್ಯೆ ದೇವಿಯು ಅಪೇಕ್ಷಿಸಿದ ಪೂಜಾ ಸಮಾರಂಭಗಳನ್ನು ಒದಗಿಸಿಕೊಡು. ಆಕೆಗೆ ಯಾವ ಕೊರತೆಯೂ ಆಗದಂತೆಯೂ, ಆಕೆಗೆ ಬಿಸಲಿನ ತಾಪವೂ, ಪ್ರಯಾಣದಿಂದ ಗ್ಲಾನಿಯೂ ಶ್ರಮವೂ ಆಗದಂತೆ ನೋಡಿಕೊಳ್ಳುತ್ತಿರು. ॥೪೨॥

ದಾರಿಯಲ್ಲಿ ದೇವಿಗೆ ಬೇಕಾಗುವ ಭಕ್ಷ್ಯಭೋಜ್ಯಗಳನ್ನೂ, ಧೂಪದೀಪಾದಿ ಗಳನ್ನೂ ಒದಗಿಸಿಕೊಡುತ್ತಿರು. ಗಣೋತ್ತಮನಾದ ನಂದಿಕೇಶನೇ, ಮೇನಾದೇವಿ ಸಹಿತಳಾದ ಪಾರ್ವತಿಯನ್ನು ಜೋಪಾನವಾಗಿ ಹಿಮವತ್ಪರ್ವತಕ್ಕೆ ಕರೆದುಕೊಂಡು ಹೋಗು. ॥೪೩॥

ಗಣೇಶ್ವರಾನ್ ಸಖೀಜಾಲಂ ಸ್ಕಂದವಿಘ್ನೇಶ್ವರೌ ಸುತೌ ।
ಸಂಪೂಜಯ ಯಥಾಜೋಷಂ ಪಥಿ ಶ್ರಾಂತಿವಿವರ್ಜಿತಾನ್ ॥೪೪॥

ಪರಿಷ್ಕೃತಂ ರತ್ನಜಾಲೈರ್ವಿಮಾನಂ ಕಲ್ಪಯಾದರಾತ್ ।
ದೇವ್ಯಾ ಹಿಮಾದ್ರಿಗಮನೇ ಶೀಘ್ರಂ ತ್ವಂ ಸಂವಿಧೀಯತಾಂ ॥೪೫॥

ಇತ್ಯಾಜ್ಞಾಂ ಶಿರಸಾ ಶಂಭೋಃ ಪ್ರಗೃಹ್ಯ ಸ ಶಿಲಾದಜಃ ।
ನಾನಾಕಕ್ಷಾನ್ವಿತಂ ರತ್ನಪರ್ಯಂತಂ ನರದೇಹಿಕಂ ॥೪೬॥

ಮುಕ್ತಾವಿತಾನವಿತತಂ ರತ್ನದ್ವಾರಶತಾವೃತಂ ।
ಮಣಿಹಂಸಮಹಾಸಿಂಹಪಿಕಸಂಘವಿನಾದಿತಂ ॥೪೭॥

---

ದಾರಿಯಲ್ಲಿ ಪ್ರಯಾಣಮಾಡುತ್ತಿರುವಾಗ ಪಾರ್ವತಿಯ ಪ್ರೇಮಪುತ್ರರಾದ ಗಣಪತಿ ಮತ್ತು ಷಣ್ಮುಖರಿಗೆ ಯಾವ ತೊಂದರೆಯೂ ಆಗದಂತೆ ನೋಡಿಕೊ. ಹಾಗೆಯೇ ಜೊತೆಯ ಪರಿವಾರದ ಸಖೀಜನರಿಗೂ, ಗಣಗಳಿಗೂ ಸರಿಯಾದ ಉಪಚಾರವನ್ನು ಸಲ್ಲಿಸುತ್ತಿರು. ॥೪೪॥

ಸರಿಯಾಗಿ ಗಮನವಿಟ್ಟು ರತ್ನಮಯವಾದ ಅಲಂಕಾರಗಳಿಂದ ವಿಮಾನವನ್ನು ಅಲಂಕರಿಸು. ಮತ್ತು ಪಾರ್ವತಿಯ ಪ್ರಯಾಣಕ್ಕೆ ಬೇಕಾಗುವ ಸಕಲ ಸೌಕರ್ಯಗಳನ್ನು ಜಾಗ್ರತೆ ಏರ್ಪಾಟುಮಾಡಿ ಸಿದ್ಧಪಡಿಸು. ॥೪೫॥

ಈ ರೀತಿಯಾದ ಪರಮೇಶ್ವರನ ಅಪ್ಪಣೆಯನ್ನು ಕೇಳಿ, ಶಿಲಾದಪುತ್ರನಾದ ನಂದಿಯು, ಆಗಲಿ ಎಂದು ಆಜ್ಞೆಯನ್ನು ಶಿರಸಾವಹಿಸಿ, ಪ್ರಯಾಣಕ್ಕೆ ವಿಮಾನವನ್ನು ಸಜ್ಜುಗೊಳಿಸಿದನು. ಆ ವಿಮಾನವು ಮನುಷ್ಯದೇಹದ ಆಕಾರದಂತಿತ್ತು. ಅದರಲ್ಲಿ ರತ್ನಮಯವಾದ ನಾಲ್ಕು ಕೊಠಡಿಗಳು ಇದ್ದವು. ॥೪೬॥

ಆ ವಿಮಾನವನ್ನು ಮುತ್ತಿನ ಮೇಲ್ಕಟ್ಟಿನಿಂದ ಅಲಂಕರಿಸಿದನು. ಅದರ ಕಿಟಿಕಿ ಮತ್ತು ಬಾಗಿಲುಗಳು, ನೂರಾರು ಬಾಗಿಲುಗಳೂ ರತ್ನಮಯವೇ ಆಗಿದ್ದವು. ಅಲ್ಲಲ್ಲಿ ಗೋಮೇಧ, ಪುಷ್ಯರಾಗಾದಿ ಮಣಿಮಯವಾದ ಹಂಸಗಳಿಂದಲೂ, ಸಿಂಹಗಳಿಂದಲೂ, ಗಿಳಿಗಳಿಂದಲೂ, ಅಲಂಕೃತವಾಗಿದ್ದುವು. ಆಗಾಗ ಪಂಜರದಲ್ಲಿರಿಸಿದ ಗಿಳಿಗಳು ಮಧುರವಾಗಿ ಧ್ವನಿಮಾಡುತ್ತಿದ್ದವು. ॥೪೭॥

**ಕ್ರೀಡಾಮಯೂರರಚಿತಂ ಪತಾಕಾರ್ಬುದಶೋಭಿತಂ ।**
**ಮಣಿಜಾಲಾಂಕಿತಂ ದಿವ್ಯಮುದ್ಯತ್ಕಲಶಭಾಸುರಂ ॥೪೮॥**

**ಘಂಟಾನಾದಿತದಿಕ್ಚಕ್ರಂ ಪುಷ್ಪದಾಮೋಪಶೋಭಿತಂ ।**
**ರಣನ್ವೇಣುಮಹಾವೀಣಾಶಂಖದುಂದುಭಿಘೋಷಿತಂ ॥೪೯॥**

**ರುದ್ರಾವತಾರಕ್ರೀಡಾದಿರಚಿತಂ ಚಾರುಶಿಲ್ಪಕೈಃ ।**
**ಭಕ್ಷ್ಯಭೋಜ್ಯಾನ್ನಪಾತ್ರೈಶ್ಚ ಸುಗಂಧಾಮೋದಮೋಹಿತಂ ॥೫೦॥**

**ಧೂಪಿತಂ ಪರಧೂಪೈಶ್ಚ ನಾನಾಮಣಿಗಣಾನ್ವಿತಂ ।**
**ದಿವ್ಯಸಿಂಹಾಸನೋಪೇತಂ ಪತಾಕಾಛತ್ರಚಾಮರೈಃ ॥೫೧॥**

---

ಅಲ್ಲಲ್ಲಿ ಕ್ರೀಡೆಗಾಗಿ ನವಿಲುಗಳನ್ನು ತಂದಿರಿಸಿದ್ದನು. ಅನೇಕರೀತಿಯ ಪತಾಕೆಗಳನ್ನೂ ಧ್ವಜಗಳನ್ನೂ ಏರಿಸಿ ಕಟ್ಟಿದ್ದನು. ಮಣಿಯ ಜಾಲಗಳನ್ನು ತೂಗುಹಾಕಿದ್ದನು. ದಿವ್ಯವಾದ ಸುವರ್ಣಕಲಶಗಳನ್ನು ಪೂರ್ಣಮಾಡಿ ಅಣಿಯಾಗಿ ಇರಿಸಿದ್ದನು. ॥೪೮॥

ಆ ವಿಮಾನಕ್ಕೆ ಚಿಕ್ಕಚಿಕ್ಕ ಗಂಟೆಗಳನ್ನೂ, ಗೆಜ್ಜೆಗಳನ್ನೂ ಕಟ್ಟಿದ್ದನು. ಅವುಗಳ ಮಂದ್ರ ಶಬ್ದದಿಂದ ಎಲ್ಲಾ ದಿಕ್ಕುಗಳೂ ಶಬ್ದಾಯಮಾನವಾಗುತ್ತಿದ್ದವು. ಹೂಗಳ ಮಾಲಿಕೆಗಳನ್ನು ಬೇಕಾದಷ್ಟು ಅಲಂಕರಿಸಿದ್ದನು. ಅಲ್ಲಿ ಏರ್ಪಡಿಸಿದ್ದ ಕೊಳಲು, ವೀಣೆ, ಶಂಖ, ದುಂದುಭಿ ಮುಂತಾದವುಗಳ ಧ್ವನಿಯಿಂದಲೂ ದಿಕ್ಕುಗಳು ಮುಖರಿತವಾಗುತ್ತಿದ್ದುವು. ॥೪೯॥

ಆ ವಿಮಾನದಲ್ಲಿ ಶಂಕರನ ನಾನಾ ಅವತಾರಚಿತ್ರಗಳನ್ನೂ, ಅವನ ನಾನಾ ಕ್ರೀಡೆಗಳನ್ನೂ ಚತುರರಾದ ಶಿಲ್ಪಿಗಳಿಂದ ಬರೆಯಿಸಿದ್ದನು. ಬೇಕಾದಷ್ಟು ಸುಗಂಧ ದ್ರವ್ಯಗಳನ್ನೂ ತಂದು ತುಂಬಿರಿಸಿದ್ದನು. ಭೋಜನಕ್ಕೆ ಭಕ್ಷ್ಯಭೋಜ್ಯಾದಿ ಸಾಮಗ್ರಿಗಳನ್ನೂ ಸಿದ್ಧಪಡಿಸಿದನು. ॥೫೦॥

ವಿಮಾನವೆಲ್ಲಾ ಧೂಪದಿಂದ ಸುವಾಸಿತವಾಗಿದ್ದಿತು. ಕಣ್ಣಿಗೆ ಅಂದವಾಗಿ ತೋರುವಂತೆ ಮಣಿಗಳಿಂದ ಅಲಂಕರಿಸಿದನು. ಕುಳಿತುಕೊಳ್ಳಲು ದಿವ್ಯವಾದ ಸಿಂಹಾಸನವನ್ನು ಸಿದ್ಧಪಡಿಸಿಟ್ಟನು. ರಾಜಮರ್ಯಾದೆಯ ಗುರುತಾದ ಛತ್ರಿ, ಚಾಮರ, ಪತಾಕೆ ಮುಂತಾದುವುಗಳನ್ನೂ ಸರಿಯಾಗಿ ಸಜ್ಜುಗೊಳಿಸಿದನು. ॥೫೧॥

ಶೋಭಿತಂ ರತ್ನಮಂಚೈಶ್ಚ ಶಯ್ಯಾಗೃಹವಿಭೂಷಿತಂ ।
ಸುರಮ್ಯಮುಕುರೋದ್ದಾಮಂ ತಲಪಂಕ್ತಿವಿರಾಜಿತಂ ॥೫೨॥

ಸೋಪಧಾನಕುಥೋಪೇತಂ ಕಕ್ಷ್ಯಾಶತವಿಚಿತ್ರಿತಂ ।
ಕೈಲಾಸಶಿಖರಾಕಾರಂ ವಿಮಾನಂ ಸಾರ್ವಗಾಮಿಕಂ ॥೫೩॥

ರುದ್ರಾಣೀಗೀತಯಾ ಧುರ್ಯವೀಣಾದಿಧ್ವನಿಶೋಭಿತಂ ।
ತದ್ದೇವಾಯ ತದಾ ನಂದೀ ವಿಮಾನಂ ದರ್ಶಯತ್ ಕ್ಷಣಾತ್ ॥೫೪॥

ದೇವೋ ದೃಷ್ಟ್ವಾ ಗಣೈರ್ನೀತಮದ್ರಿಜಾಮಾಹ ಶಂಕರಃ ॥೫೫॥

॥ ಶ್ರೀ ಈಶ್ವರ ಉವಾಚ ॥

ಸಿದ್ಧಂ ವಿಮಾನಂ ದೇವೇಶಿ ತವ ಗಂತುಮುಪಸ್ಥಿತಂ ।
ದಿವ್ಯೋ ಮುಹೂರ್ತಸಮಯ ಸ್ಸಮಾರೋಹ ದ್ರುತಂ ಶಿವೇ ॥೫೬॥

---

ವಿಶ್ರಾಂತಿಗಾಗಿ ರತ್ನಮಂಚಗಳನ್ನಿರಿಸಿದನು. ಮಲಗಲು ಶಯ್ಯಾಗೃಹವನ್ನು ಪ್ರತ್ಯೇಕವಾಗಿ ಸಿದ್ಧಮಾಡಿಸಿದನು. ಅಲಂಕರಿಸಿಕೊಳ್ಳಲು ಅನುಕೂಲವಾಗುವಂತೆ ಅಲ್ಲಲ್ಲಿ ದೊಡ್ಡ ನಿಲುಗನ್ನಡಿಗಳನ್ನು ತಗಲುಹಾಕಿದನು. ॥೫೨॥

ದಿವ್ಯವಾದ ರತ್ನಗಂಬಳಿಗಳನ್ನೂ ಒರಗುದಿಂಬುಗಳನ್ನೂ ಸಿದ್ಧಪಡಿಸಿದನು. ತನ್ನ ಅಲಂಕಾರದ ಏರ್ಪಾಟಿನ ಚಮತ್ಕಾರದಿಂದ ಅಲ್ಲಿ ನೂರಾರು ಕೊಠಡಿಗಳು ತೋರುವಂತೆ ಮಾಡಿದನು. ಆ ವಿಮಾನದ ಶಿಖರವಿಭಾಗವು ನೋಡುವುದಕ್ಕೆ ಕೈಲಾಸಶಿಖರದಂತೆ ಕಾಣುತ್ತಿತ್ತು. ಆ ವಿಮಾನವು ಯಾವ ದಿಕ್ಕಿಗೆ ಹೋಗಬೇಕೆಂದರೆ ಆ ಎಲ್ಲಾಕಡೆಗೂ ಹೋಗುವಂತಹ ಶಕ್ತಿಯುಳ್ಳದ್ದಾಗಿದ್ದಿತು. ॥೫೩॥

ರುದ್ರಾಣಿಯರು ಬಾರಿಸಿದ ವೀಣೆಯ ಮಧುರವಾದ ಧ್ವನಿಯಿಂದ ತುಂಬಿಕೊಂಡು ಆ ವಿಮಾನವು ವಿಸ್ಮಯವಾಗುವಂತೆ ಇತ್ತು. ಅಂತಹ ವಿಮಾನವನ್ನು ಪರಮೇಶ್ವರನಿಗೆ ಕೂಡಲೇ ತೋರಿಸಿದನು. ॥೫೪॥

ಗಣಗಳು ತಂದು ಮುಂದಿರಿಸಿದ ಆ ದಿವ್ಯವಾದ ವಿಮಾನವನ್ನು ನೋಡಿ ಸಂತೋಷಪಟ್ಟು ಪರಮೇಶ್ವರನು ಪಾರ್ವತಿಯನ್ನು ಕುರಿತು ಹೀಗೆಂದನು. ॥೫೫॥

ಪ್ರಿಯೇ! ಗಿರಿಜೆಯೇ, ನಿನ್ನ ಪ್ರಯಾಣಕ್ಕೆ ವಿಮಾನವು ಸಿದ್ಧವಾಗಿದೆ.

ಮೈನಾಕೇನ ಗಿರೀಶೇನ ಮೇನಯಾ ಸ್ವಸಖೀಜನೈಃ ।
ತವಾನುಯಾತಾಸ್ಸರ್ವೇಽದ್ಯ ಸ್ಕಂದಹೇರಂಬಕಾಸ್ಸುತಾಃ ॥೫೭॥

ನಂದೀಶ್ವರೋ ವೀರಭದ್ರಸ್ತಂಡುರ್ಭೃಂಗೀ ರಿಟಿಸ್ತಥಾ ।
ಸೇವಾಂ ಕುರ್ವಂತಿ ದೇವೇಶಿ ತ್ವದೀಯಾಜ್ಞಾವಶಾಸ್ಸದಾ ॥೫೮॥

ವಿಶ್ರಮ್ಯ ಪಥಿ ದೇವೇಶಿ ಗಚ್ಛಾನಂದರಸೈರ್ಯುತಾ ।
ಇತ್ಯುಕ್ತಾ ಸಾ ಶಿವಾದೇಶಂ ಪ್ರಹೃಷ್ಟಹೃದಯಾ ಶಿವಾ ॥೫೯॥

ಶ್ರುತ್ವಾ ನತ್ವಾ ಮಹಾದೇವಂ ಸಾ ಗಾಢಂ ಪರಿಷಸ್ವಜೇ ।
ಕಿಂಚಿದಾನಂದಜಾಶ್ರೂಣಿ ಮುಂಚಂತೀ ಸಾ ಶಿವಾನನಂ ॥೬೦॥

---

ನೀನು ಹೊರಡುವ ಸುಮುಹೂರ್ತವೂ ಬಂದಿದೆ. ಈ ಸಮಯದಲ್ಲಿ ಶೀಘ್ರವಾಗಿ ವಿಮಾನವನ್ನು ಹತ್ತುವಳಾಗು. ||೫೬||

ನಿನ್ನೊಡನೆ ಹಿಮವಂತನೂ, ಮೇನಾದೇವಿಯೂ, ಮೈನಾಕನೂ, ಮತ್ತು ನಿನ್ನ ಸಖಿಯರೂ ಹೊರಡಲು ಸಿದ್ಧರಾಗಿರುವರು. ಷಣ್ಮುಖನನ್ನು ಮತ್ತು ಗಣಪತಿಯನ್ನು ನಿನ್ನೊಡನೆ ಕಳುಹಿಸುವೆನು. ಅವರಲ್ಲಿ ನಿನಗೆ ಅತ್ಯಂತ ಪ್ರೀತಿಯಿರುವುದು. ಆದ್ದರಿಂದ ಅವರನ್ನು ನೀನು ಬಿಟ್ಟಿರಲಾರೆ. ||೫೭||

ನಂದೀಶ್ವರನು ನಿನ್ನನ್ನು ಕರೆದುಕೊಂಡು ಹೋಗಲು ಬರುವನು. ನಿನ್ನ ಜೊತೆಯಲ್ಲಿ ಬರುವ ವೀರಭದ್ರ, ತಂಡು, ಭೃಂಗಿ, ರಿಟ ಇವರೆಲ್ಲರೂ ನಿನ್ನ ಆಜ್ಞಾನುವರ್ತಿಗಳಾಗಿ ಸೇವೆಮಾಡುವರು. ||೫೮||

ದೇವಿಯೇ, ಮಾರ್ಗದಲ್ಲಿ ಆಯಾಸಪಟ್ಟುಕೊಳ್ಳದೇ ಅಲ್ಲಲ್ಲಿ ತಂಗಿ ವಿಶ್ರಮಿಸಿಕೊಂಡು ಮುಂದಕ್ಕೆ ಪ್ರಯಾಣಮಾಡು. ನೀನು ಯಾವಾಗಲೂ ಆನಂದದಿಂದಲೇ ಇರಬೇಕು. ಯಾವ ಆತಂಕವನ್ನೂ ಪಟ್ಟುಕೊಳ್ಳಕೂಡದು. ಹೀಗೆಂದು ಪ್ರೀತಿಪುರಸ್ಸರವಾಗಿ ಹೇಳಿದ ಪರಮೇಶ್ವರನ ಮಾತನ್ನು ಕೇಳಿ ಪಾರ್ವತಿಗೆ ಬಹಳ ಆನಂದವಾಯಿತು. ||೫೯||

ತನ್ನ ಪ್ರಯಾಣಕ್ಕೆ ಸಕಲ ಸೌಕರ್ಯಗಳನ್ನೂ ದಯೆಯಿಂದ ಒದಗಿಸಿಕೊಟ್ಟು ಪ್ರೀತಿಯಿಂದ ಉಪಚಾರವನ್ನು ಹೇಳುತ್ತಿರುವ ಪರಮೇಶ್ವರನ ಮಾತನ್ನು ಕೇಳಿ, ಅತ್ಯಂತ ಕೃತಜ್ಞತೆಯಿಂದ ಪಾರ್ವತಿಯು ಶಂಕರನ ಕಾಲುಗಳಿಗೆರಗಿದಳು. ಮತ್ತೂ ಅತ್ಯಂತ ಪ್ರೀತಿಯಿಂದ ಗಾಢವಾಗಿ ಆಲಿಂಗನೆ ಮಾಡಿಕೊಂಡಳು. ಆಗ

**ವೀಕ್ಷ್ಯ ತ್ರಿಲೋಚನಾನಂದಜಾಶ್ರೂಣಿ ಪರಿಮಾರ್ಜತೀ ।**
**ನಾಸಾಂಚಲೇನ ತಾಮಾಹ ಸಂಸ್ಥಿತಾಂ ಚ ಮನೋನ್ಮನೀಂ ॥೬೧॥**

॥ ದೇವ್ಯುವಾಚ ॥

**ಶಿವಾಜ್ಞಾಕಾರಿಣೀ ಭದ್ರೇ ಶಯನಾಸನಚೇಷ್ಟಿತೈಃ ।**
**ಕಾಮಾಂಗನಾಶನಾಪಾರಚಿತ್ತರಾಗಾನುವರ್ತಿನೀ ॥೬೨॥**

**ವಿಹರಸ್ವ ಯಥಾ ಜೋಷಂ ಯಾವದಾಗಮನಂ ಮಮ ।**
**ಇತ್ಯಾಜ್ಞಾಪ್ಯ ತದಾ ದೇವೀ ಪುರಸ್ಸಂಸ್ಥಾಂ ಮನೋನ್ಮನೀಂ ॥೬೩॥**

---

ಪಾರ್ವತಿಯ ಕಣ್ಣುಗಳಲ್ಲಿ ಆನಂದಬಾಷ್ಪಗಳು ತನ್ನಷ್ಟಕ್ಕೆ ತಾನೇ ಬರುತ್ತಿದ್ದುವು. ||೬೦||

ಈ ಪಾರ್ವತಿಯ ಆನಂದಪರವಶತೆಯಿಂದ ಉಂಟಾದ ಪ್ರೀತಿಯ ವರ್ತನೆಯನ್ನು ನೋಡುತ್ತ ನೋಡುತ್ತ, ಪರಮೇಶ್ವರನೂ ಆನಂದಾಶ್ರುಗಳಿಂದ ತುಂಬಿಹೋದನು. ಆಗ ಪಾರ್ವತಿಯು ಪರಮೇಶ್ವರನ ಕಣ್ಣುಗಳಲ್ಲಿ ಆನಂದಾಂಬುವನ್ನು ಕಂಡು, ತವಕದಿಂದ ತನ್ನ ಸೀರೆಯ ಸೆರಗಿನಿಂದ ಆ ನೀರನ್ನು ಕೂಡಲೇ ಒರಸಿದಳು. ಮತ್ತು ಹತ್ತಿರದಲ್ಲಿಯೇ ಇದ್ದ ಮನೋನ್ಮನಿಯನ್ನು ಕುರಿತು ಹೀಗೆ ಹೇಳಿದಳು. ||೬೧||

"ಎಲೌ ಕಲ್ಯಾಣಿ, ಮನೋನ್ಮನಿ, ಶಂಕರನ ಆಜ್ಞೆಯನ್ನು ತಪ್ಪದೇ ಪಾಲಿಸು. ಶಯನ, ಆಸನ, ವಿಹಾರಗಳಲ್ಲೆಲ್ಲಾ ಆತನ ಮನಸ್ಸನ್ನು ಆಹ್ಲಾದಗೊಳಿಸುತ್ತಿರು. ಪರಮೇಶ್ವರನ ಮನಸ್ಸಿನ ಅಭಿಪ್ರಾಯವನ್ನು ತಿಳಿದುಕೊಂಡು ಶಂಕರನಿಗೆ ಅನುಕೂಲಳಾಗಿ ವರ್ತಿಸು. ||೬೨||

ನಾನು ತಿರುಗಿ ಬರುವವರೆಗೂ ಉಭಯತ್ರರಿಗೂ ಹೇಗೆ ಸಂತೋಷವಾಗುವುದೋ ಹಾಗೆ ಯಥೇಚ್ಛವಾಗಿ ವಿಹರಿಸಿ ಶಂಕರನನ್ನು ಆನಂದಗೊಳಿಸುತ್ತಿರು." ಹೀಗೆಂದು ಮುಂದುಗಡೆ ನಿಂತಿದ್ದ ಮನೋನ್ಮನಿಗೆ ಪಾರ್ವತಿಯು ಆಜ್ಞಾಪಿಸಿದಳು. ||೬೩||

ಸಾ ಪ್ರಣಮ್ಯ ಶಿವಾಪಾದೌ ತಯಾ ಮೂರ್ಧ್ನ್ಯುಪಜಿಘ್ರಿತಾ ।
ಶಿವೇನಾನುಗತಾ ದೇವೀ ಕಶ್ಚಿತ್ಕಕ್ಷ್ಯಾಂಬಿ[1]ಕಾಯುತಾ ॥೬೪॥

ಪ್ರತಸ್ಥೇ ಸಾ ತದಾ ದೇವೀ ಸಖೀಗಣನಿಷೇವಿತಾ ।
ಛತ್ರೈಃ ಪತಾಕೈರ್ವ್ಯಜನೈಶ್ಚಾಮರಾಣಾಂ ಚ ಪಂಕ್ತಿಭಿಃ ॥೬೫॥

ಭೂಷಣೈರ್ವರತಾಂಬೂಲವಾಸಸ್ಸ್ರಗ್ಗಂಧಧಾರಿಭಿಃ ।
ತಾಮನ್ವಯುರ್ಮಹಾದೇವೀಂ ಗಣಾ ನಂದ್ಯಾದಯಸ್ತಥಾ ॥೬೬॥

ಪ್ರೋತ್ಸಾರಿತಮಹಾಕಕ್ಷ್ಯಾ ಗಣಾನಾಂ ವೇತ್ರಧಾರಿಣಾಂ ।
ವಿಕಿರಂತಿ ಮಹಾದೇವ್ಯಾಃ ಪುಷ್ಪಾಣಿ ಪುರತೋ ಗಣಾಃ ॥೬೭॥

---

ಆ ಮನೋನ್ಮನಿಯು ಅಪ್ಪಣೆ ಎಂದು ಪಾರ್ವತಿಯ ಕಾಲುಗಳಿಗೆರಗುತ್ತಿರಲು ಆಕೆಯನ್ನು ಪಾರ್ವತಿಯು ಆಲಿಂಗಿಸಿಕೊಂಡು, ಶಿರಸ್ಸನ್ನು ಆಘ್ರಾಣಿಸಿ, ಸಮಾಧಾನ ಹೇಳಿದಳು. ಅನಂತರ ಪರಮೇಶ್ವರನಿಂದ ಹಿಂಬಾಲಿಸಲ್ಪಟ್ಟವಳಾಗಿಯೇ ತಾಯಿಯಾದ ಮೇನಕೆಯೊಡನೆ ವಿಮಾನದ ಒಂದು ಕೊಠಡಿಯನ್ನು ಹತ್ತಿ ಪ್ರವೇಶಿಸಿದಳು. ॥೬೪॥

ಪಾರ್ವತಿಯು ಪ್ರಯಾಣಕ್ಕೆ ಸಿದ್ಧಳಾದಳು. ಆಗ ಎಲ್ಲಾ ಸಖಿಯರೂ ಸೇವಿಸುತ್ತಾ ಹಿಂಬಾಲಿಸಿದರು. ಒಬ್ಬೊಬ್ಬರು ಒಂದೊಂದರಂತೆ ಛತ್ರ, ಚಾಮರ, ಪತಾಕೆ ಮುಂತಾದವುಗಳನ್ನು ಹಿಡಿದುಕೊಂಡು ಬಿಜಯಂಗೈಯ್ಯುತ್ತಿದ್ದರು. ॥೬೫॥

ನಂದೀಶ್ವರನೇ ಆದಿಯಾಗಿ ಪರಿವಾರದ ಗಣಗಳು ವಸ್ತ್ರಾಲಂಕಾರಗಳನ್ನೂ, ಗಂಧಪುಷ್ಪಾದಿಗಳನ್ನೂ, ತಾಂಬೂಲದ ಸಾಮಗ್ರಿಗಳನ್ನೂ ಹಿಡಿದುಕೊಂಡವರಿಂದ ಪಾರ್ವತಿಯನ್ನು ಹಿಂಬಾಲಿಸಿದರು. ॥೬೬॥

ವೇತ್ರಧಾರಿಗಳೂ, ದಂಡಧಾರಿಗಳೂ ಆದ ಗಣಗಳು ದಾರಿಬಿಡಿಸಿ ಪರಾಕು ಹೇಳುತ್ತಿರಲು ಮಹಾದೇವಿಯು ವಿಮಾನವನ್ನೇರಿದಳು. ಆಗ ಗಣಗಳು ದೇವಿಯ ಮುಂಭಾಗದಲ್ಲೆಲ್ಲಾ ಪುಷ್ಪಗಳ ವೃಷ್ಟಿಯನ್ನೇ ಸುರಿಸಿದರು. ॥೬೭॥

---

1 ಕಶ್ಚಿತ್ಕಕ್ಷ್ಯಾದಿಕಾಯುತಃ (ಪಾ. ೨)

ಮೃದಂಗಮುರಜಾಪಾರಶಂಖದುಂದುಭಿನಿಸ್ವನೈಃ ।
ನೃತ್ಯಂತಿ ರುದ್ರಕನ್ಯಾಶ್ಚ ದೇವ್ಯಾಸ್ತಾಸ್ಸನ್ನಿಧೌ ಮುದಾ ॥೧೮॥

ಕೈಲಾಸಶಿಖರೋದ್ಧಾಮಪ್ರಾಸಾದವರಮೌಳಿಗಾಃ ।
ವಿಕಿರಂತಿ ಮಹಾದೇವೀಂ ಲಾಜೈಸ್ಸುಮನಸಾಂ ಗಣೈಃ ॥೧೯॥

ಜಯೇತಿ ಪ್ರಸಭಂ ವಾಚೋ ಮುಮುಚುಸ್ತೇ ಗಣೋತ್ತಮಾಃ ।
ತಾಮಾಲಿಂಗ್ಯ ಮಹಾದೇವೀಮನುಯಾಂತಾಂ ಮನೋನ್ಮನೀಂ ॥೨೦॥

ದೇವಪಾರ್ಶ್ವಂ ದ್ರುತಂ ಗಚ್ಛೇತ್ಯಾಶಾತ್ತಾಂ ಮೇನಯಾನುಗಾ ।
ವಿಮಾನವರಮಾರುಹ್ಯ ಸಿಂಹಾಸನವರಾಶ್ರಿತಾ ॥೨೧॥

ಮೇನಯಾ ಭೂಧರೇಶೇನ ಮೈನಾಕೇನ ಸಖೀಗಣೈಃ ।
ಸ್ಕಂದೇನ ಗಣಪೇನೇಶೀ ನಂದ್ಯಾದಿಗಣಪೈಸ್ತದಾ ॥೨೨॥

---

ಪ್ರಯಾಣದ ಪ್ರಾರಂಭದಲ್ಲಿ ಶುಭಸೂಚಕಗಳಾದ ಮೃದಂಗ ಮುರಜ, ಶಂಖ, ದುಂದುಭಿ ಮುಂತಾದ ವಾದ್ಯಗಳನ್ನು ಮಧುರವಾಗಿ ಬಾರಿಸಿದರು. ಆಗ ದೇವಿಯ ಸನ್ನಿಧಿಯಲ್ಲಿ ರುದ್ರಾಣಿಯರು ಹರ್ಷವನ್ನು ಬೀರುತ್ತಾ ನರ್ತನ ಮಾಡಿದರು. ||೧೮||

ಕೈಲಾಸದ ಮೇಲುಪ್ಪರಿಗೆಯ ಮೇಲಿಂದ ಸ್ತ್ರೀಯರು ಮಂಗಲಾರ್ಥವಾಗಿ ಪುಷ್ಪಸಹಿತವಾದ ಲಾಜಾಕ್ಷತೆಯನ್ನು ದೇವಿಯಮೇಲೆ ಸುರಿಸುತ್ತಿದ್ದರು. ||೧೯||

ಆಗ ಗಣಗಳೆಲ್ಲವೂ ಜಯವಾಗಲಿ, ದೇವಿಗೆ ಜಯವಾಗಲಿ ಎಂದು ಘೋಷಿಸುತ್ತಿದ್ದರು. ಪಾರ್ವತಿಯು ಹೊರಡುತ್ತಿದ್ದಹಾಗೇ ಮನೋನ್ಮನಿಯೂ ಹಿಂಬಾಲಿಸಿ ಹೊರಡುತ್ತಿರಲು, ಆಕೆಯನ್ನು ಆಲಿಂಗಿಸಿಕೊಂಡು ಪಾರ್ವತಿಯು ಹೀಗೆ ಹೇಳುವಳು. ||೨೦||

ಎಲೌ ಮನೋನ್ಮನಿ, ಶಂಕರನನ್ನು ಕ್ಷಣಕಾಲವೂ ಬಿಟ್ಟಿರಬೇಡ. ಜಾಗ್ರತೆ ಹೋಗಿ ಆತನ ಪಾರ್ಶ್ವದಲ್ಲಿ ಇರು. ಹೀಗೆಂದು ಆಕೆಗೆ ಹೇಳಿ, ಮೇನಾದೇವಿಯು ಹಿಂಬಾಲಿಸುತ್ತಿರಲು ಪಾರ್ವತಿಯು ವಿಮಾನವನ್ನು ಹತ್ತಿ ಸಿಂಹಾಸನದ ಮೇಲೆ ಕುಳಿತುಕೊಂಡಳು. ||೨೧||

ಪಾರ್ವತಿಯು ವಿಮಾನವನ್ನೇರಿದಮೇಲೆ ಒಬ್ಬೊಬ್ಬರಾಗಿ ಮೇನಾದೇವಿ, ಹಿಮವಂತ, ಮೈನಾಕ, ಸಖೀಜನ, ಷಣ್ಮುಖ, ಗಣಪತಿ, ನಂದಿಯೇ ಮೊದಲಾದ ಪ್ರಮಥಗಣಗಳೂ ವಿಮಾನವನ್ನು ಹತ್ತಿದರು. ||೨೨||

ಜಯೇತಿ ಪೂಜಿತಾ ವಾಗ್ಭಿಸ್ಸಂತೋಷಾಕುಲಮಾನಸಾ ।
ರುದ್ರಾಣೀಕರಜೋದಾರವೀಣಾಕ್ವಣನಸುಂದರೈಃ ॥೭೩॥

ಶಿವನಾಮಾಮೃತರಸಂ ಪಿಬಂತೀ ಶ್ರೋತ್ರಸಂಪದಾ ।
ನಯನಾನಂದದಂ ದೇವೀ ಪಶ್ಯಂತೀ ಸ್ವಸಖೀಜನೈಃ ॥೭೪॥

ವೀಜಿತಾ ವ್ಯಜನೈಶ್ಚಿತ್ರೈಶ್ಚಾಮರೈಸ್ಸಖಿಭಿಸ್ತದಾ ।
ಪೂಜಿತಾ ಭಕ್ಷ್ಯಭೋಜ್ಯೈಶ್ಚ ಪೇಯೈರ್ಧೂಪೈಶ್ಚ ಧೂಪಿತಾ ॥೭೫॥

ಮೇನಯಾ ವಿಹರಂತೀ ಸಾ ಯಯೌ ಮಂದಂ ಹಿಮಾಲಯಂ ।
ಪಶ್ಯಂತೀ ದಿವ್ಯಸೌಧಾನಾಂ ಮಾಲಾಃ ಪ್ರೋದ್ಯತ್ಪತಾಕಕಾಃ ॥೭೬॥

---

ಗಣಗಳೆಲ್ಲವೂ ಜಯ ಜಯ ಮಹಾದೇವಿ ಎಂದು ಜಯಘೋಷಮಾಡು ತ್ತಿದ್ದರು. ಈ ಎಲ್ಲಾ ಪ್ರಯಾಣದ ವಿಜೃಂಭಣೆಯನ್ನು ನೋಡಿ ಪಾರ್ವತಿಗೆ ಸಂತೋಷದಿಂದ ಕೂಡಿದ ವ್ಯಾಕುಲವು ತಲೆದೋರಿತು. ದೇವಿಯ ಮನಸ್ಸಿಗೆ ಸ್ವಲ್ಪ ಆತಂಕವಾಗಿದೆ ಎಂದು ತೋರಿದಕೂಡಲೇ ರುದ್ರಾಣಿಯು ತನ್ನ ಬೆರಳುಗುರಿನ ಚಾತು ರ್ಯವನ್ನು ಪ್ರಕಟಿಸುವಂತೆ, ಸುಂದರವಾದ ಶಿವನಾಮಸ್ತೋತ್ರವನ್ನು ವೀಣೆಯಿಂದ ಮಧುರವಾಗಿ ಬಾರಿಸುತ್ತಿದ್ದಳು. ಆ ಇಂಪಾದ ಶಿವನಾಮಧ್ವನಿಯಿಂದ ದೇವಿಯ ಮನಸ್ಸಿಗೆ ಶಾಂತಿಯೊದಗಿ, ಸಮಾಧಾನದಿಂದ ಶಿವಕೀರ್ತನೆಯನ್ನು ಸಖಿಯರೊಂದಿಗೆ ಕೇಳುವಳು. ||೭೩-೭೪||

ಆಗ ಸಖಿಯರು ಬೀಸಣಿಗೆಯಿಂದ ಗಾಳಿಬೀಸುವರು, ಚಾಮರದಿಂದ ಸೇವಿ ಸುವರು. ಭಕ್ಷ್ಯಭೋಜ್ಯಾದಿಗಳನ್ನಿತ್ತು ಉಪಚರಿಸುವರು. ಧೂಪಗಳಿಂದ ಸುವಾಸನೆ ಯನ್ನು ಪ್ರಸಾರಮಾಡುವರು. ||೭೫||

ಮೇನಾದೇವಿಯೊಡನೆ ವಿಲಾಸದಿಂದ ಹಿಮಾಲಯಕ್ಕೆ ಪ್ರಯಾಣ ಮಾಡು ತ್ತಿರಲು, ದಾರಿಯಲ್ಲಿ ದಿವ್ಯವಾದ ಉಪ್ಪರಿಗೆ ಮನೆಗಳು ಕಾಣುತ್ತಿದ್ದುವು. ಆ ಮನೆಗಳ ಮೇಲೆಲ್ಲಾ ಧ್ವಜಗಳನ್ನೂ ಪತಾಕೆಗಳನ್ನೂ ಏರಿಸಿ ಕಟ್ಟಿರುತ್ತಿದ್ದರು. ಇವೆಲ್ಲವೂ ನೋಡುವುದಕ್ಕೆ ರಮ್ಯವಾಗಿರುತ್ತಿದ್ದುವು. ||೭೬||

ಕೈಲಾಸಲಿಂಗಧಾಮಾನಿ ಪ್ರೋದ್ಯತ್ಕುಂಭಾನಿ ಸಾ ಶಿವಾ ।
ಧ್ಯಾಯಂತೀ ಶಿವಪಾದಾಬ್ಜಂ ವಿಹಾರಾಹಾರಚೇಷ್ಟಿತಂ ॥೭೭॥

ಸ್ಮರಂತೀ ಸ್ವಚರಿತ್ರಾಣಿ ಶಿವಸ್ಯ ಪರಮಾತ್ಮನಃ ।
ಸರ್ವಾನ್ ಗಣೇಂದ್ರಾನ್ ಪಿತರಂ ಸ್ಕಂದಹೇರಂಬಕಾವಪಿ ॥೭೮॥

ನಿವೇಶ್ಯ ಬಾಹ್ಯಕಕ್ಷ್ಯಾಯಾಂ ವಿಮಾನಸ್ಯಾರ್ಕರೋಚಿಷಃ ।
ಶಿವನೈವೇದ್ಯಭಕ್ಷ್ಯಾದ್ಯೈರತರ್ಪಯತ ಶಂಕರೀ ॥೭೯॥

ಸ್ರಗ್ಗಂಧಾಭರಣೈರುಚ್ಚೈಃ ರುದ್ರಾಣೀವರನರ್ತನೈಃ ।
ಸಮಾಯಯೌ ಸಾ ಪಿತರಂ ನಗೇಂದ್ರಂ ಪಾರ್ವತೀ ತದಾ ॥೮೦॥

---

ಪ್ರಯಾಣ ಮಾಡುತ್ತಿರುವಾಗ ಆ ಕೈಲಾಸಪ್ರದೇಶಗಳಲ್ಲಿ ಅಲ್ಲಲ್ಲಿ ಶಿವದೇವಾಲಯಗಳೂ ಪುಣ್ಯತೀರ್ಥಗಳೂ ಕಣ್ಣಿಗೆ ಕಾಣುತ್ತಿದ್ದುವು. ಮಧ್ಯೆ ಮಧ್ಯೆ ಪಾರ್ವತಿಗೆ ಪರಮೇಶ್ವರನ ಸ್ಮರಣೆಯು ಬರುತ್ತಿತ್ತು. ತಾನು ಜೊತೆಯಲ್ಲಿ ಇದ್ದಾಗ ಯಾವ ಯಾವಾಗ ಏನೇನು ವಿಹಾರಗಳು ನಡೆದಿದ್ದವೋ ಅವುಗಳೂ ಸಹ ನೆನಪಿಗೆ ಬರುತ್ತಿದ್ದುವು. ||೭೭||

ಮಧ್ಯೆ ಮಧ್ಯೆ ತನ್ನ ಮೊದಲಿನ ವಿದ್ಯಮಾನಗಳೂ ಗೋಚರಿಸುತ್ತಿದ್ದುವು. ಈ ಎಲ್ಲಾ ಏಕಾಂತವಿಹಾರಗಳಿಗೆ ಅನುಕೂಲವಾಗುವಂತೆ ತಾನೊಬ್ಬಳೇ ಒಂದು ಕೊಠಡಿಯಲ್ಲಿ ಕುಳಿತಿರುತ್ತಿದ್ದಳು. ಉಳಿದ ಸರ್ವಗಣಗಳನ್ನೂ, ತಂದೆಯನ್ನೂ, ಷಣ್ಮುಖಗಣಪತಿಯರನ್ನೂ ಬೇರೆಕಡೆ ಕುಳಿತುಕೊಳ್ಳಲು ಹೇಳಿದಳು. ||೭೮||

ಹಾಗೆಯೇ ಎಲ್ಲಾ ಪರಿವಾರವರ್ಗವನ್ನೂ ವಿಮಾನದ ಬೇರೆಭಾಗದಲ್ಲಿ ಕುಳಿತುಕೊಳ್ಳುವಂತೆ ಹೇಳಿ, ತಾನು ಶಾಂತಳಾಗಿ ಕುಳಿತು, ಬೇಕೆನಿಸಿದಾಗ ಶಿವನೈವೇದ್ಯದ ಪವಿತ್ರವಾದ ಭಕ್ಷ್ಯಾದಿಗಳನ್ನು ಸೇವಿಸಿ ಆ ಮೂಲಕ ತೃಪ್ತಿಹೊಂದುವಳು. ||೭೯||

ಆಗಾಗ ವಸ್ತ್ರಾಭರಣಗಳಿಂದ ಅಲಂಕಾರಮಾಡಿಸಿಕೊಳ್ಳುತ್ತಲೂ, ಗಂಧ ಮತ್ತು ಹೂಮಾಲಿಕೆಗಳನ್ನು ಸ್ವೀಕರಿಸುತ್ತಲೂ, ರುದ್ರಾಣೀಕನ್ಯೆಯರ ನೃತ್ಯವನ್ನು ನೋಡಿ ಸಂತೋಷಪಡುತ್ತಲೂ ಪ್ರಯಾಣಮಾಡುತ್ತಾ ತಂದೆಯಮನೆಯಾದ ಹಿಮವತ್ಪರ್ವತಕ್ಕೆ ಬರುತ್ತಾ ಇದ್ದಳು. ||೮೦||

ಯಾವತ್ಕೈಲಾಸಶಿಖರಂ ದರ್ಶಿತಾ ನಂದಿತಾಂತರಾ ।
ಅಪಕ್ಷ್ಮಪಕ್ಷ್ಮಪಾತೇನ ಪಶ್ಯಂತೀ ಭರ್ತುರಾಲಯಂ ॥೮೧॥

ಪ್ರಣಮ್ಯ ತದ್ವಿಮಾನಾಗ್ರಂ ದೇವದೇವಸ್ಯ ಶೂಲಿನಃ ।
ತಾವದ್ದದರ್ಶ ಸಾ ದೂರಾತ್ ಕೇದಾರೇಶಶಿವಾಲಯಂ ॥೮೨॥

ಜ್ವಲತ್ಕುಂಭಪತಾಕಾಗ್ರವರಗೋಪುರಭೂಧರಂ ।
ತತ್ರ ಪ್ರಣಮ್ಯ ಸಾ ದೇವೀ ದೂರಾದ್ದೈಕ್ಷದ್ಧಿಮಾಲಯಂ ॥೮೩॥

ತದಾ ಹಿಮಾಚಲೇಂದ್ರೇಣ ಪಾರ್ವತೀಯಾ ಗಣೋತ್ತಮಾಃ ।
ಪ್ರೇಷಿತಾ ಶ್ರೀಮಹೇಶಾನ್ಯಾ ಸ್ಸದ್ಮಾಲಂಕರ್ತುಮುದ್ಯತಾಃ ॥೮೪॥

---

ಎಷ್ಟು ದೂರದವರೆಗೆ ಕೈಲಾಸಶಿಖರವೂ ಪ್ರಿಯಶಂಕರನ ಉಪ್ಪರಿಗೆಯೂ ಕಾಣುವುದೋ, ಅಷ್ಟು ದೂರದವರೆಗೆ ಎವೆಯಿಕ್ಕದ ನೋಟದಿಂದ ಅದನ್ನು ನೋಡಿ ಔತ್ಸುಕ್ಯದಿಂದ ಹರ್ಷಪಡುವಳು. ॥೮೧॥

ಕಣ್ಣಿಗೆ ಮರೆಯಾಗುವ ಹೊತ್ತಿಗೆ ಪರಮೇಶ್ವರನ ವಿಮಾನರೂಪವಾದ ಉಪ್ಪರಿಗೆ ಶಿಖರವನ್ನು ನಮಸ್ಕರಿಸುವಳು. ಹಾಗೆಯೇ ಕೇದಾರೇಶ್ವರ ಶಿವಾಲಯವು ಎಲ್ಲಿಯವರೆಗೆ ಕಣ್ಣಿಗೆ ಕಾಣುತ್ತದೆಯೋ ಅಲ್ಲಿಯವರೆಗೂ ನೋಡುತ್ತಲೇ ಇರುವಳು. ಅನಂತರ ನಮಸ್ಕಾರವನ್ನೂ ಮಾಡುವಳು. ॥೮೨॥

ಹೀಗೆಯೇ ಪೂರ್ಣಕಲಶ, ಪತಾಕೆ, ಧ್ವಜ, ಮುಂತಾದವುಗಳಿಂದ ಅಲಂಕೃತ ವಾದ ಎಲ್ಲಾ ಗೋಪುರಗಳನ್ನೂ ನೋಡಿ ನೋಡಿ, ನಮಸ್ಕಾರಮಾಡಿ ಪ್ರಯಾಣ ಮಾಡುತ್ತಾ ಮುಂದುವರೆಯುತ್ತಿರಲು, ದೂರದಲ್ಲಿ ಹಿಮಾಲಯವು ಕಣ್ಣಿಗೆ ಗೋಚರ ವಾಗತೊಡಗಿತು. ॥೮೩॥

ಹಿಮಾಲಯಪರ್ವತದ ಸಮೀಪಕ್ಕೆ ಬಂದೊಡನೆಯೇ, ಹಿಮವಂತನು ತನ್ನ ಕಡೆಯ ಗಣಜನರನ್ನು ಮುಂಗಡವಾಗಿ, ಪಾರ್ವತಿಯ ಸ್ವಾಗತಕ್ಕೆ ಅನುಕೂಲಪಡಿ ಸಲೂ, ಪಾರ್ವತಿಯ ಉಪ್ಪರಿಗೆಯನ್ನು ಚೆನ್ನಾಗಿ ಅಲಂಕಾರಮಾಡಲೂ, ಆಜ್ಞಾಪಿಸಿ ಕಳುಹಿಸಿದನು. ॥೮೪॥

ಸ್ವಮೌಳಿಮಪಿ ಕೇದಾರಂ ರಮ್ಯಂ ಚಾರುಶಿವಾಲಯಂ ;
ಸಿಕ್ತಾ ಗಂಧಾಂಬುಭಿರ್ಮಾರ್ಗಾ ಫಲಿತಾಸ್ತತ್ರ ತೇ ನಗಾಃ ॥೮೫॥

ನಗೋರ್ಧ್ವಶಿಖರೋದ್ಭಾಸಿಫಲಪುಷ್ಪಾಳಿಶೋಭಿತಾಃ ।
ದೀಪಾವಲೀವಿರಚಿತರತ್ನತೋರಣಪಂಕ್ತಯಃ ॥೮೬॥

ಪ್ರೋದ್ಯದ್ರಂಭಾಫಲಭರಪುಷ್ಪೈಶ್ಚೈವಾವಲಂಬಿಭಿಃ ।
ದ್ವಾರೇಷು ಪರಿಕೃತ್ಯಾಶ್ಚ ಮಣಿಕುಂಭಾಸ್ಸುಪಲ್ಲವಾಃ ॥೮೭॥

ರಂಗವಲ್ಲೀ ವಿರಚಿತಾ ಸ್ವಮೌಳಿವರಶೃಂಗಕೇ ।
ಕೇದಾರೇಶಾಲಯಂ ತಸ್ಯ ದಿವ್ಯಧೂಪವಿರಾಜಿತಂ ॥೮೮॥

---

ಹಿಮವಂತನಿಂದ ಆಜ್ಞಪ್ತರಾದ ಸೇವಕರು ಶೀಘ್ರವಾಗಿ ಹೋಗಿ, ಅಲ್ಲಿ ಎಲ್ಲಾ ವ್ಯವಸ್ಥೆಯನ್ನೂ ಮಾಡಿದರು. ಹಿಮವತ್ಪರ್ವತದಲ್ಲಿದ್ದ ಕೇದಾರೇಶ್ವರ ಶಿವಾಲಯವನ್ನು ಚೆನ್ನಾಗಿ ಅಲಂಕರಿಸಿದರು. ದಾರಿಯಲ್ಲೆಲ್ಲಾ ಗಂಧಜಲವನ್ನು ಸಿಂಪಡಿಸಿ ಅಲ್ಲಲ್ಲಿ ತಳಿರುತೋರಣ ಕಟ್ಟಿದರು. ಅಲ್ಲಲ್ಲಿ ಗಿರಿಗೋಪುರಗಳಿಗೆ ಹಣ್ಣುಕಾಯಿಗಳ ಗೊಂಚಲುಗಳನ್ನು ತೂಗುಹಾಕಿದರು. ॥೮೫॥

ಪರ್ವತದ ಮೇಲೆ ಕೆಲವು ಮರಗಳಲ್ಲಿ ಸ್ವಾಭಾವಿಕವಾಗಿಯೇ ಹಣ್ಣು ಕಾಯಿ, ಹೂವು, ಮೊಗ್ಗುಗಳೂ ಬಿಟ್ಟಿದ್ದುದರಿಂದಲೂ ಅಲಂಕಾರವಾಗಿಯೇ ತೋರುತ್ತಿದ್ದಿತು. ಅದರ ಜೊತೆಗೆ ಅಲ್ಲಲ್ಲಿ ಸಾಲುದೀಪಗಳನ್ನು ತಂದಿಟ್ಟರು. ರತ್ನದ ತೋರಣಗಳನ್ನು ಕಟ್ಟಿದರು. ॥೮೬॥

ಕಾಯಿಗಳ ಗೊನೆಯಿಂದಲೂ, ಹೂವಿನಿಂದಲೂ, ಹುಲುಸಾದ ಎಲೆಗಳಿಂದಲೂ ರಮ್ಯವಾಗಿರುವ ಬಾಳೆಕಂಬಗಳನ್ನು ಬಾಗಿಲುಗಳಿಗೆ ಕಟ್ಟಿದರು. ಬಾಗಿಲುಗಳ ಎರಡೂ ಪಾರ್ಶ್ವಗಳಲ್ಲಿ ಪಂಚಪಲ್ಲವಶೋಭಿತವಾದ ಮಣಿಮಯವಾದ ಪೂರ್ಣಕಲಶಗಳನ್ನು ತಂದಿಟ್ಟಿದ್ದರು. ॥೮೭॥

ಅರಮನೆಯನ್ನೆಲ್ಲಾ ಸ್ವಚ್ಛಮಾಡಿ ಸುಂದರವಾಗಿ ರಂಗೋಲಿಯನ್ನು ಸುತ್ತಲೂ ಹಾಕಿದರು. ಅಲ್ಲಿಯ ಕೇದಾರಶಿವಾಲಯದ ತುಂಬ ಧೂಪಹಾಕಿ ಅದನ್ನು ಸುವಾಸನೆಯಿಂದ ತುಂಬಿದರು. ॥೮೮॥

ಪ್ರೋದ್ಯತ್ಪತಾಕಾಬಹುಲಂ ಬಿಲ್ವಮಂದಾರಪೂಜಿತಂ ।
ಲಿಂಗಂ ತಚ್ಚಂದನಾಲಿಪ್ತಂ ಫಣೀಫಣವಿಭೂಷಿತಂ ॥೮೯॥

ದೇವಾಂಗನಾಸ್ಸಮಾಯಾತಾ ವಿಷ್ಣುಬ್ರಹ್ಮಾದಯಸ್ಸುರಾಃ ।
ಗಂಧರ್ವಾ ಮುನಯಸ್ಸಿದ್ಧಾಶ್ಚಾರಣಾಶ್ಚಾಪ್ಸರೋಗಣಾಃ ॥೯೦॥

ಸ್ತುವಂತಿ ಚ ಮಹಾದೇವೀಂ ನೃತ್ಯಂತ್ಯಪ್ಸರಸಃ ಪುರಃ ।
ಗಾಯಂತಿ ಗೀತಂ ಗಂಧರ್ವಾ ವೇದಾರ್ಜೇಪುರ್ಮುನೀಶ್ವರಾಃ ॥೯೧॥

ಏವಂ ನಾನಾವಿಧೈರ್ಘೋಷೈರ್ಯುಕ್ತಾ ಸಾ ಪರಮೇಶ್ವರೀ ।
ಸ್ವಪಿತುಶ್ಚಾರುಶಿಖರಪ್ರಾಸಾದವರಮಾಸದತ್ ॥೯೨॥

ದೇವೈಸ್ಸ್ತುತಾ ಗಣೇಂದ್ರೈಶ್ಚ ಪಿತೃಮಾತ್ರಾನುಮೋದಿತಾ ।
ತತ್ರಾವಿಶತ್ ಪಿತುರ್ವೇಶ್ಮ ವಿಮಾನಾದವರುಹ್ಯ ಸಾ ॥೯೩॥

---

ಆ ಶಿವಾಲಯವನ್ನು ನಾನಾವಿಧವಾದ ಪತಾಕೆಗಳಿಂದ ಅಲಂಕರಿಸಿದರು. ಆ ಕೇದಾರಲಿಂಗಕ್ಕೆ ಬಿಲ್ವಪತ್ರೆ, ಮಂದಾರಪುಷ್ಪ ಮುಂತಾದುವುಗಳಿಂದ ನಿರ್ಮಿತವಾದ ಪುಷ್ಪಮಾಲೆಯನ್ನು ಚೆನ್ನಾಗಿ ಅಲಂಕಾರಮಾಡಿದರು. ಚಂದನಗಂಧಗಳನ್ನೂ ಲೇಪಿಸಿ ನಾಗಾಭರಣದಿಂದ ಅಲಂಕರಿಸಿದರು. ॥೮೯॥

ಮಹಾದೇವಿಯಾದ ಗಿರಿಜೆಯ ಆಗಮನವನ್ನು ತಿಳಿದು, ಆಕೆಯ ಸ್ವಾಗತಕ್ಕಾಗಿ ದೇವಾಂಗನೆಯರು ವಿಷ್ಣು, ಬ್ರಹ್ಮ, ದೇವತೆಗಳು, ಗಂಧರ್ವರು, ಸಿದ್ಧರು, ಚಾರಣರು, ಅಪ್ಸರಸ್ತ್ರೀಯರು ಮುಂತಾದವರೆಲ್ಲರೂ ಆ ಹಿಮವತ್ಪರ್ವತಕ್ಕೆ ಬಂದು ಸಿದ್ಧರಾದರು. ॥೯೦॥

ಸ್ವಾಗತಸಮಾರಂಭಕ್ಕೆ ಸಿದ್ಧರಾದ ದೇವತೆಗಳು ಪಾರ್ವತಿಯನ್ನು ಸ್ತುತಿಸಲಾರಂಭಿಸಿದರು. ಅಪ್ಸರಸ್ತ್ರೀಯರು ಮುಂಭಾಗದಲ್ಲಿ ನರ್ತನಮಾಡಿದರು. ಗಂಧರ್ವರು ಸಂಗೀತವನ್ನು ಹಾಡಿದರು. ॥೯೧॥

ಈ ಪ್ರಕಾರವಾಗಿ ನಾನಾಸಂಭ್ರಮದಿಂದ ಕಲ್ಲೋಲಿತವಾದ, ತನ್ನ ತಂದೆಯ ಅರಮನೆಯ ಹತ್ತಿರಕ್ಕೆ ಬಂದಳು. ಆ ದಿವ್ಯಸೌಧವಾದರೋ, ಮನೋಹರವಾದ ಶಿಖರದಿಂದಲೂ, ಕಾಂತಿಮತ್ತಾದ ಉಪ್ಪರಿಗೆಯಿಂದಲೂ ಶೋಭಿಸುತ್ತಿದ್ದಿತು. ॥೯೨॥

ದೇವತೆಗಳೂ, ಗಣೇಂದ್ರರುಗಳೂ ಪಠನಪೂರ್ವಕವಾಗಿ ಸ್ತೋತ್ರಮಾಡು

ಮಾತ್ರಾ ದತ್ತಕರಾ ದೇವೀ ದಿವ್ಯಸಿಂಹಾಸನಾಶ್ರಿತಾ ।
ವಿಹಾರಾಹಾರಶಯ್ಯಾಭಿಃ ಪೂಜಿತಾ ಪರಮೇಶ್ವರೀ ॥೯೪॥

ಉವಾಸ ಹಿಮಶೈಲೇ ಸಾ ಸ್ವಪಿತುರ್ಭವನೇ ಮುದಾ ।
ಮಣಿದೀಪಜಪಂಕ್ತೀಭಿಸ್ತದಾ ನೀರಾಜಿತಾಂಬಿಕಾ ॥೯೫॥

ವಾಸೋಭೀರತ್ನಪುಷ್ಪೈಶ್ಚ ಗಿರೀಂದ್ರೇಣಾರ್ಚಿತಾ ಶಿವಾ ।
ವಿಸೃಜ್ಯ ಸ್ಕಂದಹೇರಂಬೌ ನಂದಿಕೇಶಾದಿಕಾನ್ ಗಣಾನ್ ॥೯೬॥

ಯಾತೇತ್ಯಶಾದ್ಗಣಾನ್ ದೇವೀ ಕೈಲಾಸಂ ಶಂಕರಾಲಯಂ ।
ಪ್ರಣಮ್ಯ ತಂ ಮಹಾದೇವೀಂ ಸ್ಕಂದನಂದ್ಯಾದಯೋಗಣಾಃ ॥೯೭॥

---

ತ್ತಿರಲು ಗಿರಿಜೆಯು ತಂದೆತಾಯಿಗಳನ್ನು ಆನಂದಪರವಶರನ್ನಾಗಿ ಮಾಡುತ್ತಾ ವಿಮಾನದಿಂದಿಳಿದು ಹಿಮವಂತನ ಮನೆಯನ್ನು ಪ್ರವೇಶಿಸಿದಳು. ॥೯೩॥

ಪಾರ್ವತಿಯು ಅರಮನೆಯನ್ನು ಪ್ರವೇಶಿಸುತ್ತಿರಲು ಮೇನಾದೇವಿಯೇ ಹಸ್ತ ಲಾಘವಪೂರ್ವಕವಾಗಿ ಸ್ವಾಗತಿಸಿ ಕರೆದುಕೊಂಡು ಹೋಗಿ, ದಿವ್ಯವಾದ ಸಿಂಹಾಸನದ ಮೇಲೆ ಕುಳ್ಳಿರಿಸಿದಳು. ಅನಂತರ ಪ್ರಯಾಣಶ್ರಮಪರಿಹಾರಕ್ಕಾಗಿ ವಿಹಾರ, ಆಹಾರ, ವಿಶ್ರಾಂತಿ ಮೊದಲಾದ ಲಘೂಪಚಾರಗಳನ್ನು ನೆರವೇರಿಸಿದರು. ॥೯೪॥

ತಂದೆಯ ಅರಮನೆಯಲ್ಲಿ ಯಥೋಕ್ತವಾಗಿ ಎಲ್ಲಾ ಉಪಚಾರಗಳೂ ಆದ ಮೇಲೆ, ಮಣಿದೀಪಗಳಿಂದ ಉಜ್ವಲವಾದ ಆರತಿಯೆತ್ತಿ ಪಾರ್ವತಿಗೆ ಮಂಗಳಾರತಿ ಮಾಡಿದರು. ॥೯೫॥

ಅನಂತರ ಹಿಮವಂತನು ಪಾರ್ವತಿಗೆ ದಿವ್ಯವಾದ ವಸ್ತ್ರಾಭರಣಗಳನ್ನೂ, ರತ್ನದ ಪುಷ್ಪ ಮತ್ತು ಮಂಗಲದ್ರವ್ಯಗಳನ್ನೂ ಉಡುಗೊರೆ ಕೊಟ್ಟನು. ಈ ಎಲ್ಲಾ ಸಂಭ್ರಮಗಳಿಂದ ಸಂತುಷ್ಟಳಾದ ಪರಮೇಶ್ವರಿಯು ತನ್ನ ತಾಯಿಯ ಮನೆಯಲ್ಲಿ ತನಗೆ ಯಾವ ಕೊರತೆಯೂ ಆಗಲಾರದೆಂದು ಸಮಾಧಾನ ಹೇಳಿ, ಷಣ್ಮುಖ ಗಣಪತಿ ಇವರನ್ನು ಹಿಂದಕ್ಕೆ ಹೋಗಲು ಹೇಳಿದಳು. ಮತ್ತು ನಂದಿಯೇ ಮೊದಲಾದ ಗಣಗಳನ್ನು ಕೈಲಾಸಕ್ಕೆ ಹಿಂತಿರುಗುವಂತೆ ಅಪ್ಪಣೆಮಾಡಿದಳು. ॥೯೬॥

ದೇವಿಯು ತಿರುಗಿ ಹೋಗಬಹುದೆಂದು ಅಪ್ಪಣೆ ಮಾಡಿದಮೇಲೆ, ಷಣ್ಮುಖ ಗಣಪತಿಯೇ ಮೊದಲಾದ ಎಲ್ಲಾ ಗಣೇಂದ್ರರೂ ಪಾರ್ವತಿಗೆ ನಮಸ್ಕರಿಸಿ, ಕೇದಾರ ಲಿಂಗದರ್ಶನ, ವಂದನಾದಿಗಳನ್ನೂ ಮಾಡಿಕೊಂಡು ಹೊರಡಲನುವಾದರು. ॥೯೭॥

**ಯಯುಸ್ತದಾ ತೇ ಕೈಲಾಸಂ ವಿಮಾನೇನಾರ್ಕರೋಚಿಷಾ ।**
**ದೇವೀ ಸಖೀಭಿಸ್ಸಹಿತಾ ವಿಜಹಾರ ಪಿತುರ್ಗೃಹೇ ॥೯೮॥**

**ರಮ್ಯಕ್ರೀಡಾವಿನೋದೈಶ್ಚ ಮಾತ್ರಾ ಪಿತ್ರಾ ಚ ಪೂಜಿತಾ ।**
**ಗತ್ವಾ ತೇ ಪ್ರಮಥಾಧೀಶಾ ನತ್ವಾ ದೇವಂ ಮಹೇಶ್ವರಂ ॥೯೯॥**

**ವ್ಯಜಿಜ್ಞಪಂಸ್ತೇ ವೃತ್ತಾಂತಂ ದೇವ್ಯಾ ಗಮನಸಂಭ್ರಮಂ ।**
**ಹಿಮಾಚಲನಿವೇಶಂ ಚ ದೇವಾನಾಂ ದರ್ಶನಂ ಗಣಾಃ ॥೧೦೦॥**

**ಶಿವೋ ವೃತ್ತಾಂತಮಖಿಲಂ ಶ್ರುತ್ವಾ ದೇವಃ ಪಿನಾಕಧೃಕ್ ।**
**ವಿಜಹಾರ ಸ ಕೈಲಾಸೇ ಚಿಂತಯನ್ ಸ ಶಿವಾಗಮಂ ॥೧೦೧॥**

---

ಅನಂತರ ಎಲ್ಲರೊಡನೆಯೂ ನಮಸ್ಕಾರ ಆಲಿಂಗನಪೂರ್ವಕವಾಗಿ ಸಮ್ಮತಿ ಪಡೆದು, ಗಣೇಂದ್ರರೆಲ್ಲಾ ಕೈಲಾಸಕ್ಕೆ ಹಿಂದೆರಳಿದರು. ಅದು ಮೊದಲುಗೊಂಡು ಪಾರ್ವತಿಯು ತನ್ನ ತಂದೆಯ ಅರಮನೆಯಲ್ಲಿಯೇ ಯಾವ ಕೊರತೆಯೂ ಇಲ್ಲದಂತೆ ಸಖಿಯರೊಡನೆ ವಿಲಾಸದಿಂದಿದ್ದಳು. ॥೯೮॥

ದೇವಿಯ ಮನಸ್ಸಿಗೆ ಹರ್ಷವಾಗುವಂತೆ ತಂದೆ ತಾಯಿಗಳು ಆಕೆಗೆ ಸೇವೆ ಮಾಡಲು ಸದಾ ಸಿದ್ಧರಾಗಿರುತ್ತಿದ್ದರು. ಅವರು ದೇವಿಗೆ ವಿಲಾಸಾರ್ಥವಾಗಿ ರಮ್ಯವಾದ ಕ್ರೀಡೆಗಳನ್ನೂ, ವಿನೋದಗಳನ್ನೂ, ಉತ್ಸವಗಳನ್ನೂ ಏರ್ಪಡಿಸುವರು. ಪಾರ್ವತಿಯು ಈ ಎಲ್ಲಾ ಸಮಾರಂಭಗಳಲ್ಲಿಯೂ ಆಸಕ್ತಿಯಿಂದ, ಆನಂದದಿಂದ ಕಾಲಕಳೆಯುತ್ತಿದ್ದಳು. ಕೈಲಾಸಕ್ಕೆ ಹಿಂತಿರುಗಿದ ಪ್ರಮಥಗಣೇಂದ್ರರು ಮಹೇಶ್ವರನನ್ನು ಸಂದರ್ಶಿಸಿ, ದೇವಿಯ ಯೋಗಕ್ಷೇಮವನ್ನು ತಿಳಿಸಿ, ಪ್ರಯಾಣಸಮಯದಲ್ಲಿನ ಉತ್ಸವಸಂಭ್ರಮಗಳನ್ನು ಹೇಳಿ ಪರಮೇಶ್ವರನಿಗೆ ಸಂತೋಷವನ್ನುಂಟುಮಾಡಿದರು. ॥೯೯॥

ಆಹಿಮಾಚಲಪ್ರದೇಶದ ಪ್ರಕೃತಿಸೌಂದರ್ಯವನ್ನೂ, ಪ್ರಶಾಂತ ವಾತಾವರಣವನ್ನು ವರ್ಣಿಸಿ, ಅಲ್ಲಿ ದೇವಿಯ ಸ್ವಾಗತಕಾಲದಲ್ಲಿ ಸಕಲ ದೇವತೆಗಳೂ ಬಂದಿದ್ದ ಸಮಾಚಾರವನ್ನೂ ತಿಳಿಸಿದರು. ॥೧೦೦॥

ಪಿನಾಕಾಯುಧಧಾರಿಯಾದ ಪರಮೇಶ್ವರನು ಎಲ್ಲಾ ವೃತ್ತಾಂತವನ್ನೂ ಕೇಳಿ ತಿಳಿದುಕೊಂಡು, ಸಮಾಧಾನಚಿತ್ತನಾಗಿ ಕೈಲಾಸದಲ್ಲಿ ಸಂತೋಷದಿಂದ ಇರುತ್ತಿದ್ದನು.

ಮನೋನ್ಮನ್ಯಾ ಮಹಾದೇವಃ ಕೈಲಾಸವರಸೌಧಗಃ ।
ಚಿಕ್ರೀಡ ಸರಸಾಲಾಪವಿಹಾರಶಯನಾಸನೈಃ ॥೧೦೨॥

ಯಸ್ತ್ವಿಮಾಂ ಮಹಿಮಾಂ ನಗೋತ್ತಮಕಥಾಂ ಶ್ರುತ್ವಾ ಮಹೇಶಾಶ್ರಯಾಂ
ದೇವ್ಯಾಶ್ಚಾಗಮನಂ ಹಿಮಾಚಲವರೇ ಕನ್ಯಾಪಿ ವಿಂದೇತ್ಪತಿಂ ।
ಸೌಭಾಗ್ಯಂ ಧನಮಕ್ಷಯಂ ಕ್ಷಿತಿತಲೇ ತ್ರ್ಯಕ್ಷಾಂಘ್ರಿಪದ್ಮಾರ್ಚಕಃ
ಕಷ್ಟೈಶ್ಚಾಪಿ ವಿಮುಕ್ತ ಏವ ಸತತಂ ತುಷ್ಟಸ್ಸದಾ ಬಂಧುಭಿಃ ॥೧೦೩॥

ಮೋದನ್ನೇವ ಸುಪುತ್ರಪೌತ್ರವಿಭವೈರಂತೇ ಗಣೇಂದ್ರೋ ಭವೇತ್॥೧೦೪॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ಪಾರ್ವತ್ಯಾಃ
ಹಿಮಾಚಲಗಮನಕಥಾನಿರೂಪಣಂ ನಾಮ ಅಷ್ಟಾವಿಂಶೋಽಧ್ಯಾಯಃ

---

ಆದರೂ ಒಮ್ಮೊಮ್ಮೆ ಗಿರಿಜೆಯು ಯಾವಾಗ ತಿರುಗಿ ಬರುವಳೋ ಎಂಬ ಯೋಚನೆಯು ಪರಶಿವನಿಗೆ ಉಂಟಾಗುತ್ತಿತ್ತು. ೧೦೧

ಕೈಲಾಸದ ದಿವ್ಯಸೌಧದಲ್ಲಿ ಪರಮೇಶ್ವರನು ಮನೋನ್ಮನೀ ದೇವಿಯೊಡನೆ, ಮಧುರಾಲಾಪ, ವಿಹಾರ, ಶಯನ, ಆಸನ ಮುಂತಾದುವುಗಳಿಂದ ಸುಖವಾಗಿ ಕಾಲಕಳೆಯುತ್ತಾ ಇದ್ದನು. ॥೧೦೨॥

ಈ ಕಥಾಸಂದರ್ಭವು ಬಹಳ ಶ್ರೇಷ್ಠವಾದುದು. ಇದರಲ್ಲಿ ಪುಣ್ಯಶ್ಲೋಕನಾದ ಪರಮೇಶ್ವರನ ಮತ್ತು ಸ್ವನಾಮಧನ್ಯನಾದ ಹಿಮವಂತನ ಚರಿತ್ರೆಯೂ ಸೇರಿಕೊಂಡಿರುವುದು. ಶ್ರೀ ಗಿರಿಜೆಯು ತನ್ನ ತಂದೆಯ ಮನೆಗೆ ಹೋಗುವುದು, ಈ ಸಂದರ್ಭದಲ್ಲಿ ಬಹಳ ವೈಭವಯುಕ್ತವಾಗಿ ವರ್ಣಿತವಾಗಿದೆ. ಈ ಕಥೆಯನ್ನು ಪಠನ ಅಥವಾ ಶ್ರವಣಮಾಡುವವರ ಇಷ್ಟಾರ್ಥವೆಲ್ಲವೂ ಸಿದ್ಧಿಸುವುವು. ಇದನ್ನು ಪಾರಾಯಣ ಮಾಡಿದರೆ ಕನ್ಯೆಗೆ ಅನುರೂಪನಾದ ಯೋಗ್ಯವರನು ದೊರೆಯುವನು. ಕಷ್ಟದಲ್ಲಿ ಸಿಲುಕಿದವನು ದುಃಖದಿಂದ ಪಾರಾಗುವನು. ಇಹದಲ್ಲಿ ಅವನ ಸೌಭಾಗ್ಯವೂ ಐಶ್ವರ್ಯವೂ ಅಕ್ಷಯವಾಗುವುದು. ಯಾವಾಗಲೂ ತನ್ನ ಬಂಧುಗಳೊಡನೆ ಆನಂದದಿಂದ ಮೆರೆಯುವಂತಾಗುವನು. ಶಂಕರಭಕ್ತರಿಗೆ ಈ ಕಥಾಶ್ರವಣವು ಅಗತ್ಯವಾದುದು. ॥೧೦೩॥

ಈ ಚರಿತೆಯ ಪಾರಾಯಣವನ್ನು ಶ್ರದ್ಧೆಯಿಂದ ಮಾಡುತ್ತಬಂದರೆ ಅವನು

ಅತ್ಯಂತ ಸುಖಿಯೆನಿಸಿ ತನ್ನ ಪುತ್ರಪೌತ್ರಾದ್ಯೈಶ್ವರ್ಯಗಳೊಡನೆ ಅನೇಕಕಾಲ ಆನಂದವಾಗಿ ಜೀವಿಸಿ ದೇಹಾಂತ್ಯದಲ್ಲಿ ಪರಶಿವನ ಗಣೇಂದ್ರನಾಗುವನು. ॥೧೦೪॥

ಇಲ್ಲಿಗೆ ಶ್ರೀಶಿವರಹಸ್ಯದ ಭವನಾಮಕವಾದ ಎರಡನೆಯ ಅಂಶದಲ್ಲಿ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ಏಕೋನತ್ರಿಂಶೋಽಧ್ಯಾಯಃ

### ದೂರ್ವಾಸಕೃತಮಹಿಮ್ನಸ್ಸ್ತುತಿಃ

|| ಗಣಾ ಊಚುಃ ||

**ಕಥಂ ದೇವ್ಯಾ ಮಹಾಯೋಗೀ ದುರ್ವಾಸಾ ಸ ಪ್ರಸಾದಭಾಕ್ ।**
**ಕಥಂ ತೇನ ಸ್ತುತಾ ದೇವೀ ತತ್ಸ್ಕಂದ ವದ ನೋಽಧುನಾ ॥೧॥**

**ತತ್ಸ್ತುತಿಶ್ರವಣಾದೇವ ಸರ್ವೇಷಾಮಘನಾಶನಂ ।**
**ತಾರಕಾರೇ ಭವತ್ಯೇವ ಸರ್ವೇಷಾಂ ಶೃಣ್ವತಾಂ ವದ ॥೨॥**

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಷಣ್ಮುಖಸ್ವಾಮಿಯೇ, ಮಹಾಯೋಗಿಯಾದ ದೂರ್ವಾಸನು ಹೇಗೆ ಶ್ರೀಪಾರ್ವತಿಯ ಅನುಗ್ರಹವನ್ನು ಪಡೆದನು? ಅನುಗೃಹೀತನಾದ ಆ ದೂರ್ವಾಸನು ಹೇಗೆ ಆ ಭಗವತಿಯನ್ನು ಸ್ತೋತ್ರಮಾಡಿದನು? ಎಂಬ ಅಂಶವನ್ನು ನಮಗೆ ದಯೆಯಿಟ್ಟು ಹೇಳು. ಎಂದು ಪ್ರಮಥಗಣಗಳು ಕುಮಾರಸ್ವಾಮಿಯನ್ನು ಪ್ರಾರ್ಥಿಸುತ್ತಾ, ||೧||

ಎಲೈ ತಾರಕಧ್ವಂಸಿಯೇ, ಆ ದೂರ್ವಾಸನಿಂದ ಉಕ್ತವಾದ ಭಗವತಿಯ ಸ್ತೋತ್ರವನ್ನು ಕೇಳಿದಮಾತ್ರದಿಂದಲೇ, ಶ್ರವಣಮಾಡಿದವರ ಎಲ್ಲಾ ಪಾಪಗಳೂ ದೂರವಾಗುವುದರಲ್ಲಿ ಸಂಶಯವಿಲ್ಲ. ಆದುದರಿಂದ ಆ ಸಂದರ್ಭವನ್ನು ಕೃಪೆಮಾಡಿ ಹೇಳು. ಎಂದು ವಿಧವಿಧವಾಗಿ ಕೇಳಿಕೊಂಡರು. ||೨||

|| ಸ್ಕಂದ ಉವಾಚ ||

ಕದಾಚಿತ್ಸಾ ಮಹಾದೇವೀ ಸ್ವಪಿತುರ್ಮೌಳಿಮಿಾಕ್ಷತೀ ।
ಗಿರಿವೃಕ್ಷೈಸ್ಸಮುವೃತೈಸ್ಸರೋವರಮೃಗೈರ್ಯುತೇ ॥೩॥

ನಾನಾಪಕ್ಷಿರುತಾಪಾರಗಾಯದ್ಗಂಧರ್ವಕಿನ್ನರೈಃ ।
ಗಿರೌ ಶಿಖರಧಾರಾಭಿರಾಪಗಾ ವಿತತಾಸ್ತದಾ ॥೪॥

ಮೇನಯಾ ವಿಹರಂತೀ ಸಾ ತಸ್ಯಾಪಶ್ಯತ ಚಾಶ್ರಮಂ ।
ತಪಸ್ಯದ್ಭಿರ್ಮುನಿವರ್ಯೈರ್ಭಸ್ಮೋದ್ಧೂಳಿತವಿಗ್ರಹೈಃ ॥೫॥

ಧೃತತ್ರಿಪುಂಡ್ರರುದ್ರಾಕ್ಷರುದ್ರಾಧ್ಯಾಯಜಪಾದರೈಃ ।
ಪಂಚಾಕ್ಷರಜಪಾಸಕ್ತೈಃ ಪಂಚಾಸ್ಯಧ್ಯಾನತತ್ಪರೈಃ ॥೬॥

---

ಆಗ ಷಣ್ಮುಖಸ್ವಾಮಿಯು ಹೀಗೆ ಹೇಳತೊಡಗಿದನು. "ಭಗವತಿಯಾದ ಗಿರಿಜೆಯು ತನ್ನ ತಂದೆಯಾದ ಹಿಮವಂತನ ಮನೆಯಲ್ಲಿ ವಾಸಮಾಡುತ್ತಿದ್ದಳು. ಅಲ್ಲಲ್ಲಿದ್ದ ಸರೋವರಗಳನ್ನೂ, ಮತ್ತು ಜಲಚರಸ್ಥಲಚರಪ್ರಾಣಿಗಳನ್ನೂ ನೋಡಿಕೊಂಡು ವಿಲಾಸದಿಂದಿರುತ್ತಿದ್ದಳು. ||೩||

ಅಲ್ಲಿ ಸಾಲುಸಾಲಾಗಿರುವ ಪರ್ವತಶಿಖರಗಳು, ಅವುಗಳ ಮಧ್ಯದಲ್ಲಿ ದೊಡ್ಡ ದೊಡ್ಡ ನದಿಗಳು, ನೋಡುವುದಕ್ಕೆ ಬಹಳ ರಮ್ಯವಾಗಿರುತ್ತಿದ್ದವು. ಮತ್ತು ಪಕ್ಷಿಗಳೂ, ಗಂಧರ್ವ ಕಿನ್ನರರೂ ಸ್ವೇಚ್ಛೆಯಿಂದ ಹಾಡಿಕೊಂಡು ತಿರುಗುತ್ತಿದ್ದರು. ||೪||

ಆ ಹಿಮವತ್ಪರ್ವತದ ತಪ್ಪಲು ಪ್ರದೇಶದಲ್ಲಿಯೇ ದೂರ್ವಾಸಋಷಿಯ ಆಶ್ರಮವಿದ್ದಿತು. ಅಲ್ಲಿ ಅನೇಕ ಋಷಿಗಳು ಭಸ್ಮವೇ ಮೊದಲಾದ ತಪಸ್ಸಿಗೆ ಸಾಧಕಗಳಾದ ವಸ್ತುಗಳನ್ನು ಉಪಯೋಗಿಸಿಕೊಂಡು ದೂರ್ವಾಸನೊಡನೆ ತಪಸ್ಸು ಮಾಡುತ್ತಿದ್ದರು. ಹೀಗಿರುವಾಗ ಒಂದು ದಿವಸ ಗಿರಿಜೆಯು ತನ್ನ ತಾಯಿ ಮೇನಕೆಯೊಡನೆ ವಿಹರಿಸುತ್ತಿರಲು ಆ ದೂರ್ವಾಸಾಶ್ರಮವನ್ನು ಕಂಡಳು. ||೫||

ಆ ಆಶ್ರಮದಲ್ಲಿರತಕ್ಕ ಎಲ್ಲಾ ಋಷಿಗಳೂ ಕರ್ಮನಿಷ್ಠರಾಗಿದ್ದರು. ಯಾವಾಗಲೂ ಶೈವಚಿಹ್ನೆಯಾದ ಭಸ್ಮತ್ರಿಪುಂಡ್ರವನ್ನು ಹಚ್ಚಿಕೊಳ್ಳುವರು. ರುದ್ರಾಕ್ಷಧಾರಣೆ ಮಾಡುವರು. ಸದಾ ರುದ್ರಾಧ್ಯಾಯವನ್ನೂ, ಮತ್ತು ಶಿವಪಂಚಾಕ್ಷರೀ ಮಹಾಮಂತ್ರ

ರುದ್ರಲಿಂಗಾರ್ಚಕೈರ್ಭಕ್ತ್ಯಾ ಬಿಲ್ವೈಃ ಪುಷ್ಪೈಸ್ಸದೈವ ಹಿ ।
ಕೇದಾರನ್ಯಸ್ತಮನಸೈರ್ದಾರಾದರವಿವರ್ಜಿತೈಃ ॥೭॥

ಬೃಸೀಕಟನಿವಿಷ್ಟೈಶ್ಚ ತಾಪಸೈರುಪಶೋಭಿತಂ ।
ಧ್ಯಾಯದ್ಭಿರ್ಮನಸಾ ಸಾಂಬಂ ಕೇದಾರೇಶಂ ತಪಸ್ವಿನಃ ॥೮॥

ಫಲಮೂಲಾಂಬುಪರ್ಣಾಶಾಃ ಪವನಾಶಾಸ್ತಥಾಪರೇ ।
ಕಟಧೂಮಾಶನಾಃ ಕೇಚಿನ್ನಗ್ನಾಶ್ಚರ್ಮೈಕವಾಸಸಃ ॥೯॥

---

ವನ್ನೂ ಜಪಮಾಡುವರು. ಅನವರತ ಪಂಚಮುಖನಾದ ಪರಮೇಶ್ವರನನ್ನೇ ತಲ್ಲೀನತೆಯಿಂದ ಧ್ಯಾನಿಸುವರು. ||೬||

ಆ ಋಷಿಗಳು ಪತ್ನೀಪುತ್ರರ ಚಿಂತೆಯನ್ನು ಕೊಂಚವೂ ಮನಸ್ಸಿಗೆ ಹಚ್ಚಿಕೊಳ್ಳದೇ, ಶ್ರೀರುದ್ರಲಿಂಗದ ಅರ್ಚನೆಗೆ ಉಪಕರಣಗಳಾದ ಬಿಲ್ವದಳ, ಪುಷ್ಪ ಇವುಗಳನ್ನು ಆಹರಣಮಾಡುವುದು, ಅವುಗಳಿಂದ ಶ್ರೀಕೇದಾರಸ್ವಾಮಿಯನ್ನು ಪೂಜಿಸುವುದು, ಮೊದಲಾದ ಶಿವಾರ್ಚನ ಕಾರ್ಯಗಳಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ವಾಸಿಸುತ್ತಿದ್ದರು. ||೭||

ವ್ರತಸ್ಥರಾದ ಋಷಿಗಳು ಪವಿತ್ರವಾದ ಆಸನಗಳಮೇಲೆ ಕುಳಿತುಕೊಂಡು ಅಂಬಾಸಮೇತನಾದ ಕೇದಾರೇಶ್ವರನನ್ನು ಧ್ಯಾನಿಸುವರು. ಹೀಗೆ ಗುಂಪುಗುಂಪಾಗಿ ಸೇರಿ ಆ ಕೇದಾರಸ್ವಾಮಿಯನ್ನು ಧ್ಯಾನಿಸುತ್ತಿರುವಾಗ ಆ ಆಶ್ರಮವನ್ನು ನೋಡಲು ಬಹಳ ರಮ್ಯವಾಗಿ ತೋರುತ್ತಿತ್ತು. ||೮||

ಆ ಋಷಿಗಳು ಆಹಾರನಿಯಮವುಳ್ಳವರಾಗಿ, ಕೆಲವರು ಕೇವಲ ಫಲಾಹಾರಿಗಳಾಗಿದ್ದರು. ಮತ್ತೆ ಕೆಲವರು ಗೆಡ್ಡೆಗೆಣಸುಗಳನ್ನು ತಿನ್ನುವರು. ಮತ್ತೆಕೆಲವರು ಎಲೆಯಿಂದಲೇ ಜೀವಧಾರಣೆ ಮಾಡಿಕೊಂಡಿರುವರು. ಕೆಲವರು ಕೇವಲ ವಾಯು ಆಹಾರದಿಂದ ಜೀವಿಸಿದ್ದರು. ಮತ್ತೆಕೆಲವರಿಗೆ ಕೇವಲ ಧೂಮವೇ ಆಹಾರವಾಗಿದ್ದಿತು. ಕೆಲವರು ದಿಗಂಬರರು, ಕೆಲವರು ಕೇವಲ ಒಂದು ಕೃಷ್ಣಾಜಿನವನ್ನು ಮಾತ್ರ ಹೊದ್ದಿರುವರು. ||೯||

ಹೃತ್ಪುಂಡರೀಕೇ ಧ್ಯಾತ್ವೈವಂ ಪುಂಡರೀಕಾಜಿನಾಂಬರಾಃ ।
ತತ್ರ ತಸ್ಮಿನ್ ಶ್ರಮೈರ್ಹೀನಾ ಆಶ್ರಮೇ ವಿದ್ಯುದಾಕೃತಿಂ ॥೧೦॥

ನಿರೀಕ್ಷ್ಯ ದೇವೀಂ ದೂರ್ವಾಸಾ ಸ್ವತಪಃಫಲಮಂಬಿಕಾಂ ।
ಏಹ್ಯೇಹಿ ಮಾತರಿತಿ ತಾಂ ಪ್ರಣನಾಮ ತದಾ ಮುನಿಃ ॥೧೧॥

ದಿವ್ಯಾಸನಂ ದಿಶತ್ತಸ್ಯೈ ಸ ಮೇನಾಯೈ ಮುನೀಶ್ವರಃ ।
ವಿಸ್ಮಿತೈರ್ಮುನಿಸಂಘೈಶ್ಚ ಮಧುಪರ್ಕೈರಪೂಜಯತ್ ॥೧೨॥

ಪುಷ್ಪೈರ್ಗಂಧೈಸ್ತಥಾ ಧೂಪೈಃ ಫಲಮೂಲೈರ್ಮಹೇಶ್ವರೀಂ ।
ಪ್ರೀತಿದತ್ತಂ ಮುನೀಶೇನ ದೇವೀ ತಚ್ಚಾಗ್ರಹೀತ್ತದಾ ॥೧೩॥

ತೇನ ಸ್ತುತಾ ಮಹಾದೇವೀ ಸಿದ್ಧಾಸನವರಾಶ್ರಿತಾ ॥೧೪॥

---

ಆ ಋಷಿಗಳು ಇಷ್ಟು ನಿಯಮದಿಂದ್ದರೂ ಅದು ತಮಗೆ ಶ್ರಮವೆಂದು ಯೋಚಿಸದೇ, ಕೇವಲ ವ್ಯಾಘ್ರಾಜಿನಧಾರಿಗಳಾಗಿ ತಮ್ಮ ಹೃದಯಕಮಲಮಧ್ಯದಲ್ಲಿ ಪರಮೇಶ್ವರನನ್ನೇ ಸದಾ ಧ್ಯಾನಿಸುವರು. ॥೧೦॥

ಇಂತಹ ಆಶ್ರಮಕ್ಕೆ ಪಾರ್ವತಿಯು ಬಂದಳು. ದೂರ್ವಾಸನು ಗಿರಿಜೆಯನ್ನು ಕಂಡಕೂಡಲೇ ತನ್ನ ತಪಸ್ಸಿಗೆ ಫಲವು ದೊರೆಯಿತೆಂದು ಅತ್ಯಾದರದಿಂದ " ಬರಬೇಕು ತಾಯಿ ದಯಮಾಡಿಸಬೇಕು " ಎಂದು ಸ್ವಾಗತಿಸಿ ನಮಸ್ಕರಿಸಿದನು. ॥೧೧॥

ದೂರ್ವಾಸನು ಗೌರಿಗೂ ಮೇನಾದೇವಿಗೂ ಉತ್ತಮವಾದ ಆಸನವನ್ನಿತ್ತು ಕುಳ್ಳಿರಿಸಿದನು. ಈ ಘಟನೆ ಆಕಸ್ಮಿಕವಾದುದರಿಂದ ಎಲ್ಲಾ ಋಷಿಗಳಿಗೂ ಅತ್ಯಾಶ್ಚರ್ಯ ಉಂಟಾಗಿತ್ತು. ಆ ಎಲ್ಲಾ ಋಷಿಗಳೊಡನೆ ದೂರ್ವಾಸನು ಗೌರಿಗೆ ಮಧುಪರ್ಕಪೂರ್ವಕವಾಗಿ ಪೂಜೆಮಾಡಿದನು. ॥೧೨॥

ಅನಂತರ ಪುಷ್ಪಗಂಧಾದಿಗಳನ್ನೂ ಅರ್ಪಿಸಿ ಧೂಪಾದ್ಯುಪಚಾರವನ್ನೂ, ಫಲಮೂಲಾದಿಗಳ ನೈವೇದ್ಯವನ್ನೂ ಮಾಡಿದನು. ಋಷಿಯು ಪ್ರೀತಿಯಿಂದ ಅರ್ಪಿಸಿದ ಎಲ್ಲಾ ಉಪಚಾರವನ್ನೂ ಪರಮೇಶ್ವರಿಯು ಆದರದಿಂದ ಸ್ವೀಕರಿಸಿದಳು. ॥೧೩॥

ಭಕ್ತಿದತ್ತವಾದ ಎಲ್ಲಾಸೇವೆಯನ್ನೂ ಪ್ರೀತಿಯಿಂದ ಸ್ವೀಕರಿಸಿ, ಪಾರ್ವತಿಯು ಸಂತೋಷದಿಂದ ಉತ್ತಮಾಸನದ ಮೇಲೆ ಕುಳಿತಿದ್ದಳು. ಆಗ ದೂರ್ವಾಸನು ಹೀಗೆ ಸ್ತೋತ್ರಮಾಡಿದನು. ॥೧೪॥

|| ಮುನಿರುವಾಚ ||

**ಧನ್ಯೋಽಹಂ ಪಾವನೋಽಹಂ ಚ ತ್ವದ್ದರ್ಶನಮುಮೇ ಮಮ ।**
**ತಪಃಫಲಂ ಚ ಫಲಿತಂ ಕಾಲೇನಾದ್ಯ ಮಮಾಂಬಿಕೇ ||೧೫||**

**ತ್ವತ್ಪಾದಪಂಕಜರಜಃಪ್ರಾಪ್ತಯೇ ಮತ್ತಪಃಫಲಂ ।**
**ಕಿಂ ಮುಕ್ತ್ಯಾ ಮಮ ದೇವೇಶಿ ಯತ್ತ್ವಂ ಭಕ್ತೇಷ್ಟಸಿದ್ಧಿದಾ ||೧೬||**

**ಪರಾಶಕ್ತಿರ್ಮಹಾಮಾಯಾ ಬ್ರಹ್ಮಾದಿಜನನೀ ಶಿವಾ ।**
**ಮಹಾದೇವಮಹಾದೇಹವರವಾಮಾರ್ಧಭಾಗಿನೀ ||೧೭||**

|| ಸ್ಕಂದ ಉವಾಚ ||

**ತುಷ್ಟಾವ ಪ್ರಣವೋ ಭೂತ್ವಾ ತಾಂ ಶಿವಾಂ ಸ ಮುನಿಸ್ತದಾ ||೧೮||**

---

ಭಗವತಿಯೇ, ಇಂದು ನಾನು ಧನ್ಯನು. ಈಗ ನಾನು ಸಕಲ ಪಾಪಗಳಿಂದಲೂ ಮುಕ್ತನಾದೆನು. ಇಷ್ಟು ದಿವಸವೂ ಮಾಡಿದ ತಪಸ್ಸು ಈ ಕಾಲಕ್ಕೆ ಫಲಿಸಿತು. ||೧೫||

ಪರಮಶಾಕ್ತೇಯನಾದ ನನ್ನ ತಪಸ್ಸಿಗೆಲ್ಲಾ ನಿನ್ನ ಚರಣಕಮಲಗಳ ಪ್ರಾಪ್ತಿಯೇ ಮುಖ್ಯಫಲ. ಅಂತಹ ನೀನು ಈಗ ನನಗೆ ದರ್ಶನವನ್ನು ದಯಪಾಲಿಸಿರುವೆ. ಇದಕ್ಕಿಂತಲೂ ಹೆಚ್ಚಾಗಿ ಮೋಕ್ಷದಿಂದ ತಾನೆ ಏನು ಪ್ರಯೋಜನ? ನಾನು ಮೋಕ್ಷವನ್ನು ಏತಕ್ಕೆ ಬಯಸಲಿ? ಭಕ್ತರ ಸಕಲ ಮನೋರಥಗಳನ್ನೂ ದಯಪಾಲಿಸುವವಳು ನೀನೇ ನನಗೆ ದೊರೆತಿರುವೆಯಲ್ಲಾ! ||೧೬||

ಭಗವತಿಯೇ, ನೀನು ಪರಾಶಕ್ತಿಯಾಗಿರುವೆ. ನಿನ್ನ ಮಾಯೆಯು ಅತ್ಯದ್ಭುತವಾದುದು. ಜಗತ್ತನ್ನೇ ಸೃಷ್ಟಿಸುವ ಹಿರಣ್ಯಗರ್ಭನಿಗೂ ನೀನೇ ಜನನಿಯಾಗಿರುವೆ. ಪರಮೇಶ್ವರನ ಶರೀರದ ವಾಮಾರ್ಧಭಾಗದಲ್ಲಿ ನೀನು ಆಶ್ರಯ ಪಡೆದಿರುವೆ. ನೀನೇ ಮಂಗಳಸ್ವರೂಪಳು. ||೧೭||

ಹೀಗೆಂಬು ದೂರ್ವಾಸನು ಬಹಳ ವಿನಯದಿಂದಲೂ, ತಲ್ಲೀನತೆಯಿಂದಲೂ ಪಾರ್ವತಿಯನ್ನು ನಾನಾ ಪ್ರಕಾರವಾಗಿ ಪುನಃ ಸ್ತೋತ್ರಮಾಡಲುಪಕ್ರಮಿಸಿದನು. ||೧೮||

|| ದೂರ್ವಾಸಾ ಉವಾಚ ||

ಶ್ರೀಮಾತಸ್ತ್ರಿಪುರೇ ಪರಾತ್ಪರತರೇ ದೇವಿ ತ್ರಿಲೋಕೀಮಹಾ
ಸೌಂದರ್ಯಾರ್ಣವಮಂಥನೋದ್ಭವಸುಧಾಪ್ರಾಚುರ್ಯವರ್ಣೋಜ್ಜ್ವಲಂ।
ಉದ್ಯದ್ಭಾನುಸಹಸ್ರನೂತನಜಪಾಪುಷ್ಪಪ್ರಭಂ ತೇ ವಪುಃ
ಸ್ವಾಂತೇ ಮೇ ಸ್ಫುರತು ತ್ರಿಲೋಕನಿಲಯಂ ಜ್ಯೋತಿರ್ಮಯಂ ವಾಙ್ಮಯಂ ||೧೯||

ಆದಿಕ್ಷಾಂತಸಮಸ್ತವರ್ಣಸುಮಣಿಪ್ರೋತೇ ವಿತಾನಪ್ರಭೇ
ಬ್ರಹ್ಮಾದಿಪ್ರತಿಮಾಭಿಕೀಲಿತಷಡಾಧಾರಾಬ್ಜಕಕ್ಷ್ಯೋನ್ನತೇ ।
ಬ್ರಹ್ಮಾಂಡಾಬ್ಜಮಹಾಸನೇ ಜನನಿ ತೇ ಮೂರ್ತಿಂ ಭಜೇ ಚಿನ್ಮಯೀಂ
ಸೌಷುಮ್ನಾಯತಪೀತಪಂಕಜಮಹಾಮಧ್ಯತ್ರಿಕೋಣಸ್ಥಿತಾಂ ||೨೦||

---

"ಭಗವತಿಯೇ, ನೀನು ಸಕಲಜಗತ್ತಿಗೂ ಮಾತೃಸ್ವರೂಪಳಾಗಿರುವೆ. ನೀನೇ ಪರಾತ್ಪರಳು. ನಿನ್ನ ಶರೀರವು ತೇಜೋಮಯವಾದುದು, ವಾಙ್ಮಯವಾದುದು. ನಿನ್ನ ದೇಹವು, ಆಗ ತಾನೇ ಉದಯಿಸುತ್ತಿರುವ ಸಹಸ್ರ ಸೂರ್ಯರಂತೆಯೂ ಜಪಾಕುಸುಮದಂತೆಯೂ ಕಾಂತಿಯುಕ್ತವಾಗಿದೆ. ಮೂರುಲೋಕದಲ್ಲಿಯೂ ಇರುವ ಸೌಂದರ್ಯವೆಂಬ ಸಾಗರವನ್ನು ಮಥಿಸಿದಾಗ, ಅಲ್ಲಿ ಉಂಟಾದ ಸುಧಾಲಹರಿಯು ನಿನ್ನ ಶರೀರವನ್ನೇ ಹೊಂದಿ, ಅದನ್ನು ಅತ್ಯಂತ ಉಜ್ವಲವನ್ನಾಗಿ ಮಾಡಿದೆ. ಅಂತಹ ಮೂರುಲೋಕಕ್ಕೂ ಆಧಾರಭೂತವಾದ ನಿನ್ನ ದಿವ್ಯಸ್ವರೂಪವು ನನ್ನ ಮನಸ್ಸಿನಲ್ಲಿ ಸದಾ ಅಚ್ಚಳಿಯದಂತೆ ಪ್ರಕಾಶಿಸಲಿ. ||೧೯||

ಹೇ ಜನನಿ, ನೀನು ತಳಿರುಗುಚ್ಛದಂತೆ ಕಾಂತಿಸಂಪನ್ನಳಾಗಿರುವೆ. ನಿನ್ನ ಸ್ವರೂಪವು ಅಕಾರದಿಂದ ಕ್ಷಕಾರದವರೆಗೂ ಇರುವ ಎಲ್ಲಾ ಅಕ್ಷರಗಳೆಂಬ ರತ್ನಗಳನ್ನು ಪೋಣಿಸಿದಂತಿದೆ. ಬ್ರಹ್ಮ, ವಿಷ್ಣು ಮುಂತಾದವರಿಂದ ಅನುಪ್ರವಿಷ್ಟವಾದ ಷಡಾಧಾರ ಚಕ್ರವೆಂಬ ಕಮಲದಳದಲ್ಲಿ ಅಧ್ಯಾಸೀನಳಾಗಿರುವೆ. ಸಂಪೂರ್ಣ ಬ್ರಹ್ಮಾಂಡವೆಂಬ ಕಮಲವೇ ನಿನಗೆ ಆಸನವಾಗಿರುವುದು. ಸುಷುಮ್ನಾ ಎಂಬ ಮಹಾನಾಡಿಯೆಂಬ ಕಮಲಮಧ್ಯೆ ವಿರಾಜಿಸುವ ತ್ರಿಕೋಣಮಧ್ಯದಲ್ಲಿ ನೀನು .ವಿರಾಜಿಸುವೆ. ನಿನ್ನ ಸ್ವರೂಪವು ಚಿನ್ಮಯವಾದದ್ದು. ಅಂಥ ನಿನ್ನನ್ನು ಭಜಿಸುವೆನು. ||೨೦||

ವಂದೇ ವಾಗ್ಭವಬೈಂದವಾತ್ಮಸದೃಶಂ ವೇದಾದಿವಿದ್ಯಾಗಿರೋ
ಭಾಷಾ ದೇಶಸಮುದ್ಭವಾ ಪಶುಮ(ಗ)ತಾಂ ಛಂದಾಂಸಿ ಸಪ್ತಸ್ವರಾನ್ ।
ತಾಲಾನ್ ಪಂಚ ಮಹಾಧ್ವನೀನ್ಪ್ರಕಟಯತ್ಯಾತ್ಮಪ್ರಸಾರೇಣ ಯತ್
ತದ್ಬೀಜಂ ಪದವಾಕ್ಯಮಾನಜನಕಂ ಶ್ರೀಮಾತೃಕೇ ತೇ ಪರಂ ॥೨೧॥

ತ್ರೈಲೋಕ್ಯಸ್ಫುಟಮಂತ್ರತಂತ್ರಮಹಿಮಾಂ ನಾಪ್ನೋತಿ ಶಶ್ವದ್ವಿನಾ
ತದ್ಬೀಜಂ ವ್ಯವಹಾರಜಾಲಮಖಿಲಂ ನಾಸ್ತ್ಯೇವ ಮಾತಸ್ತವ ।
ತಜ್ಜಾಪ್ಯಸ್ಮರಣಪ್ರಸಕ್ತಸುಮತಿಸ್ಸರ್ವಜ್ಞತಾಂ ಪ್ರಾಪ್ಯ ಕಃ
ಶಬ್ದಬ್ರಹ್ಮನಿವಾಸಭೂತವದನೋ ನೇಂದ್ರಾದಿಭಿಃ ಸ್ಪರ್ಧತೇ ॥೨೨॥

---

ಶ್ರೀಮಾತೃಕೇ, ನಿನ್ನ ಆದಿಬೀಜಾಕ್ಷರವನ್ನು ಸರ್ವದಾ ನಮಸ್ಕರಿಸುವೆನು. ಆ ನಿನ್ನ ಬಿಂದುಗತವಾದ ಬೀಜಾಕ್ಷರವು ಪರಾವಿದ್ಯೆಯೆನಿಸಿದೆ. ಪದಶಾಸ್ತ್ರಕ್ಕು, ವಾಕ್ಯಶಾಸ್ತ್ರಕ್ಕು ಪ್ರಮಾಣಶಾಸ್ತ್ರಕ್ಕೂ ಆ ನಿನ್ನ ಬೀಜಾಕ್ಷರವೇ ಮೂಲಕಾರಣವು. ಆ ಬೀಜಾಕ್ಷರೋಪಲಕ್ಷಿತವಾದ ಆತ್ಮಸಾಕ್ಷಾತ್ಕಾರದಿಂದ ಸರ್ವಜ್ಞತ್ವವೇ ಸಿದ್ಧಿಸುವುದು. ಏತಕ್ಕೆಂದರೆ, ಪ್ರಪಂಚದಲ್ಲಿ ಇರುವ ಯಾವತ್ತೂ ಧ್ವನಿಗಳು, ಈ ಬೀಜಾಕ್ಷರದಿಂದಲೇ ಹುಟ್ಟಿವೆ. ಅದು ನಾದಬಿಂದುಕಲಾತ್ಮಕವಾದದ್ದು. ವೇದಾದಿ ಸಕಲ ವಿದ್ಯೆಗಳು, ಆಯಾಯಾ ದೇಶಭಾಷೆಗಳು, ಮೃಗಪಕ್ಷಿಗಳ ಭಾಷೆಯೂ, ಛಂದಸ್ಸುಗಳೂ, ಸಪ್ತಸ್ವರಗಳೂ, ಪಂಚಮಹಾಮಾರ್ಗಗಾಮಿಗಳಾದ ತಾಲವೆಂಬ ಗತಿವಿಶೇಷವೂ, ಲಯವೆಂಬ ವಿನ್ಯಾಸವಿಶೇಷವೂ, ಇವೆಲ್ಲಾ ನಿನ್ನ ವಾಗ್ಭವ ವಿದ್ಯಾರೂಪವಾದ ಬೀಜಾಕ್ಷರ ಸಿದ್ಧಿಯಿಂದ ಸಿದ್ಧಿಸುವುವು. ॥೨೧॥

ನಿನ್ನ ಆದಿಬೀಜಾಕ್ಷರೋಪಾಸನೆ ಮಾಡದವನು ಯಾವ ಮಂತ್ರ ತಂತ್ರಗಳ ಸಿದ್ಧಿಯನ್ನೂ ಮಹಿಮೆಯನ್ನೂ ಪಡೆಯಲಾರನು. ಸಕಲ ವ್ಯವಹಾರಗಳಿಗೂ ಆ ಬೀಜಾಕ್ಷರವೇ ಆಧಾರವಾದುದು. ಅದನ್ನು ಬಿಟ್ಟಿರುವುದು ಒಂದೂ ಇರುವುದಿಲ್ಲ. ಅಂಥ ಬೀಜಾಕ್ಷರಗಳನ್ನು ನಿರಂತರ ಜಪಮಾಡಿ, ಧ್ಯಾನಮಾಡಿ, ಮನುಜನು ಸರ್ವಜ್ಞತ್ವವನ್ನು ಸುಲಭವಾಗಿ ಸಂಪಾದಿಸಬಲ್ಲನು. ಇಂತಹ ಸಿದ್ಧಿಯನ್ನು ಪಡೆದವನ ಬಾಯಿಯಲ್ಲಿಯೇ ಶಬ್ದಬ್ರಹ್ಮನು ಸದಾ ನೆಲೆಸಿರುವನು. ಹಾಗಿರುವ ಯಾವನು ತಾನೇ ಇಂದ್ರಾದಿಗಳೊಡನೆ ಸ್ಪರ್ಧೆಮಾಡಲಾರನು? ॥೨೨॥

ಮಾತ್ರಾ ಯತ್ರ ವಿರಾಜಿತೇತಿ ವಿಶದಾ ತಾಮಷ್ಟಧಾ ಮಾತೃಕಾಂ
ಶಕ್ತಿಂ ಕುಂಡಲಿನೀಂ ಚತುರ್ವಿಧತನುಂ ಯಸ್ತತ್ತ್ವವಿನ್ಮನ್ಯತೇ ।
ಸೋಽವಿದ್ಯಾಖಿಲಜನ್ಮಕರ್ಮದುರಿತಾರಣ್ಯಂ ಪ್ರಬೋಧಾಗ್ನಿನಾ
ಭಸ್ಮೀಕೃತ್ಯ ವಿಕಲ್ಪಜಾಲಮಖಿಲಂ ಮಾತಃ ಪದಂ ತದ್ವ್ರಜೇತ್ ॥೨೩॥

ಯತ್ತೇ ಮಧ್ಯಮಬೀಜಮಂಬ ಕಲಯಾಮ್ಯಾದಿತ್ಯವರ್ಣಂ ಕ್ರಿಯಾ
ಜ್ಞಾನೇಚ್ಛಾದಿಮನಂತಶಕ್ತಿವಿಭವವ್ಯಕ್ತಿಂ ವ್ಯನಕ್ತಿ ಸ್ಫುಟಂ ।
ಉತ್ಪತ್ತಿಸ್ಥಿತಿಕಲ್ಪಕಲ್ಪಿತತನುಂ ಸ್ವಾತ್ಮಪ್ರಸಾರೇಣ ಯತ್
ಕಾಮ್ಯಂ ಬ್ರಹ್ಮಹರೀಶ್ವರಾದಿವಿಬುಧೈಃ ಕಾಮಕ್ರಿಯಾಯೋಜಿತೈಃ ॥೨೪॥

ಕಾಮಾರ್ಣ ಕಾರಣತಾಂ ಗತಾನಗಣಿತಾರ್ಣ ಕಾರ್ಯೈರನೇಕೈರ್ಮಹೀ
ಮುಖ್ಯೈಸ್ಸರ್ವಮನೋಗತಾನಧಿಗತಾನ್ಮಾನ್ಯೈರನೇಕೈಃ ಸ್ಫುಟಂ ।

---

ಆದಿಬೀಜಾಕ್ಷರದಲ್ಲಿ ನೆಲಸಿರುವ ಅಷ್ಟಮಾತೃಕೆಯರನ್ನು, ಶಕ್ತಿ ಮತ್ತು ಕುಂಡಲಿನಿ ಇವುಗಳ ನಾಲ್ಕು ಶಕ್ತಿಸ್ವರೂಪಗಳನ್ನು ಒಳಗೊಂಡ ನಿನ್ನನ್ನು ಯಾವ ತತ್ತ್ವಜ್ಞಾನಿಯು ತಿಳಿಯುವನೋ, ಆತನ ವಿಜ್ಞಾನವೆಂಬ ಅಗ್ನಿಯಿಂದ ಅವಿದ್ಯೆಯೂ, ಪುನರ್ಜನ್ಮಬೀಜವೂ, ಕರ್ಮಫಲಗಳೂ, ಪಾಪವಾಸನೆಗಳೂ, ಸಂಶಯಾಕಾರವಾದ ಸಕಲ ವಿಕಲ್ಪವೃತ್ತಿಗಳೂ ಸುಟ್ಟು ಭಸ್ಮವಾಗುವುವು. ಆತನು ಶಾಶ್ವತವಾದ ವಿಜ್ಞಾನಘನವಾದ ಬ್ರಹ್ಮನ ಸಾಯುಜ್ಯ ಪಡೆಯುವನು. ||೨೩||

ಅಂಬ, ನಿನ್ನ ಬೀಜಾಕ್ಷರಗಳಲ್ಲಿನ ಮಧ್ಯಾಕ್ಷರವನ್ನು (ಕ್ಲೀಂ) ಸರ್ವದಾ ಧ್ಯಾನಿಸುತ್ತೇನೆ. ಆ ಮಧ್ಯಮ ಬೀಜಾಕ್ಷರವು ಆದಿತ್ಯವರ್ಣಯುಕ್ತವಾಗಿದೆ. ಅದೇ ಜ್ಞಾನಕ್ಕೂ ಇಚ್ಛೆಗೂ ಕ್ರಿಯೆಗೂ ಮೂಲವಾಗಿದೆ. ಅದು ನಾಶರಹಿತವಾದ ವೈಭವವನ್ನು ಸಿದ್ಧಪಡಿಸಿಕೊಡುವುದು. ತನ್ನಲ್ಲಿನ ಶಕ್ತಿಮಹಿಮೆಯಿಂದ ಸೃಷ್ಟಿಕಾಲದಲ್ಲಿಯೂ ಸಾಕಾರವಾಗಿ, ಪ್ರಚುರವಾಗುವುದು. ಅಂಥ ನಿನ್ನ ಬೀಜಾಕ್ಷರವನ್ನು ಹರಿಹರಬ್ರಹ್ಮಾದಿ ಎಲ್ಲಾದೇವತೆಗಳೂ ಮಹಾಮಹಾ ಅನುಷ್ಠಾನದಿಂದ ಪಡೆಯಲು ಅಪೇಕ್ಷಿಸುವರು. ಅದೇ ಸೃಷ್ಟಿ ಸ್ಥಿತಿ ಲಯಗಳಿಗೆ ಮೂಲಕಾರಣವಾಗಿರುವುದು. ||೨೪||

ಪ್ರಪಂಚದಲ್ಲಿನ ಪೃಥಿವಿ, ಜಲ, ತೇಜಸ್, ವಾಯು, ಆಕಾಶ ಇವೆಲ್ಲವುಗಳಿಗೂ ನಿನ್ನ ಆ ಬೀಜಾಕ್ಷರವೇ ಕಾರಣವೆಂದು ಕಾರ್ಯಪಕ್ಷಕಾನುಮಾನ ಪ್ರಮಾಣದಿಂದ ಸ್ಫುಟವಾಗಿ ಸಾಧಿತವಾಗುವುದು. ಮಾನವರ ಮನೋಧರ್ಮ, ಮನೋರಥ, ಚಿತ್ತ

ಕಾಮಕ್ರೋಧಸುಲೋಭಮೋಹಮದಮಾತ್ಸರ್ಯಾದಿಷಟ್ಕಂ ಚ ಯತ್
ಬೀಜಂ ಭ್ರಾಜಯತಿ ಪ್ರಣೌಮಿ ತದಹಂ ತೇ ಸಾಧುಕಾಮೇಶ್ವರಿ ॥೨೫॥

ಯದ್ಭಕ್ತಾಖಿಲಕಾಮಪೂರಣಚಣಸ್ವಾತ್ಮಪ್ರಭಾವಂ ಮಹಾ
ಜಾಡ್ಯಧ್ವಾಂತನಿವಾರಣೈಕತರಣಿರ್ಜ್ಯೋತಿರ್ವಿಬೋಧಪ್ರದಂ ।
ಯದ್ವೇದೇಷು ಚ ಗೀಯತೇ ಶ್ರುತಿಮುಖಂ ಮಾತ್ರಾತ್ರಯೇಣೋಮಿತಿ
ಶ್ರೀವಿದ್ಯೇ ತವ ಸರ್ವರಾಜವಶಕೃತ್ತತ್ಕಾಮರಾಜಂ ಭಜೇ ॥೨೬॥

ಯತ್ತೇ ದೇವಿ ತೃತೀಯಬೀಜಮನಲಜ್ವಾಲಾವಳೀಸನ್ನಿಭಂ
ಸರ್ವಾಧಾರತುರೀಯಬೀಜಪರಮಂ ಬ್ರಹ್ಮಾಭಿಧಾಶಬ್ದಿತಂ ।
ಮೂರ್ಧನ್ಯಾಂತನಿಸರ್ಗಭೂಷಿತಮಹೌ ಕಾರಾತ್ಮಕಂ ತತ್ಪರಂ
ಸಂವಿದ್ರೂಪಮನನ್ಯತುಲ್ಯಮಹಿಮಂ ಸ್ವಾಂತೇ ಮಮ ದ್ಯೋತತಾಂ ॥೨೭॥

---

ವೃತ್ತಿ ಇವುಗಳಿಗೂ ನಿನ್ನ ಬೀಜಾಕ್ಷರವೇ ಪ್ರಕೃತಿಯಾದದು. ಕಾಮ, ಕ್ರೋಧ ಲೋಭ, ಮೋಹ, ಮದ, ಮಾತ್ಸರ್ಯವೆಂಬ ಅರಿಷಡ್ವರ್ಗವನ್ನೂ ಆ ಬೀಜಾಕ್ಷರವೇ ಪರಿಣತವಾಗಿ ಪ್ರಕಟಗೊಳಿಸುವುದು. ಕಾಮೇಶ್ವರಿ, ಅಂಥ ನಿನ್ನ ಮಧ್ಯಮ ಬೀಜಾಕ್ಷರಕ್ಕೆ ನಮಸ್ಕರಿಸುವೆನು. ॥೨೫॥

ಶ್ರೀ ವಿದ್ಯಾಸ್ವರೂಪಳೇ, ನಿನಗೆ ಪ್ರಿಯವಾಗಿರುವ ಓಂಕಾರವು ಮಹತ್ತರವಾದುದು. ಆ ಪ್ರಣವವು ವೇದಗಳಲ್ಲಿ ಪ್ರಥಮತಃ ಉಚ್ಚರಿತವಾಗುವುದು. ಶ್ರುತಿಯನ್ನು ಹೇಳಬೇಕಾದರೆ ಅದರ ಮೊದಲೇ ಮೂರುಮಾತ್ರೆಗಳ ಕಾಲವುಳ್ಳ ಈ ಪ್ರಣವವನ್ನು ಹೇಳಲೇಬೇಕು. ಅದು ತನ್ನ ಉಪಾಸಕರ ಸಕಲ ಮನೋರಥಗಳನ್ನೂ ಪೂರೈಸಿಕೊಡುವುದರಲ್ಲಿ ಅಗ್ರಗಣ್ಯವಾಗಿರುತ್ತದೆ. ಜಾಡ್ಯವೆಂಬ ಅಂಧಕಾರವನ್ನು ನಾಶಮಾಡುವುದರಲ್ಲಿ ಅದ್ವಿತೀಯವಾದ ಸೂರ್ಯಸ್ವರೂಪವಾಗಿರುವುದು. ಅದೇ ಸ್ವಾತ್ಮಪ್ರಕಾಶವಾದುದು. ಸಕಲ ರಾಜಾಧಿರಾಜರನ್ನೂ ವಶೀಕರಣ ಮಾಡಿಕೊಳ್ಳಲು ಮುಖ್ಯವಾದ ಸಾಧನವೇ ಅದಾಗಿದೆ. ಕಾಮರಾಜವಿದ್ಯೆಯೆನಿಸಿದ ಆ ಪ್ರಣವವನ್ನು ಸದಾ ಭಜಿಸುವೆನು. ॥೨೬॥

ಎಲೌ ದೇವಿ, ನಿನ್ನ ಐಂ, ಕ್ಲೀಂ, ಸೌಃ ಎಂಬ ಬೀಜಾಕ್ಷರಗಳಲ್ಲಿ ಮೂರನೆಯ ಬೀಜಾಕ್ಷರವು ಅಗ್ನಿಜ್ವಾಲೆಯಂತೆ ಜಾಜ್ವಲ್ಯಮಾನವಾದುದು. ಸಮಸ್ತ ಜಗತ್ತಿಗೂ ನಿನ್ನ ಸಾಲ್ಮನೇ ಶಕ್ತಿಗೂ ಆಧಾರಭೂತವಾದ ಅದನ್ನೇ ಬ್ರಹ್ಮ ಎಂದು ಕರೆಯುವರು.

ಅಗುಪ್ತಾ ಗುಪ್ತಾ ಯಾ ಸ್ಸ್ವಯಮಪಿ ಮಹಾಂತೋಽಪಿ ಲಘವಃ
ಸಕೀಲಾ ನಿಷ್ಕೀಲಾ ಗುರುಭಿರಪಿ ದಿಷ್ಟಾ ಅಪಿ ತವ ।
ಪ್ರಸನ್ನಾಯಾಂ ದೇವಿತ್ವಯಿ ತವ ಸಕಲಮಂತ್ರಾರ್ಥಫಲದಾ
ತರೋರ್ಮೂಲೇ ಶಕ್ತಿಂ [1]ಫಲತಿ ಖಲು ಶಾಖಾಶತತಯಾ ॥೨೮॥

ಸರ್ವಂ ಸರ್ವತಏವ ಸರ್ವವಿಷಯೇ ಕಾರ್ಯೇಂದ್ರಿಯಾಣ್ಯಂತರಾತ್
ತತ್ತದ್ದಿವ್ಯಹೃಷೀಕಕರ್ಮಭಿರಿದಂ ಸದ್ಯಃ[2]ಸ್ಸ್ನವಾನಾ ಪರಾ ।
ವಾಗರ್ಥವ್ಯವಹಾರಕಾರಣತನುಶ್ಶಕ್ತಿರ್ಜಗದ್ವ್ಯಾಪಿನೀ
ಯದ್ಬೀಜಾತ್ಮಕತಾಂ ಗತಾ ತವ ಶಿವೇ ತನ್ನೌಮಿ ಬೀಜಂ ಪರಂ ॥೨೯॥

ಅಗ್ನೀಂದುದ್ಯುಮಣಿಪ್ರಭಂಜನಧರಾನೀರಾಂತರಸ್ಥಾಯಿನೀ
ಶಕ್ತಿರ್ಬ್ರಹ್ಮಹರೀಶವಾಸವಮುಖಾಮರ್ತ್ಯಾಸುರಾತ್ಮಸ್ಥಿತಾ ।

---

ಅದು ಜ್ಞಾನಸ್ವರೂಪವೇ ಆಗಿದೆ. ಅದು ಮೂರ್ಧನ್ಯಾಕ್ಷರದ (ಷ) ಕೊನೆಯಲ್ಲಿರುವ ಔಕಾರದಿಂದಲೂ ವಿಸರ್ಗದಿಂದಲೂ ಕೂಡಿ ಸೌಕಾರಾತ್ಮಕವಾಗಿರುವುದು. ಅದರ ಮಹಿಮೆಯು ಅನ್ಯಾದೃಶವಾದುದು. ಅದು ಪರಾವಿದ್ಯೆಯೇ ಆಗಿದೆ. ಆ ಬೀಜಾಕ್ಷರವು ನನ್ನ ಹೃದಯದಲ್ಲಿ ಸದಾ ಪ್ರಕಾಶಿಸಲಿ. ॥೨೭॥

ಗುರುಗಳಿಂದ ನಿಯಮಪೂರ್ವಕವಾಗಿ ಈ ಬೀಜಾಕ್ಷರಗಳನ್ನು ಉಪದೇಶ ತೆಗೆದುಕೊಂಡಿದ್ದರೂ ಕೇವಲ ಇದರಿಂದ ಏನೂ ಸಿದ್ಧಿಸಲಾರದು. ನೀನು ಪ್ರಸನ್ನಳಾಗದಿದ್ದರೆ, ಆ ಬೀಜಾಕ್ಷರಗಳು ಪ್ರಕಾಶಮಾನಗಳಾಗಿದ್ದರೂ ಪ್ರಕಾಶವಿಲ್ಲದಿದ್ದ ಹಾಗೆಯೇ ಸರಿ. ಅವು ಮಹತ್ತರವಾಗಿದ್ದರೂ ಲಘುಪ್ರಾಯಗಳೇ ಆಗುವುವು. ಅರ್ಥಜನನ ಶಕ್ತಿ ಇದ್ದರೂ, ಇಲ್ಲದಂತೆಯೇ ತೋರುವುವು. ಆದರೆ ದೇವಿಯೇ, ನೀನು ಪ್ರಸನ್ನಳಾದರೆ ಈ ಬೀಜಾಕ್ಷರಗಳೇ ಸಕಲ ಮಂತ್ರಾರ್ಥಗಳ ಫಲವನ್ನು ಸಿದ್ಧ ಮಾಡಿಕೊಡುವುವು. ಹೇಗೆಂದರೆ—ಮರದ ಬುಡದಲ್ಲಿರುವ ಶಕ್ತಿಯನ್ನು ತಾನೆ, ಮೇಲುಗಡೆಯಲ್ಲಿರುವ ನೂರಾರು ಕೊಂಬೆಗಳೂ ಫಲರೂಪವಾಗಿ ಜನರಿಗೆ ಕೊಡುವುವು? ॥೨೮॥

ಕಾರಣಮಾತ್ರದಿಂದ ಕಾರ್ಯವು ಸಂಭವಿಸಬಲ್ಲದು. ಆದರೆ ಪ್ರತ್ಯಕ್ಷಾದಿ ಅನುಭವವಾಗಬೇಕಾದರೆ ಇಂದ್ರಿಯಗಳ ವ್ಯಾಪಾರವು ಅಗತ್ಯವಾಗುವುದು. ಅದರ

---

1 ಸಿಕ್ತೇ ವಿಲಸತಿ (ಪಾ. ರ) 2 ಸವ್ಯಸ್ತುವಾನಾಪರಾ (ಪಾ ರ)

ಸೃಷ್ಟಸ್ಥಾವರಜಂಗಮುಸ್ಥಿತಮುಹಾಚೈತನ್ಯರೂಪಾ ಚ ಯಾ
ಯದ್ಬೀಜಸ್ಮರಣೇನ ಸೈವ ಭವತೀ ಸ್ಪ್ರಾದುರ್ಭವತ್ಯಂಬಿಕೇ ॥೩೦॥

ಸ್ವಾತ್ಮಶ್ರೀವಿಜಿತಾಜವಿಷ್ಣುಮುಘವಚ್ಛ್ರೀಪೂರಣೈಕವ್ರತಂ
ತದ್ವಿದ್ಯಾಕವಿತಾವಿತಾನಲಹರೀಕಲ್ಲೋಲಿನೀದೀಪಕಂ।
ಬೀಜಂ ಯತ್ತ್ರಿಗುಣಪ್ರವೃತ್ತಿಜನಕಂ ಬ್ರಹ್ಮೇತಿ ಯದ್ಯೋಗಿನಃ
ಶಾಂತಾ ನಿತ್ಯಮುಪಾಸತೇ ತದಿಹ ತೇ ಚಿತ್ತೇ ದಧೇ ಶ್ರೀಪರೇ ॥೩೧॥

---

ಲ್ಲಿಯೂ ಮನಇಂದ್ರಿಯದ ವೃತ್ತಿವ್ಯಾಪಾರವೇ ಮುಖ್ಯವಾದುದು. ಆ ವೃತ್ತಿಯನ್ನು ಉಂಟುಮಾಡುವುದೇ ನಿನ್ನ ಶಕ್ತಿ. ಅದು ಜಗತ್ತನ್ನೇ ವ್ಯಾಪಿಸಿದೆ. ಅದೇ ಎಲ್ಲಕ್ಕೂ ಮೂಲಕಾರಣ. ಶಬ್ದ ಮತ್ತು ಅರ್ಥ ಇವುಗಳ ವ್ಯವಹಾರಕ್ಕೆ ಪ್ರಕೃತಿಯಾಗಿರುವುದು. ಅಂಥ ನಿನ್ನ ಶಕ್ತಿರೂಪವಾದ ಬೀಜಾಕ್ಷರವನ್ನು ನಮಸ್ಕರಿಸುವೆನು. ॥೨೯॥

ಅಂಬಿಕೆಯೇ, ನಿನ್ನ ಶಕ್ತಿಯು ಅಗ್ನಿಯಲ್ಲಿ, ಚಂದ್ರನಲ್ಲಿ, ಸೂರ್ಯನಲ್ಲಿ, ಪೃಥಿವಿಯಲ್ಲಿ, ನೀರಿನಲ್ಲಿ ಎಲ್ಲದರಲ್ಲಿಯೂ ನಿರಂತರ ಸ್ಥಾಯಿಯಾದುದು. ಬ್ರಹ್ಮ, ವಿಷ್ಣು, ಈಶ್ವರ, ಇಂದ್ರ ಮುಂತಾದ ದೇವದಾನವರಲ್ಲೆಲ್ಲಾ ಆತ್ಮಸ್ವರೂಪವಾಗಿದೆ. ಉತ್ಪನ್ನವಾದ ಸ್ಥಾವರ ಜಂಗಮುಗಳಲ್ಲಿ ಚೈತನ್ಯರೂಪವಾಗಿದೆ. ಅಂಥ ಶಕ್ತಿಗೆ ಮೂಲಕಾರಣ ಯಾವುದೆಂದು ಜಿಜ್ಞಾಸೆಯಿಂದ ವಿವೇಕಜ್ಞಾನಪಡೆದರೆ, ಮನುಷ್ಯನು ತ್ವದ್ಭಾವವನ್ನೇ ಪಡೆಯುವನು. ॥೩೦॥

ನಿನ್ನ ಬೀಜಾಕ್ಷರವು ತನ್ನ ಮಹಿಮೆಯಿಂದ ಹರಿಹರಬ್ರಹ್ಮಾದಿಗಳನ್ನೂ ಮೀರಿಸಿರುತ್ತದೆ. ದೈವೀಸಂಪತ್ತನ್ನು ನೀಡುವುದರಲ್ಲಿ ಅದು ಅದ್ವಿತೀಯವಾದುದು. ವಿದ್ಯೆ, ಕವಿತೆ ಮುಂತಾದ ವಿದ್ಯಾಕಲೆಗಳೆಂಬ ವಿತಾನಪ್ರವಾಹವನ್ನೇ ಅದು ಪ್ರಕಾಶಗೊಳಿಸುವುದು. ಸತ್ವರಜಸ್ತಮೋಗುಣಗಳ ಪ್ರವೃತ್ತಿಗೇ ಅದು ಮೂಲ ಕಾರಣವಾಗಿರುವುದು. ಇಂತಹ ಮಹಿಮಾಶಾಲಿಯಾದ ನಿನ್ನ ಬೀಜಾಕ್ಷರಗಳನ್ನು ಯೋಗಿಗಳು ಬ್ರಹ್ಮ ಎಂತಲೇ ಕರೆದು, ಅದನ್ನು ಶಾಂತಮನಸ್ಕರಾಗಿ ಸದಾ ಧ್ಯಾನಿಸುವರು. ಭಗವತಿ, ಅಂತಹ ನಿನ್ನ ಬೀಜಾಕ್ಷರವನ್ನು ನನ್ನ ಹೃದಯದಲ್ಲಿ ಸದಾ ಧರಿಸುವೆನು. ॥೩೧॥

ಏಕೈಕಂ ತವ ಮಾತೃಕೇ ಪರತರೇ ಸಂಯೋಗಿ ವಾ ಯೋಗಿ ವಾ
ವಿದ್ಯಾದಿಪ್ರಕಟಪ್ರಭಾವಜನಕಂ ಜಾಡ್ಯಾಂಧಕಾರಾಪಹಂ ।
ಯನ್ನಿಷ್ಠಾಶ್ಚ ಮಹೋತ್ಪಲಾಸನಮಹಾವಿಷ್ಣುಪ್ರಹರ್ತ್ರಾದಯೋ
ದೇವಾಸ್ಸ್ವೇಷು ವಿಧಿಷ್ವನನ್ಯಮಹಿಮಾಸ್ಫೂರ್ತಿಂ ದಧೇ ತೇಽಪಿ ತತ್ ॥೩೨॥
ಬ್ರಹ್ಮಾಯೋನಿರಮಾಸುರೇಶ್ವರಸುಹೃಲ್ಲೇಖಾಭಿಯುಕ್ತೈಸ್ತಥಾ
ಮಾರ್ತಂಡೇಂದುಮನೋಭವಾಭವಸುಧೀಮಾಯಾಭೀರುದ್ರಾಶ್ರಿತೈಃ ।
ಸೋಮಾಂಬುಕ್ಷಿತಿಶಕ್ತಿಭಿಃ ಪ್ರಕಟಿತೈರ್ಬಾಣಾಂಗವೇದಕ್ರಮೈಃ
ವರ್ಣೈಃ ಶ್ರೀಶಿವದೇಶಿಕೇನ ವಿದಿತಾಂ ವಿದ್ಯಾಂ ತವಾಂಬ ಶ್ರಯೇ ॥೩೩॥

---

ಹೇ ಮಾತೃಕೇ, ನಿನ್ನ ಬೀಜಾಕ್ಷರವು ಒಂಟೊಂಟಿಯಾಗಿರಲಿ, ಒಟ್ಟೊಟ್ಟಿ ನಿಂದಿರಲಿ, ಅವೆಲ್ಲವೂ ಹೇಗಿದ್ದರೂ ಪರಾತ್ಪರಗಳೇ ಆಗಿರುತ್ತವೆ. ಅವು ಜಾಡ್ಯವೆಂಬ ಕತ್ತಲೆಯನ್ನು ನಾಶಮಾಡತಕ್ಕವುಗಳೇ. ವಿದ್ಯಾರೂಪವಾದ ಶುದ್ಧಜ್ಞಾನವನ್ನು ಪ್ರಕಾಶಗೊಳಿಸುವುವು. ಯಾವ ಬೀಜಾಕ್ಷರಗಳ ಒಂದೊಂದರ ಸಿದ್ಧಿಯಿಂದ ಬ್ರಹ್ಮ, ವಿಷ್ಣು, ಮಹೇಶ್ವರ ಮುಂತಾದ ದೇವತೆಗಳು ತಮ್ಮ ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಅನ್ಯಾದೃಶವಾದ ಜಯವನ್ನು ಗಳಿಸಿಕೊಂಡಿದ್ದಾರೆಯೋ ಆ ಬೀಜಾಕ್ಷರಗಳ ಸ್ಫೂರ್ತಿಯು ನನ್ನ ಹೃದಯದಲ್ಲಿ ಉಂಟಾಗಲಿ. ॥೩೨॥

ದೇವಿಯೇ, ನಿನ್ನ ಪಂಚದಶಾಕ್ಷರಾತ್ಮಕವಾದ ಕ, ಏ, ಈ, ಲ ಹ್ರೀಂ, ಹಸಕಹಲಹ್ರೀಂ, ಸಕಲಹ್ರೀಂ, ಎಂಬ ಮೂಲಮಂತ್ರವನ್ನು ವಿಷ್ಣು, ಲಕ್ಷ್ಮಿ, ಇಂದ್ರ ಇವರೇ ಮೊದಲಾದ ಸಕಲ ದೇವತೆಗಳೂ, ಸೂರ್ಯ, ಚಂದ್ರ, ಮನ್ಮಥರೇ ಮೊದಲಾದ ಮಾಯಾಭಿಮಾನಿದೇವತೆಗಳೂ, ರುದ್ರಾದಿಲಯಕರ್ತರೂ ಸಹ ಜಪಿಸಿ- ಅನೇಕ ಮಹಿಮೆಯನ್ನು ಸಂಪಾದಿಸಿರುವರು. ಆ ಬೀಜಮಂತ್ರವಾದರೋ ಶಿವಶಕ್ತಿ, ಜಲಶಕ್ತಿ, ಭೂಶಕ್ತಿಯೆಂಬ ಶಕ್ತಿತ್ರಯಾತ್ಮಕವಾಗಿರುವುದು. ಅಲ್ಲದೆ ಹದಿನೈದು ಅಕ್ಷರಗಳಲ್ಲಿ ಮೊದಲನೆಯ ಐದು ಅಕ್ಷರಗಳು ಪ್ರಥಮಪುಟದಲ್ಲಿಯೂ, ಎರಡನೆಯ ಆರು ಅಕ್ಷರಗಳು ದ್ವಿತೀಯ ಪುಟದಲ್ಲಿಯೂ, ಕೊನೆಯ ನಾಲ್ಕು ಅಕ್ಷರಗಳು ತೃತೀಯ ಪುಟದಲ್ಲಿಯೂ ಅಡಗಿ ತ್ರಿಪುಟಾತ್ಮಕವಾಗಿರುವುದು. ಹೀಗೆ ಶಿವಮಹಾದೇಶಿಕನಿಂದ ಉಪದಿಷ್ಟವಾದ ಶ್ರೀವಿದ್ಯಾರೂಪವಾದ ನಿನ್ನ ಬೀಜಾಕ್ಷರಗಳನ್ನು ಸರ್ವದಾ ಆಶ್ರಯಿಸುವೆನು. ॥೧೫-೩೩॥

ಇತ್ಥಂ ತ್ರೀಣ್ಯಪಿ ಮೂಲವಾಗ್ಭವಮಹಾಶ್ರೀಕಾಮರಾಜಸ್ಫುರ
ಚ್ಛಕ್ತ್ಯಾಖ್ಯಾನಿ ಚತುಶ್ಶ್ರುತಿಪ್ರಕಟಿತಾನ್ಯುತ್ಕೃಷ್ಟಕೂಟಾನಿ ತೇ।
ಭೂತತರ್ಕಶ್ರುತಿಸಂಖ್ಯವರ್ಣವಿದಿತಾನ್ಯಾರಕ್ತಕಾಂತೇ ಶಿವೇ
ಯೋ ಜಾನಾತಿ ಸ ಏವ ಸರ್ವಜಗತಾಂ ಸೃಷ್ಟಿಸ್ಥಿತಿಧ್ವಂಸಕೃತ್ ॥೩೪॥

ನಿತ್ಯಂ ಯಸ್ತವ ಮಾತೃಕಾಕ್ಷರಸಖೀಂ ಸೌಭಾಗ್ಯವಿದ್ಯಾಂ ಜಪೇತ್
ಸಂಪೂಜ್ಯಾ(ಕ್ಷರ)ಖಿಲಚಕ್ರರಾಜನಿಲಯಾಂ ಸಾಯಂತನಾಗ್ನಿಪ್ರಭಾಂ।
ಕಾಮಾಖ್ಯಂ ಶಿವನಾಮತತ್ತ್ವಮುಭಯಂ ವ್ಯಾಪ್ಯಾತ್ಮನಾಂ ಸರ್ವತೋ
ದೀವ್ಯಂತೀ ಮಿಹ ತಸ್ಯ ಸಿದ್ಧಿರಚಿರಾತ್ ಸ್ಯಾಚ್ಚ ಸ್ವರೂಪೈಕ್ಯತಾ ॥೩೫॥

ಕಾವ್ಯೈರ್ವಾ ಪಠಿತೈಃ ಕಿಮಲ್ಪವಿದುಷೋ ಘೋ(ಜೋ)ಷ್ಯಮಾಣೈಃ ಪುನಃ
ಕಿಂ ತೈರ್ವ್ಯಾಕರಣೈರ್ವಿಬೋಧಿತತಯಾ ಕಿಂ ವಾಭಿಧಾನಶ್ರಿಯಾ।

---

ದೇವಿಯೇ, ನಿನ್ನ ಮೂಲಮಂತ್ರವು ವಾಗ್ಭವ ವಿದ್ಯಾ, ಶ್ರೀವಿದ್ಯಾ, ಕಾಮರಾಜವಿದ್ಯಾ, ಎಂಬ ಮೂರು ವಿದ್ಯಾರೂಪವಾದ ಶಕ್ತಿಯುಳ್ಳದ್ದಾಗಿದೆ. ಇದನ್ನು ನಾಲ್ಕು ವೇದಗಳೂ ಘೋಷಿಸುತ್ತಿವೆ. ಅಲ್ಲದೆ ಮೂಲಮಂತ್ರಾಂತರ್ಗತಗಳಾದ ಬೀಜಾಕ್ಷರಗಳು, ೫-೬-೪, ಈ ಸಂಖ್ಯೆಯಿಂದ ತ್ರಿಕೂಟವಾಗಿಯೂ ಪರಿಣಮಿಸಲ್ಪಟ್ಟಿವೆ. ಈ ಮೂರು ಶಕ್ತಿಗಳನ್ನೂ ಮೂರು ಕೂಟಗಳನ್ನೂ ಸರಿಯಾಗಿ ಅರಿತವರು ಜಗತ್ತಿನ ಸೃಷ್ಟಿಸ್ಥಿತಿಲಯಾತ್ಮಕಗಳಾದ ಮೂರು ಕಾರ್ಯಗಳನ್ನೂ ನಿರ್ವಹಿಸತಕ್ಕವರಾಗುವರು. ॥೩೪॥

ಹೇ ದೇವಿ, ನಿನ್ನ ಬೀಜಾಕ್ಷರವು ಸೌಭಾಗ್ಯವಿದ್ಯಾರೂಪವಾಗಿದೆ. ಆ ವಿದ್ಯೆಯು ಸಾಯಂಕಾಲದಲ್ಲಿ ಪ್ರಕಾಶಿಸುವ ಅಗ್ನಿಯಂತೆ ಜಾಜ್ವಲ್ಯಮಾನವಾಗಿ ಪ್ರಕಾಶವಾಗಿರುವುದು. ಯಾವನು ಶ್ರೀಚಕ್ರವನ್ನು ವಿಧಿವತ್ತಾಗಿ ಪೂಜಿಸಿ ನಿನ್ನ ಬೀಜಾಕ್ಷರಸಹಿತವಾಗಿ ಶ್ರೀವಿದ್ಯೆಯನ್ನು ಭಕ್ತಿಯಿಂದ ಜಪಮಾಡುವನೋ ಅವನು ತನ್ನ ಸ್ವಾತ್ಮಪ್ರಕಾಶದಿಂದ ಶಿವನಾಮತತ್ತ್ವ ಮತ್ತು ಕಾಮತತ್ತ್ವ ಎಂಬೆರಡನ್ನೂ ಮೀರಿ ಸಿದ್ಧಿಯನ್ನು ಪಡೆಯುವನು. ಕೊನೆಗೆ ಶಾಶ್ವತವಾದ ಸಾಯುಜ್ಯವನ್ನೂ ಹೊಂದುವನು. ॥೩೫॥

ಭಗವತಿಯೇ, ನಿನ್ನ ಪ್ರಸಾದವನ್ನು ಪಡೆಯದವರ ಕಾವ್ಯಗಳನ್ನು ಹಾಡಿದರೇನು? ಮಹಾಮಹಾ ವ್ಯಾಕರಣ ವಾಕ್ಯಾರ್ಥಗಳನ್ನು ಮಾಡಿದರೆ ತಾನೆ ಏನು?

ಏತೈರಂಬ ನ ಬೋಧಭವೀತಿ ಸುಕವಿಸ್ತಾವತ್ತ್ರವ ಶ್ರೀಮತೋ
ಯಾವನ್ನಾನುಸರೀಸರೀತಿ ಸರಣಿಂ ಪಾದಾಬ್ಜಯೋಃ ಪಾವನೀಂ ॥೩೬॥

ಗೇಹಂ ನಾಕತಿ ಗರ್ವಿತಃ ಪ್ರಣಮತಿ ಸ್ತ್ರೀಸಂಗಮೋ ಮೋಕ್ಷತಿ
ದ್ವೇಷೀ ಮಿತ್ರತಿ ಪಾತಕಂ ಸುಕೃತತಿ ಕ್ಷ್ಮಾವಲ್ಲಭೋ ದಾಸತಿ ।
ಮೃತ್ಯುರ್ವೈದ್ಯತಿ ದೂಷಣಂ ಸುಗುಣತಿ ತ್ವತ್ಪಾದಸಂಸೇವನಾತ್
ತ್ವಾಂ ವಂದೇ ಭವಭೀತಿಭಂಜನಕರೀಂ ಗೌರೀಂ ಗಿರೀಶಪ್ರಿಯಾಂ ॥೩೭॥

ಆದ್ಯೈರಗ್ನಿರವೀಂದುಬಿಂಬನಿಲಯೈರಂಬ ತ್ರಿಲಿಂಗಾತ್ಮಭಿಃ
ಮಿಶ್ರಾರಕ್ತಸಿತಪ್ರಭೈರನುಪಮೈರ್ಯುಷ್ಮತ್ಪದೈಸ್ತ್ರೈಸ್ತ್ರಿಭಿಃ ।
ಸ್ವಾತ್ಮೋತ್ಪಾದಿತಕಾಲಲೋಕನಿಗಮಾವಸ್ಥಾಮರಾದಿತ್ರಯೈ
ರುದ್ಭೂತಂ ತ್ರಿಪುರೇತಿ ನಾಮ ಕಲಯೇದ್ಯಸ್ತೇ ಸ ಧನ್ಯೋ ಭವೇತ್ ॥೩೮॥

---

ಪರಿನಿಷ್ಠಿತ ಶಬ್ದಾರ್ಥಜ್ಞಾನದಿಂದ ಪ್ರವಚನ ಮಾಡಿದರೆ ತಾನೇ ಏನು? ಈ ಯಾವುದರಿಂದಲೂ ಏನೂ ಪ್ರಯೋಜನವಾಗಲಾರದು. ಇಷ್ಟ ಸಿದ್ಧಿಯಾಗುವುದಿಲ್ಲ. ನಿನ್ನ ಚರಣಕಮಲಗಳ ಅನನ್ಯ ಪ್ರಮಾಣತೆಯನ್ನೂ, ಪ್ರಸನ್ನತೆಯನ್ನೂ ಪಡೆಯದೇ ಎಂದೂ ಯಾರೂ ಸುಕವಿಗಳೆನಿಸಿಕೊಳ್ಳಲಾರರು. ॥೩೬॥

ಹೇ ದೇವಿ, ನಿನ್ನ ಪಾದಕಮಲ ಸೇವೆಮಾಡುವುದರಿಂದ ಏನೇನು ಸಿದ್ಧಿಸುತ್ತದೆ ಎಂಬುದನ್ನು ಹೇಳಲು ಸಾಧ್ಯವೇ? ಅವರಿಗೆ ತನ್ನ ಮನೆಯೇ ಸ್ವರ್ಗವಾಗುವುದು. ಉದ್ಧತನೂ ಮಣಿಯುವನು. ಸ್ತ್ರೀವ್ಯಾಮೋಹವು ಮೋಕ್ಷರೂಪವಾಗುವುದು. ಶತ್ರುಗಳೇ ಮಿತ್ರರಾಗುವರು. ಪಾಪವೇ ಪುಣ್ಯಗಳಾಗಿಬಿಡುವುವು. ಭೂಮಿಗೆ ಒಡೆಯನಾದ ರಾಜನು ಸೇವಕನಾಗಿಬಿಡುವನು. ಮೃತ್ಯುವೇ ವೈದ್ಯನಾಗುವುದು. ದೋಷಗಳೆಲ್ಲಾ ಗುಣಗಳಾಗುವುವು. ಹೇಭಗವತಿ, ಇಷ್ಟ ಸಿದ್ಧಿಗಳನ್ನು ಅನುಗ್ರಹಿಸುವ ಸಂಸಾರಭಯನಾಶಕಳಾದ ನಿನ್ನನ್ನು ಸದಾ ನಮಿಸುವೆನು. ॥೩೭॥

ಹೇ ಅಂಬ, ನಿನಗೆ ತ್ರಿಪುರಾ ಎಂತಲೂ ಹೆಸರಿದೆ. ಆ ಮೂರು ಅಕ್ಷರಗಳೂ ಒಂದೊಂದು ಲಿಂಗಸ್ವರೂಪಳಾಗಿವೆ. ಅವು ಅಗ್ನಿ, ಸೂರ್ಯ, ಚಂದ್ರ ಇವುಗಗಳಾಗಿವೆ. ಅವುಗಳ ವರ್ಣವು ಕೆಂಪು, ಬಿಳುಪು, ಮಿಶ್ರಿತವಾದದ್ದಾಗಿದೆ. ಕಾಲಲೋಕನಿಗಮ ಬೋಧಕವಾದ ಈ ಹೆಸರನ್ನು ಯಾವನು ಧ್ಯಾನಿಸುವನೋ ಅವನೇ ಧನ್ಯನು. ॥೩೮॥

**ಆದ್ಯೋ ಜಾಪ್ಯತಮಾರ್ಥವಾಚಕತಯಾ ರೂಢಸ್ಸ್ವರಃ ಪಂಚಮ**
**ಸ್ಸರ್ವೋತ್ಕೃಷ್ಟತಮಾರ್ಥವಾಚಕತಯಾ ವರ್ಣಃ ಪವರ್ಗಾಂತಕಃ ।**
**ವಕ್ರತ್ವೇನ ಮಹಾವಿಭೂತಿಸರಣಿಸ್ತ್ವಾಧಾರಗೋ ಹೃದ್ಗತೋ**
**ಭ್ರೂಮಧ್ಯೇ ಸ್ಥಿತ ಇತ್ಯತಃ ಪ್ರಣವತಾಂ ತೇ ಗೀಯತೇಽಂಬಾಗಮ್ಯೈಃ ॥೩೯॥**

**ಗಾಯತ್ರೀ ಸಶಿರಾ ತುರೀಯಸಹಿತಾ ಸಂಧ್ಯಾತ್ರಯೀ ತ್ವಾಗಮೈಃ**
**ಆಖ್ಯಾತಾ ತ್ರಿಪುರೇ ತ್ವಮೇವ ಮಹತಾಂ ಶರ್ಮಪ್ರದಾ ಕರ್ಮಣಾಂ ।**
**ತತ್ತದ್ದರ್ಶನಮುಖ್ಯಶಕ್ತಿರಪಿ ಚ ತ್ವಂ ಕರ್ಮಬ್ರಹ್ಮೇಶ್ವರೀ**
**ಕರ್ತಾಹಂ ಪುರುಷೋ ಹರಿಶ್ಚ ಸವಿತಾ ಬುದ್ಧಶ್ಶಿವಸ್ತ್ವಂ ಗುರುಃ ॥೪೦॥**

---

ಪ್ರಣವಮಂತ್ರವಾದ ಓಂಕಾರದಲ್ಲಿ ಅ, ಉ, ಮ್, ಎಂಬ ಮೂರು ಅಕ್ಷರಗಳು ಸೇರಿವೆ. ಈ ಪ್ರಣವಾಭಿಮಾನಿನಿಯಾದ ದೇವತೆಯೇ ನೀನು. ಸಕಲವರ್ಣಗಳಿಗೂ ಆದಿಯಾದ ಅಕಾರವು ಸಕಲದೇವತೆಗಳಿಗೂ ಮೂಲಸ್ಥಾನಳೆಂಬ ಅರ್ಥವನ್ನು ಕೊಡುತ್ತದೆ. ಐದನೆಯ ಸ್ವರವಾದ ಉಕಾರವು, ನೀನು ಜಪ್ಯಳು, ಅಂದರೆ ಧ್ಯಾನಕ್ಕೆ ಮುಖ್ಯ ವಿಷಯಳು ಎಂಬ ಅರ್ಥವನ್ನು ತೋರ್ಪಡಿಸುವುದು. ಪವರ್ಗದ ಕೊನೆಯ ಅಕ್ಷರವಾದ ಮಕಾರವು ನೀನು ಸರ್ವೋತ್ಕೃಷ್ಟಳು ಎಂಬರ್ಥವನ್ನು ತೋರ್ಪಡಿಸುವುದು. ಇಂತಹ ಪ್ರಣವಮಂತ್ರಾಭಿಮಾನಿನಿಯಾದ ನೀನು ಭ್ರೂಮಧ್ಯದಲ್ಲಿರುವ ಬ್ರಹ್ಮಾಂಡಚಕ್ರದಲ್ಲಿ ಅಂದರೆ ಸುಷುಮ್ನಾಂತರ್ಗತವಾಗಿರುವ ಚಕ್ರಸ್ಥಳದಲ್ಲಿ ನೆಲಸಿರುವಳೆಂದು ಸಕಲಾಗಮಗಳೂ ಉದ್ಘೋಷಿಸುತ್ತಿವೆ. ॥೩೯॥

ಸಶಿರಸ್ಕವಾದ ಮತ್ತು ವ್ಯಾಹೃತಿಮಂತ್ರಸಹಿತವಾದ ಗಾಯತ್ರಿಯೇ ನೀನು. ಸಂಧ್ಯಾತ್ರಯಗಳಲ್ಲಿಯೂ ಆರಾಧ್ಯದೇವಿಯಾಗಿ, ಸಾವಿತ್ರೀ, ಗಾಯತ್ರಿ, ಸರಸ್ವತಿ ಎಂಬ ನಾಮಭೇದದಿಂದ ವಿರಾಜಿಸುವವಳೂ ನೀನೇ. ಅಷ್ಟೇ ಅಲ್ಲದೆ ಮೀಮಾಂಸಾ ಶಾಸ್ತ್ರಪ್ರೋಕ್ತವಾದ ಸಕಲ ಕರ್ಮಗಳಿಗೂ, ಒಂದು ಶಕ್ತಿಯನ್ನು ಕೊಡುವ ಆದಿಶಕ್ತಿಯೇ ನೀನು. ಕರ್ಮಬ್ರಹ್ಮಗಳೆಂದು ಉದ್ಘೋಷಿಸುವ ಯಜ್ಞಯಾಗಾದಿಗಳಿಗೆಲ್ಲಾ ನೀನೇ ಮುಖ್ಯ ಆರಾಧ್ಯದೇವಿಯಾಗಿರುವೆ. ಅಂದರೆ ಕರ್ಮಸ್ವರೂಪಳೇ ನೀನು. ಅಥವಾ, "ಅಹಂಬ್ರಹ್ಮಾಸ್ಮಿ" ತ್ಯಾದಿ ಸೂತ್ರಗಳಲ್ಲಿ ಅಸ್ಮಚ್ಛಬ್ದಪ್ರತಿಪಾದ್ಯವಾಗಿ, ಕರ್ತೃತ್ವ, ಭೋಕ್ತೃತ್ವಾದಿ ಧರ್ಮಗಳಿಗೆ ವಿಷಯವಾಗಿ ಪುರುಷ, ಹರಿ, ಸವಿತಾ, ಬುದ್ಧ, ಶಿವ, ಗುರು, ಮುಂತಾದ ಶಬ್ದವಾಚ್ಯವಾದ ಬ್ರಹ್ಮಸ್ವರೂಪವೇ ನೀನು. ॥೪೦॥

ಅನ್ನಪ್ರಾಣಮನಃಪ್ರಬೋಧಪರಮಾನಂದೈಶ್ಶಿರಃಪಕ್ಷಯು
ಕ್ಪುಚ್ಛಾತ್ಮಪ್ರಕಟೈರ್ಮಹೋಪನಿಷದಾಂ ವಾಕ್ಯೈಃ ಪ್ರಸಿದ್ಧೀಕೃತೈಃ ।
ಕೋಶೈಃ ಪಂಚಭಿರೇಭಿರಂಬ ಭವತೀಮೇತತ್ಪ್ರಲೀನಾಮಿತಿ
ಜ್ಯೋತಿಃಪ್ರಜ್ವಲದುಜ್ಜ್ವಲಾತ್ಮಚಪಲಾಂ ಯೋ ವೇದ ಸ ಬ್ರಹ್ಮವಿತ್ ॥೪೧॥

ಸಚ್ಚಿತ್ತತ್ತ್ವಮಸೀತಿ ವಾಕ್ಯವಿದಿತೈರಧ್ಯಾತ್ಮವಿದ್ಯಾ ಶಿವೇ
ಬ್ರಹ್ಮಾಖ್ಯೈರತುಲಪ್ರಭಾವಜನಕೈಸ್ತತ್ತ್ವೈಸ್ತ್ರಿಭಿಸ್ಸದ್ಗುರೋಃ ।
ತ್ವದ್ರೂಪಸ್ಯ ಮುಖಾರವಿಂದಕುಹರಾತ್ಸಂಪ್ರಾಪ್ಯ ದೀಕ್ಷಾಮತೋ
ಯಸ್ತ್ವಾಂ ವಿಂದತಿ ತತ್ವತಸ್ತದಹಮಿತ್ಯಾರ್ಯೋ ಸ ಮುಕ್ತೋ ಭವೇತ್
॥೪೧॥

ಸಿದ್ಧಾಂತೈರ್ಬಹುಭಿಃ ಪ್ರಮಾಣಗಣಿತೈರನ್ಯೈರವಿದ್ಯಾತಮೋ
ನಕ್ಷತ್ರೈರಿವ ಸರ್ವಮಂಧತಮಸಂ ತಾವನ್ನ ನಿರ್ಭಿದ್ಯತೇ ।

---

ಎಲೌ ದೇವಿಯೇ, ಉಪದಿಷದ್ವಾಕ್ಯಗಳಲ್ಲಿ ಶಿರಸ್ಸು, ಎರಡು ರೆಕ್ಕೆಗಳು, ಬಾಲ, ಆತ್ರ ಎಂದು ವರ್ಣಿತವಾಗಿರುವ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಪಂಚಕೋಶಗಳಲ್ಲಿ ನೀನು ಸರ್ವಾಂತರಳಾಗಿರುವೆ. ನಿನ್ನ ನಿಜಸ್ವರೂಪವಾದರೋ, ಆ ಪಂಚಕೋಶಗಳಲ್ಲಿ ಉಜ್ವಲ, ಪ್ರಜ್ವಲ, ಜ್ಯೋತಿ ಎಂಬ ಮೂರು ತೇಜೋರೂಪದಿಂದ ತೋರಿಬರುವುದು. ಈ ರೀತಿಯಾಗಿ ಯಾರು ನಿನ್ನನ್ನು ಅರಿಯುವರೋ ಅವರೇ ಬ್ರಹ್ಮಜ್ಞಾನಿಗಳೆನಿಸುವರು. ॥೪೧॥

ತತ್ತ್ವಮಸ್ಯಾದಿ ಮಹಾವಾಕ್ಯಗಳಲ್ಲಿ ತಚ್ಛಬ್ದ, ಯುಷ್ಮಚ್ಛಬ್ದಗಳಿಗೆ ಲಕ್ಷ್ಯವಾಗಿ, ಸಚ್ಚಿದಾನಂದಸ್ವರೂಪವೆಂದು ಪ್ರತಿಪಾದಿಸಲ್ಪಟ್ಟಿರುವ ಬ್ರಹ್ಮಸ್ವರೂಪವೇ ನೀನು. ಅಂತಹ ನೀನು ಶಕ್ತಿತ್ರಯಗಳಿಂದ ಕೂಡಿ ಚತುರ್ಮುಖಬ್ರಹ್ಮನೇ ಮೊದಲಾದ ನಾಮರೂಪಾದಿಗಳಿಂದ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಳಾಗಿರುವೆ. ಇಂತಹ ನಿನ್ನ ಗೂಢತತ್ತ್ವವನ್ನು ಯಾವನು ಸದ್ಗುರುವಿನ ಉಪದೇಶದಿಂದ ಸರಿಯಾಗಿ ತಿಳಿಯುವನೋ, ಅವನೇ ನಿಜವಾದ ಬ್ರಹ್ಮಜ್ಞಾನಿಯೆನಿಸುವನು. ॥೪೧॥

ಶಾಂಭವಿಯೇ, ಲೋಕದಲ್ಲಿ ಪ್ರಸಿದ್ಧವಾದ ಅವಿದ್ಯಾರೂಪವಾದ ಮಾಯೆಯೇ ಒಂದು ಅಂಧಕಾರ. ಅವಿದ್ಯಾನಿವಾರಣೆಗಾಗಿ ಸಾಧನಗಳನ್ನು ವಿವರಿಸುವ ಇತರ

ಯಾವತ್ತೇ ಸವಿತ್ರೈವ ಸಮ್ಮತಮಿದಂ ನೋದೇತಿ ವಿಶ್ವಾಂತರೇ
ಜಂತೋರ್ಜನ್ಮನಿವಾರಣೈಕಭಿದುರಂ ಶ್ರೀಶಾಂಭವಿ ಶ್ರೀಶಿವೇ ॥೪೨॥

ಆತ್ಮಾಸೌ ಸಕಲೇಂದ್ರಿಯಾಶ್ರಯಮತೋ ಬುದ್ಧ್ಯಾದಿಭಿಶ್ಚೋಚಿತೋ
ಕರ್ಮೋರ್ಬದ್ಧತನುರ್ಜನಿಂ ಚ ಮರಣಂ ಪ್ರಾಪ್ನೋತಿ ಯತ್ಕಾರಣಾತ್।
ಯತ್ತೇ ದೇವಿ ಮಹಾವಿಲಾಸಲಹರೀವಿದ್ಯಾಯುಧಾನಾಂ ಜಯ
ಸ್ತಸ್ಮಾತ್ತ್ವಾಂ ಗುರುಮಭ್ಯುಪೇತ್ಯ ಕಲಯೇ ತ್ವಾಮೇವ ಚೇನ್ಮುಚ್ಯತೇ॥೪೩॥

ನಾನಾಯೋನಿಸಹಸ್ರಸಂಭವವಶಾಜ್ಜಾತಾ ಜನನ್ಯಃ ಕತಿ
ಪ್ರಖ್ಯಾತಾ ಜನಕಾಃ ಕಿಯಂತ ಇತಿ ಮೇ ಸತ್ಸ್ಯಂತಿ ಚಾಗ್ರೇ ಕತಿ।
ಏತೇಷಾಂ ಗಣನೈವ ನಾಸ್ತಿ ಮಹತಸ್ಸಂಸಾರವಾರಾಂನಿಧೇ
ರ್ಭೀತಂ ಮಾಂ ನಿತರಾಮನನ್ಯಶರಣಂ ರಕ್ಷಾನುಕಂಪಾನಿಧೇ ॥೪೪॥

---

ಸಿದ್ಧಾಂತಗಳು ನಕ್ಷತ್ರಗಳಂತೆ ಮಿನುಗುಟ್ಟುತ್ತವೆ. ಈ ನಕ್ಷತ್ರಗಳು ಆ ಮಹಾ ಮೋಹಾಂಧಕಾರವನ್ನು ಎಂದಾದರೂ ಹೋಗಲಾಡಿಸಬಲ್ಲವೇ? ದೇವಿಯೇ, ನಿನ್ನ ಅನುಗ್ರಹವೆಂಬ ಸೂರ್ಯನು ಪ್ರಾಣಿಗಳ ಜನನ ಮರಣಾದಿಗಳನ್ನು ನಾಶಮಾಡುವ ಉದ್ದೇಶದಿಂದ ಉದಯಿಸಿದ್ದೇ ಆದರೆ, ಆಗ ಆ ಅವಿದ್ಯಾರೂಪವಾದ ಕತ್ತಲೆಯು ನಿರ್ಮೂಲವಾಗಿ ನಾಶವಾಗುವುದೆಂಬುದರಲ್ಲಿ ಸಂದೇಹವೇ ಇಲ್ಲ. ||೪೨||

ಆತ್ಮನು ಮಾಯಾವಶನಾಗಿ ಪಂಚೇಂದ್ರಿಯಗಳಿಂದಲೂ, ಅಹಂಕಾರ, ಬುದ್ಧಿ, ಮುಂತಾದ ಮನೋಭೇದಗಳಿಂದಲೂ, ಜನ್ಮಾಂತರ ವಾಸನಾರೂಪವಾದ ಸಂಸ್ಕಾರಗಳಿಂದಲೂ ಕೂಡಿ, ಜನನ ಮರಣಾದಿ ದುಃಖಗಳನ್ನು ಅನುಭವಿಸುತ್ತಿರುವನು. ಇಂತಹ ಆತ್ಮನಿಗೆ ಮಾಯಾ ಪಾಶವು ಬಿಡುಗಡೆ ಹೊಂದಿ, ನಿಜವಾದ ಮುಕ್ತಿ ದೊರಕಬೇಕಾದರೆ, ನಿನ್ನ ಅರಿವೆಂಬ ಆಯುಧವು ಬೇಕು. ಅದರಿಂದಲೇ ಆತ್ಮನು ಮಾಯಾಯುದ್ಧದಲ್ಲಿ ಜಯಶಾಲಿಯಾಗುವನು. ಆದ್ದರಿಂದ ದೇವಿಯೇ! ನಿಜವಾದ ಮುಕ್ತಿಸಾಧನೆಗಾಗಿ ಈಗ ನಿನ್ನನ್ನೇ ಆಶ್ರಯಿಸುವೆನು. ||೪೩||

ಎಲೌ ಮಾತೆಯೇ, ನನಗೆ ಇಲ್ಲಿನವರೆಗೆ ಎಷ್ಟು ಜನ್ಮಗಳಲ್ಲಿ ಉತ್ಪತ್ತಿ ಮತ್ತು ಮರಣಗಳು ಸಂಭವಿಸಿವೆಯೋ ಅದು ತಿಳಿಯುವಂತಿಲ್ಲ. ಅಲ್ಲದೆ ಪ್ರತಿಜನ್ಮ ಗಳಲ್ಲಿಯೂ, ಕಳೆದುಹೋಗಿರುವ ಮತ್ತು ಮುಂದೆ ಬರುವ ಮಾತಾಪಿತೃಗಳ ಗಣನೆ ಯನ್ನು ಊಹಿಸುವುದೂ ಕಷ್ಟವಾಗಿದೆ. ಇಂತಹ ಘೋರಸಂಸಾರಕ್ಕೆ ಸಿಕ್ಕಿ ಭಯ

ದೇಹಕ್ಲೋಭಕರೈರ್ವ್ರತೈರ್ಬಹುವಿಧೈರ್ಧ್ಯಾನೈಶ್ಚ ಹೋಮೈರ್ಜಪೈ
ಸ್ಸಂತಾನೈರ್ಹಯಮೇಧಮುಖ್ಯಸುಮುಖೈರ್ನಾನಾವಿಧೈಃ ಕರ್ಮಭಿಃ ।
ಯತ್ಸಂಕಲ್ಪವಿಕಲ್ಪಜಾಲಮಲಿನಂ ಪ್ರಾಪ್ತಂ ಪದಂ ತಸ್ಯ ತೇ
ದೂರಾದೇವ ನಿವರ್ತತೇ ಪರತರಂ ಮಾತಃ ಪದನ್ನಿರ್ಮಲಂ ॥೪೫॥

ಪಂಚಾಶನ್ನಿಜದೇಹಜಾಕ್ಷರಭವೈರ್ನಾನಾವಿಧೈರ್ಧಾತುಭಿ
ರ್ಬಹ್ವರ್ಥೈಃ ಪದವಾಕ್ಯಮಾನಜನಕೈರರ್ಥಾವಿನಾಭಾವಿತೈಃ ।
ಸಾಭಿಪ್ರಾಯವದರ್ಥಕರ್ಮಫಲದೈಃ ಖ್ಯಾತೈರನಂತೈರಿದಂ
ವಿಶ್ವಂ ವ್ಯಾಪ್ಯ ಚಿದಾತ್ಮನಾಹಮಹಮಿತ್ಯುಜ್ಜೃಂಭಸೇ ಮಾತೃಕೇ ॥೪೬॥

---

ಪಟ್ಟಿರುವ ನನಗೆ ನೀನು ಧೈರ್ಯವನ್ನು ನೀಡು. ಆ ಭಯವನ್ನು ತಪ್ಪಿಸಿ ಅನನ್ಯ ಗತಿಕನಾದ ನನ್ನನ್ನು ಉದ್ಧರಿಸು. ॥೪೪॥

ಮನುಷ್ಯನು ದೇಹಶೋಷಣಾದಿಗಳಿಂದ ಅನೇಕ ವ್ರತಾದಿಗಳನ್ನೂ, ಹೋಮದಾನಾದಿಗಳನ್ನೂ ಮಾಡುವನು. ಸತ್ಸಂತಾನವನ್ನು ಪಡೆದು, ಅಶ್ವಮೇಧಾದಿ ಮಹಾ ಮಹಾ ಯಜ್ಞಗಳನ್ನು ನಡೆಸುವನು. ಇನ್ನೂ ಸತ್ಕರ್ಮಕೋಟಿಗಳನ್ನೂ ಆಚರಿಸುವನು. ಇದರಿಂದಲೂ ಆತನು ನಿನ್ನ ಸ್ಥಾನವನ್ನು ಪಡೆಯಬಹುದು. ಆದರೆ ಆಸ್ಥಾನವು ಸಂಕಲ್ಪ, ವಿಕಲ್ಪಗಳಿಂದ ಕೂಡಿ, ಪುಣ್ಯರಾಶಿಯು ಕ್ಷೀಣವಾಗುವವರೆಗೆ ಮಾತ್ರ ಆತನಿಗೆ ಲಭಿಸಿರಬಹುದು. ಅನಂತರ ಆ ನಿರ್ಮಲವಾದ ನಿನ್ನ ಸ್ಥಾನದಿಂದ ಹಿಂದಿರುಗಿ ಮತ್ತೆ ಸಂಸಾರದುಃಖಕ್ಕೆ ಕಟ್ಟುಬೀಳುವನು. ॥೪೫॥

ಎಲೌ ಜನನಿಯೇ, ಪ್ರಪಂಚದಲ್ಲಿ ಅಡಗಿರುವ ಐವತ್ತು ಅಕ್ಷರಗಳೇ ನಿನ್ನ ದೇಹವಾಗಿರುವುದು. ಅಲ್ಲದೆ ನೀನು ನಾನಾ ವಿಧವಾದ ಧಾತುಗಳಿಂದಲೂ ನಾನಾರ್ಥಗಳನ್ನು ಕೊಡುವ ಪದರೂಪದಲ್ಲಿಯೂ, ವಾಕ್ಯರೂಪದಲ್ಲಿಯೂ, ಅರ್ಥವ್ಯಾಪ್ತಿಯಿರುವ ಶಾಸ್ತ್ರಜಾಲರೂಪದಲ್ಲಿಯೂ ಲೋಕದಲ್ಲಿ ವ್ಯಾಪಿಸಿರುವೆ. ಅಭಿಪ್ರಾಯಪೂರ್ವಕವಾಗಿ ಕರ್ಮಫಲಗಳನ್ನು ವಿವರಿಸುವ ಅನಂತವಾದ ಶಾಸ್ತ್ರಗಳಲ್ಲಿ, ನೀನು ಚಿತ್ಸ್ವರೂಪಳೆಂದು ವಿವೃತವಾಗಿರುವುದು. ಈ ಚಿದಾನಂದಾತ್ಮಕನಾಗಿ, ಅಸ್ಮಚ್ಛಬ್ದ ವಾಚ್ಯನಾದವನೇ ಅಲ್ಲವೇ ಪರಬ್ರಹ್ಮನು. ತತ್ಸ್ವರೂಪಳೇ ನೀನು. ॥೪೬॥

ಶ್ರೀಚಕ್ರಂ ಶ್ರುತಿಮೂಲಕೋಶ ಇತಿ ತೇ ಸಂಸಾರಚಕ್ರಾತ್ಮಕಂ
ವಿಖ್ಯಾತಂ ತದಧಿಷ್ಠಿತಾಕ್ಷರಶಿವಜ್ಯೋತಿರ್ಮಯಂ ಸರ್ವತಃ ।
ಏತನ್ಮಂತ್ರಮಯಾತ್ಮಿಕಾಭಿರರುಣಶ್ರೀಸುಂದರೀಭಿರ್ವೃತೇ
ಮಧ್ಯೇ ಬೈಂದವಸಿಂಹಪೀಠಲಲಿತೇ ತ್ವಂ ಬ್ರಹ್ಮವಿದ್ಯೇ ಶಿವೇ ॥೪೭॥

ಆತಾಮ್ರಾರ್ಕಸಹಸ್ರದೀಪ್ತಿಸುಷುಮಾಸೌಂದರ್ಯಸಾರೈರಲಂ
ಲೋಕಾತೀತಮಹೋದಯೈರುಪಚಿತೈಸ್ಸರ್ವೋಪಮಾಗೋಚರೈಃ ।
ನಾನಾರತ್ನವಿಭೂಷಣೈರಗಣಿತೈರ್ಜಾಜ್ವಲ್ಯಮಾನಾಭಿತ
ಸ್ತ್ವಂ ಮಾತಸ್ತ್ರಿಪುರಾರಿಸುಂದರಿ ಕುರು ಸ್ವಾಂತೇ ನಿವಾಸಂ ಮಮ ॥೪೮॥

ಬಿಂದುಪ್ರಾಣವಿಸರ್ಗಜೀವಸಹಿತಂ ಬಿಂದುತ್ರಿಜೀವಾತ್ಮಕಂ
ಷಟ್ಕೂಟಾ ವಿನಿಪರ್ಯಯಾ ನಿಗದಿತಾ ತಾವತ್ತ್ರಿಬಾಲಾರ್ಬಲಾ ।
ಏಭಿಸ್ಸಂಪುಟಿತಂ ಪ್ರಜಪ್ಯ ವಿಹರೇತ್ಪ್ರಾಸಾದಮಂತ್ರಂ ಪರಂ
ಗುಹ್ಯಾದ್ಗುಹ್ಯತಮಂ ಸಯೋಗಜನಿತಂ ಸದ್ಭೋಗಮೋಕ್ಷಪ್ರದಂ ॥೪೯॥

---

ಬ್ರಹ್ಮವಿದ್ಯಾರೂಪಿಣಿಯಾದ ಪಾರ್ವತಿಯೇ, ನಿನ್ನ ಸಂಸಾರ ಚಕ್ರವೆಂಬುದೇ ಶ್ರೀಚಕ್ರವು. ಅದನ್ನೇ ಸಕಲ ವೇದಗಳೂ (ಶ್ರುತಿಮೂಲಕೋಶ) ಅನುಮೋದಿಸುತ್ತಿರುವುವು. ಅದರಲ್ಲಿ ಕಂಡುಬರುವ ಬೀಜಾಕ್ಷರಗಳೇ ಮಂಗಳಮಯವಾದ ನಿನ್ನ ತೇಜಸ್ಸು. ಅದರಲ್ಲಿರುವ ಸಕಲ ಮಂತ್ರಾಭಿಮಾನಿ ದೇವತೆಗಳೇ ಸುರಸುಂದರಿಯರು. ಇಂತಹ ಸಖಿಲ ದೇವತಾಮಧ್ಯವರ್ತಿಯಾಗಿರುವ ಬಿಂದುವಿನಲ್ಲಿ, ಸಿಂಹಾಸನಾರೂಢಳಾಗಿ, ನೀನು ವಿರಾಜಿಸುತ್ತಿರುವೆ. ॥೪೭॥

ಮಾತೆಯೇ, ನೀನು ಧರಿಸಿರುವ ರತ್ನಾಭರಣಗಳು, ಅತಿಶಯವಾದ ರಕ್ತವರ್ಣದಿಂದ ರಂಜಿಸುವ ಸೂರ್ಯನ ಮಿಗಿಲಾದ ತೇಜಸ್ಸಿಗಿಂತ ಹೆಚ್ಚಾಗಿ ಕಾಂತಿಯನ್ನು ಪಡೆದು ಹೊಳೆಯುತ್ತಿರುವುವು. ಅವುಗಳ ಬೆಲೆಯು ತ್ರಿಲೋಕಗಳ ಬೆಲೆಯನ್ನೂ ಮೀರಿರುವುದು. ಸಕಲ ತೇಜಸ್ವಿಗಳಾದ ವಸ್ತುಗಳಿಗೂ ಇವುಗಳನ್ನೇ ಉಪಮಾನವನ್ನಾಗಿ ಕೊಡಬಹುದು. ಇಂತಹ ದಿವ್ಯರತ್ನಾಭರಣಗಳಿಂದ ಅಲಂಕೃತವಾದ ದೇಹವುಳ್ಳ ದೇವಿಯೇ, ನೀನು ಸರ್ವದಾ ನನ್ನ ಹೃದಯದಲ್ಲಿ ನೆಲಸಿರು.॥೪೮॥

ದೇವಿಯೇ, ಬಿಂದುಸ್ಥಾನದಲ್ಲಿ ನೆಲಸಿರುವ ನಿನ್ನ ಮಂತ್ರವು ಐಂ, ಹ್ರೀಂ, ಶ್ರೀಂ, ಎಂಬ ಮೂರು ಬೀಜಾಕ್ಷರಗಳಿಂದ ಕೂಡಿದ ಷಟ್ಖಂಡಾತ್ಮಕವಾದ ಮಂತ್ರ

ಶಿಂಜನ್ನೂಪುರಪಾದಕಂಕಣಮಹಾಮುದ್ರಾಸುಲಾಕ್ಷಾರಸಾ
ಲಂಕಾರಾಂಕಿತಮಂಘ್ರಿಪಂಕಜಯುಗಂ ಶ್ರೀಪಾದುಕಾಲಂಕೃತಂ ।
ಉದ್ಭಾಸ್ವನ್ನಖಚಂದ್ರಖಂಡರುಚಿರಂ ರಾಜಜ್ಜಪಾಸನ್ನಿಭಂ
ಬ್ರಹ್ಮಾದಿತ್ರಿದಶಾಸುರಾರ್ಚಿತಮಿದಂ ಮೂರ್ಧ್ನಿ ಸ್ಮರಾಮ್ಯಂಬಿಕೇ॥೫೦॥

ಆರಕ್ತಚ್ಛವಿನಾತಿಮಾರ್ದವಯುಜಾ ನಿಶ್ವಾಸಹಾರ್ಯೇಣ ಯ
ತ್ಕೌಶೇಯೇನ ವಿಚಿತ್ರರತ್ನಘಟಿತೈರ್ಮುಕ್ತಾಫಲೈರುಜ್ಜ್ವಲೈಃ ।
ಕೂಜತ್ಕಾಂಚನಕಿಂಕಿಣೀಭಿರಭಿತಸ್ಸನ್ನದ್ಧಕಾಂಚೀಗುಣೈ
ರಾದೀಪ್ತಂ ಸುನಿತಂಬಬಿಂಬಮರುಣಂ ತೇ ಭಾವಯಾಮ್ಯಂಬಿಕೇ ॥೫೧॥

---

ವಾಗಿರುವುದು. ಅಥವಾ ಬಾಲಾತ್ರಿಪುರಾ, ಮಧ್ಯಾತ್ರಿಪುರಾ, ತ್ರಿಪುರಸುಂದರೀ ಎಂಬ ಎಂಬ ಮೂರು ತಾರಕಮಂತ್ರಗಳಿಂದ ಕೂಡಿದ ಬೀಜಾಕ್ಷರಮಂತ್ರವೂ ಆಗಿರುವುದು. ಇಂತಹ ಅತಿ ರಹಸ್ಯವಾದ ಪ್ರಾಸಾದಮಂತ್ರವನ್ನೇ ವಿಧಿಪೂರ್ವಕವಾಗಿ ಜಪಮಾಡಿದರೆ ಯೋಗಸಿದ್ಧಿಯುಂಟಾಗುವುದು. ಅಲ್ಲಿಗೆ ಐಹಿಕವಾದ ಮತ್ತು ಆಮುಷ್ಮಿಕವಾದ ಸಕಲ ಭೋಗಗಳೂ ದೊರಕುವುವು. ||೪೯||

ಅಂಬಿಕೆಯೇ, ನಿನ್ನ ಪಾದಪದ್ಮಯುಗಳವು, ಧ್ವನಿಮಾಡುವ ಗೆಜ್ಜೆಪಾಡಗಗಳಿಂದಲೂ, ಕಾಲುಬಳೆಗಳಿಂದಲೂ, ಮಹಾಮುದ್ರೆಗಳನ್ನು ಸೂಚಿಸುವ ಅರಗಿನ ರಸದಿಂದಲೂ, ದಿವ್ಯವಾದ ಪಾದುಕೆಗಳಿಂದಲೂ, ಅಲಂಕೃತವಾಗಿರುವುದು. ನಿನ್ನ ಕಾಲಿನ ಉಗುರುಗಳು ಅರ್ಧಚಂದ್ರನಂತೆ ಹೊಳೆಯುತ್ತಲೂ, ದಾಸವಾಳದ ಹೂವಿನಂತೆ ರಕ್ತವರ್ಣವಾಗಿಯೂ ಇದ್ದು, ಬ್ರಹ್ಮಾದಿದೇವತೆಗಳಿಂದ ಪೂಜಿತವಾಗಿರುವುದು. ಇಂತಹ ನಿನ್ನ ಪಾದಪದ್ಮಯುಗಗಳು ಯಾವಾಗಲೂ ನನ್ನ ತಲೆಯ ಮೇಲಿರುವಂತೆ ಅನುಗ್ರಹಿಸು. ||೫೦||

ತಾಯಿಯೇ, ನೀನು ಉಟ್ಟಿರುವ ಮೃದುವಾದ ಪೀತಾಂಬರವು ಅತಿಶಯವಾದ ಕೆಂಪುಬಣ್ಣದಿಂದ ಹೊಳೆಯುತ್ತಿರುವುದು. ಉಸುರಿನ ಗಾಳಿಗೆ ಹಾರಿಹೋಗುವಷ್ಟು ಸೂಕ್ಷ್ಮವಾಗಿರುವುದು. ಸೀರೆಯ ಅಂಚುಗಳಿಗೆ ಅಮೂಲ್ಯವಾದ ರತ್ನಗಳನ್ನೂ, ಮುತ್ತುಗಳನ್ನೂ ಜೋಡಿಸಿ 'ಕಟ್ಟಿರುವರು. ದೇವಿಯೇ, ನಿನ್ನ ಸೊಂಟದಲ್ಲಿ ಹೊಳೆಯುವ ಸುವರ್ಣಮಯವಾದ ಒಡ್ಯಾಣವು ಚಿನ್ನದ ಕಿರುಗೆಜ್ಜೆಗಳಿಂದ ಧ್ವನಿಯುತವಾಗಿರುವುದು. ಇಂತಹ ದಿವ್ಯವಸ್ತ್ರಾಭರಣಗಳಿಂದ ಪ್ರಕಾಶಿಸುವ ದಿವ್ಯ ನಿತಂಬವನ್ನು ನಾನು ಸರ್ವದಾ ಭಕ್ತಿಪೂರ್ವಕವಾಗಿ ಧ್ಯಾನಮಾಡುತ್ತಿರುವೆನು.||೫೧||

ಕಸ್ತೂರೀಘನಸಾರಕುಂಕುಮರಜೋಗಂಧೋತ್ಕಟೈಶ್ಚಂದನೈ
ರಾದೀಪ್ತಂ ಮಣಿಮಾಲಯಾ ವಿರಚಿತಗ್ರೈವೇಯಹಾರಾದಿಭಿಃ ।
ದೀಪ್ತಂ ದಿವ್ಯವಿಭೂಷಣೈರ್ಜನನಿ ತೇ ಜ್ಯೋತಿರ್ವಿಭಾಸ್ವತ್ಕುಚ
ವ್ಯಾಜಸ್ವರ್ಣಘಟದ್ವಯಂ ಹರಿಹರಬ್ರಹ್ಮಾದಿಪೀತಂ ಭಜೇ ॥೫೨॥

ಮುಕ್ತಾರತ್ನಸುವರ್ಣಕಾಂತಿಲಲಿತಾಸ್ತೇ ಬಾಹುವಲ್ಲೀರಹಂ
ಕೇಯೂರೋತ್ತಮಬಾಹುದಂಡವಲಯೈರ್ಹಸ್ತಾಂಗುಲೀಭೂಷಣೈಃ ।
ಸಂವೃತ್ತಾಃ ಕಲಯಾಮಿ ಹೀರಮಣಿಮುಕ್ತಾಕಲಾಪೀಕೃತಂ
ಗ್ರೀವಾಪಟ್ಟವಿಭೂಷಣೇನ ಸುಭಗಂ ಕಂಠಂ ಚ ಕಂಬುಶ್ರಿಯಂ ॥೫೩॥

ಉದ್ಯತ್ಪೂರ್ಣಕಲಾನಿಧೀಶವದನಂ ಭಕ್ತಪ್ರಸನ್ನಂ ಸದಾ
ಸಂಫುಲ್ಲಾಂಬುಜಪತ್ರಕಾಂತಿಸುಷುಮಾಧಿಕ್ಕಾರದಕ್ಷೇಕ್ಷಣಂ ।
ಸಾನಂದಂ ಕೃತಮಂದಹಾಸಮುಸಕೃತ್ಪ್ರಾದುರ್ಭವತ್ಕೌತುಕಂ
ಕುಂದಾಕಾರಸುದಂತಪಂಕ್ತಿರುಚಿರಂ ಪೂರ್ಣಂ ಸ್ಮರಾಮ್ಯಂಬಿಕೇ ॥೫೪॥

---

ಜನನಿಯೇ, ಸುವರ್ಣಕುಂಭಗಳಂತಿರುವ ನಿನ್ನ ಸ್ತನದ್ವಯಗಳು, ಕಸ್ತೂರೀ, ಕುಂಕುಮಕೇಸರಿ, ದಿವ್ಯವಾದ ಶ್ರೀಗಂಧ, ಚಂದನ ಮುಂತಾದ ಸುಗಂಧದ್ರವ್ಯಗಳಿಂದ ಸುವಾಸನಾಮಯಗಳಾಗಿರುವುವು. ಅಲ್ಲದೆ ಪ್ರಕಾಶಮಾನವಾದ ಆಭರಣಗಳಿಂದ ಕಾಂತಿಮತ್ತಾಗಿರುವುವು. ಹರಿಹರಬ್ರಹ್ಮಾದಿಗಳೂ ಸಹ ನಿನ್ನ ಸ್ತನ್ಯಪಾನದಿಂದಲೇ ಬೆಳೆದ ಮಕ್ಕಳಾಗಿರುವರು. ಇಂತಹ ಸಕಲ ಲೋಕಕ್ಕೆ ಪೋಷಕವಸ್ತುವಾಗಿರುವ ನಿನ್ನ ಕುಚದ್ವಯಗಳನ್ನು ನಾನು ಸರ್ವಾತ್ಮನಾ ಭಜಿಸುತ್ತಿರುವೆನು.॥೫೨॥

ಅಂಬಿಕೆಯೇ, ಲತೆಯಂತೆ ನೀಳವಾಗಿರುವ ನಿನ್ನ ಬಾಹುವು ಮುತ್ತು, ರತ್ನ ಚಿನ್ನ ಇವುಗಳ ಆಭರಣಗಳಿಂದ ಮನೋಹರವಾಗಿರುವುದು. ತೋಳುಗಳಲ್ಲಿ ಬಳೆಯೂ, ಮುಂಗೈಯಲ್ಲಿ ಕಡಗವೂ ಬೆರಳುಗಳಲ್ಲಿ ಉಂಗುರವೂ ಶೋಭಿಸುತ್ತಿರುವುವು. ಕಂಠಪ್ರದೇಶವಾದರೋ ಹೀರರತ್ನಗಳ ಮತ್ತು ಮುತ್ತುಗಳ ಪದಕಗಳಿಂದ ಕೂಡಿ ಬಹುವಾಗಿ ಪ್ರಕಾಶಿಸುತ್ತಿರುವುದು. ॥೫೩॥

ಜನನಿಯೇ, ನಿನ್ನ ಮುಖವು ಉದಯಿಸುವ ಪೂರ್ಣಚಂದ್ರನಂತೆ ಸಂಪೂರ್ಣ ಕಲೆಯಿಂದ ಕೂಡಿರುವುದು. ಭಕ್ತರನ್ನು ಅನುಗ್ರಹಿಸುವುದರಲ್ಲಿ ಅದು ಪ್ರಸನ್ನವಾಗಿರುವುದು. ನಿನ್ನ ಬಲಭಾಗದ ನೇತ್ರವಾದರೋ ಅರಳಿದ ಕಮಲದ ಎಸಳಿನ ಶೋಭೆ

**ತಪ್ತಸ್ವರ್ಣಕೃತೋರುಕುಂಡಲಯುಗಂ ಮಾಣಿಕ್ಯಮುಕ್ತೋಲ್ಲಸ**
**ದ್ಧೀರಾಬದ್ಧಮನನ್ಯತುಲ್ಯಮಪರಂ ಹೈಮಂ ಚ ಚಕ್ರದ್ವಯಂ ।**
**ಶುಕ್ರಾಕಾರನಿಕಾರದಕ್ಷಮಮಲಂ ಮುಕ್ತಾಫಲಂ ಸುಂದರಂ**
**ಬಿಭ್ರತ್ಕರ್ಣಯುಗಂ ಭಜಾಮಿ ಲಲಿತಂ ನಾಸಾಗ್ರಭಾಗಂ ಶಿವೇ ॥೫೫॥**

**ಜಾತೀಚಂಪಕಕುಂದಕೇಸರಮಹಾಗಂಧೋತ್ಕಿರತ್ಕೇತಕೀ**
**ನೀಪಾಶೋಕಶಿರೀಷಮುಖ್ಯಕುಸುಮಪ್ರೋತ್ತಂಸಿತಾ ಧೂಪಿತಾ ।**
**ಆನೀಲಾಂಜನನೀಲಮತ್ತಮಧುಪಶ್ರೇಣೀ ಚ ವೇಣೀ ತವ**
**ಶ್ರೀಮಾತಶ್ಶ್ರಯತಾಂ ಮದೀಯಹೃದಯಾಂಭೋಜೇ ಸರೋಜಾಲಯೇ ॥೫೬॥**

---

ಯನ್ನು ತಿರಸ್ಕರಿಸುವಂತಿರುವುದು. ಆನಂದಾನುಭವದಿಂದ ತೋರಿಬರುವ ಮಂದಹಾಸವಾದರೋ ಆಶ್ಚರ್ಯಭಾವವನ್ನು ತೋರ್ಪಡಿಸುತ್ತಲಿರುವುದು. ದಂತಪಂಕ್ತಿಗಳಾದರೋ ಕುಂದಪುಷ್ಪದಂತೆ (ಕೋಲುಮಲ್ಲಿಗೆಮೊಗ್ಗು) ಶುಭ್ರವಾಗಿ ಸಾಲಾಗಿ ರಂಜಿಸುತ್ತಿರುವುವು. ಇಂತಹ ಶೋಭಾತಿಶಯದಿಂದ ವಿರಾಜಿಸುವ ದಿವ್ಯವದನವನ್ನು ಯಾವಾಗಲೂ ಧ್ಯಾನಿಸುತ್ತಿರುವೆನು. ॥೫೪॥

ಶಂಕರಿಯೇ, ನಿನ್ನ ಎರಡು ಕಿವಿಗಳಲ್ಲಿಯೂ, ಅಪರಂಜಿಯಿಂದ ನಿರ್ಮಿತವಾಗಿ, ಮಾಣಿಕ್ಯ, ಮುತ್ತು, ಹೀರರತ್ನ ಇವುಗಳಿಂದ ಕೆತ್ತಲ್ಪಟ್ಟ ಚಕ್ರಾಕಾರದ ಓಲೆಗಳು ವಿರಾಜಿಸುತ್ತಿರುವುವು. ಮೂಗಿನಲ್ಲಾದರೋ, ಶುಕ್ರಗ್ರಹದಂತೆ ದುಂಡಾಗಿ ಧಾವಳ್ಯದಿಂದ ಥಳಥಳಿಸುವ ಮುತ್ತಿನಮೂಗುಬೊಟ್ಟು, ಕಾಂತಿಯಿಂದ ಬೆಳಗುತ್ತಿರುವುದು. ಇಂತಹ ಆಭರಣ ವಿಶೇಷಗಳಿಂದ ಕೂಡಿದ ನಿನ್ನ ಕರ್ಣಯುಗಳವನ್ನೂ, ನಾಸಾಗ್ರಭಾಗವನ್ನೂ ಮನಸಾ ಧ್ಯಾನಮಾಡುತ್ತಿರುವೆನು. ॥೫೫॥

ಜಗನ್ಮಾತೆಯೇ, ನಿನ್ನ ಜಡೆಮುಡಿಯು, ಜಾಜೀ, ಸಂಪಿಗೆ, ಕುಂದ, ಕೇತಕಿ, ಅಶೋಕ, ಕದಂಬ, ಶಿರೀಷ, ಮುಂತಾದಪುಷ್ಪಗಳಿಂದಲೂ ಕೇಸರಗಳಿಂದಲೂ ಕಟ್ಟಿ ಮಾಡಿದ ಪುಷ್ಪಮಾಲೆಯನ್ನು ಹೊಂದಿ, ಧೂಪದಿಂದ ಸುಗಂಧ ವಿಶಿಷ್ಟವಾಗಿರುವುದು. ಆ ಪುಷ್ಪಮಾಲೆಯ ಸುವಾಸನೆಗೆ ನೀಲವರ್ಣದಿಂದ ರಂಜಿಸುವ ಭ್ರಮರ ಪಂಕ್ತಿಯು ಝೇಂಕಾರ ಮಾಡುತ್ತಾ ವೇಣೀಬಂಧವನ್ನು ಮತ್ತಷ್ಟು ಅಲಂಕರಿಸುತ್ತಿರುವುದು. ಇಂತಹ ದಿವ್ಯವಾದ ವೇಣಿಯು ನನ್ನ ಹೃದಯ ಕಮಲದಲ್ಲಿ ಸರ್ವದಾ ನೆಲಸಿದ್ದಾಗಿ ನನಗೆ ಅಭಯವನ್ನುಂಟುಮಾಡಲಿ. ॥೫೬॥

ಲೇಖಾಲಭ್ಯವಿಚಿತ್ರರತ್ನಘಟಿತಂ ಹೈಮಂ ಕಿರೀಟೋತ್ತಮಂ
ಮುಕ್ತಾಕಾಂಚನಕಿಂಕಿಣೀಗಣಮಹಾಹೀರಪ್ರಬಂಧೋಜ್ವಲಂ ।
ಚಂಚಚ್ಚಂದ್ರಕಲಾಕಲಾಪಲಲಿತಂ ದೇವದ್ರುಪುಷ್ಪಾರ್ಚಿತಂ
ಮಾಲ್ಯೈರೇವ ವಿಲಂಬಿತಂ ಸುಶಿಖರಂ ಬಿಭ್ರಚ್ಛಿರಸ್ತೇ ಭಜೇ ॥೫೭॥

ಪ್ರೋಕ್ಷಿಪ್ತೋಚ್ಚಸುವರ್ಣದಂಡಲಲಿತಂ ಪೂರ್ಣೇಂದುಬಿಂಬಾಕೃತಿಂ
ಚಕ್ರಂ ಮೌಕ್ತಿಕರತ್ನಚಕ್ರಕಲಿತಂ ಕ್ಷೌಮಾಂಶುಕೋತ್ತಂಸಿತಂ ।
ಮುಕ್ತಾಜಾಲವಿಲಂಬಿತಂ ಸಕಲಶಂ ನಾನಾಪ್ರಸೂನಾರ್ಚಿತಂ
ಚಂದ್ರೋಡ್ಡಾಮರಚಾಮರಾಲಿದಧತೀ(?)ಶ್ರೀದೇವಿ ತೇ ಸ್ವಸ್ತ್ರಿಯಃ ॥೫೮॥

ವಿದ್ಯಾಮಂತ್ರರಹಸ್ಯವಿನ್ಮುನಿಗಣೈಃ ಕ್ಲೃಪ್ತೋಪಚಾರಾರ್ಚನಾಂ
ದೇವಾದಿಸ್ತುತಿಗೀಯಮಾನಚರಿತಾಂ ವೇದಾಂತತತ್ತ್ವಾತ್ಮಿಕಾಂ ।

---

ಮಾತೆಯೇ, ನಿನ್ನ ಶಿರಸ್ಸಿನಮೇಲಿರುವ ದಿವ್ಯ ಕಿರೀಟವು, ದೇವತೆಗಳಿಗೂ ಸಹ ದೊರೆಯದ ದಿವ್ಯರತ್ನಗಳಿಂದ ನಿರ್ಮಿತವಾದುದು. ಅದು ಸುವರ್ಣ ಮತ್ತು ಹೀರರತ್ನಗಳಿಂದ ರಚಿತವಾಗಿ ದಿವ್ಯ ಕಿರೀಟವೆನಿಸಿರುವುದು. ಅದರಮೇಲೆ ಚಂದ್ರ ಕಲೆಯು ಕಾಂತಿವಿಶಿಷ್ಟವಾಗಿ ಹೊಳೆಯುತ್ತಿರುವುದು. ದೇವವೃಕ್ಷದ ಪುಷ್ಪಮಾಲೆಯಿಂದ ಪೂಜಿತವಾಗಿರುವುದು. ಇಷ್ಟು ಸುಂದರವಾಗಿ ನಿನ್ನ ಶಿರಸ್ಸಿನಮೇಲೆ ಹೊಳೆಯುವ ದಿವ್ಯಕಿರೀಟವನ್ನು ನಾನು ಸದಾ ಧ್ಯಾನಮಾಡುವೆನು. ॥೫೭॥

ಶ್ರೀದೇವಿಯೇ, ನಿನ್ನ ಅಕ್ಕಪಕ್ಕದಲ್ಲಿರುವ ದೇವತಾ ಸ್ತ್ರೀಯರು, ಸುವರ್ಣಮಯವಾಗಿ ಪ್ರಕಾಶಿಸುವ ದಂಡವನ್ನು ಹಿಡಿದಿರುವರು. ಮತ್ತೆ ಕೆಲವರು ಪೂರ್ಣಚಂದ್ರನಂತೆ ವಿರಾಜಿಸುವ ಶ್ರೀಚಕ್ರವನ್ನು ಧರಿಸಿರುವರು. ರೇಷ್ಮೆ ವಸ್ತ್ರದಿಂದ ಆಚ್ಛಾದಿತವಾಗಿರುವ, ಮತ್ತು ಪುಷ್ಪಮಾಲೆಗಳಿಂದ ಅಲಂಕೃತವಾದ ಕಲಶವನ್ನು ಕೈಯಲ್ಲಿ ಹಿಡಿದು ನಿಂತಿರುವರು. ಚಂದ್ರನಂತೆ ಹೊಳೆಯುವ ದಿವ್ಯ ಚಾಮರಗಳನ್ನು ಬೀಸುತ್ತಾ ಕೆಲವರು ಸೇವಿಸುತ್ತಿರುವರು. ಇಂತಹ ಸ್ವರ್ಗಸ್ತ್ರೀಯರಿಂದ ಸೇವಿತಳಾದ ನಿನ್ನನ್ನು ನಾನು ಧ್ಯಾನಮಾಡುವೆನು. ॥೫೮॥

ಬ್ರಹ್ಮವಿದ್ಯೆ ಮತ್ತು ಮಂತ್ರ ಇವುಗಳನ್ನು ಅರಿತಂತಹ ಸಮಸ್ತ ಮುನಿಗಳೂ ನಿನ್ನನ್ನು ನಿಯಮದಿಂದ ಪೂಜಿಸುತ್ತಿರುವರು. ನೀನು ದೇವೇಂದ್ರಾದಿದೇವತೆಗಳಿಂದಲೂ ಸ್ತುತಿಸಲ್ಪಟ್ಟಿರುವೆ. ವೇದಾಂತತತ್ತ್ವಸ್ವರೂಪಳಾಗಿರುವೆ. ತುರೀಯಾವಸ್ಥೆಯಲ್ಲಿ

ಸರ್ವಾಸ್ತಾಶ್ಚ ತುರೀಯತಾಮುಪಗತಾಸ್ತ್ವದ್ರಶ್ಮಿದೇವ್ಯಃ ಪರಾ
ಸ್ತನ್ನಿತ್ಯಂ ಸಮುಪಾಸತೇ ಸ್ವವಿಭವೈಶ್ಶ್ರೀಚಕ್ರನಾಥೇ ಶಿವೇ ॥೫೯॥

ಶೃಂಗಾರಾದಿರಸಾಲಯಂ ತ್ರಿಭುವನಂ ಮಾಲ್ಯೈರನೇಕೈರ್ವೃತಂ
ಸರ್ವಾಂಗೀಣಸದಂಗರಾಗಸುರಭಿಶ್ರೀಮದ್ವಪುರ್ಧೂಪಿತಂ ।
ತಾಂಬೂಲಾರುಣಪಲ್ಲವಾಧರಯುತಂ ರಮ್ಯಂ ತ್ರಿಪುಂಡ್ರಂ ವಹ
ತ್ಫಾಲಂ ನಂದನಚಂದನೇನ ಸುರಭಿ ಧ್ಯಾಯಾಮಿ ತೇ ಮಂಗಲಂ ॥೬೦॥

ಏವಂ ಯಸ್ಸ್ಮರತಿ ಪ್ರಬುದ್ಧಸುಮತಿಶ್ಶ್ರೀಮತ್ಸ್ವರೂಪಂ ಪರಂ
ವೃದ್ಧೋಽಪ್ಯಾಶು ಯುವಾ ಭವತ್ಯನುಪಮಸ್ತ್ರೀಣಾಮನಂಗಾಯತೇ ।
ಸ್ವಪ್ನೈಶ್ವರ್ಯತಿರಸ್ಕೃತಾಖಿಲಸುರಶ್ರೀಜೃಂಭಿತಾತ್ಮಾಲಯಃ
ಪೃಥ್ವೀಪಾಲಕಿರೀಟಕೋಟಿವಲಭಿರ್ನೀರಾಂಜಿತಾಂಘ್ರಿರ್ಭವೇತ್ ॥೬೧॥

---

ಆನಂದಮಯವಾಗಿ ವರ್ತಿಸುವ ನಿನ್ನ ರಶ್ಮಿದೇವಿಯರು ಸಹ ಶ್ರೀಚಕ್ರಾಂತವರ್ತಿಯಾದ ನಿನ್ನನ್ನು ಸರ್ವದಾ ಆರಾಧಿಸುತ್ತಿರುವರು. ಏಕೆಂದರೆ ಸಕಲ ವಿಧವಾದ ಪುಣ್ಯಶರೀರಿಗಳಿಗೂ ನೀನು ಪೂಜ್ಯಳೆನಿಸಿರುವೆ. ॥೫೯॥

ದೇವಿಯೇ, ನಿನ್ನ ದಿವ್ಯಶರೀರವು ಶೃಂಗಾರಾದಿ ನವರಸಗಳಿಗೂ ಆಶ್ರಯಸ್ಥಾನವಾಗಿರುವುದು. ತ್ರಿಭುವನಗಳೂ ನಿನ್ನ ಶರೀರದಲ್ಲಿಯೇ ಅಂತರ್ಗತಗಳಾಗಿರುವುವು. ನಾನಾವಿಧವಾದ ಪುಷ್ಪಮಾಲೆಗಳಿಂದ ಸುವಾಸಿತವಾಗಿರುವುದು. ತಾಂಬೂಲರಾಗದಿಂದ ಕೆಂಪಾದ ತುಟಿಯಿಂದಲೂ, ರಮ್ಯವಾದ ತ್ರಿಪುಂಡ್ರಗಳನ್ನು ಧರಿಸಿದ ಹಣೆಯಿಂದಲೂ, ನಂದನವನದ ಶ್ರೀಚಂದನಲೇಪದಿಂದಲೂ, ವಿರಾಜಿಸುತ್ತಿರುವ ಮಂಗಳಾತ್ಮಕವಾದ ನಿನ್ನ ದಿವ್ಯದೇಹವನ್ನು ಸರ್ವದಾ ನಾನು ಧ್ಯಾನಮಾಡುತ್ತಿರುವೆನು. ॥೬೦॥

ಎಲೌ ಜಗನ್ಮಾತೆಯೇ, ಯಾರು ನಿನ್ನನ್ನು ಈ ರೀತಿಯಾಗಿ ತಿಳಿದು ಸರ್ವದಾ ಉಪಾಸನೆಮಾಡುವರೋ, ಅಂತಹವರು ವೃದ್ಧರಾದರೂ ಯುವಕರಂತಾಗುವರು. ಅಲ್ಲದೆ ಸೌಂದರ್ಯದಲ್ಲಿ ಮನ್ಮಥಸದೃಶರಾಗಿ ಸ್ತ್ರೀಯರಿಗೆ ಮನೋಹರರಾಗಿ ಕಾಣುವರು. ಐಶ್ವರ್ಯದಲ್ಲಿ ಮುಂದುವರಿದು ಅವರು ದೇವೇಂದ್ರನ ಸಿರಿಯನ್ನು ಸಹ ತಿರಸ್ಕರಿಸಿಬಿಡುವರು. ಕಿರೀಟಧಾರಿಗಳಾದ ರಾಜರು ಬಂದು ಅವರ ಪಾದಗಳಿಗೆ ಎರಗುವಂತೆ ಅವರ ಸಾಮರ್ಥ್ಯವು ವಿಜೃಂಭಿಸುವುದು. ॥೬೧॥

ಅಥ ತವ ಧನುಃ ಪುಂಡ್ರೇಕ್ಷುಕೃಪ್ತ್ರಸಿದ್ಧಮಣಿದ್ಯುತಿ
ತ್ರಿಭುವನವಧೂಮೋಹಜ್ಯೋತ್ಸ್ನಾಕಲಾನಿಧಿಮಂಡಲಂ ।
ಅಖಿಲಜನನಿ ಸ್ಮಾರಂ ಸ್ಮಾರಂ ಗತಸ್ಮರತಾಂಜನ
ಸ್ತ್ರಿಭುವನವಧೂಮೋಹಾಂಭೋಧೇಃ ಪ್ರಪೂರ್ಣವಿಧುರ್ಭವೇತ್ ॥೬೨॥

ಪ್ರಸೂನಶರಪಂಚಕಪ್ರಕಟಗುಂಫನಾಗುಂಫಿತಂ
ತ್ರಿಲೋಕಮವಲೋಕಯತ್ಯಮಲಚೇತಸಾಂ ಚಂಚಲಂ ।
ಅಶೇಷರಮಣೀಜನಸ್ಮರವಿಜೃಂಭಣಂ ಯಸ್ಸದಾ
ಪಟುರ್ಭವತಿ ತೇ ಶಿವೇ ತ್ರಿಜಗದಂಗನಾಕ್ಷೋಭಣೇ ॥೬೩॥

ಪಾಶಂ ಪ್ರಪೂರಿತಮಹಾಸುಮತಿಪ್ರಕಾಶಂ
ಯೋ ವಾ ತವ ತ್ರಿಪುರಸುಂದರಿ ಸುಂದರೀಣಾಂ ।

---

ಲೋಕಜನನಿಯೇ, ಕಬ್ಬಿನಗರಿಗಳಿಂದ ನಿರ್ಮಿತವಾಗಿ ಅಮೂಲ್ಯರತ್ನಗಳಿಂದ ರಂಜಿಸುವ ನಿನ್ನ ಧನುಸ್ಸು, ಮೂರುಲೋಕದ ಸ್ತ್ರೀಯರ ವ್ಯಾಮೋಹವೆಂಬ ಬೆಳದಿಂಗಳಿಗೆ ಆಶ್ರಯದಾತನಾದ ಚಂದ್ರನಂತೆ ಪ್ರಕಾಶಿಸುತ್ತಿರುವುದು. ಅಂದರೆ ಸಕಲ ಸ್ತ್ರೀಯರಿಗೂ ಮೋಹವನ್ನು ಹೆಚ್ಚಿಸಲು ನಿನ್ನ ಧನುಸ್ಸು ಮನ್ಮಥಬಾಣದಂತೆ ಸಮರ್ಥವಾಗುವುದು. ಇದನ್ನರಿತ ಜನರು ಹೇಗೂ ಮನ್ಮಥನು ನಾಶವಾಗಿರುವುದನ್ನು ಸ್ಮರಿಸಿಕೊಂಡು, ನಿನ್ನ ಧನುರ್ಬಾಣಗಳಿಂದಲೇ ಉನ್ಮತ್ತರಾಗುತ್ತಿರುವರು. ಒಟ್ಟಿನಲ್ಲಿ ಸ್ತ್ರೀಯರ ಮೋಹವೆಂಬ ಸಮುದ್ರಕ್ಕೆ ನಿನ್ನ ಧನುಸ್ಸು ಪೂರ್ಣಚಂದ್ರನಂತಿರುವುದು. (ಅಂದರೆ ಸಮಸ್ತರಿಗೂ ನಿನ್ನ ಧನುಸ್ಸು ಮೋಹಜನಕವಾಗಿರುವುದು ಎಂದು ತಾತ್ಪರ್ಯ.) ॥೬೨॥

ಜಗಜ್ಜನನಿಯೇ, ನಿನ್ನ ಕೈಯಲ್ಲಿ ವಿಜೃಂಭಿಸುವ ಪುಷ್ಪಮಯಗಳಾದ ಪಂಚಬಾಣಗಳು ತ್ರಿಲೋಕದಲ್ಲೆಲ್ಲಾ ವ್ಯಾಪಿಸಿ, ನಿರ್ಮಲಚಿತ್ತರಾಗಿರುವ ಜಿತೇಂದ್ರಿಯರ ಮನಸ್ಸನ್ನೂ ಸಹ ಚಂಚಲಗೊಳಿಸುವುದು. ಅಷ್ಟಲ್ಲದೆ ಸಮಸ್ತ ಸ್ತ್ರೀಯರಿಗೂ ಮೋಹೋದ್ರೇಕವನ್ನುಂಟುಮಾಡಿ, ತ್ರಿಲೋಕದ ಸ್ತ್ರೀಯರ ಮನಸ್ಸನ್ನೆಲ್ಲಾ ಏಕಕಾಲದಲ್ಲಿ ಕಲಕಿಸಿಬಿಡುವ ಶಕ್ತಿಯು ನಿನ್ನ ಧನುಸ್ಸಿನಲ್ಲಿರುವುದು. ಇದಲ್ಲವೇ ನಿನ್ನ ದಿವ್ಯಧನುಸ್ಸಿನ ಮಹಿಮೆಯು! ॥೬೩॥

ದೇವಿಯೇ, ಯಾವನು ನಿನ್ನ ಪಾಶಾಯುಧವನ್ನೇ ಉಪಾಸನೆಮಾಡಿ,

ಆಕರ್ಷಣೇಽಖಿಲವಶೀಕರಣೇ ಪ್ರವೀಣ
ಶ್ಚಿತ್ತೇ ವಸನ್ ಸ ಭುವನತ್ರಯವಶ್ಯಕೃತ್ಸ್ಯಾತ್ ॥೬೪॥

ಯಸ್ತ್ವಾಂಕುಶಂ ಕಲಯತಿ ಕೋವಿದಸ್ತ್ರಿಲೋಕೀ
ಸ್ತಂಭಾರಂಭಣವೇಕ್ಷಣಕೃ(ಮೃ)ತ್ಯುದಾರವೀರ್ಯಂ ।
ಮಾತಸ್ತೇ ವಿಜಯತಾಂ ಕುಶಂ ಸಯೋಷಾ
ದೇವಾಸ್ತಂ ಭಜತಿ ಚ ಭೂಭುಜೋಽತ್ರ ಸೈನ್ಯಂ ॥೬೫॥

ಪಾಶಧ್ಯಾನವಶಾದ್ಭವೋದ್ಭವಮಹಾಮೋಹಾಂಭಸೋಽಜ್ಜೃಂಭಣಂ
ಪ್ರಖ್ಯಾತಪ್ರವ್ಯವೇಷು ಚಿಂತನವಶಾತ್ತತ್ರ ಚ್ಛರವ್ಯಂ ಸುಧೀಃ ।
ಚಾಪಧ್ಯಾನವಶಾತ್ಸಮಸ್ತಜಗತಾಂ ಮೃತ್ಯೋರ್ವಶತ್ವಂ ಮಹಾ
ದುರ್ಗಸ್ತಂಭಮಹಾಂಕುಶಸ್ಯ ಮನನಾನ್ಮಾಯಾಮಮೇಯಾಂ ತರೇತ್
॥೬೬॥

---

ನಿನ್ನ ಅನುಗ್ರಹಕ್ಕೆ ಪಾತ್ರನಾಗುವನೋ, ಅಂತಹವನು ಅಖಿಲಲೋಕದ ಸುಂದರಿಯರನ್ನೂ ವಶಮಾಡಿಕೊಳ್ಳುವುದರಲ್ಲಿ ಸಮರ್ಥನಾದಾನು. ಅಷ್ಟೇ ಅಲ್ಲ. ವಿದ್ವಾಂಸರಿಗೆ ಮಾತ್ರ ಸುಲಭಸಾಧ್ಯವಾದ ನಿನ್ನ ಆಕರ್ಷಕಪಾಶವನ್ನು ನಿನ್ನನುಗ್ರಹದಿಂದ ಸಂಪಾದಿಸಿ, ಆದರಿಂದ ನಿಖಿಲಜಗತ್ತನ್ನೇ ವಶಮಾಡಿಕೊಳ್ಳುವನೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ॥೬೪॥

ವಿದ್ವಾಂಸನಾದ ಯಾವ ಮನುಷ್ಯನು ಸರ್ವದಾ ನಿನ್ನ ಅಂಕುಶಾಯುಧವನ್ನೇ ಧ್ಯಾನಿಸುತ್ತಾ, ತ್ರಿಲೋಕಗಳ, ಸ್ತಂಭನ, ಅವೇಕ್ಷಣ ಮುಂತಾದ ಉಪಾಸನಾ ಫಲಗಳನ್ನು ಅಪೇಕ್ಷಿಸುವನೋ, ಅಂತಹವನು ನಿಜವಾಗಿಯೂ ನಿನ್ನ ಅನುಗ್ರಹದಿಂದ ಜಯಶಾಲಿಯಾಗುವನು. ಅಲ್ಲದೆ ಅಪ್ಸರಸ್ತ್ರೀಯರಿಂದ ಸಹಿತರಾದ ದೇವತೆಗಳನ್ನೂ, ಸೈನ್ಯಸಮೇತರಾದ ರಾಜರನ್ನೂ, ಸೌಂದರ್ಯ ಮತ್ತು ಶೌರ್ಯದಲ್ಲಿ ಜಯಿಸಿ ಆ ಅಂಕುಶಾಯುಧದ ಅನುಗ್ರಹದಿಂದ ತಾನು ವೀರಾದಿವೀರನೆನಿಸುವನು. ಇದು ನಿನ್ನ ಅಂಕುಶಾಯುಧದ ಅನುಗ್ರಹಬಲವಲ್ಲವೆ ? ॥೬೫॥

ದೇವಿಯೇ, ನಿನ್ನ ಪಾಶಾಯುಧದ ಸ್ಮರಣೆಯಿಂದ ಭಕ್ತನು ಅಜ್ಞಾನಾಂಧಕಾರವನ್ನು ಕಳೆದುಕೊಳ್ಳುವನು. ಆಪತ್ಕಾಲದಲ್ಲಿ ನಿನ್ನ ಒಂದೊಂದು ಅವಯವಗಳ ಸ್ಮರಣೆಯಿಂದಲೂ ಒಂದೊಂದು ವಿಪತ್ತನ್ನು ಪರಿಹರಿಸಿಕೊಳ್ಳುವನು. ನಿನ್ನ ಚಾಪ

ನ್ಯಾಸಂ ಕೃತ್ವಾ ಗಣೇಶಂ ಗ್ರಹಗಣಮಹಾಯೋಗಿನೀರಾಶಿಪೀಠೈಃ
ಪಂಚಾಶನ್ಮಾತೃಕಾರ್ಣಸ್ಸಹಿತಬಹುಕಲೈರಷ್ಟವಾಗ್ದೇವತಾಭಿಃ ।
ಸಶ್ರೀಕಂಠಾದಿಯುಗ್ಮೈರ್ನಿಜವಿಮಲತನೌ ಕೇಶವಾದ್ಯೈಶ್ಚ ತತ್ತ್ವೈಃ
ಷಟ್‌ತ್ರಿಂಶದ್ಭಿರ್ಧರಾದ್ಯೈರ್ಭಗವತಿ ಭವತೀಂ ಯಸ್ಸ್ಮರೇತ್ಸ ತ್ವಮೇವ ॥೬೭॥

ಭಗವತಿ ತವ ಪಾದಪದ್ಮಾತ್[1]ಸದ್ಮಾವಿಕಶ್ರೀಃ
ತ್ರಿಜಗತಿ ಪರಿಹೃತ್ಯ ಭದ್ರಾಯ ನಿದ್ರಾದಿಷು ।
[2]ಅಲಿ ಇತಿ (?) ಕಲನಾದಸಂಗೀತಭಂಗೀಕೃತೇ
ಪರಿಮಲಮಿಹ ಕಿಂತು ವಂದೇತಿ ಸಂದೇಹಿತಃ ॥೬೮॥

---

ಧ್ಯಾನದ ಮಹಿಮೆಯಿಂದ ಮೃತ್ಯುಭಯವನ್ನು ಕಳೆದುಕೊಳ್ಳುವನು. ಮಹಾಂಕುಶಾಯುಧದ ಉಪಾಸನೆಯಿಂದ ಮಹಾಶಕ್ತಿಯುಳ್ಳ ಮಾಯೆಯಿಂದ ವಿಮುಕ್ತನಾಗುವನು. ಹೀಗೆ ನಿನ್ನ ಪ್ರತಿ ಆಯುಧಗಳಿಗೂ ಅಸದೃಶವಾದ ಫಲವನ್ನು ಕೊಡುವ ಶಕ್ತಿಯಿರುವುದಲ್ಲವೆ ? ॥೬೬॥

ಮಾತೆಯೇ, ನಿನ್ನನ್ನು ಗಣಪತಿನ್ಯಾಸ, ಗ್ರಹನಕ್ಷತ್ರನ್ಯಾಸ, ಮಹಾಯೋಗಿನೀನ್ಯಾಸ, ಪಂಚಾಶದ್ವರ್ಣಮಾತೃಕಾನ್ಯಾಸ, ಅಷ್ಟವಾಗ್ದೇವತಾನ್ಯಾಸ, ಕಲಾನ್ಯಾಸ, ಶ್ರೀಕಂಠನ್ಯಾಸ, ಕೇಶವಾದಿನ್ಯಾಸ, ಮೂವತ್ತಾರು ತತ್ತ್ವಗಳಿಂದ ಕೂಡಿದ ನ್ಯಾಸ ಇವುಗಳಿಂದ ಅಹೋರಾತ್ರಿಯೂ ಯಾರು ಸ್ಮರಿಸುವರೋ, ಅವರು ನಿನ್ನ ಸಾಯುಜ್ಯವನ್ನೇ ಪಡೆಯುವರು. ॥೬೭॥

ಭಗವತಿಯೇ, ನಿನ್ನ ಪಾದಕಮಲಗಳ ಕಾಂತಿಯು ತ್ರಿಲೋಕಗಳಿಗೂ ಹರಡಿ ತ್ರಿಲೋಕದ ಜನರ ಅಜ್ಞಾನವನ್ನೆಲ್ಲಾ ನಿವೃತ್ತಿಮಾಡಿ, ಅವರಿಗೆ ಮಂಗಳಪ್ರದವಾಗುವುದು. ನಿನ್ನ ಮೃದುವಾದ ಮಾತುಗಳ ನಾದಕ್ಕೆ ಜನಸಮುದಾಯವು ಪರಿಮಲಕ್ಕೆ ಭ್ರಮರವು ಮುತ್ತುವಂತೆ ಮುತ್ತಿಬಿಡುವುದು. (?) ಇಂತಹ ಜನಸಮುದಾಯಕ್ಕೆ ಶುಭಪ್ರದಳಾದ ನಿನ್ನನ್ನು ಶಿರಸಾವಂದಿಸುವೆನು. ॥೬೮॥

---

1 ಸದ್ಭಾವಿಕ. 2 ಅರಿ (ಪಾ. ರ)

ಸುರಪತಿಪುರಲಕ್ಷ್ಮೀಜೃಂಭಣಾತೀತಲಕ್ಷ್ಮೀಃ
ಪ್ರಭವತಿ ನಿಜಗೇಹೇ ಯಸ್ಯ ದೇವತ್ವಮಾರ್ಯೇ ।
ವಿಧೃತಬಹುಕಲಾನಾಂ ಪಾತ್ರಭೂತಸ್ಯ ತಸ್ಯ
ತ್ರಿಭುವನವಿದಿತಾ ಸಾ ಜೃಂಭಿತಾ ಕೀರ್ತಿರಜ್ಞಾ ॥೬೯॥

ಮಾತಸ್ತ್ವಂ ಭೂರ್ಭುವಸ್ಸ್ವರ್ಮಹಿತತಮತನುಸ್ತ್ವಂತರಿಕ್ಷಂ ನ ಸೂರ್ಯೋ
ರಾಜ್ಞೀ ಶುಕ್ರೇಂದ್ರವಹ್ನೀಂದುಭಿರಪಿ ನಿಗಮಬ್ರಹ್ಮಭಿಃ ಪ್ರೋತಶಕ್ತಿಃ ।
ಪ್ರಾಣಾಪಾನಾದಿಯುಕ್ತ್ಯೈಃ ಕಲಯತಿ ಸಕಲಂ ಮಾನಸಂ ಧ್ಯಾನಯೋಗಾ
ದ್ಯೇಷಾಂ ತೇಷಾಂ ಸಪರ್ಯಾ ಭವತಿ ಸುರಕೃತಾ ಬ್ರಹ್ಮತಾ ಯೋಗ್ಯತಾ ಚ ॥೭೦॥

ಕ್ವ ಮೇ ಬುದ್ಧಿರ್ವಾಚಃ ಪರಮವಿದುಷೋ ಮಂದಸರಣಿಃ
ಕ್ವ ತೇ ಮಾತರ್ಬ್ರಹ್ಮಪ್ರಮುಖವಿಬುಧಸ್ವಾಂತವಚಸಾಂ ।

---

ದೇವಿಯೇ, ಕಲಾಮೂರ್ತಿಸ್ವರೂಪಳಾದ ನಿನ್ನ ಅನುಗ್ರಹಕ್ಕೆ ಪಾತ್ರಭೂತನಾದವನು, ದೇವೇಂದ್ರನ ಅಮರಾವತಿಯ ಐಶ್ವರ್ಯಕ್ಕಿಂತ ಮಿಗಿಲಾದ ಐಶ್ವರ್ಯವನ್ನು ತನ್ನ ಮನೆಯಲ್ಲಿ ಹೊಂದುವನು. ಆತನ ಕೀರ್ತಿಯಾದರೋ ತ್ರಿಭುವನಗಳಿಗೂ ಹರಡತಕ್ಕದ್ದಾಗುವುದು. ಆದ್ದರಿಂದ ಐಶ್ವರ್ಯ, ಕೀರ್ತಿ ಇವುಗಳನ್ನು ಬಯಸುವವನು ನಿನ್ನ ಉಪಾಸನೆಯಿಂದ ಅವುಗಳನ್ನು ಸುಲಭವಾಗಿ ಪಡೆಯುವನು. ॥೬೯॥

ಜನನಿಯೇ, ನೀನು ಗಾಯತ್ರೀ ಮತ್ತು ವ್ಯಾಹೃತಿಸ್ವರೂಪಳು. ವಾಹ್ನತಿಗೆ ಅಭಿಮಾನಿನಿಯಾದ ದೇವತೆಯೆಂದರೆ ನೀನೇ ಹೊರತು ಸೂರ್ಯಾದಿಗಳಲ್ಲ. ಚಂದ್ರ ಸೂರ್ಯಾಗ್ನಿಗಳಿಗೂ, ಶುಕ್ರಾದಿಗ್ರಹಗಳಿಗೂ, ಬ್ರಹ್ಮಾದಿ ಸಕಲ ದೇವತೆಗಳಿಗೂ, ಶಕ್ತಿಪ್ರದಾಯಕಳೂ, ಯಜಮಾನಸ್ವರೂಪಿಣಿಯೂ ನೀನೇ ಆಗಿರುವೆ. ಯಾರು ತಮ್ಮ ಮನಸ್ಸನ್ನು ನಿನ್ನ ಧ್ಯಾನಯೋಗದಲ್ಲಿ ನಿಲ್ಲಿಸಿ ಪ್ರಾಣಾಪಾನಾದಿ ವಾಯುವನ್ನು ನಿರೋಧಿಸಿ, ಯೋಗಮಾರ್ಗದಿಂದ ಉಪಾಸನೆ ಮಾಡುವರೋ ಅವರು ಸಕಲ ದೇವತೆಗಳಿಗೂ ಪೂಜ್ಯರೆನಿಸುವರು. ಅಲ್ಲದೆ ಬ್ರಹ್ಮಸ್ವರೂಪವನ್ನು ಪಡೆದು ಮುಕ್ತರೆನಿಸುವರು. ॥೭೦॥

ದೇವಿಯೇ, ಕೇವಲ ಮೂಢನಾಗಿ, ಅಲ್ಪವಾದ ವಾಕ್ಸಂಪತ್ತಿನಿಂದ ಸ್ತುತಿಸುವ ನನ್ನ ಸ್ತೋತ್ರವು, ಬ್ರಹ್ಮಾದಿ ದೇವತೆಗಳ ವಾಣಿಯಿಂದ ಸರ್ವದಾ ಸ್ತುತಿಸಲ್ಪಡುವ

ಅಭೂವಮಾ ವಿಸ್ಫೂರ್ತಿಃ ಪರತರಮಹಿಮ್ನಸ್ತವ ಸುತೌ
ಪ್ರಸೀದ ಕ್ಷಂತವ್ಯಂ ಬಹುಲತರಚಾಪಲ್ಯಮಪಿ ಮೇ ॥೭೦॥

ಪ್ರಸೀದ ಪರದೇವತೇ ಮಮ ಹೃದಿ ಪ್ರಭೂತಂ ಭಯಂ
ನಿವಾರಯ ದರಿದ್ರತಾಂ ದಲಯ ದೇಹಿ ಸರ್ವಜ್ಞತಾಂ।
ವಿಧೇಹಿ ಕರುಣಾನಿಧೇ ಶಿರಸಿ ಪಾದಯುಗ್ಮಂ ಸ್ವಕಂ
ವಿದಾರಯ ಜರಾಮೃತಿಂ ತ್ರಿಪುರಸುಂದರಿ ಶ್ರೀಶಿವೇ ॥೭೨॥

ಇತಿ ತ್ರಿಪುರಸುಂದರೀಸ್ತುತಿಮಿಮಾಂ ಪಠೇದ್ಯಸ್ಸುಧೀ
ಸ್ಸ ಸರ್ವದುರಿತಾಟವೀಪಟಲಚಂಡದಾವಾನಲಃ।
ಲಭೇನ್ಮನಸಿ ವಾಂಛಿತಂ ಪ್ರಚುರಸಿದ್ಧಿರಿದ್ಧಿರ್ಭವೇ
ದನೇಕವಿಧಸಂಪದಾಂ ಪದಮನನ್ಯತುಲ್ಯೋ ಭವೇತ್ ॥೭೩॥

---

ನಿನಗೆ ಸಂತೋಷಪ್ರದವಾದೀತೇ! ಆದರೂ ಬಹುತರವಾದ ಚಪಲತೆಯಿಂದ, ಪರತರ ಮಹಿಮೆಯಿಂದ ಕೂಡಿದ ನಿನ್ನ ಸ್ತುತಿಯನ್ನು ಸ್ವಲ್ಪಮಟ್ಟಿಗೆ ವಿವರಿಸಿರುವೆನು. ಇದರಲ್ಲಿರುವ ಸಕಲಾಪರಾಧಗಳನ್ನೂ ಕ್ಷಮಿಸಿ, ನನ್ನನ್ನು ಅನುಗ್ರಹಿಸು. ॥೭೦॥

ಪರಾಪರಸ್ವರೂಪಳಾದ ಪಾರ್ವತಿಯೇ, ನನ್ನ ಮನೋಗತವಾದ ಭಯವನ್ನು ನಿವಾರಿಸು. ದಾರಿದ್ರ್ಯವನ್ನು ಪರಿಹರಿಸು. ನನಗೆ ಸರ್ವಜ್ಞತ್ವವನ್ನು ಅನುಗ್ರಹಿಸು. ದಯಾಸಮುದ್ರಳಾದ ಪರಮೇಶ್ವರಿಯೇ ನಿನ್ನ ಪಾದಕಮಲವನ್ನು ನನ್ನ ಶಿರಸ್ಸಿನ ಮೇಲಿಡುವುದರಿಂದ, ನನಗೆ ಪ್ರತಿಜನ್ಮದಲ್ಲಿಯೂ ಒದಗುವ ಜರಾಮರಣಾದಿಗಳನ್ನು ತಪ್ಪಿಸಿ ಶಾಶ್ವತವಾದ ಮೋಕ್ಷಸುಖವನ್ನು ದಯಪಾಲಿಸು." ॥೭೨॥

ಈ ತ್ರಿಪುರಸುಂದರೀ ಸ್ತುತಿಯನ್ನು ಯಾರು ಭಕ್ತಿಯಿಂದ ನಿತ್ಯವೂ ಪಠಿಸುವರೋ, ಅವರು ಸಮಸ್ತ ಪಾಪರಾಶಿಯೆಂಬ ಅಡವಿಗೆ ಕಾಡುಕಿಚ್ಚಿನಂತಾಗುವರು ಅಂದರೆ ಸಕಲ ಪಾಪ ಮುಕ್ತರಾಗಿ ತಮ್ಮ ಇಷ್ಟಾರ್ಥಗಳನ್ನೆಲ್ಲಾ ಪಡೆದು, ಐಶ್ವರ್ಯವಂತರಾಗಿ, ಕೊನೆಗೆ ಅನನ್ಯ ಸಾಧಾರಣವಾದ ಸ್ಥಾನವನ್ನು ಪಡೆಯುವರೆಂಬುದರಲ್ಲಿ ಸಂದೇಹವೇ ಇಲ್ಲ. ॥೭೩॥

ಸಂಗೀತಂ ಸರಸಂ ಕವಿತ್ವಸರಣಿಮಾಮ್ನಾಯವಾಕ್ಯಸ್ಮೃತೀ
ವ್ಯಾಖ್ಯಾನಂ ಹೃದಿ ತಾವಕೀನಚರಣದ್ವಂದ್ವಂ ಚ ಸರ್ವಜ್ಞತಾಂ ।
ಶ್ರದ್ಧಾಂ ಕರ್ಮಣಿ ಕಾಲಿಕೇ ತವ ಬಲಂ ಶ್ರೀಜೃಂಭಣಂ ಮಂದಿರೇ
ಸೌಂದರ್ಯಂ ವಪುಷಿ ಪ್ರಕಾಶಮತುಲಮಂಬೇಶ್ವರಿ ಶ್ರೀಶಿವೇ ॥೭೪॥

ಪೃಥ್ವೀಪಾಲಪ್ರಕಟಮುಕುಟಸ್ರಗ್ರಜೋರಂಜಿತಾಂಘ್ರಿ
ರ್ವಿದ್ವತ್ಪೂಜಾನತಿಮತಿಸಮಾರಾಧಿತೋ ಬಾಧಿತಾರಿಃ ।
ವಿದ್ಯಾಸ್ಸರ್ವಾಃ ಕಲಯತಿ ಹೃದಾ ಭಾಸಯಂತಿ ಪ್ರಭಾಭಿ
ರ್ಲೋಕಾಸ್ಸರ್ವೇ ನವನವಪದ್ಯೈರಿಂದುಬಿಂಬಪ್ರಕಾಶ್ಯೈಃ ॥೭೫॥

ಭೂಯಸ್ಯಂ ವೈದುಷ್ಯಮುದ್ಯದ್ದಿನಕರಕಿರಣಾಕಾರಮಾಕಾರತೇಜಾ
ಸ್ಸುಜ್ಞಾನಂ ಭೂರಿಮಾನಂ ದಿನಕರಲಲಿತಂ ದುರ್ಗಮಂ ಯೋಗಮಾರ್ಗಂ ।

---

ಮಾತೆಯೇ, ನಿನ್ನನ್ನು ಭಕ್ತಿಪುರಸ್ಸರವಾಗಿ ಉಪಾಸನೆ ಮಾಡುವುದರಿಂದ, ನಿನ್ನ ಭಕ್ತನು, ಸಂಗೀತ, ಸರಸವಾದ ಕವಿತಾಸಾಮರ್ಥ್ಯ, ವೇದವೇದಾಂತಾದಿ ಸಕಲ ಶಾಸ್ತ್ರಗಳಿಗೂ ವ್ಯಾಖ್ಯಾನಮಾಡುವ ಶಕ್ತಿ, ಇವುಗಳನ್ನು ಪಡೆಯುವನು. ಅಲ್ಲದೆ ಸರ್ವದಾ ನಿನ್ನ ಪಾದದ್ವಂದ್ವವನ್ನು ಹೃದಯಲ್ಲಿಟ್ಟಿರುವವರು, ಸರ್ವಜ್ಞತ್ವ ವನ್ನೂ ಸಕಲ ಕರ್ಮಗಳಲ್ಲಿ ಶ್ರದ್ಧೆಯನ್ನೂ, ಸಕಾಲದಲ್ಲಿ ಅತಿಶಯವಾದ ಬಲವನ್ನೂ, ಮನೆಯಲ್ಲಿ ಸಂಪೂರ್ಣವಾದ ಸಂಪತ್ತನ್ನೂ, ದೇಹದಲ್ಲಿ ಸೌಂದರ್ಯವನ್ನೂ, ತೇಜ ಸ್ಸನ್ನೂ ಪಡೆಯುವರು. ॥೭೪॥

ತಾಯಿಯೇ, ನಿನ್ನ ಭಕ್ತರಾದವರು, ಅನೇಕ ರಾಜರ ಕಿರೀಟದ ಪುಷ್ಪ ಮಾಲೆಗಳ ಪರಾಗದಿಂದ ಕೂಡಿದ ಕಾಲುಳ್ಳವರಾಗುವರು. ಅಂದರೆ ರಾಜಾಧಿರಾಜರು ಗಳೆಲ್ಲಾ ನಿನ್ನ ಭಕ್ತರ ಪಾದಗಳಿಗೆ ಬಂದು ನಮಸ್ಕರಿಸುವರು. ವಿದ್ವಾಂಸರೆಲ್ಲಾ ಬಹಳವಾಗಿ ನಿನ್ನ ಭಕ್ತರನ್ನು ಪೂಜಿಸಲಾರಂಭಿಸುವರು. ಶತ್ರುಗಳೆಲ್ಲಾ ತಾವಾಗಿಯೇ ನಾಶವಾಗುವರು. ತೇಜಸ್ಸಿನಿಂದ ಅವರೆಲ್ಲರೂ ಪೂರ್ಣರಾಗುವರು. ಅಲ್ಲದೆ ಚಂದ್ರ ಕಾಂತಿಯಿಂದ ಹೊಳೆಯುವ ಅನೇಕ ದಿವ್ಯಸ್ಥಾನಗಳನ್ನು ಪಡೆಯುವರು. ॥೭೫॥

ಅಲ್ಲದೆ ನಿನ್ನನ್ನು ಈ ಸ್ತುತಿಪೂರ್ವಕವಾಗಿ ಧ್ಯಾನಮಾಡಿದವರಿಗೆ ಸೌಂದ ರ್ಯವೂ, ಪಾಂಡಿತ್ಯವೂ, ಬಾಲಸೂರ್ಯನಂತೆ ಹೊಳೆಯುವ ತೇಜಸ್ಸೂ, ಸುಜ್ಞಾನವೂ, ಸೂರ್ಯನಂತೆ ಪ್ರಕಾಶಿಸುವ ದಿವ್ಯಸ್ಥಾನವೂ, ಲಭಿಸಲಸಾಧ್ಯವಾದ ಯೋಗಮಾ

ಆಯುಷ್ಯಂ ಚಾಷ್ಟಸಿದ್ಧಿಂ ಹರಗಿರಿವಿಶದಾಂ ಕೀರ್ತಿಮಭ್ಯೇತ್ಯ ಭೂಮೌ
ದೇಹಾಂತೇ ಬ್ರಹ್ಮಪಾರಂ ಪರಮಶಿವಚಿದಾಕಾರಮಭ್ಯೇತಿ ವಿದ್ವಾನ್ ॥೭೬॥

ಉಚ್ಚೇಷು ನೀಚೇಷ್ವಪಿ ದರ್ಶನೇಷು
ಪ್ರಕಾಶತೇ ದೇವಿ ತವ ಸ್ವರೂಪಂ ।
ಸಮುಜ್ಜ್ವಲಂತ್ಯೇವ ಹಿ ಯಜ್ಞವಾಟೇ
ಚಂಡಾಲವೇಶ್ಮನ್ಯಪಿ ಜಾತವೇದಾಃ ॥೭೭॥

॥ ಸ್ಕಂದ ಉವಾಚ ॥

ದೂರ್ವಾಸಸಾ ಮಹಿತದಿವ್ಯಮಹೇಶ್ವರೇಣ
ವಿದ್ಯಾಕಲಾಯುವತಿಮನ್ಮಥಮೂರ್ತಿನೈವ ।
ಸ್ತೋತ್ರಂ ವ್ಯಧಾಯಿ ರುಚಿರಂ ತ್ರಿಪುರಾಂಬಿಕಾಯಾ
ವೇದಾಂಗಮೌಕ್ತಿಪಟಲೈರ್ವಿದಿತೈಕಮೂರ್ತೇಃ ॥೭೮॥

---

ರ್ಗವೂ, ಪೂರ್ಣಾಯುಸ್ಸೂ, ಅಷ್ಟೈಶ್ವರ್ಯವೂ, ಕೈಲಾಸದಷ್ಟು ಶುಭ್ರವಾದ ಧವಳ ಕೀರ್ತಿಯೂ ಲಭಿಸುವುವು. ಐಹಿಕದಲ್ಲಿ ಇಷ್ಟು ಸುಖಸಂಪತ್ತುಗಳನ್ನು ಪಡೆದು, ಕೊನೆಗೆ ಚಿದಾಕಾರಸ್ವರೂಪವಾದ ಬ್ರಹ್ಮಭಾವವನ್ನು ಪಡೆದು, ಪುನರಾವೃತ್ತಿರಹಿತವಾದ ಮೋಕ್ಷವನ್ನು ಹೊಂದುವನೆಂಬುದರಲ್ಲಿ ಸಂದೇಹವೇ ಇಲ್ಲ. ॥೭೬॥

ದೇವಿಯೇ, ನಿನ್ನ ಸ್ವರೂಪವು ಸಕಲ ಶಾಸ್ತ್ರಗಳಲ್ಲಿಯೂ ನಿರೂಪಿತವಾಗಿದೆ. ಮತ್ತು ಶ್ರೇಷ್ಠತಮವಾದದ್ದೆಂದೂ ಪರಿಗಣಿತವಾಗಿದೆ. ಇದರಲ್ಲಿ ದರ್ಶನಗಳ ಉಚ್ಚ ನೀಚಭಾವವನ್ನೂ ಗಣಿಸಬೇಕಾಗಿಲ್ಲ. ವಸ್ತುಸ್ಥಿತಿಯೇ ಪ್ರಕಾಶಮಯವಾಗಿರುವಾಗ, ಪ್ರಕಾಶಕವಸ್ತ್ವಂತರಗಳ ಸಹಾಯವೇನೂ ಇಲ್ಲಿ ಅನವಶ್ಯಕ. ತೇಜೋರೂಪವಾದ ಬೆಂಕಿಯು, ಯಜ್ಞಕುಂಡದಲ್ಲಿ ಹೇಗೆ ಪ್ರಜ್ವಲಿಸುವುದೋ, ಚಂಡಾಲಗೃಹದಲ್ಲಿಯೂ ಅದೇ ರೀತಿ ಉರಿಯುವುದು. ಆದ್ದರಿಂದ ದೇವಿಯೇ, ನಿನ್ನ ಅಸಾಧಾರಣ ಮಹಿಮೆಯನ್ನು ಸಕಲ ದರ್ಶನಗಳೂ ಏಕರೀತಿಯಲ್ಲಿ ಹೊಗಳುತ್ತಿವೆ." ॥೭೭॥

ಮಹೇಶ್ವರಾರಾಧಕನೂ, ವಿದ್ಯೆಯೆಂಬ ಸ್ತ್ರೀಗೆ ಮನ್ಮಥನಂತಿರುವವನೂ, ಆದ ದೂರ್ವಾಸಮಹರ್ಷಿಯು, ಸಕಲ ಶಾಸ್ತ್ರಗಳೆಂಬ ಮುತ್ತುಗಳ ಸಮೂಹದಿಂದ ಅಲಂಕೃತಳಾಗಿರುವ ತ್ರಿಪುರಾಂಬಿಕೆಯ ಸ್ತೋತ್ರವನ್ನು ಮನೋಹರವಾದ ಪದಬಂಧ

**ಸದಸದನುಗ್ರಹನಿಗ್ರಹಸ್ಫೀತನಿಜವಿಗ್ರಹೋ ಭಗವಾನ್ ।**
**ಸರ್ವಾಸಾಮುಪನಿಷದಾಂ ದೂರ್ವಾಸಾ ಜಯತಿ ದೇಶಿಕಃ ಪ್ರಥಮಃ ॥೭೯॥**

॥ ದೂರ್ವಾಸಾ ಉವಾಚ ॥

**ಛತ್ರಂ ಚಾಮರಯೋರ್ಯುಗಂ ವ್ಯಜನಮಾದರ್ಶಂ ತಥಾ ಮದ್ದಲೈ**
**ರ್ಭೇರೀಶಂಖಮೃದಂಗಕಾಹಲಕಲಂ ಗೀತಂ ಚ ನೃತ್ಯಂ ತಥಾ ।**
**ಸಾಷ್ಟಾಂಗಪ್ರಣತಿಸ್ಸ್ತುತಿರ್ಬಹುವಿಧಾ ಚೈತತ್ಸಮಸ್ತಂ ಮಯಾ**
**ಸಂತುಷ್ಟೇನ ಸಮರ್ಪಿತಂ ತವ ಶಿವೇ ಸಂತುಷ್ಟಯೇ ಕಲ್ಪ್ಯತಾಂ ॥೮೦॥**

॥ ಸ್ಕಂದ ಉವಾಚ ॥

**ಇತ್ಯುಕ್ತ್ವಾ ಸ ಮುನಿರ್ಗಿರೀಂದ್ರತನಯಾಪಾದಾಬ್ಜಯೋಃ ಪ್ರಾನಮ**
**ನ್ನೇತ್ರಾಬ್ಜೋತ್ಥಸರಿಜ್ಝರೀರಸಭರೈರಾನಂದಿತಸ್ವಾಂತರಃ ।**
**ದೇವೀಂ ವೀಕ್ಷ್ಯ ಮುದಾ ತದಾಹ ಸುಗಿರೋ ದೇಹಿ ಪ್ರಸೀದೇತಿ ತಾಂ**
**ಕೈಲಾಸಾಚಲಮಾರ್ಗಪಾಲಿಸರಣಿಂ ಶಂಭೋಃ ಕೃಪಾಂ ಕೇವಲಂ ॥೮೧॥**

---

ಗಳಿಂದ ಕೂಡಿರುವಂತೆ ರಚಿಸಿ, ದೇವಿಯನ್ನು ಸ್ತುತಿಸಿದನು ಎಂದು ಜೈಗೀಷವ್ಯಾದಿ ಮಹರ್ಷಿಗಳಿಗೆ ಕುಮಾರಸ್ವಾಮಿಯು ಹೇಳಿದನು. ॥೭೮॥

ಸರ್ವಪೂಜ್ಯನಾದ ದೂರ್ವಾಸಮಹರ್ಷಿಯು, ಶಿಷ್ಯರಿಗೆ ಅನುಗ್ರಹರೂಪವಾದ ವರವನ್ನೂ, ದುಷ್ಟರಿಗೆ ನಿಗ್ರಹರೂಪವಾದ ಶಾಪವನ್ನೂ ಕೊಡುವ ಸಾಮರ್ಥ್ಯವುಳ್ಳವನು. ಅಲ್ಲದೆ ಸಕಲ ಉಪನಿಷತ್ತುಗಳಿಗೂ ಆಚಾರ್ಯನೂ ಪೂಜ್ಯನೂ ಆದ ಗುರುವೆನಿಸಿರುವನು. ॥೭೯॥

ಇಂತಹ ದೂರ್ವಾಸಮಹರ್ಷಿಯು ನಾನಾ ರೀತಿಯಲ್ಲಿ ದೇವಿಯನ್ನು ಸ್ತುತಿಸಿ, ಸಂತುಷ್ಟವಾದ ಮನಸ್ಸುಳ್ಳವನಾಗಿ, ಛತ್ರಿ, ಚಾಮರದ್ವಯ, ಬೀಸಣಿಗೆ, ಕನ್ನಡಿ, ಮುಂತಾದ ಉಪಚಾರಗಳಿಂದಲೂ, ಮದ್ದಲೆ, ಭೇರಿ, ಶಂಖ, ಮೃದಂಗ, ತುತ್ತೂರಿ, ಮುಂತಾದ ವಾದ್ಯಧ್ವನಿಗಳಿಂದಲೂ, ಮಧುರವಾದ ಗಾನದಿಂದಲೂ, ನಾಟ್ಯದಿಂದಲೂ, ದೇವಿಯನ್ನು ತೃಪ್ತಿಗೊಳಿಸಿದನು. ಕೊನೆಯದಾಗಿ ಸಾಷ್ಟಾಂಗಪ್ರಣಾಮಾದಿಗಳನ್ನು ನೆರವೇರಿಸಿ, ಈರೀತಿ ತಾನು ಮಾಡಿದ ಸಕಲ ಪೂಜಾವಿಧಿಯೂ ದೇವಿಗೆ ತೃಪ್ತಿಯನ್ನುಂಟುಮಾಡಲಿ ಎಂದು ದೇವಿಯನ್ನು ಮತ್ತೆ ಪ್ರಾರ್ಥಿಸಿಕೊಂಡನು. ॥೮೦॥

ಹೀಗೆ ಪ್ರಾರ್ಥಿಸಿ, ದೂರ್ವಾಸಮಹರ್ಷಿಯು, ಮತ್ತೆ ಪಾರ್ವತಿಯ ಪಾದಕಮಲಗಳಿಗೆ ವಂದಿಸುತ್ತಾ, ಆನಂದಾಶ್ರುಪೂರಿತನಾಗಿ, ತೃಪ್ತಾಂತರಂಗವುಳ್ಳವ

ತತ್ಸ್ತುತಿಂ ಸಾ ಶಿವಾ ಶ್ರುತ್ವಾ ಸಂತುಷ್ಟಾ ಮೇನಯಾ ಸಹ ।
ತಮಾಹ ವಿನಯಾನ್ನಮ್ರಂ ದೂರ್ವಾಸಸಮಕಲ್ಮಷಂ ॥೮೨॥

॥ ದೇವ್ಯುವಾಚ ॥

ಮಹಿಮ್ನೇನ ತವಾನೇನ ತುಷ್ಟಾಹಂ ತ್ವತ್ತಪಸ್ಯಯಾ ।
ವೃಣು ಕಾಮಾನ್ಯಥೇಷ್ಟಂ ತೇ ಯಾವದಿಷ್ಟಂ ಮುನೇಽಧುನಾ ॥೮೩॥

॥ ಸ್ಕಂದ ಉವಾಚ ॥

ಇತ್ಥಂ ದೇವ್ಯಾ ವಚಶ್ಶ್ರುತ್ವಾ ಸದೂರ್ವಾಸಾ ಮಹಾಮುನಿಃ ।
ಪ್ರಾಂಜಲಿಃ ಪ್ರಾರ್ಥಯಾಮಾಸ ಪ್ರಣಮ್ಯ ಪರಮೇಶ್ವರೀಂ ॥೮೪॥

॥ ದೂರ್ವಾಸಾ ಉವಾಚ ॥

ಭಕ್ತಿಂ ತ್ವತ್ಪದಯೋಃ ಪೂಜಾಂ ಕೈಲಾಸೇ ಶಿವದರ್ಶನಂ ।
ಕೈಲಾಸಗಮನಂ ದೇವಿ ಮನ್ಯೇವೇಷ್ಟಂ ಸದಾಂಬಿಕೇ ॥೮೫॥

---

ನಾಗಿ, ದೇವಿಯನ್ನು ಮತ್ತೆ ಮತ್ತೆ ದರ್ಶನಮಾಡುತ್ತಾ, "ದೇವಿಯೇ, ಇದೇ ರೀತಿ ಯಾವಾಗಲೂ ನಿನ್ನನ್ನು ಪ್ರಾರ್ಥಿಸುವ ದಿವ್ಯ ವಾಣಿಯನ್ನು ನನಗೆ ಅನುಗ್ರಹಿಸು. ಹಾಗೆಯೇ ನಮಗೆ ಸಾಕ್ಷಾತ್ತಾಗಿ ಕೈಲಾಸಪರ್ವತದ ಮಾರ್ಗವನ್ನು ತೋರಿಸು ವಂತಹ ಶಂಕರನ ಅನುಗ್ರಹವನ್ನು ನನಗೆ ದಯಪಾಲಿಸು" ಎಂದು ಪುನಃ ಪುನಃ ಪ್ರಾರ್ಥಿಸುತ್ತಾ ದೇವಿಯನ್ನು ಬಹುವಾಗಿ ಸಂತೋಷಗೊಳಿಸಿದನು. ||೮೧||

ಈ ರೀತಿಯಾಗಿ ವಿನಯದಿಂದ ಪ್ರಾರ್ಥಿಸಿದ ದೂರ್ವಾಸಮಹರ್ಷಿಯನ್ನು ನೋಡಿ ದೇವಿಯು, ಸಂತೋಷದಿಂದ ಮೇನಾದೇವಿಯೊಡನೆ ಕೂಡಿ, ಈ ರೀತಿಯಾಗಿ ಉತ್ತರವಿತ್ತಳು. ||೮೨||

"ಮಹರ್ಷಿಯೇ, ನೀನು ಸ್ತುತಿಸಿದ ಮಹಿಮ್ನಸ್ತುತಿಯಿಂದಲೂ, ಉಗ್ರವಾದ ತಪಸ್ಸಿನಿಂದಲೂ, ನಾನು ತೃಪ್ತಳಾಗಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೋ ಅನುಗ್ರಹಿಸುವೆನು." ||೮೩||

ಹೀಗೆಂದು ದಿವ್ಯವಾಣಿಯಿತ್ತ, ದೇವಿಯ ಮಾತುಗಳನ್ನು ಕೇಳಿ ದೂರ್ವಾಸ ಮಹಾಮುನಿಯು ಪರಮೇಶ್ವರಿಯನ್ನು ನೋಡಿ, ಅಂಜಲಿಬದ್ಧನಾಗಿ ನಿಂತು ಹೀಗೆ ಪ್ರಾರ್ಥಿಸಿಕೊಂಡನು. ||೮೪||

ಎಲೌ ದೇವಿಯೇ, ನಾನು ನಿನ್ನಲ್ಲಿ ಬೇಡಿಕೊಳ್ಳುವುದಿಷ್ಟು—ನನಗೆ ಯಾವಾ

ನಾನ್ಯಚ್ಚ ಕಾಮಯೇಽಹಂ ವೈ ಕಾಮಾರಿಪದಪೂಜನಾತ್ ।
ತೇನೈವ ಸರ್ವಕಾಮಾನಾಂ ಪ್ರಾಪ್ತಿರ್ಮೇದ್ಯ ಮಹೇಶ್ವರಿ ॥೮೬॥

ಕೇದಾರೇಶಂ ಮಹಾಲಿಂಗಂ ತ್ವತ್ಪಿತುರ್ಮೌಲಿಸಂಸ್ಥಿತಂ ।
ತತ್ಸಂಸೇಕಾಯ ದೇವೇಶಿ ಹ್ಯಾನಯಾಶು ಸರಿದ್ವರಾಂ ॥೮೭॥

ಇತ್ಥಂ ದೂರ್ವಾಸಸೋ ವಾಕ್ಯಂ ಶ್ರುತ್ವಾ ಸಾ ಜಗದಂಬಿಕಾ ।
ಪ್ರಾಹ ತಂ ಮುನಿಮೀಶಾನೀ ಯತ್ತ್ವಯೋಕ್ತಂ ತಥಾ ಭವೇತ್ ॥೮೮॥

ತತ್ರೈವ ಗಂಗಾದೇವ್ಯಾ ಚ ಸ್ಮೃತಾ ಗೋಮೌಲಿತೋ ನಗಾತ್ ।
ತಸ್ಯಾಂ ಸಾ ಮೇನಯಾ ಸಸ್ನೌ ದೂರ್ವಾಸಾ ಮುನಿಭಿಸ್ಸಹ ॥೮೯॥

---

ಗಲೂ ನಿನ್ನ ಪವಿತ್ರಪಾದವಿಷಯಕವಾದ ಭಕ್ತಿಯನ್ನು ಅನುಗ್ರಹಿಸು. ನನಗೆ ಇಷ್ಟಬಂದಾಗ ನಾನು ಕೈಲಾಸಕ್ಕೆ ಬರುವಂತೆಯೂ, ಬಂದಾಗಲೆಲ್ಲಾ ಶಂಕರನ ದರ್ಶನವಾಗುವಂತೆಯೂ ನನಗೆ ವರವನ್ನು ಕರುಣಿಸು. ಈಶ್ವರನ ಪಾದಪದ್ಮಾರಾಧನೆಗಿಂತ ದೊಡ್ಡ ಇಷ್ಟವು ನನಗೆ ಮತ್ತೊಂದಿರಲಾರದು. ಏಕೆಂದರೆ ನನ್ನ ಸಕಲ ಇಷ್ಟಾರ್ಥವೂ ಅದರಿಂದಲೇ ಸಿದ್ಧಿಸುವಾಗ ಮತ್ತಾವುದನ್ನು ನಾನು ಬಯಸಲಿ? ||೮೫-೮೬||

ಆದರೆ ನಾನು ಬಯಸುವ ಮತ್ತೊಂದು ಅಂಶವೇನೆಂದರೆ ದೇವಿಯೇ! ನಿನ್ನ ತಂದೆಯಾದ ಹಿಮಾಲಯದ ಶಿಖರಭಾಗದಲ್ಲಿರುವ ಕೇದಾರೇಶ್ವರ ಲಿಂಗವನ್ನು ಸರ್ವದಾ ನಾನು ಪೂಜಿಸುವೆನು. ಆ ಕೇದಾರೇಶ್ವರ ಲಿಂಗಕ್ಕೆ ಅಭಿಷೇಕಮಾಡಲು, ದೇವಗಂಗಾನದಿಯು ಇಲ್ಲಿಗೆ ಬರುವಂತೆ ಅನುಗ್ರಹಿಸು" ಇದೇ ನನ್ನ ಮುಖ್ಯ' ಪ್ರಾರ್ಥನೆ ಎಂದನು. ||೮೭||

ಹೀಗೆ ದೂರ್ವಾಸಮಹರ್ಷಿಯು ಪ್ರಾರ್ಥಿಸಿದುದನ್ನು ಕೇಳಿ ಪಾರ್ವತಿಯು, ಹಾಗೆಯೇ ಆಗಲೆಂದು ವರವಿತ್ತಳು. ಒಡನೆಯೇ ಪಾರ್ವತಿಯು ಮೇನಾದೇವಿಯೊಡನೆ, ದೇವಗಂಗೆಯನ್ನು ಅಲ್ಲಿಗೆ ಬರುವಂತೆ ಪ್ರಾರ್ಥಿಸಿ ಸ್ಮರಿಸಿಕೊಂಡಳು. ಒಡನೆಯೇ ಆ ನದಿಯು ಕೈಲಾಸಪರ್ವತಶಿಖರದಿಂದ ಹಿಮಾಲಯಕ್ಕೆ ಧಾರಾಕಾರವಾಗಿ ಹರಿದು ಬರಲು ಆರಂಭವಾಯಿತು. ||೮೮-೮೯||

ಸ್ನಾತ್ವಾಭ್ಯರ್ಚ್ಯ ಮಹಾಲಿಂಗಂ ಕೇದಾರೇಶಂ ಮಹೇಶ್ವರೀ ।
ಸ್ವಪಿತುರ್ಭವನಂ ಚಾಗಾದನುಗೃಹ್ಯ ಚ ತಂ ಮುನಿಂ ॥೯೦॥

ಮುನಿರ್ನತ್ವಾ ದೇವೀಂ ಪಶುಪತಿಮಪೀಶಂ ತ್ರಿಜಗತಾಂ
ಯಯೌ ಕೈಲಾಸಸ್ಥಂ ಚಿರತರದೃಶೋರ್ದರ್ಶನಫಲಂ ।
ಸ ಸಂಪ್ರಾಪ್ಯೇಶಾನಂ ಸಮಕಥಯದೀಶಾಯ ಹಿ ತದಾ
ಮಹಾದೇವ್ಯಾ ದತ್ತಂ ವರಮಪಿ ಮುದಾ ತತ್ರ ವಿನತಃ ॥೯೧॥

ಸಂಪ್ರಾಪ್ಯ ಕೈಲಾಸವರಂ ಮುನೀಂದ್ರೋ
ನತ್ವಾ ಮಹೇಶಂ ವಿವಶೋ ನನರ್ತ ।
ಮಹೇಶ ವಿಶ್ವೇಶ ಪ್ರಸೀದ ಶಂಭೋ
ಚೇತೀರಯಂಸ್ತತ್ರ ಮುನಿಂದ್ರವರ್ಯಃ ॥೯೨॥

---

ಆ ನದಿಯಲ್ಲಿ ಪಾರ್ವತಿಯು ಮೊದಲು ಸ್ನಾನಮಾಡಿ, ಕೇದಾರೇಶ್ವರಲಿಂಗವನ್ನು ಭಕ್ತಿಯಿಂದರ್ಚಿಸಿ, ದೂರ್ವಾಸಋಷಿಗೆ ಅನುಗ್ರಹವಿತ್ತು, ಆಲ್ಲಿಂದ ತನ್ನ ತಂದೆಯ ಮನೆಗೆ ಹಿಂದಿರುಗಿದಳು. ॥೯೦॥

ದೂರ್ವಾಸಮಹರ್ಷಿಯು ದೇವಿಗೆ ಮತ್ತೆ ವಂದಿಸಿ, ಜಗತ್ಪತಿಯಾದ ಮಹೇಶ್ವರನನ್ನು ಧ್ಯಾನಿಸಿ, ಬಹುಕಾಲದಿಂದ ನೋಡಲಪೇಕ್ಷೆಯಿಂದಿದ್ದ ಕೈಲಾಸಾಧೀಶ್ವರನಾದ ಪರಮೇಶ್ವರನಲ್ಲಿಗೆ ಪ್ರಯಾಣಮಾಡಿದನು. ದೇವಿಯ ವರಬಲದಿಂದ ಸುಗಮವಾಗಿ ಪ್ರಯಾಣಮಾಡಿದ ದೂರ್ವಾಸಮಹರ್ಷಿಯು ಪರಮೇಶ್ವರನನ್ನು ಕಂಡು ವಂದಿಸಿ, ಹಿಮಾಲಯದಲ್ಲಿ ತಾನು ದೇವಿಯನ್ನು ಪ್ರಾರ್ಥಿಸಿದುದನ್ನೂ, ದೇವಿಯು ಸಂತೋಷದಿಂದ ತನಗೆ ವರ ಕೊಟ್ಟುದನ್ನೂ ಸಂತೋಷದಿಂದ ಸ್ವಾಮಿಗೆ ಅರಿಕೆಮಾಡಿಕೊಂಡನು. ॥೯೧॥

ಅನಂತರ ಮುನೀಶ್ವರನು, ಶಂಕರನ ತೃಪ್ತ್ಯರ್ಥವಾಗಿ, ನಾನಾರೀತಿಯಿಂದ ಶಂಕರನನ್ನು ಸ್ತುತಿಸಿ, ವಂದಿಸಿ, "ಮಹೇಶ್ವರನೇ, ವಿಶ್ವೇಶ್ವರನೇ, ಶಂಕರನೇ, ನನಗೆ ಅನುಗ್ರಹವನ್ನೀಡು" ಎಂದು ಪ್ರಾರ್ಥಿಸುತ್ತಾ ನಾಟ್ಯವಾಡಲಾರಂಭಿಸಿದನು. ॥೯೨॥

ದೇವ್ಯಾ ತದಾ ತಂ ಮುನಿಮೀಕ್ಷಿತಾ ಸೋ
ನುಗ್ರಾಹಿತಂ ಪ್ರಾಹ ಶಿವಃ ಕಟಾಕ್ಷೈಃ ।
ಧನ್ಯಸ್ತ್ವಮಿತ್ಯಾಹ ಶಿವೋಪಿ ತಂ ಮುನಿಂ
ಕೈಲಾಸಮೌಲೌ ನಿವಸೇತ್ಯಶಾತ್ತದಾ ॥೯೩॥

ಇತಿ ಶ್ರೀ ಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ದೇವೀಂ ಪ್ರತಿ ದೂರ್ವಾಸಕೃತಮಹಿಮ್ನಸ್ತುತಿ ರ್ನಾಮ ಏಕೋನತ್ರಿಂಶೋಧ್ಯಾಯಃ

---

ಅನಂತರ ದೇವಿಯು ತನಗೆ ವರ ಕೊಟ್ಟುದನ್ನೂ, ಗಂಗಾನದಿಯು ಕೇದಾರೇಶ್ವರನ ಸನ್ನಿಧಿಗೆ ಬರುವಂತೆ ಅನುಗ್ರಹಿಸಿದುದನ್ನೂ, ದೂರ್ವಾಸಮಹರ್ಷಿಯು ಹೇಳಲು ಅದನ್ನು ಕೇಳಿದ ಶಂಕರನು " ನೀನೇ ಧನ್ಯನು. ನೀನೇ ಋಷಿಶ್ರೇಷ್ಠನು. ಇನ್ನು ಮುಂದೆ ನೀನು ಈ ಕೈಲಾಸಗಿರಿಯಲ್ಲಿಯೇ ವಾಸಮಾಡು" ಎಂದು ವರವಿತ್ತು ದೂರ್ವಾಸಮಹರ್ಷಿಯನ್ನು ಬಹುವಾಗಿ ಸಂತೈಸಿದನು, ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮಹರ್ಷಿಗಳಿಗೆ ದೂರ್ವಾಸಋಷಿಯ ತಪಃಪ್ರಭಾವವನ್ನು ವಿವರವಾಗಿ ತಿಳಿಸಿದನು. ॥೯೩॥

ಇಲ್ಲಿಗೆ ಶ್ರೀಶಿವರಹಸ್ಯದ ಭವನಾಮಕವಾದ ಎರಡನೆಯ ಅಂಶದಲ್ಲಿ ದೇವಿಯನ್ನು ಕುರಿತು ದೂರ್ವಾಸಮಹರ್ಷಿಯು ಸ್ತುತಿಸಿದ ಮಹಿಮ್ನಸ್ತುತಿಯನ್ನು ವಿವರಿಸುವ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ದ್ವಿತೀಯಾಂಶೇ

## ತ್ರಿಂಶೋऽಧ್ಯಾಯಃ

### ಜೈಗೀಷವ್ಯಸ್ಕಂದಸಂವಾದಃ

॥ ಜೈಗೀಷವ್ಯ ಉವಾಚ ॥

**ದೂರ್ವಾಸಸಸ್ತ್ವಾರಕಾರೇ ಶ್ರುತಮಾಖ್ಯಾನಮುತ್ತಮಂ ।**
**ದೇವೀಪ್ರಸಾದಸಂಪತ್ತಿರ್ಮಹಿಮ್ನಃ ಸ್ತವಕೀರ್ತನಂ ॥೧॥**

**ಕೈಲಾಸದರ್ಶನಂ ತಸ್ಯ ಶಿವದರ್ಶನಮೇವ ಚ ।**
**ಶ್ರುತ್ವಾ ಹೃಷ್ಯಾಮಿ ಮುನಿಭಿಸ್ಸಹೈಭಿರ್ಗಣಪುಂಗವೈಃ ॥೨॥**

**ಕಿಂ ಚಕಾರ ಮಹಾದೇವೀ ಹಿಮಾದ್ರೌ ಚ ಪಿತುರ್ಗೃಹೇ ।**
**ಕಥಂ ಸಂಪೂಜಿತಾ ತೇನ ಹಿಮಶೈಲೇನ ಮೇನಯಾ ॥೩॥**

---

## ಮೂವತ್ತನೆಯ ಅಧ್ಯಾಯ

ಅನಂತರ ಜೈಗೀಷವ್ಯ ಮಹರ್ಷಿಯು ಕುಮಾರಸ್ವಾಮಿಯನ್ನು ಕುರಿತು ಹೇ ಷಣ್ಮುಖಸ್ವಾಮಿಯೇ, ದೂರ್ವಾಸಮಹರ್ಷಿಯ ಕಥೆಯನ್ನು ಕೇಳಿದೆನು. ಹಾಗೆಯೇ ಶ್ರೀದೇವಿಯ ಅನುಗ್ರಹ ವೈಭವವನ್ನೂ, ದೇವೀಮಹಿಮ್ನ ಸ್ತೋತ್ರವನ್ನೂ ಸಹ ನಿನ್ನಿಂದ ತಿಳಿದುಕೊಂಡೆನು. ಆ ದೂರ್ವಾಸಮಹರ್ಷಿಯು ಮಾಡಿದ ಕೈಲಾಸದರ್ಶನವನ್ನೂ ಶ್ರೀಪರಮೇಶ್ವರನ ದರ್ಶನಕ್ರಮವನ್ನೂ ಸಹ ಕೇಳಿ ನನಗೆ ಬಹಳ ಸಂತೋಷವಾಗಿದೆ. ನನ್ನ ಹಾಗೆಯೇ ಇಲ್ಲಿ ನೆರೆದಿರುವ ಇತರ ಋಷಿಗಳೂ, ಶಿವಗಣದವರೂ ಈ ಕಥೆಯನ್ನು ಕೇಳಿ ಸಂತುಷ್ಟರಾಗಿರುತ್ತಾರೆ. ॥೧-೨॥

ಮಹಾತ್ಮನಾದ ಷಣ್ಮುಖಸ್ವಾಮಿಯೇ, ನನಗೆ ಮತ್ತೊಂದು ವಿಚಾರವನ್ನು ತಿಳಿದುಕೊಳ್ಳಬೇಕೆಂದು ಬಹಳ ಕುತೂಹಲವುಂಟಾಗಿದೆ. ಶ್ರೀಮಹಾದೇವಿಯು

ತದಾಚಕ್ಷ್ವ ಮಹಾಭಾಗ ಶ್ರೋತುಂ ಕೌತೂಹಲಂ ಹಿ ಮೇ ॥೪॥

॥ ಸೂತ ಉವಾಚ ॥

ಜೈಗೀಷವ್ಯೇನ ಕಥಿತಂ ಶ್ರುತ್ವಾ ವಾಕ್ಯಂ ಹರಾಂಗಜಃ ।
ಸಾಧು ಸಾಧ್ವಿತಿ ತಂ ಚೋಕ್ತ್ವಾ ಕಥಯಾಮಾಸ ಪೂಜನಂ ॥೫॥

ದೇವ್ಯಾ ಹಿಮಾದ್ರಿಶೈಲೇ ಚ ಕೇದಾರೇಶಾರ್ಚನಂ ದ್ವಿಜಾಃ ।
ಮೇನಯಾ ಭೂಧರೇಂದ್ರೇಣ ಕೃತಾಂ ಚಾಪಚಿತಿಂ ಮುದಾ ॥೬॥

ದೇವ್ಯಾ ತತ್ಕಥಯಾಮಾಸ ಜೈಗೀಷವ್ಯಾಯ ಪೃಚ್ಛತೇ ॥೭॥

॥ ಸ್ಕಂದ ಉವಾಚ ॥

ಸಾ ನಿತ್ಯಂ ಗಿರಿಜಾ ತತ್ರ ಗಿರಿರಾಜೇನ ಪೂಜಿತಾ ।
ಉವಾಸ ಭವನೇ ತತ್ರ ಪಿತುಃ ಪರಮಹರ್ಷಿತಾ ॥೮॥

ಆಲೀಗಣೈಃ ಪರಿವೃತಾ ದಿವ್ಯಸಿಂಹಾಸನಸ್ಥಿತಾ ।
ಮೇನಯಾ ಪೂಜಿತಾ ನಿತ್ಯಂ ವಿಹಾರಶಯನಾಸನೈಃ ॥೯॥

---

ತನ್ನ ತಂದೆಯ ಮನೆಯಲ್ಲಿ ಏನೇನು ಮಾಡಿದಳು? ಶ್ರೀಭಗವತಿಯ ತಂದೆಯಾದ ಆ ಹಿಮವಂತನು ಯಾವ ರೀತಿಯಲ್ಲಿ ಶ್ರೀದೇವಿಯನ್ನು ಪೂಜಾದಿಗಳಿಂದ ಸಂತೃಪ್ತಿಗೊಳಿಸಿದನು? ಈ ಎಲ್ಲಾ ವಿಚಾರಗಳನ್ನೂ ನಮಗೆ ದಯೆಯಿಟ್ಟು ಹೇಳು. ||೩-೪||

ಎಂದು ಈ ಪ್ರಶ್ನೆಯನ್ನು ಕೇಳಿದ ಜೈಗೀಷವ್ಯನನ್ನು ಷಣ್ಮುಖನು ಬಹುವಾಗಿ ಪ್ರಶಂಸಿಸಿ, ಆ ಪೂಜಾ ವೃತ್ತಾಂತವನ್ನು ಹೇಳಲುಪಕ್ರಮಿಸಿದನು. ||೫||

ಆದರದಿಂದ ಪ್ರಶ್ನೆಯನ್ನು ಕೇಳಿದ ಜೈಗೀಷವ್ಯನ ತೃಪ್ತ್ಯರ್ಥವಾಗಿ ಷಣ್ಮುಖನು ಸಂತೋಷದಿಂದ ಪರ್ವತರಾಜನಾದ ಹಿಮವಂತನು ಮತ್ತು ಆತನ ಹೆಂಡತಿಯಾದ ಮೇನಾದೇವಿಯೂ ಸಹ ಶ್ರೀದೇವಿಯನ್ನು ಅರ್ಚಿಸಿದ ವಿಧಾನವನ್ನು ಹೇಳಿದನು. ||೬-೭||

ಶ್ರೀದೇವಿಯು ಪರ್ವತರಾಜನಾದ ಹಿಮವಂತನಿಂದ ಪೂಜಿಸಲ್ಪಟ್ಟವಳಾಗಿ ಅದೇ ತಂದೆಯ ಮನೆಯಲ್ಲಿ ಯಾವಾಗಲೂ ಬಹಳ ಸಂತೋಷದಿಂದ ವಾಸಮಾಡುತ್ತಿದ್ದಳು. ||೮||

ತಂದೆಯಾದ ನಗರಾಜನ ಮನೆಯಲ್ಲಿ ತಾಯಿಯಾದ ಮೇನಾದೇವಿಯಿಂದ ಸರ್ವದಾ ಗೌರವಿಸಲ್ಪಟ್ಟವಳಾಗಿರುತ್ತಿದ್ದಳು. ಅಲ್ಲದೇ ಉತ್ತಮವಾದ

ದಿವ್ಯಮಂಚೇ ಸುಧಾಸೌಧೇ ಮಣಿಪೀಠೇಧಿಶಾಯಿನೀ ।
ಪುಷ್ಪೈರ್ಗಂಧೈರ್ಭಕ್ಷ್ಯಭೋಜ್ಯೈಃ ಪೇಯವಾಸೋವಿಭೂಷಣೈಃ ॥೧೦॥

ಸಖೀಭಿಃ ಸೇವಿತಾ ದೇವೀ ನಿನಾಯ ದಿವಸಾನೃತೂನ್ ।
ವಸಂತೇ ಸಮನುಪ್ರಾಪ್ತೇ ಸ್ಮರಂತೀ ಶಂಕರಂ ತದಾ ॥೧೧॥

ಹಿಮಾದ್ರಿವಿಪಿನೇ ದೇವೀ ಕುಸುಮಾಪಚಯಾದರಾ ।
ನಾನಾದ್ರುಮಲತಾಃ ಫುಲ್ಲಾಃ ಸಂಪಶ್ಯಂತೀ ತದಾದ್ರಿಜಾ ॥೧೨॥

ಸ್ವಪಿತುರ್ಮೌಳಿಕಾಸಾರನಳಿನಾನಿ ಪ್ರಪಶ್ಯತೀ ।
ಪುನ್ನಾಗಸರಳಾನ್ ದಿವ್ಯಾನ್ ಕೋವಿದಾರಾನ್ ಮಧೂಕಕಾನ್ ॥೧೩॥

---

ಸಿಂಹಾಸನದ ಮೇಲೆ ಕುಳಿತುಕೊಂಡು ಅನೇಕ ಸಖಿಯರಿಂದ ಸೇವಿಸಲ್ಪಡುತ್ತಿದ್ದಳು. ಹಿಮವಂತನು ರಾಜನಾದುದರಿಂದ ಐಶ್ವರ್ಯಕ್ಕೇನೂ ಅಲ್ಲಿ ಕೊರತೆ ಇರಲಿಲ್ಲ. ಅಲ್ಲಿ ವಿಹಾರಕ್ಕೆ ಅನುಕೂಲವಾದ ಉದ್ಯಾನವೂ, ಆಸನಶಯನಾದಿಗಳಿಗೆ ಅತ್ಯುತ್ತಮವಾದ ಮಣಿಪೀಠ ಪಲ್ಲಂಗಗಳೂ ಇದ್ದುವು. ಇವೆಲ್ಲವೂ ಶ್ರೀದೇವಿಯ ಉಪಭೋಗಕ್ಕೆ ಅಣಿಯಾಗಿರುತ್ತಿದ್ದವು. ॥೯॥

ಮಹಾರಾಜನಾದ ಹಿಮವಂತನ ಮನೆಯಲ್ಲಿದ್ದಾಗ ಶ್ರೀದೇವಿಯು ಉತ್ತಮೋತ್ತಮವಾದ ಮಂಚದ ಮೇಲೆ ಮಲಗುವಳು. ಸುಧಾಧವಳಿತವಾಗಿ ಅಚ್ಚುಕಟ್ಟಾಗಿ ತಯಾರಾದ ಉಪ್ಪರಿಗೆ ಮನೆಯಲ್ಲಿ ವಾಸಿಸುವಳು. ದಿವ್ಯವಾದ ವಸ್ತ್ರಾಭರಣಗಳಿಂದ ಅಲಂಕೃತಳಾಗಿದ್ದು ಇಷ್ಟಬಂದ ಭಕ್ಷ್ಯಭೋಜ್ಯಾದಿಗಳನ್ನು ಭುಂಜಿಸಿ, ಅನೇಕ ಸಖಿಯರಿಂದ ಸೇವಿಸಲ್ಪಡುತ್ತಾ ಬಹು ದಿವಸಗಳನ್ನೂ, ಹಾಗೆಯೇ ಅನೇಕ ಋತುಗಳನ್ನೂ ಸಹ ಕಳೆದಳು. ಇದೇ ರೀತಿಯಾಗಿ ಸುಖಾನುಭವಮಾಡುತ್ತಿರುವಾಗ ವಸಂತಋತುವು ಪ್ರಾಪ್ತವಾಯಿತು. ಆಗ ಶ್ರೀದೇವಿಗೆ ತನ್ನ ವಲ್ಲಭನಾದ ಶಂಕರನ ಸ್ಮರಣೆಯು ಬಂದಿತು. ॥೧೦-೧೧॥

ಆ ಹಿಮವತ್ಪರ್ವತದ ಕಾಡುಪ್ರದೇಶಗಳಲ್ಲಿ ಸಾಂದ್ರವಾಗಿ ಬೆಳೆದಿರುವ ಗಿಡಮರಗಳನ್ನೂ, ಲತಾಕುಂಜಗಳನ್ನೂ ನೋಡಿನೋಡಿ, ತವಕದಿಂದ ಅನೇಕಪುಷ್ಪಗಳನ್ನು ಕುಯಿದುಕೊಂಡು ಶೇಖರಿಸುತ್ತಿದ್ದಳು. ॥೧೨॥

ಆ ಹಿಮವತ್ಪರ್ವತದ ಶಿಖರಭಾಗದಲ್ಲಿ ಸಹ ಅನೇಕವಿಧವಾದ ಮರಗಳು ದಟ್ಟವಾಗಿ ಬೆಳೆದಿರುತ್ತಿದ್ದವು. ಅಲ್ಲಿದ್ದ ಸರೋವರಗಳಲ್ಲಿ ಕನ್ನೈದಿಲೆ ಮತ್ತು

ಪ್ರಫುಲ್ಲಾನ್ ಸಲ್ಲಕಾನ್ ದೇವೀ ಪಶ್ಯಂತೀ ನಗಮೂರ್ಧನಿ ।
ಅಶೋಕಶಾಖಾ ಮಾಲಂಬ್ಯ ಸ್ವಕರಾಗ್ರೇಣ ಸಾ ಶಿವಾ ॥೧೪॥

ಏಕಾಂತೇ ಚಿಂತಯಂತೀ ಸಾ ಶಿವಪಾದಸರೋರುಹಂ ।
ಕೈಲಾಸಮೌಳಿಸೌಧೇಷು ಶಿವೇನ ಹಿ ಸಮಾಗಮಂ ॥೧೫॥

ಉತ್ಫುಲ್ಲನಳಿನೀಂ ದೃಷ್ಟ್ವಾ ತತ್ತಟಸ್ಥಾ ಮಹೇಶ್ವರೀ ।
ಹಂಸಯುಗ್ಮಂ ತದಾ ದೇವೀ ದೃಷ್ಟ್ವಾ ನಿಶ್ವಸಿತಾ ತದಾ ॥೧೬॥

ಖಿನ್ನಾನನಾಂಬುಜಾ ದೇವೀ ಹಿಮಾಪಾಯಾಬ್ಜಸನ್ನಿಭಾನ್ ।
ಉತ್ಫುಲ್ಲಾನೋಕಹಾಂಸ್ತತ್ರ ತನ್ಮೂಲಮಣಿಕಲ್ಪಿತೇ ॥೧೭॥

---

ಕಮಲಗಳೂ ವಿರಾಜಿಸುತ್ತಿದ್ದುವು. ಹಾಗೆ ಸಾಂದ್ರವಾಗಿ ಬೆಳೆದಿರುವ ಪುನ್ನಾಗವೃಕ್ಷ ಸಲ್ಲಕೀವೃಕ್ಷ, (ಸುರಹೊನ್ನೇಮರ, ಆನೇಬೇಲದ ಮರ) (ಕೆಂಪುಕಂಚಿವಾಳದಗಿಡ) ಕೋವಿದಾರದ್ರುಮ ಮುಂತಾದುವುಗಳನ್ನೂ ಸುಂದರವಾದ ಕಮಲವನವನ್ನೂ ನೋಡುತ್ತಾ ಶ್ರೀದೇವಿಯು ಅಶೋಕಮರದ ಕೊಂಬೆಯನ್ನು ಕೈಯಿಂದ ಹಿಡಿದು ಕೊಂಡು ಮನತಣಿಯುವಂತೆ ನೋಡುತ್ತಿದ್ದಳು. ॥೧೩-೧೪॥

ಈ ರೀತಿಯಾಗಿ ಸಕಲ ಸೌಖ್ಯಗಳನ್ನು ಉಪಭೋಗಿಸುತ್ತಾ ಆ ಉದ್ದೀಪನ ವಿಭಾವಗಳಿಂದ ತಲ್ಲಣಿಸಿದ ಶ್ರೀದೇವಿಯು ತನ್ನ ಕಾಂತನಾದ ಪರಮೇಶ್ವರನನ್ನು ಜ್ಞಾಪಿಸಿಕೊಂಡಳು. ಅಲ್ಲದೇ ತನ್ನ ಕಾಂತನೊಡನಿದ್ದಾಗ ಕೈಲಾಸದಲ್ಲಿನ ಅರಮನೆ ಯಲ್ಲಿ ಆಡಿದ ಕ್ರೀಡೆಗಳನ್ನೂ ಸಹ ಸ್ಮರಿಸಿಕೊಂಡು ಅಂತರಂಗದಲ್ಲಿಯೇ ಈ ಸಮ ಯದಲ್ಲಿ ಕಾಂತಾಗಮನವನ್ನು ಬಯಸಿ ಬಹುವಾಗಿ ಚಿಂತಿಸುವಳು. ॥೧೫॥

ಸರೋವರಗಳ ದಂಡೆಯಮೇಲೆ ವಿಹರಿಸುತ್ತಾ ಅಲ್ಲಲ್ಲಿ ಸರೋವರಗಳಲ್ಲಿನ ಅರಳಿ ಅರಳಿ ಸೊಂಪಾಗಿರುವ ಕಮಲಗಳನ್ನೂ, ಅಲ್ಲಿಯೇ ಸ್ವಚ್ಛಂದವಾಗಿ ಕ್ರೀಡಿಸು ತ್ತಿರುವ ಹಂಸದಂಪತಿಗಳನ್ನೂ ಸಹ ನೋಡಿ ತನ್ನ ಕಾಂತವಿರಹವನ್ನು ನೆನೆದು ಕೊಂಡು ವ್ಯಥೆಯಿಂದ ನಿಟ್ಟುಸಿರುಬಿಡುವಳು. ॥೧೬॥

ಆ ಹಿಮವತ್ಪರ್ವತದ ಅರಣ್ಯಭಾಗಗಳಲ್ಲಿ ಆಗಾಗ ಸಂಚರಿಸುತ್ತಾ ಶ್ರೀದೇವಿಯು ಅಲ್ಲಲ್ಲಿ ದಟ್ಟವಾಗಿ ಬೆಳೆದಿರುವ ದೊಡ್ಡ ದೊಡ್ಡ ಮರಗಳನ್ನು ನೋಡಿ ವ್ಯಥೆಪಡುವಳು. ಆ ಮರಗಳೆಲ್ಲವೂ ಕೂಡ ಶರದೃತುವಿನಲ್ಲಿ ಯಾವ

ವೇದ್ಯಾಮುಧ್ಯಾಸಿತಾ ದೇವೀ ಸಖೀಭಿರ್ಮೇನಯಾ ತದಾ ।
ಚಂದ್ರಚಂದನಲಿಪ್ತಾಪಿ ಧಾರಾಸಾರಗೃಹೇಷ್ವಪಿ ॥೧೮॥

ಫುಲ್ಲಪುಷ್ಪಾಂಬುಸಾರೌಘಶೀಕರಾಸಾರತರ್ಪಿತಾ ।
ವೀಜಿತಾ ವ್ಯಜನೈಶ್ಶೈತ್ಯೈಸ್ಸಂತಾಪಂ ನ ಜಹೌ ತದಾ ॥೧೯॥

ದಿವ್ಯಪುಷ್ಪಂ ಫಲಂ ದೃಷ್ಟ್ವಾ ಶಿವಾಯ ವಿನಿವೇದ್ಯ ಸಾ ।
ಸೋಪಹಾರಂ ಪ್ರಕುರ್ವಂತೀ ಮೇನಾಮಾಲಿಂಗ್ಯ ಸಾ ಶಿವಾ ॥೨೦॥

---

ಆತಂಕವೂ ಇಲ್ಲದೇ ಕಮಲಗಳು ಹೇಗೆ ಉಚ್ಛ್ರಾಯಸ್ಥಿತಿಯಲ್ಲಿ ಬೆಳೆಯುವುವೋ ಹಾಗೆಯೇ ಬೆಳೆದಿರುವುವು. ಅವುಗಳ ವೀಕ್ಷಣದಿಂದ ಶ್ರೀದೇವಿಯ ಮುಖಕಮಲವು ಖಿನ್ನವಾಗುವುದು. ಆಗ ಸಮೀಪದಲ್ಲಿಯೇ ಇರುವ ತಾಯಿಯಾದ ಮೇನಾ ದೇವಿಯೂ ಸಖಿಯರೂ ಸಹ ಶ್ರೀದೇವಿಗೆ ಎಲ್ಲಿ ತೊಂದರೆಯಾಗುವುದೋ ಎಂದು ತವಕದಿಂದ ಶ್ರೀದೇವಿಯನ್ನು ಮರಗಳಿಗೆ ಕಟ್ಟಿದ ಕಟ್ಟೆಯಮೇಲೂ ಅಲ್ಲಲ್ಲಿ ತಯಾರಿಸಿದ ಮಣಿಪೀಠದ ಮೇಲೂ ಕುಳ್ಳಿರಿಸಿ ಸೇವೆಮಾಡುವರು. ಆಕೆಯ ವಿರಹಸಂತಾಪಶಮನಕ್ಕಾಗಿ ನೀರು ಚಿಮ್ಮುವ ಚಿಲುಮೆಗಳಿಗೆ ಕರೆದೊಯ್ಯುವರು. ಪಚ್ಚಕರ್ಪೂರ, ಹಸಿಯಾದ ಚಂದನ, ಮುಂತಾದ ತಂಪಾದ ಪದಾರ್ಥಗಳಿಂದ ದೇವಿಗೆ ಶೈತ್ಯೋಪಚಾರ ನಡೆಸುವರು. ಅಷ್ಟಾದರೂ ದೇವಿಯ ವದನವು ಖಿನ್ನವಾದದ್ದಾಗಿಯೇ ಕಾಣುತ್ತಿದ್ದಿತು. ||೧೭-೧೮||

ಗಿರಿಜೆಯ ವಿರಹತಾಪಶಮನಕ್ಕಾಗಿ ಅನೇಕ ತರಹ ಉಪಚಾರಗಳನ್ನು ನಡೆಸುವರು. ಪುಷ್ಪೋದಕ, ಕರ್ಪೂರೋದಕ, ಗಂಧೋದಕ ಮುಂತಾದ ಅನೇಕ ವಿಧವಾದ ಶೀತಲಜಲದಿಂದ ಸ್ನಾನಮಾಡಿಸುವರು. ಏಲಕ್ಕಿ ಲಾವಂಚ ಮುಂತಾದ ನಾನಾವಿಧವಾದ ಶೈತ್ಯವನ್ನುಂಟುಮಾಡುವ ಬೀಸಣಿಗೆಯಿಂದ ಗಾಳಿ ಬೀಸುವರು. ಆದರೂ ದೇವಿಯ ವಿರಹಸಂತಾಪವು ಕಡಮೆಯಾಗಲೊಲ್ಲದು. ||೧೯||

ಯಾವುದಾದರೊಂದು ಉತ್ಕೃಷ್ಟವಾದ ಹೂವನ್ನೇ ಆಗಲಿ, ಹಣ್ಣನ್ನೇ ಆಗಲಿ ಮೊದಲು ಅದನ್ನು ಪರಮೇಶ್ವರನಿಗೆ ಮನಸಾ ನಿವೇದಿಸುವಳು. ಅನಂತರ ಅದರಲ್ಲಿ ಸ್ವಲ್ಪ ಪ್ರಸಾದರೂಪವಾಗಿ ಭುಂಜಿಸುವಳು. ಆಗಾಗ ಪರಮೇಶ್ವರನ ಅತ್ಯಂತ ಧ್ಯಾನದಿಂದಲೂ, ಆತನಲ್ಲಿ ಅತ್ಯಂತ ಔತ್ಕಂಠ್ಯದಿಂದಲೂ ವೃಥಾ ಶ್ರಮಪಟ್ಟು ಆಯಾಸಗೊಳ್ಳುವಳು. ಉಪಭೋಗವಸ್ತುಗಳಾದ ಸ್ರಕ್ಚಂದನಗಳನ್ನೂ ಕಸ್ತೂರಿ

ವಿದೂನಮಾನಸಾ ದೇವೀ ವಿರಹಾತ್ಪರಮೇಶ್ವರೀ ।
ಚಂದ್ರಕಸ್ತೂರಿಕಾಮೋದಂ ನಾಂಗೀಚಕ್ರೇಽಥ ಚಂದನಂ ॥೨೧॥

ನಿಶಿ ಚಂದ್ರೋದಯೇ ದೇವೀ ಹಿಮವನ್ಮೌಳಿಸೌಧಗಾ ।
ಸುಧಾಧಾಮಕರಾಸಾರೈ ಸ್ಸಂತಪ್ತಹೃದಯಾಽಭವತ್ ॥೨೨॥

ಜಾಜೀಕುಂದಮಹಾಮಲ್ಲೀಕೇತಕೋತ್ಪಲಚಂಪಕಾನ್ ।
ಸ್ವಪಿತುರ್ಮೌಳಿಸಂಸ್ಥಾನ್ ಸಾ ಪಶ್ಯಂತೀ ಶಂಕರಂ ವಿನಾ ॥೨೩॥

---

ಚಂದ್ರಗಳನ್ನೂ ದೂರೀಕರಿಸುವಳು. ಒಂದೊಂದುವೇಳೆ ಅತ್ಯಂತಾಸಕ್ತಿಯಿಂದ ನಡುಗುವಳು. ಆಗ ಯೋಗಕ್ಷೇಮವನ್ನು ವಿಚಾರಿಸುವುದಕ್ಕೆ ಬಂದಿರುವ ತಾಯಿಯಾದ ಮೇನಾದೇವಿಯನ್ನು ಆಲಿಂಗಿಸಿಕೊಂಡು ಕೊಂಚ ಸ್ಥೈರ್ಯ ಪಡೆಯುವಳು. ||೨೦-೨೧||

ತಂಪನ್ನುಂಟುಮಾಡುವ ಹಿಮಗಳಿಗೆಲ್ಲಾ ನಿಧಿಯಾದವನು ಹಿಮವಂತನು. ಅಂತಹ ಪ್ರದೇಶದಲ್ಲಿ ಪ್ರಚ್ಛಾಯಶೀತಲವಾದ ಅರಮನೆಯಲ್ಲಿದ್ದರೂ ರಾತ್ರಿಯಲ್ಲಿ ಚಂದ್ರೋದಯವಾದ ಕೂಡಲೇ ಮತ್ತಷ್ಟು ವ್ಯಥೆಪಡುವಳು. ಆ ಚಂದ್ರಕಿರಣಗಳು ವಸ್ತುತಃ ಶೀತಲಗಳಾಗಿದ್ದರೂ ಕೂಡ ವಿರಹದಿಂದ ಶ್ರೀದೇವಿಗೆ ಸಂತಾಪವನ್ನೇ ಹೆಚ್ಚಿಸುತ್ತಿದ್ದವು. ||೨೨||

ಆ ಹಿಮವತ್ಪರ್ವತದಲ್ಲಿ ನಯನಮನೋಹರಗಳಾದ ಜಾಜಿ, ಮಲ್ಲಿಗೆ, ದುಂಡು ಮಲ್ಲಿಗೆ, ಕೇದಗಿ, ಕನ್ನೈದಿಲೆ, ಸಂಪಿಗೆ ಮುಂತಾದ ಅನೇಕ ತರಹ ಪುಷ್ಪಗಳೆಲ್ಲಾ ನಗುನಗುತ್ತಾ ಅರಳಿ ನಿಂತಿರುತ್ತಿದ್ದವು. ಅವುಗಳೆಲ್ಲವನ್ನೂ ಶ್ರೀದೇವಿಗೆ ನೋಡುವುದೇ ಬಹಳ ವ್ಯಥೆಗೆ ಕಾರಣವಾಗುತ್ತಿತ್ತು. ಯಾವುದಿದ್ದರೆ ಏನು! ಸ್ವಕಾಂತನು ಸಮೀಪದಲ್ಲಿ ಇಲ್ಲದ ಮೇಲೆ ಇವುಗಳಿಂದೇನು ಪ್ರಯೋಜನ? ಎಂದು ಕೊರಗುವಳು. ಈ ಎಲ್ಲಾ ವೈಭವಗಳನ್ನೂ ತನ್ನ ಮಾತಾಪಿತೃಗಳ ಉಪಚಾರ ವನ್ನೂ ನೋಡಿ ಶ್ರೀದೇವಿಯು ಸ್ವಕಾಂತನಾದ ಶಂಕರನಿಲ್ಲದಮೇಲೆ ಇವೆಲ್ಲವೂ ನಿಸ್ಸಾರವೆಂದುಕೊಳ್ಳುವಳು. ||೨೩||

ನಿಸ್ಸಾರಂ ಮನ್ಯತೇ ಸರ್ವಂ ಪಿತ್ರಾ ಮಾತ್ರಾ ಪ್ರಪೂಜಿತಾ ।
ಮಂದಂ ಮಂದಾರಸುಭಗವಾಯುಭಿಃ ಪರಿಶೀಲಿತಾ ॥೨೪॥

ಖಿನ್ನಾನನಾ ಸಾ ವಿರಹೈರ್ಮಹೇಶಸ್ಯ ಮಹೇಶ್ವರೀ ।
ನ ತಾಪಮಜಹತ್ಕ್ವಾಪಿ ಧಾರಾಸಾರಗೃಹೇಷ್ವಪಿ ॥೨೫॥

ವ್ಯಜನೈರ್ವೀಜಿತಾ ದೇವೀ ಸಖೀಭಿಶ್ಚಾಮರೈರಪಿ ।
ಪದ್ಮಾನ್ಯಪಿ ಹಿಮಾಸಾರಂ ಸ್ವಪಿತುರ್ಮೌಳಿಸಂಸ್ಥಿತಾ ॥೨೬॥

ಮಣಿಸೌಧೇಷು ದುರ್ಗೇಷು ಫಲಾನ್ಯಪ್ಯುಪಜಿಘ್ರತೀ ।
ಮೇನಯಾ ಸಾಂತ್ವಿತಾ ದೇವೀ ಹೃದಯೇನ ವಿದೂಯತಾ ॥೨೭॥

ಅಂಜನಂ ರೋಚನಂ ಗಂಧಂ ಕಸ್ತೂರೀಂ ಕುಂಕುಮಂ ಸ್ರಜಂ ।
ನಿರ್ಬಂಧೇನ ತಪಾ ಮಾತುರ್ಭೋಜ್ಯಂ ಪೇಯಂ ಚ ಸಾ ಶಿವಾ ॥೨೮॥

---

ಭಗವತಿಯಾದ ದೇವಿಯು ಪರಮೇಶ್ವರನ ವಿರಹದಿಂದ ಯಾವಾಗಲೂ ಖಿನ್ನಮುಖಳಾಗಿ ಚಿಂತಿಸುವಳು. ಆ ಸಮಯದಲ್ಲಿ ಎಲ್ಲೆಲ್ಲೂ ಕೂಡ ಮಂದ ಮಾರುತವು ಬಹಳ ಹಿತವಾಗಿ ಮಂದಾರಪುಷ್ಪದ ಮೃದುಸ್ಪರ್ಶದಂತೆ ಬೀಸುತ್ತಿತ್ತು. ಆದರೂ ಇದರಿಂದ ದೇವಿಯ ವಿರಹತಾಪವು ಸ್ವಲ್ಪವೂ ಕಡಮೆಯಾಗುವುದಿಲ್ಲ. ಇದರಂತೆ ಧಾರಾಗೃಹಸೇವನಾದಿಗಳಿಂದಲೂ ಸಹ ಏನೂ ಪ್ರಯೋಜನವುಂಟಾಗಲಿಲ್ಲ. ॥೨೪-೨೫॥

ದೇವಿಗೆ, ಸಖಿಯರು ಅನೇಕ ವಿಧವಾದ ಶೈತ್ಯೋಪಚಾರ ಮಾಡುವರು. ಬೀಸಣಿಗೆ ಮತ್ತು ಚಾಮರಗಳಿಂದ ಗಾಳಿಬೀಸುವರು. ತಂಪಾಗಿರುವ ಪ್ರದೇಶದಲ್ಲಿ ಕುಳ್ಳಿರಿಸಿ ತಂಪಾಗಿರುವ ಹಿಮುಗಡ್ಡೆಗಳನ್ನೂ ಕಮಲಗಳನ್ನೂ ಸೇವನೆಗಾಗಿ ಉಪಯೋಗಿಸುವರು. ಮಧುರವಾದ ಹಣ್ಣುಗಳನ್ನು ಸಹ ಸಮರ್ಪಿಸುವರು. ಇವು ಯಾವುದರಿಂದಲೂ ಕೊಂಚವೂ ತಾಪವು ಕಡಮೆಯಾಗದಿರುವುದನ್ನು ನೋಡಿ, ತಾಯಿಯಾದ ಮೇನೆಯು ಭಯದಿಂದಲೂ ವ್ಯಥೆಯಿಂದಲೂ ಅನೇಕ ವಿಧವಾಗಿ ಸಮಾಧಾನ ಹೇಳುವಳು. ॥೨೬-೨೭॥

ದೇವಿಯು ಆಗ ಅತ್ಯಂತ ಖಿನ್ನಳಾಗಿ ಯಾವ ಸುಖವನ್ನೂ ಅನುಭವಿಸಲು ಮನಸ್ಸುಮಾಡುತ್ತಿರಲಿಲ್ಲ. ಯಾವುದೊಂದು ಅಲಂಕಾರವೇ ಆಗಲಿ, ಪಾನಭೋಜ

ಶಯ್ಯಾಂ ಸುಮೈಸ್ತದಾ ಕ್ಲಪ್ತಾಂ ದಿವ್ಯಮಂಚೇಷು ಧೂಪಿತಾಂ ।
ಮಣಿದೀಪೈಶ್ಚ ವಿವಿಧೈಃ ಕುಂಭಾದರ್ಶಗೃಹೇಂಬಿಕಾ ॥೨೯॥

ಸುಪ್ತಾಪಿ ನಿದ್ರಾಂ ಸಾ ದೇವೀ ಚಿಂತಯಿತ್ವಾ ಮಹೇಶ್ವರಂ ।
ಪ್ರಬುಧ್ಯತಿ ಕ್ಷಣಾದ್ದೇವೀ ಸಖೀಭಿಸ್ಸೇವಿತಾಪಿ ಚ ॥೩೦॥

ತಾಂಬೂಲಗಂಧಪುಷ್ಪಾದ್ಯೈರ್ದಿವ್ಯಭಕ್ಷ್ಯಾನ್ನರಾಶಿಭಿಃ ।
ಕ್ವ ಶಂಕರ ಇತಿ ಸ್ವಪ್ನೇ ಪೃಚ್ಛತ್ಯಭಿನಯೇನ ಸಾ ॥೩೧॥

---

ನವೇ ಆಗಲಿ, ಕೇವಲ ತಾಯಿಯ ನಿರ್ಬಂಧದಿಂದ ನಿರ್ವಹಿಸುತ್ತಿದ್ದಳು. ಕಣ್ಣಿಗೆ ಕಾಡಿಗೆ ಇಡುವುದು, ರಂಜನದ್ರವ್ಯದಿಂದ ಶರೀರವನ್ನು ಉಜ್ವಲಗೊಳಿಸುವುದು, ಗಂಧಪೂಸಿಕೊಳ್ಳುವುದು, ಕಸ್ತೂರಿಹಚ್ಚಿಕೊಳ್ಳುವುದು, ಕುಂಕುಮ ಇಟ್ಟುಕೊಳ್ಳುವುದು, ಹೂಮುಡಿಯುವುದು ಮುಂತಾದವುಗಳನ್ನೆಲ್ಲಾ ಮನಸ್ಸಿಲ್ಲದಿದ್ದರೂ ತಾಯಿಯ ಒತ್ತಾಯದಿಂದ ಹೇಗೋ ಅಂತೂ ನಡೆಸುತ್ತಿದ್ದಳು. ||೨೮||

ಆ ದೇವಿಗೆ ಕೊಂಚವೂ ಆತಂಕವಾಗಕೂಡದೆಂದು ಜಾಗರೂಕತೆಯಿಂದ, ಬಹಳ ಮಮತೆಯಿಂದ ಸಖಿಯರು ಆಕೆಯ ಹಾಸಿಗೆಯನ್ನು ತಯಾರಿಸುವರು. ಉತ್ತಮೋತ್ತಮಗಳಾದ ಮಂಚಗಳ ಮೇಲೆ ಹೂವಿನಿಂದಲೇ ಮೃದುವಾಗಿ ಶಯನಗಳನ್ನು ತಯಾರಿಸಿ ಅವುಗಳಿಗೆ ಧೂಪದಿಂದ ವಾಸನೆ ಕೊಡುವರು. ಶಯನಗೃಹದಲ್ಲಿಯೂ ಕೂಡ ದೊಡ್ಡ ದೊಡ್ಡ ಕನ್ನಡಿಗಳನ್ನೂ ನಿಲ್ಲಿಸಿರುವರು. ಎಣ್ಣೆಯ ದೀಪಕ್ಕೆ ಬದಲಾಗಿ ಮಹಾಮಹಾ ಮಣಿಗಳನ್ನೇ ಇರಿಸಿ ಪ್ರಕಾಶಪಡಿಸಿರುವರು. ಅಂಥಾ ಶಯನದಲ್ಲಿ ಶ್ರೀದೇವಿಯು ಶಂಕರನನ್ನೇ ಸ್ಮರಿಸಿಕೊಳ್ಳುತ್ತಾ ಮಲಗುವಳು. ಎಷ್ಟೋ ಹೊತ್ತಿನ ಮೇಲೆ ನಿದ್ದೆ ಬಂದರೂ ಸ್ವಪ್ನದಲ್ಲಿ ಸ್ವಕಾಂತನನ್ನು ಕಂಡಂತಾಗಿ ಕೂಡಲೇ ಎಚ್ಚರಗೊಂಡು ಬಿಡುವಳು. ಸಖಿಯರ ಸೇವೆಯಿಂದ ದೇವಿಗೆ ಯಾವ ವಿಧವಾದ ಪ್ರೀತಿಯೂ ಉಂಟಾಗುತ್ತಿರಲಿಲ್ಲ. ||೨೯-೩೦||

ಮನಶ್ಶರೀರಗಳಿಗೆ ಹಿತಕರವಾದ ಆಹಾರವನ್ನು ಭುಂಜಿಸಿ, ಪಥ್ಯವಾದ ತಾಂಬೂಲವನ್ನು ಸೇವಿಸಿ, ಮನಸ್ಸಿಗೆ ಆಹ್ಲಾದವಾಗುವಂತೆ ಗಂಧಪುಷ್ಪಾದಿಗಳನ್ನು ಸೇವಿಸಿ ಸುಖವಾಗಿ ಮಲಗಿ ನಿದ್ರಿಸುತ್ತಿದ್ದರೂ, ಮಧ್ಯನಿದ್ರೆಯಲ್ಲಿ ಹಠಾತ್ತಾಗಿ ಎಚ್ಚತ್ತು "ಎಲ್ಲಿರುವನು ? ಶಂಕರನೆಲ್ಲಿ ?" ಎಂದು ಛಟಕ್ಕನೆ ಎದ್ದು ಉನ್ಮಾದಳಾಗಿ ಕೂಗುವಳು. ||೩೧||

ಕೈಲಾಸವಮೌಳಿಸೌಧೇಷು ವಿಹಾರನಿಹಿತಾದರಾತ್ ।
ಇತ್ಯರ್ಧೋಕ್ತಿಪರಾ ದೇವೀ ಪಶ್ಯಂತೀ ಸಾ ಸ್ವಮಾತರಂ ॥೩೨॥

ಹಿಮಾದ್ರಿಂ ಚಿಂತಯಂತೀ ಸಾ ನಿದ್ರಾತಂದ್ರಿತಲೋಚನಾ ।
ದಿವಾ ಹಿಮಾದ್ರಿವಿಪಿನೇ ಕೇಕೀಕೋಕಿಲಕೂಜನೈಃ ॥೩೩॥

ಪರಿತಪ್ಸ್ಯತಿ ಸಾ ಬಾಲಾ ಮಹೇಶವಿರಹಾತುರಾ ।
ಮೇನಯಾ ಕಂದುಕಕ್ರೀಡಾಂ ಕುರ್ವಂತೀ ಕ್ಷಣಮಂಬಿಕಾ ॥೩೪॥

ಹಿಮಾದ್ರಿಮೌಳಿಪಾಲೀಷು ಫಲಾನ್ಯಪ್ಯುಪಭುಂಜತೀ ।
ತದೀಯವನವಾತೋತ್ಥೈಃ ಪುಷ್ಪಕೇಸರರೇಣುಭಿಃ ॥೩೫॥

---

ಹಾಗೆ ಮಧ್ಯನಿದ್ರೆಯಲ್ಲಿ ಎಚ್ಚೆತ್ತು ಅರ್ಧನಿದ್ರೆಯಿಂದ ಕಣ್ಣನ್ನು ಪೂರ್ತಿಯಾಗಿ ಬಿಡುವುದಕ್ಕೂ ಆಗದೆ, ಅರ್ಧರ್ಧ ತೆರೆದು, ಉನ್ಮಾದಾವಸ್ಥೆಯಿಂದ "ಕೈಲಾಸದ ಅರಮನೆಯಲ್ಲಿ, ಆಸೆಯಿಂದ, ಆಹಾರ" ಇತ್ಯಾದಿಯಾಗಿ ಅಪೂರ್ಣವಾದ ವಾಕ್ಯಗಳನ್ನು ಹೇಳುತ್ತ ಹೇಳುತ್ತಾ, ಕಣ್ಣನ್ನು ಪೂರ್ತಿ ತೆರೆದು, ತನ್ನ ಉನ್ಮತ್ತತೆಯು ಎಲ್ಲಿ ಬಯಲಾಯಿತೋ ಎಂಬ ಸಂಶಯದಿಂದ ತಾಯಿಯನ್ನು ತಂದೆಯನ್ನು ಸಹ ದೃಷ್ಟಿಸಿ ನೋಡುವಳು. ಹೀಗೆ ರಾತ್ರಿಗಳನ್ನು ಕಳೆದಳು. ||೩೨||

ಹಗಲು ಹೊತ್ತಿನಲ್ಲಿಯಾದರೋ, ಹಿಮವತ್ಪರ್ವತದ ಕಾಡಿನಲ್ಲಿ ಕೋಗಿಲೆಗಳು, ಚಕ್ರವಾಕಗಳು ಮುಂತಾದ ಪಕ್ಷಿಗಳು ಮಧುರವಾಗಿ ಹಾಡುತ್ತಾ ವಿಹರಿಸುತ್ತಿರುವುವು. ಆ ಇಂಪಾದ ಧ್ವನಿಗಳನ್ನು ಕೇಳಿ ವಿರಹಸಂತಾಪವುಳ್ಳ ಶ್ರೀದೇವಿಯು ಅಧಿಕವಾದ ಸಂತಾಪವನ್ನು ಪಡೆದು ವ್ಯಥೆಪಡುವಳು. ||೩೩||

ಹಗಲು ಒಂದೊಂದು ಹೊತ್ತು ಹಿಮವತ್ಪರ್ವತದ ತಪ್ಪಲು ಪ್ರದೇಶದಲ್ಲಿ ಮಧುರವಾದ ಹಣ್ಣನ್ನು ತಿಂದು ಕ್ರೀಡಾರ್ಥವಾಗಿ ತಾಯಿಯಾದ ಮೇನೆಯೊಡನೆ ಕ್ಷಣಕಾಲ ಚೆಂಡುಗಳಿಂದ ಆಟವಾಡುವಳು. ಹೀಗೆ ಕ್ರೀಡೆಯಿಂದ ಸ್ವಲ್ಪಹೊತ್ತು ಕಾಲ ಕಳೆಯುವಳು. ||೩೪||

ಪಾರ್ವತಿಯು ಕ್ರೀಡಿಸುತ್ತಿರುವಾಗ ಎಲ್ಲೆಲ್ಲೂ ತಂಗಾಳಿಯು ಬೀಸುತ್ತಿತ್ತು. ಆ ಗಾಳಿಯು ಅಲ್ಲಲ್ಲಿ ಅರಳಿದ ಹೂಗಳ ಪರಾಗಗಳನ್ನೂ ಸಹ ಹೊತ್ತುತಂದು, ಶ್ರೀದೇವಿಯ ಮೈಮೇಲೆಲ್ಲಾ ಎರಚುತ್ತಿತ್ತು. ಹಾಗೆ ಗಾಳಿಯಿಂದ ತಂದುಹಾಕಲ್ಪಟ್ಟ

ಭಲ್ಲೈರಿವ ಸ್ವಾಂಗಸೂತ್ಯೈರಿತ್ಯಮನ್ಯತ ಸಾ ಶಿವಾ ।
ಕದಾಚಿನ್ಮೇನಯಾ ದೇವೀ ಮೈನಾಕೇನ ಸಖೀಗಣೈಃ ॥೩೬॥

ರತ್ನಾಂದೋಲಮಹಾಕ್ರೀಡಾಂ ಕುರ್ವಂತೀ ವೃಕ್ಷಲಂಬಿತೈಃ ।
ಹಿಮಾಚಲಮಹಾಮೌಳಿವರಪ್ರಾಸಾದಭೂಮಿಷು ॥೩೭॥

ಹಲ್ಲೀಸಲಾಸ್ಯಮಾಲೀಭಿಃ ಕುರ್ವಂತೀ ಸಾ ಸ್ಮರಚ್ಛಿವಂ ।
ಆದರ್ಶಂ ಮುಖನಿಶ್ವಾಸೈರ್ಮಾಲಿನ್ಯಮಕರೋಚ್ಛಿವಾ ॥೩೮॥

ಹಿಮವಾನಪಿ ತಾಂ ದೃಷ್ಟ್ವಾ ವಿಮನಾಃ ಕ್ಲಾಂತಮಾನಸಾಂ ।
ಪುನಃ ಪೂಜಾಸಮಾರಂಭೈಃ ಪೂಜಯಾಮಾಸ ಪಾರ್ವತೀಂ ॥೩೯॥

---

ಪರಾಗಗಳೆಲ್ಲಾ ಮೈಮೇಲೆ ಬಿದ್ದರೆ, ಭಲ್ಲೆಯಿಂದ ಚುಚ್ಚಿದಹಾಗೆ ಗಿರಿಜಾದೇವಿಗೆ ವ್ಯಥೆಯುಂಟಾಗುತ್ತಿದ್ದಿತು. ॥೩೫॥

ಹಗಲು ಒಂದೊಂದು ಹೊತ್ತು ದೇವಿಯು ತನ್ನ ತಾಯಿಯೊಡನೆಯೂ, ತಮ್ಮನಾದ ಮೈನಾಕನೊಡನೆಯೂ, ಕದಾಚಿತ್ ಸಖಿಯರೊಡನೆಯೂ, ವಿಹರಿಸುವಳು. ಒಂದೊಂದುವೇಳೆ ದೊಡ್ಡ ಮರಗಳಲ್ಲಿ ಜೋತಾಡುವ ಉಯ್ಯಾಲೆಗಳಲ್ಲಿ ಕ್ರೀಡಿಸುವಳು. ॥೩೬॥

ಒಂದೊಂದು ಹೊತ್ತು ಹಿಮವಂತನ ದಿವ್ಯಹರ್ಮ್ಯದಲ್ಲಿ ದೇವಿಯು ಸಖಿಯರೊಂದಿಗೆ ಹಲ್ಲೀಸ ನಾಟ್ಯವನ್ನಾಡುವಳು. ಹಾಗೆ ಅನೇಕ ವಿಧವಾದ ಕ್ರೀಡೆಗಳಲ್ಲಿ ಮಗ್ನಳಾಗಿದ್ದರೂ ಶಂಕರನ ಸ್ಮರಣೆಯು ಮಾತ್ರ ತಪ್ಪುತ್ತಿರಲಿಲ್ಲ. ಸ್ಮರಣೆಯು ಹೆಚ್ಚು ಹೆಚ್ಚಾಗಿ ಬಂದಕೂಡಲೇ ನಿಶ್ವಾಸವು ಅಧಿಕವಾಗುವುದು. ಆಗ ಕನ್ನಡಿಯಲ್ಲಿ ಮುಖವನ್ನು ನೋಡಿ ನೋಡಿ ವ್ಯಸನಪಡುತ್ತಿರಲು ನಿಶ್ವಾಸಾನಿಲದಿಂದ ಕನ್ನಡಿಯೆಲ್ಲವೂ ಮಲಿನವಾಗುತ್ತಿತ್ತು. ॥೩೭-೩೮॥

ಹೀಗೆ ಯಾವ ವಿಹಾರದಲ್ಲಿಯೂ ಮನಸ್ಸುಗೊಡದಿರುವ ಶ್ರೀದೇವಿಯನ್ನು ನೋಡಿ, ಎಲ್ಲಿ ಏನು ಕೊರತೆಯಾಗಿದೆಯೋ ಎಂಬ ಶಂಕೆಯಿಂದ ಹಿಮವಂತನು ಇನ್ನೂ ವಿಶೇಷವಾದ ಉಪಕರಣಗಳಿಂದ ಶ್ರದ್ಧೆವಹಿಸಿ ಮತ್ತೂ ಉತ್ತಮರೀತಿಯಲ್ಲಿ ಸತ್ಕರಿಸಲಾರಂಭಿಸಿದನು. ॥೩೯॥

**ಮೇನಯಾ ಲಾಲಿತಾದೇವೀ ದಿವ್ಯಾಸನವಿಹಾರಕೈಃ ।**
**ಜಲಕ್ರೀಡಾಸಮಾರಂಭೈರ್ಧಾರಾಸಾರಗೃಹಾಂತರೈಃ ॥೪೦॥**

**ಸ್ವಮೌಳಿವಿಪಿನೋತ್ಫುಲಶಾಖಿದರ್ಶನಕೌತುಕೈಃ ।**
**ಮೃಗಪಕ್ಷಿಗಣಾಂ ನಾದ್ಯೈರ್ಮಯೂರವರಕೇತನೈಃ ॥೪೧॥**

**ಸಾರಂಗವಾರಣಹರೀನ್ ಹಾರೀಣಾಂ ಲೋಚನೈಃ ಶಿವಾಂ ।**
**ತೋಷಯಾಮಾಸ ಶೈಲೇಂದ್ರೋ ದೇವೀಂ ಸಂವತ್ಸರಾಷ್ಟಕಂ ॥೪೨॥**

**ಸಾ ನಿನಾಯ ಸಮಾ ದೇವೀ ಸ್ವಪಿತುರ್ಮೌಳಿಸಂಸ್ಥಿತಾ ।**
**ತಾಂ ದ್ರಷ್ಟುಮಾಗತಾಸ್ಸರ್ವಾಸ್ತಪಸ್ವಿನ್ಯಸ್ಸುರಾಂಗನಾಃ ॥೪೩॥**

---

ಹಾಗೆಯೇ ಮೇನಾದೇವಿಯೂ ದೇವಿಯ ಕ್ರೀಡಾವಿಹಾರಗಳಿಗೆ ಮತ್ತೂ ವಿಶೇಷತರಹವಾದ ಏರ್ಪಾಟುಗಳನ್ನು ಸಿದ್ಧಗೊಳಿಸಿದಳು. ವಿಮನಸ್ಕಳಾದ ದೇವಿಯನ್ನು ನಾನಾಬಗೆಯ ಸಾಂತ್ವವಚನಗಳಿಂದ ಸಮಾಧಾನ ಪಡಿಸಿದಳು. ಶಯನಾಸನಗಳನ್ನೂ, ವಸ್ತ್ರಾಲಂಕಾರಗಳನ್ನೂ, ವಿಶೇಷವಾದ ರೀತಿಯಲ್ಲಿ ಅಣಿ ಮಾಡಿದಳು. ||೪೦||

ದೇವಿಯನ್ನು ಸಂತುಷ್ಟಳನ್ನಾಗಿ ಮಾಡಬೇಕೆಂದು ಹಿಮವಂತನು ಅನೇಕ ವಿಧವಾದ ಸಂತೋಷಸಾಮಗ್ರಿಗಳನ್ನು ಸಿದ್ಧಮಾಡುವನು. ಹೊಸ ಹೊಸ ಕೌತುಕ ಕರವಾದ ವಸ್ತುಗಳನ್ನು ಉಪಾಯನವಾಗಿ ಮಾಡುವನು. ವಿಚಿತ್ರವಾದ ಪ್ರಾಣಿಗಳನ್ನೂ ನವಿಲು, ಕೋಗಿಲೆ, ಸಾರಿಕೆ ಮುಂತಾದ ಪಕ್ಷಿಗಳ ಆಟಪಾಟಗಳನ್ನು ತೋರಿಸುವನು. ಹಾಗೂ ಆನೆ, ಜಿಂಕೆ, ಸಾರಗ ಮುಂತಾದವುಗಳನ್ನು ತರಿಸುವನು. ಈರೀತಿಯಾಗಿ ಎಂಟು ವರ್ಷಗಳ ಕಾಲ ಅನೇಕ ವಿಧವಾದ ಉಪಚಾರಗಳಿಂದ ಶ್ರೀದೇವಿಯನ್ನು ಲಾಲಿಸಿ ಸಂತೋಷಪಡಿಸುತ್ತಿದ್ದನು. ||೪೧-೪೨||

ಈರೀತಿಯಾಗಿ ದೇವಿಯು ತನ್ನ ತಂದೆಯ ಮನೆಯಲ್ಲಿ ಕಾಲಕಳೆಯುತ್ತಿರಲು ಆ ಸಮಯದಲ್ಲಿ ಭಗವತಿಯಾದ ಆಕೆಯ ದರ್ಶನಾರ್ಥವಾಗಿ ದೇವಾಂಗನೆಯರೂ, ತಪಸ್ವಿ ಸ್ತ್ರೀಯರೂ, ಎಲ್ಲರೂ ತಂಡೋಪತಂಡವಾಗಿ ಬಂದು ಹೋಗುತ್ತಿದ್ದರು. ||೪೩||

ಲಕ್ಷ್ಮೀರ್ವಾಣೀ ಶಚೀಚೈವ ಸ್ವಧಾ ಸ್ವಾಹಾ ಸುರಾಂಗನಾ ।
ಅರುಂಧತ್ಯನಸೂಯಾ ಚ ಗಾರ್ಗೀ ಮೈತ್ರಾಯಣೀ ತಥಾ ॥೪೪॥

ತಾರಾಶ್ಚ ರೋಹಿಣೀ ಮುಖ್ಯಾ ಲೋಪಾಮುದ್ರಾ ಮನೋರಮಾ ।
ಗಂಧರ್ವ್ಯೋ ನಾಗಕನ್ಯಾಶ್ಚ ಯಕ್ಷವಿದ್ಯಾಧರಾಂಗನಾಃ ॥೪೫॥

ಕಿಂನರ್ಯೋ ಯಾತುಧಾನಾಶ್ಚ ರಂಭಾದ್ಯಾಶ್ಚಾಪ್ಸರೋವರಾಃ ।
ದೇವೀಪಾದಾಂಬುಜದ್ವಂದ್ವಂ ವೀಕ್ಷಿತುಂ ತಾ ಹಿಮಾಲಯಂ ॥೪೬॥

ಸಮಾಯಾತಾ ವಿಮಾನಸ್ಥಾ ನದ್ಯಸ್ತೀರ್ಥಾ ಮಹೇಶ್ವರೀಂ ।
ವಸ್ತ್ರಾಭರಣಪುಷ್ಪಾಣಿ ಕುಂಕುಮಂ ಚಂದನಂ ನಿಶಾಂ ॥೪೭॥

ಫಲಮೂಲೋಪಾಯನಂ ಚ ತಾಭಿರ್ದತ್ತಮರೋಚಯತ್ ।
ಮೇನಾ ತತ್ರೋಪವಿವಿಶುಸ್ಸಮಂತಾತ್ತಾ ವರಾಂಗನಾಃ ॥೪೮॥

---

ಶ್ರೀದೇವಿಯ ದರ್ಶನಕ್ಕಾಗಿ ತಾಪಸಸ್ತ್ರೀಯರಾದ, ಅರುಂಧತಿ, ಅನಸೂಯೆ, ಲೋಪಾಮುದ್ರೆ, ಗಾರ್ಗೀ ಮತ್ತು ಮೈತ್ರಾಯಣಿ ಮುಂತಾದವರೂ, ದೇವಸ್ತ್ರೀಯರಾವ ಲಕ್ಷ್ಮೀ, ಸರಸ್ವತಿ, ಶಚೀದೇವಿ, ಸ್ವಾಹಾದೇವಿ, ಸ್ವಧಾದೇವಿ, ಮುಂತಾದವರೂ, ಚಂದ್ರಲೋಕದ ರೋಹಿಣಿಯೇ ಮೊದಲಾದ ತಾರಾಸ್ತ್ರೀಯರೂ, ಗಂಧರ್ವಸ್ತ್ರೀಯರೂ, ಅಪ್ಸರಸ್ತ್ರೀಯರೂ, ನಾಗಕನ್ಯಕೆಯರೂ, ತಂಡೋಪತಂಡರಾಗಿ ವಿಮಾನಗಳಿಂದ ಬರುತ್ತಿದ್ದರು. ಪಾವನಕರಗಳಾದ ನದಿಗಳೂ, ತೀರ್ಥಗಳೂ, ಸಹ ಶ್ರೀದೇವಿಯ ಚರಣಕಮಲಗಳ ದರ್ಶನಕ್ಕೆಂದು ಬರುತ್ತಿದ್ದವು. ॥೪೪-೪೫-೪೬॥

ಪೂಜ್ಯರದರ್ಶನಕ್ಕೆ ರಿಕ್ತಹಸ್ತರಾಗಿ ಹೋಗಬಾರದೆಂಬ ಲೋಕರೂಢಿಯಂತೆ ಆ ದೇವತಾದಿ ಸ್ತ್ರೀಯರು ದೇವಿಯ ದರ್ಶನಮಾಡಲು ಅನೇಕ ತರಹವಾದ ಹಣ್ಣುಹಂಪಲುಗಳನ್ನೂ, ವಸ್ತ್ರಾಲಂಕಾರಗಳನ್ನೂ, ಕುಂಕುಮಚಂದನವೇ ಮೊದಲಾದ ಸುಗಂಧದ್ರವ್ಯಗಳನ್ನೂ, ಹೂವಿನ ಮಾಲಿಕೆಗಳನ್ನೂ ಸಹ ತಂದಿಡುತ್ತಿದ್ದರು. ಅವೆಲ್ಲವನ್ನೂ ಅವರು ಭಕ್ತಿಯಿಂದ ಒಪ್ಪಿಸಿದಾಗ ದೇವಿಯು ಪ್ರೀತಿಯಿಂದ ಸ್ವೀಕರಿಸುತ್ತಿದ್ದಳು. ॥೪೭॥

ಬಂದಿರತಕ್ಕ ಎಲ್ಲಾ ಸ್ತ್ರೀಯರೂ ಶ್ರೀದೇವಿಯ ಸುತ್ತಲೂ ಕುಳಿತುಕೊಂಡು ಮೇಳ ನಡೆಸುವರು. ಆ ಮೇಳದಲ್ಲಿ ಗಂಧರ್ವಸ್ತ್ರೀಯರು ಹಾಡುವರು. ಅಪ್ಸರಸ್ತ್ರೀ

ಗಾಯಂತಿ ಗಾನಂ ಗಂಧರ್ವಾ ನೃತ್ಯಂತ್ಯಪ್ಸರಸಸ್ತದಾ ।
ವೀಣಾತೋದ್ಯಂ ವಾದಯಂತಿ ಕಿಂನರ್ಯಸ್ಸ್ವರಮೂರ್ಛನೈಃ ॥೪೯॥

ಫಲಮೂಲೈರ್ನಿಶಾಭಿಶ್ಚ ಕುಂಕುಮೈರ್ವರಚಂದನೈಃ ।
ಪುಷ್ಪೈಸ್ಸಮರ್ಚಯಾಮಾಸುಃ ಧೂಪೈರ್ದೀಪೈಸ್ಸುರಾಂಗನಾಃ ॥೫೦॥

ಮುನಿಪತ್ನ್ಯಸ್ತಯಾ ದೇವ್ಯಾ ಮೇನಯಾ ಚ ಸಮನ್ವಿತಾಃ ।
ಲಕ್ಷ್ಮೀಂ ವಾಣೀಂ ಶಚೀಂ ಚೈವ ತಥಾನ್ಯಾಸ್ಸುರಯೋಷಿತಃ ॥೫೧॥

ತಾಪಸೀಷು ತಪಶ್ಶ್ಲೋಚೇ ಕುಶಲಂ ಗಿರಿಜಾ ತದಾ ।
ದೇವಪತ್ನೀಷು ದೇವಾನಾಂ ಕುಶಲಂ ಲೋಕವಾರ್ತಯಾ ॥೫೨॥

ಸಾ ದೇವೀ ಮಧುರಾಲಾಪೈಸ್ತಾಸ್ಸಂಭಾವ್ಯ ಯಥಾವಿಧಿ ।
ಉವಾಸ ನಗಹರ್ಮ್ಯೇಷು ತಾಂಸ್ತದೋಚುಸ್ಸುರಾಂಗನಾಃ ॥೫೩॥

---

ಯರು ನಾಟ್ಯವಾಡುವರು. ಕಿಂನರಸ್ತ್ರೀಯರು ಶಾಸ್ತ್ರೀಯವಾದ ಲಯ ಮೂರ್ಛನಾದಿಗಳಿಂದ ವೀಣೆಯನ್ನು ಮೀಟುವರು. ||೪೮-೪೯||

ನೃತ್ತಗೀತಸೇವೆಗಳೊಂದಿಗೆ ಫಲಪುಷ್ಪಗಳಿಂದಲೂ, ಧೂಪದೀಪಗಳಿಂದಲೂ, ಕುಂಕುಮ ಗಂಧಗಳಿಂದಲೂ ಸಹ ಪಾರ್ವತಿಯನ್ನು ಬಹುವಾಗಿ ಪುರಸ್ಕರಿಸುತ್ತಿದ್ದರು. ||೫೦||

ಮುನಿಪತ್ನಿಯರೂ ಸಹ ಶ್ರೀದೇವಿಯನ್ನೂ, ಮೇನಾದೇವಿಯನ್ನೂ ದರ್ಶನ ಮಾಡಿ ಅವರೊಂದಿಗೆ ಯಾವಾಗಲೂ ಇದ್ದುಕೊಂಡು ಮೇಲ ನಡೆಸುತ್ತಿದ್ದರು. ಭೇಟಿಗಾಗಿ ಬಂದಿರತಕ್ಕ ಲಕ್ಷ್ಮಿ, ಸರಸ್ವತಿ, ಶಚೀದೇವಿ ಮತ್ತು ದೇವತಾಸ್ತ್ರೀಯರು, ತಾಪಸಸ್ತ್ರೀಯರು, ಇವರುಗಳ ಯೋಗಕ್ಷೇಮವನ್ನು ವಿಚಾರಿಸುವಳು. ಅದರಲ್ಲಿಯೂ ವಿವೇಕತೆ ಏನೆಂದರೆ, ತಾಪಸಸ್ತ್ರೀಯರೊಂದಿಗೆ ತಪಸ್ಸು ನಿರ್ವಿಘ್ನತೆಯಿಂದ ಸಾಗುತ್ತಿದೆಯೇ ಎಂದು ಕೇಳುವಳು. ಮತ್ತಿತರ ದೇವತಾಸ್ತ್ರೀಯರೊಂದಿಗೆ ಅವರವರ ಪತಿಯರ ಯೋಗಕ್ಷೇಮವನ್ನೂ ಅವರ ಕುಶಲವನ್ನೂ ವಿಚಾರಿಸುವಳು. ಹಾಗೂ ಆಯಾಯಾ ಲೋಕಗಳ ಪರಿಸ್ಥಿತಿಯನ್ನೂ ನಿಷ್ಕಂಟಕತ್ವವನ್ನೂ ಕೇಳುವಳು. ||೫೧-೫೨||

ಹೀಗೆ ದೇವಿಯು ಹಿಮವಂತನ ಅರಮನೆಯಲ್ಲಿ ಇದ್ದಾಗ, ಆಗಾಗ್ಗೆ ಭೇಟಿಗಾಗಿ ಬರುತ್ತಿದ್ದ ಸ್ತ್ರೀಯರನ್ನು, ಅವರವರ ಯೋಗ್ಯತೆಗೆ ಸರಿಯಾಗಿ ಗೌರವಿಸಿ,

|| ಸುರಾಂಗನಾ ಊಚುಃ ||

ದಯಾರಸಘನೇ ಶಿವೇ ವಿಕಚಪಂಕಜಾಸ್ಯೇಂಬಿಕೇ
ಸುಚಂಪಕಸರಾವಳೀಮಧುರಗಂಧಜಾಜೀಸರೈಃ ।
ಸುಗುಚ್ಛವರಮಲ್ಲಿಕಾವಿಧೃತಪಾಟಲೋಶೀರಕೈಃ
ವಿರಾಜಿತಕಪರ್ದಕೇ ವಿಲಸದಿಂದುಕೋಟೀರಕೇ ||೫೪||

ನಮುತ್ಸುರಪದಾಂಬುಜೇ ಭವಹರೇ ನಮಸ್ತೇ ನಮಃ ||೫೫||

ಮಂಜೀರಶಿಂಜಿತರಣನ್ಮಣಿಪಾದಯುಗ್ಮ
ಕಂಜೋಪಮಾನಕರಣಾಯಿತಲಕ್ತಕೋಟ್ಯಂ ।
ಪಾದದ್ವಯಂ ಸುರಗಣೋತ್ತಮಮೌಳಿಕೋಟಿ
ಘೃಷ್ಟಂ ಸುಸನ್ನಖಜಿತಾಂಬರಕಾಂತಿಕಾಂತಂ ||೫೬||

---

ಮಧುರವಾದ ವಾರ್ತಾಲಾಪಗಳಿಂದ ಆನಂದಗೊಳಿಸುತ್ತಿದ್ದಳು. ಹೀಗಿರಲು ಒಂದಾನೊಂದು ಸಲ ಆ ದೇವಾಂಗನೆಯರು ಗಿರಿಜಾದೇವಿಯನ್ನು ಕುರಿತು ಹೀಗೆ ಸ್ತುತಿಸಿದರು. ||೫೩||

ಹೇ ಭಗವತಿ, ನೀನು ದಯಾಮೂರ್ತಿಯಾಗಿರುವೆ. ಪಾಮರರಲ್ಲಿಯೂ ದಯೆತೋರುವೆ. ನೀನು ಮಂಗಲಸ್ವರೂಪಳಾಗಿದ್ದೀಯೆ. ನಿನ್ನ ಮುಖವು ಅರಳಿದ ಕಮಲದಹಾಗೆ ಕಾಂತಿಸಂಪನ್ನವಾಗಿದೆ. ನೀನು ಜಗನ್ಮಾತೆಯನಿಸಿದ್ದೀಯೆ. ಭಗವತಿಯೇ, ನೀನು ಶೋಭನವಾದ ಸಂಪಿಗೆ ಹೂಮಾಲೆಗಳಿಂದಲೂ, ಇಂಪಾದ ವಾಸನೆಯುಳ್ಳ ಜಾಜೀ ಪುಷ್ಪಮಾಲೆಗಳಿಂದಲೂ ಬಹಳವಾಗಿ ವಿರಾಜಿಸುವೆ. ಕೆಂಪು ಲಾವಂಚವನ್ನೂ, ಗೊಂಚಲು ಗೊಂಚಲಾಗಿ ಮಲ್ಲಿಗೇ ಹೂವನ್ನು ಧರಿಸಿಕೊಂಡು ಅತ್ಯಂತ ಮನೋಹರಳಾಗಿದ್ದೀಯೆ. ನಿನ್ನ ಶಿರಃಪ್ರದೇಶದಲ್ಲಿ ಲಾವಣ್ಯಗಣಿಯಾದ ಚಂದ್ರನೂ ಸಹ ಶೋಭಿಸುತ್ತಾನೆ. ಹೇ ಶ್ರೀದೇವಿಯೇ, ಹೆಚ್ಚು ಹೇಳುವುದೇನು ? ಶ್ರೀ ಪರಮೇಶ್ವರನೂ ಸಹ ನಿನ್ನ ಸಾನ್ನಿಧ್ಯದಿಂದಲೇ ವಿರಾಜಿತನಾಗುತ್ತಿರುವನು. ಅಂದಮೇಲೆ ನಿನ್ನ ಮಾಹಾತ್ಮ್ಯೆಯನ್ನು ಎಷ್ಟೆಂದು ಕೊಂಡಾಡುವುದು ! ||೫೪||

ಹೇ ಭಗವತಿಯೇ, ಸಂಸಾರಕ್ಲೇಶಹರಳಾದ ಭವಾನಿಯೇ, ಸಮಸ್ತ ದೇವತೆಗಳಿಂದಲೂ ವಂದ್ಯವಾದ ಚರಣಕಮಲವುಳ್ಳ ಪರಮೇಶ್ವರಿಯೇ, ಇದೋ ನಿನಗೆ ನಮಸ್ಕಾರ. ||೫೫||

ತ್ವಾಮಂಬ ಚಾಂಬುರುಹಗರ್ಭರಸಾಸ್ಯನೇತ್ರೇ ।
ಲಗ್ನಾ ವಿಲಗ್ನಹೃದಯಾಸ್ಸುತರಾಂ ನಮಸ್ತೇ ॥೫೭॥

ಜಯ ದೇವಿ ಜಗದ್ವಂದ್ಯೇ ಪ್ರಪನ್ನಾರ್ತಿಹರೇ ಶಿವೇ ।
ತವ ಪಾದಾಂಬುಜದ್ವಂದ್ವದರ್ಶನಂ ನಃ ಕ್ವ ವಾ ಭವೇತ್ ॥೫೮॥

ತವ ಪಾದಾಂಬುಜಾರ್ಚಾತೋ ಧನ್ಯಾ ಮಾನ್ಯಾಸ್ಸುರಾಸುರಾಃ ।
ಶಿವವಾಮಾಂಕಭಾಗಸ್ಥಾ ಸದಾ ಕೈಲಾಸವಾಸಿನೀ ॥೫೯॥

ತವ ಪಾದಪ್ರಭಾಜಾಲೈರ್ಧೃತಾ ಲೋಕತ್ರಯಾವಲೀ ।
ಅದ್ಯ ಧನ್ಯತರಃ ಕಾಲೋ ಹ್ಯದ್ಯ ಧನ್ಯೇ ವಿಲೋಚನೇ ॥೬೦॥

---

ಹೇ ಭಗವತಿ, ನಿನ್ನ ಚರಣದ್ವಯವು ಇಂಪಾಗಿ ಧ್ವನಿಮಾಡುವ ನೂಪುರಗಳಿಂದ ಅಲಂಕೃತವಾಗಿರುವುದು. ನಿನ್ನ ಪಾದವು ಕಮಲದ ಸಾದೃಶ್ಯವನ್ನು ಪಡೆದಿರುವುದು. ನಿನ್ನ ಕಾಲುಗುರು ಕಾಂತಿಯಿಂದ ನೀನುಟ್ಟಿರುವ ಕೌಶೇಯವಸ್ತ್ರದ ಕಾಂತಿಯು ತಿರಸ್ಕೃತವಾಗಿದೆ. ನಿನ್ನ ಚರಣಕಮಲವು ಇಂದ್ರಾದಿದೇವೋತ್ತಮರಿಂದ ಸದಾ ವಂದಿತವಾಗಿರುವುದು. ॥೫೬॥

ಹೇ ಜಗನ್ಮಾತೆಯಾದ ಪರಮೇಶ್ವರಿಯೇ, ನಿನ್ನ ಅಕ್ಷಿಗಳಲ್ಲಿ ಕಮಲದ ಮಕರಂದಕ್ಕೆ ಸದೃಶವಾದ ದಯಾರಸವು ತುಂಬಿರುತ್ತದೆ. ನಿನ್ನ ಮುಖದಲ್ಲಿ ಮಕರಂದರಸದಂತಿರುವ ಮಧುರಸವು ಪರಿಪೂರ್ಣವಾಗಿರುತ್ತದೆ. ಹೇ ಭಗವತಿಯೇ, ನಾವು ಯುಕ್ತರಾಗಿಯೂ ವಿರಕ್ತರಾಗಿಯೂ ಸರ್ವದಾ ನಿನ್ನನ್ನು ಮನಃಪೂರ್ವಕವಾಗಿ ನಮಸ್ಕರಿಸುತ್ತೇವೆ. ॥೫೭॥

ಹೇ ಜಗತ್ಪೂಜ್ಯಳಾದ ದೇವಿಯೇ, ನಿನಗೆ ಜಯವಾಗಲಿ. ಶರಣಾಗತರಕ್ಷಕಿಯೇ ನಿನಗೆ ಜಯವಿರಲಿ. ಹೇ ಮಂಗಳಸ್ವರೂಪಳೇ, ನೀನು ಜಯಶಾಲಿಯಾಗು. ಭಗವತಿಯಾದ ನಿನ್ನ ಚರಣಕಮಲಗಳ ದರ್ಶನವು ನಮಗೆ ಮತ್ತೆ ಹೇಗೆ ಲಭಿಸೀತು ? ॥೫೮॥

ಹೇ ಭಗವತಿಯೇ, ಸುರಾಸುರರೆಲ್ಲರೂ ನಿನ್ನ ಪಾದಪೂಜೆಯಿಂದಲೇ ಪ್ರತಿಷ್ಠೆಯನ್ನು ಪಡೆದಿರುವರು. ನಿನ್ನ ಅರ್ಚನೆಯಿಂದಲೇ ಕೃತಕೃತ್ಯರಾಗಿರುವರು. ನಿನ್ನ ಸೇವೆಯಿಂದಲೇ ಮಾನ್ಯತೆ ಪಡೆದಿರುವರು. ಹೇ ಭಗವತಿಯೇ, ನೀನು

**ಮುನಿದೇವಾಂಗನಾಸ್ಸರ್ವಾ ಯತ್ತೇ ದೃಷ್ಟಂ ಪದದ್ವಯಂ ।**
**ವೇದೈರಪಿಹ್ಯವಿಜ್ಞಾತಂ ವೇದಾಂತೈರಪಿ ತೇ ಪದಂ ॥೬೧॥**

**ತವಾದ್ಯ ದರ್ಶನಂ ಜಾತಂ ಸಫಲಾ ನೋ ಮನೋರಥಾಃ ।**
**ಇತಿ ಲಕ್ಷ್ಮ್ಯಾದಿಕಾನಾಂ ಚ ವಚಶ್ಶ್ರುತ್ವಾ ಮಹೇಶ್ವರೀ ॥೬೨॥**

**ಸಮೀಕ್ಷ್ಯ ದೇವ್ಯಸ್ಸರ್ವಾಸ್ತಾ ದೇವೀ ಪ್ರಾಹ ತದಾ ರಮಾಂ ॥೬೩॥**

॥ ದೇವ್ಯುವಾಚ ॥

**ಕಚ್ಚಿತ್ತೇ ಕುಶಲಂ ಪದ್ಮೇ ವಾಣೀಂದ್ರಾಣಿ ಸ್ವಧೇ ತವ ।**
**ಅರುಂಧತ್ಯನಸೂಯಾದ್ಯಾ ಗಾರ್ಗಿ ಮೈತ್ರಾಯಣಿ ಮುದ್ರಿಕೇ ॥೬೪॥**

---

ಯಾವಾಗಲೂ ಪರಮೇಶ್ವರನ ಅರ್ಧಾಂಗಿಯಾಗಿ ಪಾಮರರಿಗೆ ಅಗಮ್ಯವಾದ ಕೈಲಾಸದಲ್ಲಿ ವಾಸಿಸುತ್ತಿರುವೆ. ನಮ್ಮಂತಹವರಿಗೆ ಸುಲಭವಾಗಿ ನಿನ್ನ ದರ್ಶನವು ಆಗಲಾರದು. ಅಂತಹ ಅಮೋಘವಾದ ನಿನ್ನ ದರ್ಶನವು ಇಂದು ನಮ್ಮ ಸುಕೃತದಿಂದ ಲಭಿಸಿದೆ. ಆದುದರಿಂದ ಈ ಕಾಲವೇ ಧನ್ಯವಾಗಿದೆ. ಈ ಕಣ್ಣುಗಳೂ ಕೂಡ ನಿನ್ನ ದರ್ಶನವನ್ನು ಪಡೆದು ಕೃತಕೃತ್ಯವಾಗಿರುವುದರಿಂದಲೇ ಧನ್ಯವಾಗಿವೆ. ಹೇ ಭಗವತಿ, ನಿನ್ನ ಮಹಿಮೆಯನ್ನು ಎಷ್ಟು ಕೊಂಡಾಡುವುದು? ನಿನ್ನ ಪಾದ ಪದ್ಮಗಳ ಕಾಂತಿಯೇ ಮೂರು ಲೋಕಗಳನ್ನೂ ಸಹ ಧರಿಸಿರುವುದು, ಅಂದಮೇಲೆ ನಿನ್ನ ಮಹಿಮೆ ಎಷ್ಟಿರಬಹುದು. ||೫೯-೬೦||

ವೇದ ವೇದಾಂತಗಳಿಗೂ ಅಗೋಚರವಾದ ನಿನ್ನ ಚರಣಕಮಲಗಳ ದರ್ಶನವು ನಮಗೆ ಇಂದು ಲಭಿಸಿದ್ದರಿಂದ ನಾವು ಪೂತರಾದೆವು. ನಿನ್ನ ಪಾದ ದರ್ಶನವು ಮುನಿಸ್ತ್ರೀಯರೂ, ದೇವತಾಸ್ತ್ರೀಯರೂ ಆದ ನಮಗೆ ದೊರೆತುದೇ ಒಂದು ಭಾಗ್ಯವಲ್ಲವೆ? ||೬೧||

ನಿನ್ನ ದರ್ಶನ ಲಾಭದಿಂದ ನಮ್ಮ ಇಷ್ಟಾರ್ಥಗಳೆಲ್ಲಾ ಸುಲಭವಾಗಿ ಈಡೇರುವುವು. ಈ ರೀತಿಯಾಗಿ ನಾನಾವಿಧವಾದ ಸ್ತೋತ್ರವನ್ನು ಮಾಡುತ್ತಿರುವ ಲಕ್ಷ್ಮಿಯೇ ಮುಂತಾದವರನ್ನು ಕುರಿತು, ||೬೨||

ಮಂದಹಾಸದಿಂದ ಎಲ್ಲರನ್ನೂ ಈಕ್ಷಿಸಿ, ಲಕ್ಷ್ಮಿಯೇ ಮೊದಲಾದವರಲ್ಲಿ ಒಬ್ಬೊಬ್ಬರನ್ನಾಗಿ ನೋಡುತ್ತಾ ಯೋಗಕ್ಷೇಮವನ್ನು ಪಾರ್ವತಿಯು ವಿಚಾರಿಸಿದಳು. ||೬೩||

ಎಲೌ ಲಕ್ಷ್ಮಿಯೇ, ನಿನಗೆ ಕುಶಲವೇ? ಸರಸ್ವತಿಯೇ ನೀನು ಕುಶಲಿನಿ

ಗಂಧರ್ವ್ಯಶ್ಚಾದ್ಯ ಕಿಂನರ್ಯಃ ಯುಕ್ತಾ ವಾ ಪತಯೋಽದ್ಯ ಹಿ ।
ಇತಿ ದೇವ್ಯಾ ವಚಃ ಶ್ರುತ್ವಾ ವಿಸ್ಮಿತಾಸ್ತಾಸ್ಸುರಾಂಗನಾಃ ॥೬೫॥

ಪ್ರೋಚುರಂಜಲಿಬಂಧೇನ ದೇವೀಂ ಭಗವತೀಂ ಶಿವಾಂ ॥೬೬॥

॥ ದೇವ್ಯಊಚುಃ ॥

ತ್ವಯೇತಿ ಭಾವಿತಾನಾಂ ಹಿ ಕುಶಲಂ ಸರ್ವದಾ ಶಿವೇ ।
ತವ ದೃಷ್ಟಂ ಪದಾಂಭೋಜಂ ಮಂಗಲಾನಾಂ ಚ ಮಂಗಲಂ ॥೬೭॥

ವಯಂ ಧನ್ಯತಮಾ ಜಾತಾಸ್ತ್ವದಾಲೋಕನಮಾತ್ರತಃ ।
ಸ್ನಾನಾಂಗರಾಗಭಕ್ಷ್ಯಾದ್ಯೈರ್ವಾಸಸ್ಸ್ರಗ್ಗಂಧಕುಂಕುಮೈಃ ॥೬೮॥

ದೇವ್ಯಾ ತಾಃ ಪೂಜಿತಾ ದೇವ್ಯೋ ನತ್ವಾ ದೇವೀಂ ಯಯುರ್ಗೃಹಾನ್ ।
ದೇವೀ ಸಾ ಸ್ವಪಿತುರ್ಮೌಳೌ ಕೇದಾರೇಶಂ ಸಮರ್ಚಯತ್ ॥೬೯॥

---

ಯಾಗಿರುವೆಯಾ ? ಎಲೌ ಶಚೀದೇವಿಯೇ ನಿನಗೆ ಕ್ಷೇಮವೇ ? ಎಲೌ ಸ್ವಧಾದೇವಿ, ನೀನು ಸುಖವಾಗಿರುವೆಯಾ ? ಅರುಂಧತಿ, ಅನುಸೂಯೆ, ಗಾರ್ಗಿ, ಮೈತ್ರಾಯಣಿ, ಮುದ್ರಾದೇವಿ, ನಿಮ್ಮೆಲ್ಲರಿಗೂ ಕುಶಲವೇ ? ॥೬೪॥

ಎಲೌ ಗಂಧರ್ವಾಂಗನೆಯರೇ, ನೀವು ಸುಖದಿಂದಿರುವಿರಾ ? ಕಿನ್ನರಾಂಗನೆಯರೇ, ನೀವು ಕುಶಲಿನಿಯರಾಗಿದ್ದೀರಷ್ಟೆ ! ನಿಮ್ಮೆಲ್ಲರ ಪತಿಗಳೂ ನಿಮಗೆ ಅನುಕೂಲರಾಗಿರುವರೋ ? ಹೀಗೆ ಅತ್ಯಂತ ಮಮತೆಯಿಂದ ಕುಶಲಪ್ರಶ್ನೆ ಮಾಡಿದ ಶ್ರೀಪಾರ್ವತಿಯ ಮಾತನ್ನು ಕೇಳಿ ಎಲ್ಲರೂ ಆಶ್ಚರ್ಯಪಟ್ಟು ಪುನಃ ಪುನಃ ಅಂಜಲಿಬದ್ಧರಾಗಿ ಭಗವತಿಯನ್ನು ಕುರಿತು ಹೀಗೆ ಹೇಳಿದರು. ॥೬೫-೬೬॥

"ಎಲೌ ಪರಮೇಶ್ವರಿ, ನಿನ್ನ ಮಮತೆಗೂ ಯೋಗಕ್ಷೇಮಕ್ಕೂ ಒಳಪಟ್ಟಿರುವ ನಮಗೆ ಸದಾ ಕುಶಲವೇ ಇದೆ. ನಮ್ಮ ಎಲ್ಲಾ ಸುಕೃತದ ಫಲವಾಗಿ, ಈ ನಿನ್ನ ಮಂಗಲಪ್ರದವಾದ ಚರಣಕಮಲಗಳ ದರ್ಶನವು ಇಂದು ನಮಗೆ ಲಭಿಸಿತು. ॥೬೭॥

ನಿನ್ನ ದರ್ಶನಮಾತ್ರದಿಂದ ನಮ್ಮ ಕಷ್ಟಗಳೆಲ್ಲಾ ದೂರವಾದವು. ನಾವೇ ಧನ್ಯರು." ಅನಂತರ ಪಾರ್ವತಿಯು ಆ ದೇವತಾದಿ ಸ್ತ್ರೀಯರಿಗೆ, ಸ್ನಾನ, ಅನುಲೇಪನ, ಅಲಂಕಾರ, ಹರಿದ್ರಾ, ಕುಂಕುಮ, ಗಂಧ, ಹೂವು, ಮುಂತಾದುವುಗಳನ್ನೆಲ್ಲಾ

ಪಿತ್ರಾ ಕಲ್ಪಿತಸಂಭಾರೈಃ ಪ್ರದೋಷೇಷು ಮಹೇಶ್ವರೀ ।
ಮೇನಯಾ ಸ್ವಸಖೀಭಿಶ್ಚ ವ್ಯಗಚ್ಛತ್ಸರಿತಾಂ ವರಾಂ ॥೭೦॥

ಗಂಗಾಂಬುನಿರ್ಮಲಘಟೈಃ ಪಂಚಾಮೃತಘಟೈಶ್ಶಿವಾ ।
ಧೃತತ್ರಿಪುಂಡ್ರರುದ್ರಾಕ್ಷಾ ಬಿಲ್ವಪತ್ರೈಶ್ಚ ಪಂಕಜೈಃ ॥೭೧॥

ಚಂದನಾಲೇಪನೈರ್ವಸ್ತ್ರೈಃ ಫಣೀಂದ್ರವರಗೋಲಕೈಃ ।
ದಿವ್ಯೈರಾಭರಣೈರ್ಧೂಪೈರ್ಮಣಿದೀಪೈಶ್ಚ ಶಂಕರೀ ॥೭೨॥

ಶಂಕರಂ ಪೂಜಯಾಮಾಸ ಕೇದಾರೇಶಂ ಮಹೇಶ್ವರಂ ।
ದಿವ್ಯಾನ್ನರಾಶಿಭಿರ್ದೇವೀ ಭಕ್ಷ್ಯಭೋಜ್ಯಫಲೈರಪಿ ॥೭೩॥

---

ಕೊಟ್ಟು ಗೌರವಿಸಿದಳು. ಅನಂತರ ಆ ದೇವತಾದಿ ಸ್ತ್ರೀಯರೆಲ್ಲಾ ಪಾರ್ವತಿಗೆ ನಮಸ್ಕರಿಸಿ, ಆಕೆಯ ಅನುಜ್ಞೆ ಪಡೆದು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಪಾರ್ವತಿಯು ಹಿಮವಂತನ ಅರಮನೆಯಲ್ಲಿ ಇರುತ್ತಾ ತನ್ನಮೇಲೆ ಪ್ರಸನ್ನನಾಗೆಂದು ನಿತ್ಯವೂ ಶ್ರೀಕೇದಾರೇಶನನ್ನು ಪೂಜಿಸುವಳು. ಅದರಲ್ಲಿ ವಿಶೇಷವಾಗಿ ಪ್ರದೋಷಕಾಲದಲ್ಲಿ ಮಹಾವೈಭವದಿಂದ ಶಿವಾರ್ಚನೆ ಮಾಡುವಳು. ಆಕೆಯ ಪೂಜೆಗೆ ಬೇಕಾದ ಎಲ್ಲಾ ಸಾಮಗ್ರಿಗಳನ್ನೂ ಹಿಮವಂತನು ಒದಗಿಸಿಕೊಡುತ್ತಿದ್ದನು. ಒಂದೊಂದುಸಾರಿ ಗಂಗಾನದೀ ತೀರದಲ್ಲಿ ಪೂಜೆಯನ್ನು ನಡೆಸಲು ತನ್ನ ತಾಯಿ ಮತ್ತು ಸಖಿಯರನ್ನೂ ಕರೆದುಕೊಂಡು ಹೋಗಿ ಅತ್ಯಂತ ವಿಜೃಂಭಣೆಯಿಂದ ಪೂಜೆ ನಡೆಸುವಳು. ||೬೮-೬೯-೭೦||

ಆ ಗಂಗಾನದಿಯ ತೀರದಲ್ಲಿ ಪೂಜೆಗೆ ಯೋಗ್ಯವಾದ ಸ್ಥಳವನ್ನು ಏರ್ಪಡಿಸಿಕೊಂಡು ಬಹಳ ನಿಯಮದಿಂದ ತ್ರಿಪುಂಡ್ರವನ್ನೂ, ರುದ್ರಾಕ್ಷಮಾಲೆಯನ್ನೂ ಧರಿಸಿಕೊಂಡು, ಪರಮೇಶ್ವರನನ್ನು ಪೂಜಿಸಿದಳು. ಕೇದಾರಲಿಂಗಕ್ಕೆ ಗಂಗೆಯ ಶುದ್ಧೋದಕದಿಂದಲೂ, ಪಂಚಾಮೃತದಿಂದಲೂ ಅಭಿಷೇಕ ಮಾಡಿದಳು. ಗಂಧ, ಪತ್ರೆ, ಪುಷ್ಪ, ಬಿಲ್ವಪತ್ರೆ ಇವುಗಳನ್ನು ಅರ್ಪಿಸಿದಳು. ನಾಗಾಭರಣವನ್ನೂ ತೊಡಿಸಿದಳು. ಕ್ರಮೇಣ ಧೂಪದೀಪಾದಿ ಉಪಚಾರಗಳನ್ನೂ ಮಾಡಿದಳು. ||೭೧-೭೨||

ದೇವದೇವನಾದ ಪರಮೇಶ್ವರನಿಗೆ ಪಂಚಭಕ್ಷ್ಯಗಳನ್ನು ನಿವೇದಿಸಿದಳಲ್ಲದೇ, ಫಲಸಮರ್ಪಣೆ ಮೊದಲಾದ ನಿಯಮಗಳನ್ನೂ, ಬಲಿಹರಣ ಮುಂತಾದ ವಿಧಿಗಳನ್ನೂ, ಸಾಂಗವಾಗಿ ನೆರವೇರಿಸಿದಳು. ||೭೩||

ಛತ್ರಚಾಮರಪಂಕ್ತೀಭಿರ್ಮೃದಂಗವರಕಾಹಳೈಃ ।
ಶಂಖದುಂದುಭಿನಿರ್ಘೋಷೈರ್ವೇಣುವೀಣಾರವೈಶ್ಶಿವಾ ॥೭೪॥

ಸಖೀಭಿಃ ಕಲ್ಪಿತಾಪಾರವರಿವಸ್ಯಾದರಾ ಶಿವಾ ।
ಪ್ರದೋಷೇಷು ವಿಶೇಷೇಣ ಪ್ರಣಾಮಪ್ರಕ್ರಮೈಸ್ತದಾ ॥೭೫॥

ಪೂಜಾಂತೇ ಗಿರಿಶಂ ಸ್ತೋತ್ರೈಸ್ತುಷ್ಟಾವಾಷ್ಟಾಕೃತಿಂ ಹರಂ ।
ಕೇದಾರೇಶಂ ಮಹಾದೇವೀ ಸಮಾಕರ್ಣಯತಿ ಸ್ತುತಿಂ ॥೭೬॥

ಇತ್ಥಂ ಸಾ ಪರಮೇಶ್ವರೀ ತ್ರಿಜಗತಾಮಾಧಾರಭೂತಂ ಹರಂ
ಕೇದಾರೇಶಮುಮಾ ಸಮರ್ಚಯದಹೋ ಪುಷ್ಪೈಸ್ತು ಕಾಲೇಽದ್ರಿಜಾ ।
ಮೋದಾಸಾರಮಹೋದಧಿಪ್ರವಿಲಸನ್ಮಗ್ನಾಂತರಾಯೈರ್ವಿನಾ
ಪ್ರಾಲೇಯಾಚಲಮೌಳಿಶೇಖರಮಹಾಲಿಂಗಂ ಚ ಕೇದಾರಕಂ ॥೭೭॥

---

ಪೂಜೆಯ ಉತ್ತರಾಂಗವಾಗಿ ಛತ್ರಸೇವೆ, ಚಾಮರಸೇವೆ ಮೊದಲಾದ ಸಮಸ್ತ ಉಪಚಾರಗಳನ್ನೂ ನೆರವೇರಿಸಿ, ವೀಣೆ, ವೇಣು, ಶಂಖ, ದುಂದುಭಿ, ಕಹಳೆ, ಮೃದಂಗ ಮುಂತಾದ ದಿವ್ಯವಾದ್ಯಗಳ ಸೇವೆಯನ್ನು ಸಮರ್ಪಿಸಿದಳು. ॥೭೪॥

ಶ್ರೀಪಾರ್ವತಿಯು ಪೂಜೆಮಾಡುವಾಗ ಪೂಜಾಂಗಕ್ಕೆ ಕೊಂಚವೂ ನ್ಯೂನತೆ ಬಾರದಂತೆ, ತನ್ನ ಸಖಿಯರ ಸಹಾಯದಿಂದ ವಿಧಿವತ್ತಾಗಿ ಪೂಜಿಸುವಳು. ಅದರಲ್ಲಿಯೂ ಪ್ರದೋಷಕಾಲದಲ್ಲಿ ವಿಶೇಷಗಟ್ಟಳೆಯ ರೀತಿಯಿಂದ ಅರ್ಚನೆ ಮಾಡುವಳು. ಪ್ರತಿ ಪೂಜೆಯ ಕೊನೆಯಲ್ಲಿ ಸಾಷ್ಟಾಂಗ ಪ್ರಣಾಮಗಳನ್ನೂ ಮಾಡುವಳು. ॥೭೫॥

ಪೂಜೆಯ ಕೊನೆಯಲ್ಲಿ ಪರಮೇಶ್ವರನನ್ನು, ಪಂಚಭೂತ, ಸೂರ್ಯ, ಚಂದ್ರ, ಯಜಮಾನ ಎಂಬ ಅಷ್ಟಾಕೃತಿಯಿಂದ ಅಷ್ಟಮೂರ್ತಿಯೆನಿಸಿದವನನ್ನು ಬಗೆಬಗೆಯಾಗಿ ಸ್ತೋತ್ರಮಾಡುವಳು. ॥೭೬॥

ಈ ಪ್ರಕಾರವಾಗಿ ಭಗವತಿಯಾದ ಪರಮೇಶ್ವರಿಯು ಆಯಾಯಾ ಸಮುಚಿತ ಕಾಲದಲ್ಲಿ ಆನಂದನಿಧಿಯೂ, ಚಂದ್ರಶೇಖರನೂ, ಮಹಾಲಿಂಗರೂಪಧರನೂ ಆದ ಕೇದಾರೇಶ್ವರನನ್ನು ಮೂರುಲೋಕಗಳಿಗೂ ಆಧಾರಭೂತನನ್ನಾಗಿ ಭಾವಿಸಿ ಸಂತೋಷಸಮುದ್ರದಲ್ಲಿ ಮುಳುಗಿದವಳಾಗಿ ನಿರಂತರವಾಗಿ ಆರಾಧಿಸಿದಳು. ॥೭೭॥

ಬ್ರಹ್ಮಾದ್ಯೈರ್ಹರಿರುದ್ರಶಕ್ರವಿನುತಂ ಯಕ್ಷೈರ್ಮುನೀಂದ್ರೈರಪಿ
ವೇದಾಂತೈರಪಿ ಸಂಘಶಶ್ಶ್ರುತಿಗಣೈಸ್ಸಂಸೇವಿತಂ ಸಂಸ್ತುತಂ ।
ಏವಂ ಸಾ ಪ್ರನಿನಾಯ ಕಾಲಕಲನಾಚ್ಛ್ರೀಕಾಲಕಾಲಾರ್ಚನಾತ್
ದೇವೀ ಸಾ ಗಿರಿರಾಜಲೋಚನಮಹಾನಂದೈಕಪಾರಾರಸಾ ॥೭೮॥

ಮೇನಾಯಾ ಹೃದಯಾಬ್ಜಮಧ್ಯವಿಲಸತ್ಪಾದಾಂಬುಜಾ ಸಾ ಶಿವಾ ॥೭೯॥

॥ ದೇವ್ಯುವಾಚ ॥

ಸದ್ಯೋಜಾತ ಮಹೇಶ ಶಂಕರ ವಿಭೋ ಖದ್ಯೋತವತ್ತ್ವತ್ಪುರಃ
ಸ್ಥಾತುಂ ನ ಪ್ರಭವೋ ಭವಂತಿ ವಿಬುಧಾಸ್ತೇ ಸೋಮಸೂರ್ಯಾನಲಾಃ ।
ವಿದ್ಯೋತಂತಿ ಕಥಂ ಸುವಿದ್ಯುತ ಇಮಾ ಸ್ಯಂದಂತಿ ನದ್ಯೋಪಿ ತೇ
ಭೀತಾಸ್ಸಾಗರಗಾ ಯಮಾನಿಲಮರುನ್ನಾಥಾನಲಾಃ ಸಾಹಿ ಮಾಂ ॥೮೦॥

---

ಸೃಷ್ಟಿಕರ್ತನಾದ ಬ್ರಹ್ಮನೂ, ಪಾಲಕನಾದ ವಿಷ್ಣುವೂ, ಸಂಹಾರಕರ್ತನಾದ ರುದ್ರನೂ, ಸಕಲ ಲೋಕಸಂರಕ್ಷಕನಾದ ಇಂದ್ರನೂ, ಯಕ್ಷ ಮತ್ತು ಮುನೀಂದ್ರರು ಇವರೆಲ್ಲರೂ ತಮ್ಮ ತಮ್ಮ ಇಷ್ಟಾರ್ಥಸಿದ್ಧಿಗಾಗಿ ಯಾವ ಪರಮೇಶ್ವರನನ್ನು ಪೂಜಿಸಿದರೋ, ಯಾರನ್ನು ವೇದವೇದಾಂತಗಳು ಸರ್ವದಾ ಸ್ತುತಿಸುತ್ತಿರುವುವೋ, ಅಂತಹ ಕಾಲಕಾಲಕನಾದ ಶಂಕರನನ್ನು ಆರಾಧಿಸುತ್ತಾ ಪಾರ್ವತಿಯು ಕಾಲಕಳೆಯುತ್ತಿದ್ದಳು. ॥೭೮॥

ಮೇನಾದೇವಿಗೂ ಆ ಪರಮೇಶ್ವರಿಯ ಮಹಿಮೆಯು ಗೊತ್ತಿದ್ದುದರಿಂದ ಆಕೆಯು ದೇವಿಯನ್ನು ಸದಾ ಮನಸಾ ಧ್ಯಾನಿಸುತ್ತಾ ದೇವಿಯ ಇಂಗಿತವನ್ನು ಅರಿತುಕೊಂಡು ಅನುಕೂಲವಾಗಿ ವರ್ತಿಸುತ್ತಿದ್ದಳು. ॥೭೯॥

"ಸರ್ವಶಕ್ತನಾದ ಪರಮೇಶ್ವರನೇ, ಸದ್ಯೋಜಾತ, ಮಹೇಶ, ಶಂಕರ ಮುಂತಾದ ಅನ್ವರ್ಥವಾದ ಬಿರುದನ್ನು ಧರಿಸಿದ ಕೇದಾರವಿಭೋ, ನಿನ್ನ ಮಹಿಮೆಯನ್ನು ಎಷ್ಟೆಂದು ಕೊಂಡಾಡಲಿ! ಪರಾತ್ಪರನಾದ ನಿನ್ನ ಎದುರಿನಲ್ಲಿ ಸರ್ವಶಕ್ತರೆಂದು ಪ್ರಪಂಚದಲ್ಲಿ ಪ್ರಸಿದ್ಧರಾದ ದೇವತೆಗಳೂ, ಚಂದ್ರ, ಸೂರ್ಯ, ಅಗ್ನಿ ಮುಂತಾದವರೆಲ್ಲರೂ, ಸಹ ಪ್ರದೀಪದೆದುರಿನಲ್ಲಿ ಮಿಂಚುಹುಳುಗಳು ಹೇಗೆ ನಿಲ್ಲಲಾರವೋ ಹಾಗೆಯೇ ನಿನ್ನ ಮುಂದೆ ನಿಲ್ಲಲಾರರು. ಇವರೆಲ್ಲರೂ ಬಹಳ ದುರ್ಬಲರು, ನಿನ್ನ ಸೇವಕರು. ಆಕಾಶದಲ್ಲಿನ ತಾರಾಮಂಡಲವು ನಿನ್ನ ಪ್ರೇರಣೆಯಿಂದಲೇ ಪ್ರಕಾಶಿಸು

ನಾಮುದೇವಮುನಿದೇವಗಣೇಂದ್ರೈರ್ನಾಸುದೇವನಯುನಾರ್ಚಿತಪಾದ ।
ಭೂಮಿದೇವನಿಕರೈರಭಿಪೂಜ್ಯ ದೇವದೇವ ದಯಯಾ ಪರಿಪಾಹಿ ॥೮೧॥

ಅಘೋರ ಘೋರಭವಸಾಗರಕರ್ಣಧಾರ
ಲೀಲಾಕೃತಾಂಗ ಸುರಹೀರ ಮಹೇಶ ಧೀರ ।
ಮಾರಮಾರ ಕರವೀರಸುಮಾದ್ಯ
ಸ್ರಗ್ಧರಾಮರವರಾಧಿಪ ಧೀರ ॥೮೨॥

ತತ್ಪೂರ್ಷಪೂರ್ಣಜಗತಾಮಧಿಪಾರ್ಯ ಶಂಭೋ
ಪಾರುಷ್ಯಹೀನವಚಸಾ ಪ್ಯಥಿವಕ್ತ್ರತಾ ತೇ ।

---

ವುವು. ನಿನ್ನ ಆಜ್ಞೆಯಿಂದ ನದಿಗಳು ಹುಟ್ಟಿ ಹರಿದು ಸಮುದ್ರಕ್ಕೆ ಸೇರುವುವು. ನಿನ್ನ ಅದ್ಭುತವಾದ ಮತ್ತು ಪ್ರಚಂಡವಾದ ಮಹಿಮೆಗೆ ಯಮ, ವಾಯು, ಅಗ್ನಿ, ವರುಣ ಮುಂತಾದವರೆಲ್ಲರೂ ಹೆದರಿಕೊಂಡು ನಿನ್ನ ಆಜ್ಞೆಯಂತೆ ವರ್ತಿಸುವರು. ಇಂಥ ಸರ್ವಸ್ವತಂತ್ರ ಭಗವಂತನೇ ನನ್ನಲ್ಲಿ ಕರುಣೆಯಿಟ್ಟು ಕಾಪಾಡು. ॥೮೦॥

ದೇವೇಂದ್ರನಿಂದಲೂ, ಮುನೀಂದ್ರರಿಂದಲೂ, ಗಣೇಂದ್ರರಿಂದಲೂ, ಪೂಜಿತನಾದ ಶಂಕರನೇ, ನಿನ್ನನ್ನು ವಿಷ್ಣುವು ತನ್ನ ಕಣ್ಣನ್ನೇ ಕಿತ್ತು ಅದರಿಂದ ಪೂಜಿಸಿರುವನು. ಅಂದಮೇಲೆ ನಿನ್ನ ವೈಭವವು ಎಷ್ಟು ಮಹತ್ತರವಾಗಿರುವುದು! ಸಕಲ ಬ್ರಾಹ್ಮಣೋತ್ತಮರಿಂದಲೂ ಪೂಜಿತನಾದ ದೇವದೇವನೇ, ನನ್ನ ಮೇಲೆ ದಯೆ ತೋರಿ ಪರಿಪಾಲಿಸು. ॥೮೧॥

ಮನ್ಮಥಮಾರಕನಾದ ಪರಮೇಶ್ವರನೇ, ನೀನೇ ಮಹೇಶನು. ಸಂಸಾರವೆಂಬ ಮಹಾಸಮುದ್ರವನ್ನು ಪಾರುಮಾಡಿಸುವ ನಾವಿಕನು. ಘೋರಸ್ವರೂಪನು. ಆದರೂ ಅಘೋರ ಸುಂದರಮೂರ್ತಿಯು, ನೀನೇ ಧೀರನು. ದೇವದೇವೋತ್ತಮನು. ವಿಲಾಸಾರ್ಥವಾಗಿ ಶರೀರವನ್ನು ಧರಿಸುವೆ. ಪುಷ್ಪೋತ್ತಮವಾದ ಕರವೀರದ ಮಾಲಿಕೆಯನ್ನು ಧರಿಸುವೆ. ನೀನೇ ಯಜ್ಞಾದಿಕ್ರತುಗಳ ಪಾಲಕನೆನಿಸಿ, ಅಮರಾಧಿಪನಾಗಿರುವೆ. ॥೮೨॥

ದೇವದೇವನೇ, ನಿನ್ನ ತತ್ಪುರುಷಮೂರ್ತಿಯಿಂದಲೇ ಪರಿಪೂರ್ಣವಾದ ಈ ಜಗತ್ತಿಗೆ ನೀನೇ ಒಡೆಯನು. ನೀನು ಸರ್ವಪೂಜ್ಯನು. ಹೇಶಂಭೋ, ನೀನು

ದೇವೈಶ್ಚ ವೇದವಿಧಿನಾ ಪುರುಷೋತ್ತಮೇನ
ಸ್ಕಂದೇನ ಗೌರಿಗಣಪೇನ ಚ ಪೂಜ್ಯಪಾದ ॥೬೩॥

ಈಶಾನ ಸಂಹನನ ಭೋಗಿತಕಾಮಿನೀನ
ಪ್ರೋದ್ಯದ್ದಿವಾಕರಹುತಾಶನಶಶೀನಯನಾಂಗಹೀನ ।
ನಾನಾವಿಧಾನ ಜಗದೇಕನಿಧಾನ ಶಂಭೋ
ಮೇನಾತ್ಮಜಾವಿನುತ ವೇದತತಿಪ್ರಧಾನ ॥೬೪॥

॥ ಸ್ಕಂದ ಉವಾಚ ॥

ಏತತ್ತೇಽಭಿಹಿತೋ ಮಯಾ ದ್ವಿಜವರ ಶ್ರೋತ್ರೇ ಕೃತಾರ್ಥೇ ತವ ।
ಅಂಶೋಽಯಂ ಹಿ ಭವಸ್ಸುಧಾರಸಸಮಃ ಕಿಂ ವಚ್ಮಿ ತತ್ತೇ ಮಧು
ಶ್ರುತ್ವಾಪ್ಯೇತದಸಾರಸಂಸೃತಿಭವಂ ತ್ಯಕ್ತ್ವಾ ವಿಮುಕ್ತೋ ಭವೇತ್
ತಸ್ಮಿನ್ ಶಂಭುಕೃಪಾ ಭವತ್ಯನುದಿನಂ ಪ್ರಾಂತೇ ಗಣೇಂದ್ರೋ ಭವೇತ್ ॥೬೫॥

---

ಕಾಠಿನ್ಯವಿದೂರನು. ಮಾತಿಗೆ ಸಿಲುಕದವನು. ದೇವತೆಗಳಿಂದಲೂ ವೇದವಿಹಿತ ರೀತಿಯಿಂದ ಪೂಜನೀಯನಾಗಿರುವೆ. ಷಣ್ಮುಖನೂ, ಗಣಾಧಿಪನೂ, ಗೌರಿಯೂ ನಿನ್ನನ್ನೇ ಸದಾ ಆರಾಧಿಸುವರು. ॥೬೩॥

ಈಶಾನಮೂರ್ತಿಯೇ, ನೀನೇ ಸಕಲಭೂತ ಸಂಹಾರಕರ್ತನು. ಸಕಲ ವಿಷಯೋಪಭೋಗಗಳೂ ನಿನ್ನಿಂದ ಅನುಭೂತಗಳೇ. ಸೂರ್ಯ, ಚಂದ್ರ, ಅಗ್ನಿ, ಇವರೇ ನಿನ್ನ ಕಣ್ಣುಗಳಾಗಿರುವುವು. ನಾನಾವಿಧವಾದ ತಂತ್ರಗಮ್ಯನಾಗಿರುವೆ. ನೀನು ಪ್ರಪಂಚಕ್ಕೆಲ್ಲಾ ಒಂದೇ ಆದ ಅಧಿಷ್ಠಾನಸ್ವರೂಪನು. ಎಲೈ ಸಕಲ ವೇದಗಳಿಗೂ ಮುಖ್ಯ ತಾತ್ಪರ್ಯ ವಿಷಯನಾದ ಶಂಭುವೇ, ನಿನ್ನೊಬ್ಬನನ್ನೇ ಪಾರ್ವತಿಯು ಸದಾ ಸ್ತೋತ್ರಮಾಡುವಳು" ಎಂದು ದೇವಿಯು ಬಹಳವಾಗಿ ಸ್ತುತಿಸಿದಳು. ॥೬೪॥

ಎಲೈ ದ್ವಿಜವರನೇ, ಈ ದಿವ್ಯವಾದ ಚರಿತ್ರೆಯನ್ನು ನಿನಗೆ ಮಾತ್ರವೇ ಹೇಳಿದುದು. ಇಂತಹ ಸತ್ಕಥೆಯನ್ನು ಕೇಳಿದ ನಿನ್ನ ಶ್ರೋತ್ರಗಳು ಕೃತಾರ್ಥಗಳಾವಾಗಿವೆ. ಈ ಕಥಾಭಾಗದ ಸ್ವಾರಸ್ಯವನ್ನು ಎಷ್ಟೆಂದು ಹೇಳಲಿ? ಅಮೃತದಂತೆ ಮಧುರವಾಗಿರುವ ಈ ಚರಿತೆಯನ್ನು ಯಾವ ಮನುಜನು ಕೇಳುವನೋ ಆತನು ಈ ನಿಸ್ಸಾರವಾದ ಸಂಸಾರದ ಜನನ ಮರಣ ಕ್ಲೇಶದಿಂದ ಮುಕ್ತನಾಗುವನು. ಈ ಕಥೆಯನ್ನು ಶ್ರವಣಮಾಡುವವನ ಮೇಲೆ ಪರಮೇಶ್ವರನ ದಯೆಯು ಸರ್ವದಾ

ಕೈಲಾಸಾಚಲಮೌಳಿಸಾಲಿಷು ಚಿರಂ ರುದ್ರೋ ಭವೇತ್ಸತ್ತಮೋ
ವಿಷ್ಣುಬ್ರಹ್ಮಮರುದ್ಗಣೇಂದ್ರವಿದಿಶಾಂ ನಾಥೇಷು ಗಾಂಧರ್ವಕೇ ।
ಭೂಲೋಕೇಖಿಲಭೋಗಿನಾಥನಿಲಯೇ ಕೋಟಿತ್ರಯಂ ಸಂಖ್ಯಯಾ
ದೇವ್ಯೈ ಸಾರತರಂ ಶಿವೋಽವದದಿದಂ ತಲ್ಲಕ್ಷಮಾನಂ ದ್ವಿಜಾಃ ॥೮೬॥
ಮಾರ್ಕಂಡೇಯ ದಧೀಚಿ ಗೌತಮಮುಖಾಶ್ಶೃಣ್ವಂತಿ ದೇವಾಃ ಸದಾ ॥೮೭॥

ಅನಂತಮಹಿಮಾಸ್ಪದಂ ಶಿವರಹಸ್ಯರತ್ನಾಕರಂ
ವಿಹಾಯ ಯುವತೀಜನೋನ್ಮಥಿತಚಿತ್ತವಿತ್ತಾರ್ಥಿನಃ ।
ಭ್ರಮಂತಿ ಧನಿನಾಂ ಗೃಹೇ ವಿಕೃತದಂತಕೇಶಾನನಾಃ
ಪಿನಾಕಸಮಯೇಽಪ್ಯಹೋ ಪರಿಲುಠಂತಿ ಕೀನಾಶಗಾಃ ॥೮೮॥

ನಿದ್ರಾತಂದ್ರಾಪಹೃತಾಂಗಾ ನಿಶಿ ಕುಣಪಸಮಾ ಪ್ರಾತರಾರಭ್ಯ ಕಾಕಾಃ
ನಾನೋಪಾಯೇನ ಪಿಂಡೈರ್ನಿಜಜಠರದರೀಪೂರ್ತಯೇ ಯಾಂತಿ ಮೂಢಾಃ ।

---

ಪೂರ್ಣವಾಗಿರುತ್ತದೆ. ಈ ಕಥಾಶ್ರವಣಮಾಡಿದ ಮನುಜನು ದೇಹಾಂತ್ಯದಲ್ಲಿ ಶಿವಗಣಗಳಿಗೆ ಅಧಿಪತಿಯಾಗುವನು. ॥೮೫॥

ಈ ಚರಿತ್ರೆಯನ್ನು ಶ್ರವಣಮಾಡುವ ಮನುಜನು ಮೂರುಕೋಟಿಸಂವತ್ಸರ ಪರ್ಯಂತ ಕ್ರಮೇಣ ಮೊದಲು ಪಾತಾಳಾಧಿಪತಿಯಾಗಿಯೂ, ಮತ್ತು ಕ್ರಮಕ್ರಮವಾಗಿ ಗಂಧರ್ವಪತಿ, ದಿಕ್ಪತಿ, ಗಣಪತಿಯಾಗಿ, ಬ್ರಹ್ಮ ವಿಷ್ಣು ಸ್ವರೂಪವನ್ನು ಪಡೆದು ಕೊನೆಗೆ ಕೈಲಾಸದಲ್ಲಿ ಅನೇಕಕಾಲ ರುದ್ರನ ಸಾಮೀಪ್ಯ, ಸಾರೂಪ್ಯಾದಿಗಳನ್ನೂ ಪಡೆಯುವನು. ಹೀಗೆಂದು ಶ್ರೀಪರಮೇಶ್ವರನೇ ಪಾರ್ವತಿಗೆ ಈ ತಾತ್ತ್ವಿಕವಿಚಾರವನ್ನು ಹೇಳಿರುವನು. ॥೮೬॥

ಈ ಮಹತ್ತರವಾದ ಕಥಾಂಶವನ್ನು ಮಾರ್ಕಂಡೇಯ, ದಧೀಚಿ, ಗೌತಮ, ಮುಂತಾದ ಮಹರ್ಷಿಗಳೂ, ಇಂದ್ರಾದಿ ದೇವತೆಗಳೂ ಬಹಳ ಆದರದಿಂದ ಸರ್ವದಾ ಶ್ರವಣಮಾಡುತ್ತಿರುತ್ತಾರೆ. ॥೮೭॥

ಇಂತಹ ಅಪರಿಮಿತಮಹಿಮೆಯುಳ್ಳ ಶಿವರಹಸ್ಯವೆಂಬನಿಧಿಯನ್ನು ಬಿಟ್ಟು ಯಾರು ಅನ್ಯತ್ರ ವೃಥಾ ಶ್ರಮಪಡುತ್ತಾರೆಯೋ, ಅವರು ಮೂಢರೇ ಸರಿ. ಸ್ತ್ರೀಕಾಮುಕರೂ ಧನಾರ್ಜನೆಯಲ್ಲಿ ಅತ್ಯಾಸಕ್ತರೂ ಆದ ಜನರು ದಂತವಿಕಾರದಿಂದ,

**ನೋ ಕೋಽಪಿ ಕ್ಷಣಮಾತ್ರಚಿಂತಿತಶಿವೋ ನ ಶ್ರೂಯತೇ ಶಾಂಭವಾತ್**
**ಸಂಸಾರಾರ್ಣವತಾರಿಣೀ ಶಿವಕಥಾ ತೇಷಾಂ ಗತಿಃ ಕಾ ಭವೇತ್ ॥೮೯॥**

**ಪ್ರಮಥಪತಿಪದಾಬ್ಜಧ್ಯಾನಹೀನಾ ನ ಮಾನ್ಯಾಃ**
**ಸಾಮಾನ್ಯಾ ಶ್ಶಿವಮನ್ಯುದಗ್ಧವಪುಷ ಸ್ತ್ಯಾಜ್ಯಾಂತಜಾತಾ ಇವ ।**
**ಯಜ್ವಾಪಿ ಕ್ಷಿತಿಪಾಲಸೂನುರಪಿ ವಾ ಹ್ಯಾಶಾಧಿಪೋ ವಾ ಶುನಃ**
**ಪುಚ್ಛೋದ್ಯಲ್ಲಘುಮಾನಸೋ ಲಘುತರಸ್ತುಚ್ಛಃ ಕಥಂ ಗಣ್ಯತೇ ॥೯೦॥**

**ಇತಿ ಶ್ರೀಶಿವರಹಸ್ಯೇ ಭವಾಖ್ಯೇ ದ್ವಿತೀಯಾಂಶೇ ದೇವೀವಿರಹದೇವೀಕೃತ ಪ್ರದೋಷಶಿವಪೂಜಾ ಶಿವಸ್ತೋತ್ರವರ್ಣನಂ ನಾಮ ತ್ರಿಂಶೋಽಧ್ಯಾಯಃ**

## ದ್ವಿತೀಯಾಂಶಸ್ಸಮಾಪ್ತಃ

---

ಕಪಿಗಳಂತಿರುವ ಹಣವಂತರ ಮನೆಮನೆಗಳಿಗೆ ಅಲೆದು ವೃಥಾ ಶ್ರಮಪಡುತ್ತಾರೆ. ಅಂತಹವರಿಗೆ ತಮ್ಮ ವಿನಾಶಸಮಯವು ಒದಗಿದ್ದರೂ ಎಚ್ಚರಿಕೆಯೇ ಇರುವುದಿಲ್ಲ. ಅಯ್ಯೋ! ಇಂಥ ಮೂಢರು ಕಷ್ಟದಲ್ಲಿ ಬಿದ್ದು ಒದ್ದಾಡಿ, ಕೊನೆಗೂ ನರಕಕ್ಕೆ ಹೋಗುವರೆಂಬುದರಲ್ಲಿ ಅನುಮಾನವಿಲ್ಲ. ||೮೮||

ರಾತ್ರಿ ಆಯಿತೆಂದಕೂಡಲೇ ಎಚ್ಚರತಪ್ಪಿದವರಹಾಗೆ ಸ್ವಚ್ಛಂದವಾಗಿ ನಿದ್ರೆ ಮಾಡುವುದು, ಹಗಲು ಯೋಗ್ಯಾಯೋಗ್ಯವಿಚಾರವನ್ನೇನೂ ಪರಿಗಣಿಸದೇ ಕಾಗೆಯ ವೃತ್ತಿಯನ್ನಾಶ್ರಯಿಸಿ ಕಾಲಕಳೆಯುವರು. ಇಂಥ ಮೂಢರು, ತಮ್ಮ ಉದರಪರಾಯಣರಾಗಿ, ಒಂದಷ್ಟು ಆಹಾರವನ್ನು ಹೇಗೋ ಪಡೆದುಕೊಂಡು ನಿಶ್ಚಿಂತರಾಗಿ ಬಿಡುತ್ತಾರೆ. ಹೀಗೆ ಮೌಢ್ಯದಿಂದ ಉನ್ಮತ್ತರಾದವರು ಈಶ್ವರನನ್ನು, ಕ್ಷಣಕಾಲವೂ ಸ್ಮರಿಸುವುದಿಲ್ಲ.. ಧ್ಯಾನಿಸುವುದೂ ಇಲ್ಲ. ಸಂಸಾರಬಂಧಮೋಚಕವಾದ ಇಂತಹ ಶಿವಕಥೆಯನ್ನು ಶೈವಮುಖೇನ ಹೇಳಿಸುವುದಿಲ್ಲ. ಕೇಳುವುದೂ ಇಲ್ಲ. ಇಂತಹ ಜನರಿಗೆ ಯಾವ ದುರ್ಗತಿಯಾಗುವುದೋ ಹೇಳಲಸಾಧ್ಯ. ಕೇವಲ ಲೌಕಿಕ ವ್ಯವಹಾರದಲ್ಲಿಯೇ ಲೀನರಾಗಿ ಐಹಿಕಾಮುಷ್ಮಿಕ ವಿವೇಕ ವಿಚಾರಮಾಡದೇ, ಜನ್ಮಜನ್ಮಾಂತರದಲ್ಲಿಯೂ ಸಂಸಾರಕ್ಲೇಶವನ್ನು ಪಡೆಯುತ್ತಾರೆ. ||೮೯||

ಶ್ರೀಪರಮೇಶ್ವರನನ್ನು ಯಾರು ಧ್ಯಾನಿಸುವುದಿಲ್ಲವೋ ಅವರು ಮಾನ್ಯರಾಗುವುದೇ ಇಲ್ಲ. ಅವರೇ ತ್ಯಾಜ್ಯರೆನಿಸುವರು. ಅಂತ್ಯಜರೆಂದೇ ಅವರನ್ನು ಕರೆಯಬೇಕು.

ಅವರೆಲ್ಲರೂ ಶಿವದ್ರೋಹದಿಂದ ಶಿವಕೋಪಕ್ಕೆ ಪಾತ್ರರಾಗುವರು. ಶಂಕರನನ್ನು ಪೂಜಿಸದವನು ಸೋಮಯಾಜಿಯೇ ಆಗಿರಲಿ, ಅರಸನ ಮಗನೇ ಆಗಿರಲಿ, ದಿಕ್ಪತಿಯೇ ಆಗಿರಲಿ, ಆದರೂ ಅವನು ತುಚ್ಛನು-ಲಘುವು. ಅವನ ಮನಸ್ಸು ನಾಯಿಯ ಬಾಲದಂತೆ ಯಾವಬಗೆಯ ಸತ್ಸಂಸ್ಕಾರಕ್ಕೂ ವಶವಾಗದೆ ಯಾವಾಗಲೂ ವಕ್ರ ಸ್ವಭಾವವಾಗಿದ್ದು ಲಘುವಾಗಿಯೂ ಆಗುವುದು. ಅವನು ಇಂತಹ ಪರಮರಹಸ್ಯವಾದ ಶಿವಕಥಾಮೃತದ ಮಹಿಮೆಯನ್ನು ಹೇಗೆತಾನೆ ಅರಿತಾನು ? ||೯೦||

ಇಲ್ಲಿಗೆ ಶ್ರೀಶಿವರಹಸ್ಯದ ಭವನಾಮಕವಾದ ದ್ವಿತೀಯಾಂಶದಲ್ಲಿ ದೇವೀವಿರಹ, ದೇವೀಕೃತ ಪ್ರದೋಷಶಿವಪೂಜಾ, ಶಿವಸ್ತೋತ್ರ ಇವುಗಳನ್ನು ವಿವರಿಸುವ ಮೂವತ್ತನೆಯ ಅಧ್ಯಾಯವು ಮುಗಿದುದು.

## ಎರಡನೆಯ ಅಂಶವು ಮುಗಿದುದು.

